ಕರ್ನಾಟಕ ಸರಕಾರ



ಕಾದಂಬರಿ

# ನಿಸರ್ಗ

ಮಿರ್ಜಿ ಅಣ್ಣಾರಾಯ

ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ



24

ಮುಡುಪು

ಬಾಳ ಬೆಳಗಿನಲ್ಲಿ ಬೆಳ್ಳಿಯಂತೆ
ಬೆಳಗಿ ಮಾಯವಾದ
ಅಕ್ಕನ ಅಡಿದಾವರೆಗಳಲ್ಲಿ

—ಅಣ್ಣಾರಾಯ

# ನಿಸರ್ಗ

ಬೊಂಬಾಯಿ ಸರ್ಕಾರದ ಬಹುಮಾನಿತ ಕಾದಂಬರಿ

## ಮಿರ್ಜಿ ಅಣ್ಣಾರಾಯ




ವಿಶ್ವ ಕನ್ನಡ ಸಮ್ಮೇಳನ
14–3ಎ, ನೃಪತುಂಗ ರಸ್ತೆ
ಬೆಂಗಳೂರು–560 002

ಆರ್. ಗುಂಡುರಾವ್
ಮುಖ್ಯ ಮಂತ್ರಿ




ವಿಧಾನ ಸೌಧ
ಬೆಂಗಳೂರು

ದಿನಾಂಕ : ೧೮–೯–೧೯೮೨

# ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ, ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

# ೧

ಆಗ ಬೇಸಿಗೆಯ ಕಾಲ ; ಚೈತ್ರಮಾಸದ ಮುಕ್ಕಾಲುಪಾಲು ದಿನಗಳು ಕಳೆದಿವೆ. ಹೊತ್ತು ಮುಳುಗುವುದರಲ್ಲಿದೆ. ಇದೀಗ ಬಿಸಿಲು ಕಡಿಮೆಯಾಗಿದೆ. ಆದರೆ ಶಕೆಯು ಇನ್ನೂ ಕಡಿಮೆಯಾದಂತಿಲ್ಲ. ಅದರಿಂದ ಸುರಿಯುವ ಬೆವರಿಗೂ ಮಿತಿಯಿಲ್ಲ.

ಇಂತಹ ಸಂಜೆ, ಮಗದುಮರ ಮನೆಯ ಅಂಗಳದಲ್ಲಿ ಕೆಲವು ಹುಡುಗರು ಆಡುತ್ತಿರುವರು. ಆಟ ಭರದಿಂದ ಸಾಗಿದೆ. ಚಿಕ್ಕಮಕ್ಕಳ ಬಳ್ಳಿಗೋಟೆಯೊಂದನ್ನು ಕಟ್ಟಿದ್ದಾರೆ. ಅದರ ನಡುವೆ ತಾರಕ್ಕ ಹಿರಿಹುದ್ದರಿಯಾಗಿ ಹುಡುಗರನ್ನು ಸರಿಯಾಗಿ ನಿಲ್ಲಿಸುತ್ತಿದ್ದಾಳೆ. ಹೊರಗೆ ಅವಳ ಗೆಳತಿ ಸುಮತಿ ನಿಂತು ಆಟ ಮುಂದುವರಿಸಲಿಕ್ಕೆ ತವಕಗೊಳ್ಳುತ್ತಿರುವಳು.

ತಾರಕ್ಕನ ಕೆಲಸ ತೀರಿತು. "ಕೈ ತಾ ಸುಮೀ, ಆಟಾ ಆಡೋಣು" ಎಂದಳು. ಇಬ್ಬರೂ ಕೈ ಕೈ ಹಿಡಿದರು. ಹುಡುಗರ ಬಳ್ಳಿಗೋಟೆಯ ಒಳಗೊಬ್ಬಳು ಹೊರಗೊಬ್ಬಳೂ ಆಗಿ,....

'ಪಾರಿವಾಳ ಪಟಕ್....ಎಣ್ಣೀ ಜಟಕ್...ಬೆಕ್ಕಿಗೆ ಹಾಲಿಲ್ಲ...ನಾಯಿಗೆ ನುಚ್ಚಿಲ್ಲ....ಪಾರಿವಾ s s s s ಳ ಪಟಕ್' ಎಂದು ಒಂದೇ ದನಿಯಿಂದ ಕೂಗುತ್ತ ತಿರುಗಹತ್ತಿದರು. ನಡುನಡುವೆ ಒಬ್ಬೊಬ್ಬ ಹುಡುಗನ ನೆತ್ತಿಯ ಮೇಲೆ ಕೈಯಿಟ್ಟು,—

'ಮುತ್ತಿನಂಥಾ ಅವ್ವನ ಕೊಡತೇವ ಕೂಡ....ಬಂಗಾರದಂಥಾ ಹ್ಯಾಂತೀನ ಕೊಡತೇವ ಕೂಡ....ಆಕಳ ಅಂಥಾ ಅಕ್ಕಾನ ಕೊಡತೇವ ಕೂಡ....'

ಹೀಗೆ ಏನೇನೋ ಕೊಡುವೆವೆಂದು ಹೇಳಿ, ಒಬ್ಬೊಬ್ಬರನ್ನೇ ಕೂಡಿಸುತ್ತ ನಡೆದರು.

ಮದುವೆಯ ಸಮಾರಂಭ ನಿನ್ನೆಯೇ ತೀರಿತ್ತು. ಇಷ್ಟರಲ್ಲಿ ಮಂಟಪದ ಬಹುಭಾಗವನ್ನೂ ತೆಗೆದು ಆಗಿದೆ. ಇನ್ನೂ ಮದುವೆಯ ಮನೆಯಲ್ಲಿ ಚಿಕ್ಕಪುಟ್ಟ ಕೆಲಸಗಳಿಗೇನೂ ಕೊರತೆಯಿಲ್ಲ. ಮಗದುಮರ ಮಲ್ಲನ ಓಣಿಯ ಗಂಡಸರೆಲ್ಲರೂ ಈ ಹೊತ್ತು, ಮದುವೆಗೆ ತಂದ ಜನರ ಸಾಮಾನುಗಳನ್ನು ಅವರವರಿಗೆ ಕೊಡು

ವದರಲ್ಲಿದ್ದಾರೆ. ಅವರೆಲ್ಲರ ಊಟ ಇನ್ನು ಮಲ್ಲನ ಮನೆಯಲ್ಲಿಯೇ ಆಗುವದು. ಸಾಯಂಕಾಲದ ಊಟದ ಸಿದ್ಧತೆ ಒಳಗೆ ನಡೆದಿದೆ. ಮಂಟಪದಲ್ಲಿ ಒಂದು ಮಗ್ಗಲು ಹಾಕಿದ ಮಂಚದ ಮೇಲೆ ನಾಲ್ಕೆಂಟು ಜನರು ಕುಳಿತಿದ್ದಾರೆ, ಊಟಕ್ಕೆ ಕರೆಯುವ ದಾರೀಕಾಯುತ್ತ. ತಮ್ಮ ತಮ್ಮಲ್ಲಿ ಮದುವೆಯ ಬಗ್ಗೆ ಕೆಲವು ಮಾತುಗಳನ್ನು ಆಡುತ್ತಿರುವರು.

"ಯಾನರ ಆಗಲಿ, ತಾರವ್ವ ಸುಖದಾಗ ಬಿದ್ದಳಲ್ಲಾ!" ಒಬ್ಬನೆಂದ.

ಮತ್ತೊಬ್ಬನೆಂದ "ಪೋರಿ ತೆಕ್ಕಾ ಯಾನ ವರಾ ಅಲ್ಲ..."

"ಆಃ ! ಕುದರೀಮ್ಯಾಲ ಕೂಡಿಸುವಾಗ...ಹುಡುಗನ ಬುಡಕ್ಕ ಹಚ್ಚಡ ಹಾಕಿ ಎತ್ತರ ಮಾಡತಿದ್ರು!"

"ತಾರಕ್ಕನೂ ಹುಶ್ಯಾರಽ? ಅಷ್ಟಕ್ಕ ತಿಳಕೊಂಡ ಹೆಣ್ಣುಮಗಳ ಮೆರುಣಿಗಿ ಮನಿಗಿ ತಿರುಗಿ ಬರೂತನಕ ಗೋಣ ಮ್ಯಾಲ ಮಾಡ್ಯಾಳಂದಿ; ಗರತಿ ಮಗಳ" ಎಂದು ತಾರಕ್ಕನ ತಿಳುವಳಿಕೆಯನ್ನು ಕುರಿತು ಮತ್ತೊಬ್ಬ ಮುದುಕ ನುಡಿದ.

"ಎಲ್ಲಾ ಒಳಗಿನಿಂದ ಕಳ್ಳಬಳ್ಯಾಗಿನ ಸಂಬಂಧ; ಮಲ್ಲ ಮಗಳ್ನ ಕೊಟ್ಟ. ತಂಗಿ ಮನಿ ಒಂದ ಗಳಸಬೇಕಾಗಿತ್ತು. ಅಷ್ಟು ಮಾಡಿದಾ ಆಯ್ತು."

"ಗಳಿಸಲಾಕ ಎಲ್ಲಿ ಹೋಗಿತ್ತು...,ಯಾವಾಗ ಆದರ ಇತ್ತಽ ಅಲ್ಲ ತಂಗೀ ಮನೀ ?" ಇನ್ನೊಬ್ಬಾತ ಕೇಳಿದ.

"ಸಾಕ ಬಿಡಪ್ಪ...! ಇವರ ಜರಾ ಅನಮಾನಿಸಿದ್ದರ...ಹೊರಗಿನಾವರ ನಾಲ್ಕನೂರ ರೂಪಾಯಿ ವರದಕ್ಷಿಣೆ ಕೊಟ್ಟ, ಮ್ಯಾಲಿ ಅಣ್ಣಾ ಅಂದ ಹೆಣ್ಣ ಕೊಡತಿದ್ದರ ಆ ಹುಡುಗಗ..."

"ಇವರೆಲ್ಲಿ ಬಿಟ್ಟರು ? ಎತ್ತಿ ರೂಪಾಯಿ ಕೊಡಲಿಲ್ಲಾ...ಅಳ್ಯಾನ ಮೈಮ್ಯಾಲ ಬಂಗಾರ ಹಾಕಿದರು...ಎಲ್ಲಾ ಒಂದಽ ಅಲ್ಲ ; ಮಗಳ ಮದವಿ ಖರ್ಚ ಮಲ್ಲನ ಶಕ್ತಿ ಮೀರಿ ಆಯ್ತು. ಸುಮ್ಮನ ಒಬ್ಬರಿಗಿ ಅನಬಾರದು.." ಎಂದು ತರುಣನೊಬ್ಬ ಮಲ್ಲನ ಪಕ್ಷಗಟ್ಟಿ ನುಡಿದ.

"ನಾ ಅನ್ನೋದು ಅದಲ್ಲ ; ಖರ್ಚ ಯಾನ ? ಬೇಕಾದವರ ಮಾಡ್ಯಾರ.

ಹೊರಗ ಮಗಳ್ನ ಕೊಟ್ಟದ್ರೂ ಖರ್ಚ ಮಾಡೋದ ಮಾಡಲಾಕ್ಯಬೇಕು.. ಆದರ ಮನ್ಯಾಗ ಹೆಂಗಸರ ಮನಸ ಇಲ್ಲಾಗಿತ್ತ, 'ನನ್ನ ಒಬ್ಬಾಕೆ ಮಗಳ, ನಿನ್ನ ತಂಗಿ ನಿನ್ನ ತಂಗಿ ಅಂತ ಸಾಗರ ಬಿದ್ದ ಕೊಡತ್ಯಾನಂತೀ, ನಾಳಿ ನನ್ನ ಮಗಳಿಗಿ ಸುಖಾ ಆಗದಿರ ನೋಡ...ಊರಾಗಿನ ಊರಾಗ ನೆರಮನಿ ಇದ್ದಾಂಗ ಏತಿ, ದಿನಾ ಹರೀವತ್ತ ಎದ್ದ ಪೋರಿ ಆಳ್ತ ಬಂದ ನಿಂತಳು ಅಂದ್ರ ನನ್ನ ಕೈಲೆ ಆಗೋದಿಲ್ಲ. ಪೋರಿ ಒಂದ ಚಲ್ಲೀತು, ಉಕ್ಕಿಸೀತು. ಅಂದರ ತಾಳಕೊಂಡ ಹೋಗಾಕಿಬೇಕ...ಮೊದಲs ಚಿಮ್ಮವ್ವ ಹರಕ ಹೆಂಗಸ. ನಿನ್ನ ತಂಗಿ ಅಂತ ನಾ ಮುಚ್ಚಿ ಇಡೂದುಲ್ಲ...' ಅಂತ ಗಂಡನ ಸುತ್ತ ಹಚ್ಚಿದ್ದಳ ರತ್ನಾ. ಮಲ್ಲ ಅದ್ಯಾವದಕ್ಕೂ ಹಣೀಲಿಲ್ಲ. ಮುಂದ ಮಾರಿ ಮಾಡಿ ಕೊಟ್ಟಬಿಟ್ಟ..."

ಕೆಲವರ ಮನಸ್ಸಿಗೆ ಈ ಮಾತು ಸರಿಬರಲಿಲ್ಲವೇನೊ ! ಹುಡುಗರ ಆಟದ ಕಡೆಗೆ ಮನಸ್ಸು ಹರಿಸಿದರು. ಒಬ್ಬ ಹುಡುಗ 'ಮುತ್ತಿನಂಥಾ ಹ್ಯಾಂತೀನ ಕೊಡತ್ಯಾನ ಕೂಡ' ಎಂದು ಹೇಳಲು ಕುಳಿತ. ಜನರೆಲ್ಲ ಖೊಳ್ಳೆಂದು ಒಮ್ಮೆಲೇ ನಕ್ಕರು, ಹುಡುಗರ ಗುಂಪೂ ನಗೆಯಲ್ಲಿ ತೇಲಿತು. ಆ ಹುಡುಗ ನಾಚಿ ತಲೆ ಕೆಳಗೆ ಹಾಕಿ ಕುಳಿತ ಆಟ ಮುಂದೆ ಸಾಗಿತು. ತಾರಕ್ಕ ಸುಮತಿಯ ರಿಬ್ಬರೂ ಹಾಡುತ್ತ ಒಂದೆರಡು ಸುತ್ತು ತಿರುಗಿದರು. ಅನಂತರ ಮತ್ತೊಬ್ಬ ಹುಡುಗನ ತಲೆಯ ಮೇಲೆ ಕೈಯಿಟ್ಟರು.

ಆಗ ಒಂದು ಸಂಗತಿ ನಡೆಯಿತು,...

ತಾರಕ್ಕನ ಮದುವೆಗೆ ಬಂದ ಅಪ್ತರಲ್ಲಿ ಅನಂತನೆಂಬವನೊಬ್ಬ, ಎಂಟು ವರ್ಷದ ಹುಡುಗ ; ಅವಳ ಸೋದರಮಾವನ ಒಬ್ಬನೇ ಒಬ್ಬ ಅಕ್ಕರೆಯ ಮಗ. ಆತ ಒಳ್ಳೆಯ ಜರದ ಟೊಪ್ಪಿಗೆಯೊಂದನ್ನು ಹಾಕಿಕೊಳ್ಳುವ. ಅದನ್ನು ಬಹಳ ಜತನದಿಂದ ಜೋಪಾನ ಮಾಡುತ್ತಿದ್ದನಾತ. ಹಳ್ಳಿಯ ಹುಡುಗರಿಗೆ.... ಅದೇಕೆ ಹಿರಿಯ ಹೆಂಗಸರಿಗೂ ಕೂಡ....ಆ ಟೊಪ್ಪಿಗೆಯೊಂದು ಆಕರ್ಷಕ ವಾಗಿತ್ತು. ಮದುವೆಯಲ್ಲಿ ನೆರೆದ ಹೆಂಗಸರ ಬಾಯಲ್ಲೆಲ್ಲ 'ಟೊಪ್ಪಿಗಿ ಎಷ್ಟು ಚಂದ ಐತಿ !' ಎಂಬ ಮಾತೇ. ಆದರಿಂದ ತಾರಕ್ಕನಿಗೆ ಒಂದಿಷ್ಟು ಹೆಮ್ಮೆ, ನಮ್ಮ ಅನಂತನಿಗೆ ಎಂಥ ಸುಂದರ ಟೊಪ್ಪಿಗೆ ಇದೆ, ಎಂದು.

ಅನಂತನ ತಲೆಯ ಮೇಲೆ ಕೈಯಿಟ್ಟೊಡನೆಯೇ ತಾರಕ್ಕ ಕೆರಳಿ,... "ಸಾಕ ಸರಿ ಅತ್ತ; ನನ್ನ ಕೈಬಿಡು, ನಮ್ಮ ಅಂತೂನ ಟೊಪ್ಪಿಗಿ ಮುರದಿಟ್ಟಿ!"

ಎಂಬು ಸುಮತಿಯು ಕೈಯೊಳಗಿಂದ ಕೈ ಕಸಿದುಕೊಂಡು ಅನಂತನ ಟೊಪ್ಪಿಗೆಯನ್ನು ಕೈಯಲ್ಲಿ ತಕ್ಕೊಂಡು, ಮಡಚಿದ ಭಾಗವನ್ನು ನೆಟ್ಟಗೆ ಮಾಡ ಹತ್ತಿದಳು.

"ಅಷ್ಟ ಮಡಚಿದರ ಯಾನಾಯ್ತು ಬಿಡವ್ವ! ನಾ ಯಾನ ಬೇಕೆಂತ ಕೈಯಿಟ್ಟೆನು...?" ಎಂದು ಅಂದಳು ಸುಮತಿ.

"ಬಿಡ ತಾಯಿ! ನಮ್ಮ ಮಾಮಾ, ಮದುವಿಗಿ ಬರೋಗನs ಹತ್ತ ರೂಪಾಯಿ ಕೊಟ್ಟ ತಂದೀದಾ...ನಿನಗ್ಯಾನ ಆದರದ?"

ಅನಂತ ತಾರಕ್ಕನ ಕೈಯೊಳಗಿನ ಟೊಪ್ಪಿಗೆಯ ಕಡೆಗೆ ನೋಡುತ್ತಿದ್ದ. ಅವನ ಮುಖ ಸಪ್ಪಗೆ ಆಗಿದ್ದಿತು. ಕಣ್ಣು ಕುಣಿಗಳೂ ಹಸಿಯಾಗಿದ್ದವು. ತಾರಕ್ಕ ಅವನ ಮುಖದ ಕಡೆಗೆ ದೃಷ್ಟಿಯನ್ನು ಬೀರಲು, ಸಾವಕಾಶವಾಗಿ ಅಳಲಿಕ್ಕೆ ಆರಂಭ ಮಾಡಿದ.

"ಇಲ್ಲ ; ಬಾರಪ್ಪಾ...ನನ್ನ ಕಂದಾ !" ಎಂದು ಅಕ್ಕರೆಯಿಂದ ಅನಂತನನ್ನು ಎತ್ತಿಕೊಂಡು, ರಮಿಸಲು ತಾರಕ್ಕ ಕುಣಿಯಹತ್ತಿದಳು. ಮತ್ತು "ನನ್ನ ಮಾಯೇದ ಮರೀನ, ಮಾವಿನ ಮಿಡೀನ" ಎಂದು ಅವನ ಕಣ್ಣೀರು ಒರಸುತ್ತ ಮುದ್ದಿಡತೊಡಗಿದಳು. ಆಟ ಅಷ್ಟಕ್ಕೆ ನಿಂತಿತು. ಬಾಲಕರ ಬಳ್ಳಿಗೋಟಿ ಒಡೆಯಿತು. ಕೆಲವು ಹುಡುಗರು ಸುಮತಿಯ ಮೇಲೆ ಸಿಟ್ಟಾದರು, ನಡುವೆಯೇ ಆಟ ಮುರಿದಳೆಂದು. ಹಲವರು 'ಆಟ ಮುರದ ಕೊಲ್ಲಾಪುರಕ್ಕ ಹೋಯ್ತು!' ಎಂದು ಒದರಹತ್ತಿದರು. ಸುಮತಿ ಉತ್ಸಾಹ ಹೀನಳಾಗಿ ಮಂಚದ ಮೇಲೆ ಕುಳಿತ ಜನರೆಡೆಗೆ ನಡೆದಳು.

"ಬಿದ್ದೀಯೆ...ಹುಡಗನ ತಗೊಂಡು..." ಒಳಗಿನಿಂದ ಅನಂತನ ತಾಯಿ–ಸುಂದರಾಬಾಯಿ–ಒದರಿ ಹೇಳಿದಳು.

ಬಂಕದಲ್ಲಿ ಬಂದು "ಇಳಸ ನಮ್ಮವ್ವಾ...ತಣ್ಣಗ ಬಂದ್ಹಂಗ ಅವರ ಮನೀಗಿ ಹೋಗಿ ಮುಟ್ಟಲಿ—ಎಲ್ಲ್ಯಾರೆ ದರ ಹಾಕ್ಕೊಂಡ ಬಿದ್ದ ಬಂಗಾರದಂಥ ಮಾರಿ ಒಡದ ಇಟ್ಟ" ಎಂದಳು ರತ್ನಾಬಾಯಿ. ಒಳಗೆ ಹೋಗುತ್ತ "ನೋಡು ಸುಂದರಾ..., ತಾರವ್ವಗ ಅನಂತನ ಮ್ಯಾಲ ಭಾಳ ಮಾಯೆ. ಇಲ್ಲಿ ಮಂದಿ ಮಕ್ಕಳ್ನ ಎತಕೋಕ ಹೋಗತಾಳು, ಅವರ ಈಕಿ ಎಲ್ಲ್ಯಾರ ಒಗದಾಳಂತ ಕೂಸಿನಾ ಕಸಕೊಂಡರs ಸಿಟ್ಟಿಗಿ ಬಂದ ಅವರಿಗಿ ಹೇಳತಾಳ. 'ನಿಮ್ಮ

ಹುಡುಗನ ಕುಡದಿದ್ರ ಆಷ್ಟ್ಯಹೋಯ್ತು...ನಮ್ಮದೂ ಐನಾಪುರದಾಗ ಹುಡುಗ ಐತಿ...ನಮ್ಮ ಸೋದರ ಮಾವ್ನ ಮಗಾ...ನಾನೂ ತಗೊಂಡ ಬಂದ ಎತಕೊ ತ್ಯಾನಲಾ' ಅಂತ. ಈಗ್ಯಾಕ ನಡಿನ ಮ್ಯಾಲಿಂದ ಇಳಿಸ್ಯಾಳ ಆಕಿ ?" ಎಂದು ನಗುತ್ತ ನುಡಿಯುವಳು.

ಅಷ್ಟರಲ್ಲಿ ಮಂಚದ ಮೇಲೆ ಕುಳಿತ ಮುದುಕನೊಬ್ಬ "ರತ್ನಾ, ನಿನ್ನ ಮಗಳ ಹುಡಗನ್ನ ತಗೊಂಡ್ಯ ಬೀಳತಾಳ ಲ್ಹ! ಆಕಿಗೀ ಮೈಮ್ಯಾಲ ಸುದ್ದಿಲ್ಲ...!" ತಾರಕ್ಕನ ಕಡೆಗೆ ಹೊರಳಿ "ನೋಡ, ಹ್ಯಾಂಗ ಕುಣೀಕ ಹತ್ತೀ ದಾಳು...? ಅವಸರ ನೋಡಲ್ಲ ? ಮುದಗತ್ತಿ ಆಗಿದಾನು ಮತ್ತ ಹ್ಯಾಂಗ ನಡೀನ ಪ್ಯಾಲ ಕೂತಾನು...ಇಳಿನೋ...?" ಎಂದು ಬೆದರಿಸುವನು.

ತಾರಕ್ಕ ಹುಡುಗನನ್ನು ಕೆಳಗಿಳಿಸಿದಳು. ಮಂಚದ ಕಡೆಗೆ ಇಬ್ಬರೂ ಬಂದರು. ಕುಳಿತವರಲ್ಲಿ ಒಬ್ಬನೆಂದ,—

"ಹೀಂಗ ಹುಡದಿ ಹಾಕಿದರ್ಯ ನಾಳಿ ಭರಮು ಹ್ಯಾಂಗ ಸುಮ್ಮ ಇದ್ದಾನು...? ಎಷ್ಟ ಹಾಕತಿ ಹಾಕ ಇನ್ನ ನಾಲ್ಕ ದಿನಾ, ಆಮ್ಯಾಲಿ ಗಂಡನ ಮನೀಗಿ ಕಳ್ಸಿಬಿಡತೇವು, ಅಂದರ ಹಾಕುವಿಯಂತ ಹುಡದಿ"

"ಯಾಕ ? ಅಂವ್ಯಾನ ಮಾಡ್ತಾನು...? ಇನ್ನ್ಯ ಸಣ್ಣಾಕಿ ಇದಾಳ ಹಾಕಾಕೆಲ್ಲ ಹುಡದಿ ! ಈಗ್ಯಾನ ಆವನ ಅಧಿಕಾರ ನಡ್ಯು ಹಂಗಿಲ್ಲ....ಮೈ ನೆರೀತನಕಾ...." ಒಳಗಿಂದ ರತ್ನವ್ವ ಅಂದಳು.

"ಇನ್ನ್ಯಸಣ್ಣಾಕಿ ಯಾನ, ನಿನ್ನ ಮಗಳ...."

"ಎಷ್ಟ ದೊಡ್ಡಾಕಿ ಆದರ ಯಾನಾಯ್ತು ? ನಮಗ ಸಣ್ಣಾಕಿನ ಅಲ್ಲ... ಒಂದ್ಯಾಡ ಹಡ್ಯುತನಕ..." ಎಂದು ಸುಂದರಾಬಾಯಿ ಉತ್ತರ ಕೊಟ್ಟಳು.

"ಅದರ್ಯಯಾನ ದೂರ ಐತಿ ತಗೋ ! ಯರಡ ವರ್ಷದಾಗ; ಈಗಿಂದನ ಬಂಗಾರ ಕೂಡಸಲಿ ರತ್ನಾ !" ಸ್ವಲ್ಪ ಆಷ್ಕ್ಯತೆ ಬೆರೆತ ಸ್ವರದಲ್ಲಿ ನುಡಿಯುವನು, ಭೀಮಪ್ಪ.

"ಬಂಗಾರ ಯಾತ್ಕ ?" ಸುಂದರಾಬಾಯಿಯ ಪ್ರಶ್ನೆಯಿದು.

"ಅಳ್ಯಾಗ ಬ್ಯಾಡ್ಯಾನ, ತಾರವ್ವ ಮೈನೆರೆದಾಗ ಹಾಕಲಾಕ....? ಐದ ತೊಲಿ ಪೋಚೆ ಇಲ್ಲದ ಏಳತಾನೇನ ಭರಮು ಮಕರದಾಗಿಂದ...? ನೀವ ತಿಳದಿದೀರಿ...ಒಳಗಿನ ಅಳ್ಯಾ ಗರೀಬ ಅಂತ..."

ನಡುವೆಯೇ ಮಾತು ಸೇರಿಸಿ ರತ್ನವ್ವ "ಅಪ್ಪರೆ! ಭೀಮಪ್ಪ, ನೀನೂ ಚೌಗಲೇರಾಪ ಅಲ್ಲಾ ?... ಯಾನ ಆದ್ರೂ ಅವರ ಕಡೇನ ಹೊಳ್ಳ್ಯಾನ... ಹೀಂಗ್ಯ ಉಬ್ಬಿಸಿ ಉಬ್ಬಿಸಿ ನಮ್ಮ ಮನೀ ತೊಳದ ಮುತ್ತ ಮಾಡಿ ಇಟ್ಟೀರಿ... ನೀವೆಲ್ಲಾ ಕೂಡಿ...ಮತ್ತ ಹ್ಯಾಂಗ ಹೇಳ್ತಾನ ನೋಡಲ್ಲ ! ..ಕೂತ ಹೇಳ್ಲಾಕ ಯಾರದ ಯಾನ ನೂಸತೇತಿ ?... ಆಕಿ ಮೈ ನೇರೀಲರ್ಯ ಯಾನ ಕೊಡೋದ ಕೊಡತೇವಲ್ಲ...ನೀವ್ಯಾತ್ಕ ಹೇಳಬೇಕು, ನಡವಿನವರಾ ?" ಸ್ವಲ್ಪ ಹಾಸ್ಯ, ತುಸು ಸಿಟ್ಟು ಬೆರೆತ ಸ್ವರದಲ್ಲಿ ಅಣಕವಾಡುವಂತೆ ಹೇಳಿದಳು.

"ಅವರ್ನಾ ಯಾನ ಸುಡತಿ ಬಾ ತಾರಾ, ನಿನ್ನ ಗಂಡನ ಹೆಸರ ಹೇಳ .. ಕೇಳೂಣು........ಮದವಿ ಗದ್ದಲದಾಗ ಕೇಳಿಸ್ಯಲಿಲ್ಲ'' ಎಂದ ಮತ್ತೊಬ್ಬ ಮುದುಕ, ಅವಳ ಕೈಹಿಡಿದು ಹತ್ತರ ಎಳೆಯುತ್ತ.

"ಹೋಂದ; ನಾನೂ ಕೇಳಲಿಲ್ಲ......'' ಅದಕ್ಕೆ ಮತ್ತೊಬ್ಬ ತರುಣ ದನಿ ಯೆಳೆದ.

"ಹೂಂ ! ಇನ್ನ ಆಕೀ ಸುತ್ತ ಹತ್ತಿದಿರೀ ?... ಸಾಕ ಬರ್ರಿ ! ಊಟ್ಕ. ಅಡಿಗಿ ಎಲ್ಲಾ ಆರಿ ಅಂಗಾರ ಆಯ್ತು ..'' ರತ್ನವ್ವ ಊಟಕ್ಕೆ ಎಬ್ಬಿಸಿದಳು.

ಮಂಚದ ಮೇಲಿಂದ ಒಬ್ಬೊಬ್ಬರೇ ಎದ್ದು, ಕೈಕಾಲು ತೊಳೆದುಕೊಂಡು ಒಳಗೆ ಹೋದರು. ಆ ತೆರವಾದ ಮಂಚದ ಮೇಲೆ ಹುಡುಗರು ಕೂಡಹತ್ತಿದರು. ಐದಾರು ಹುಡುಗರು ಕೂಡುವಲ್ಲಿ ಮಂಚ ತುಂಬಿಹೋಯಿತು. ಅನಂತ ಇನ್ನೂ ಕೆಳಗೆ ನಿಂತಿದ್ದ. ಅವನಿಗೆ ಅಲ್ಲಿ ಕೂಡಲು ಸ್ಥಳವಿರಲಿಲ್ಲ.

''ಸರೀರಿ ಅತ್ತ . ! ನಮ್ಮ ಅನಂತಗ ಜಾಗಾ ಕೊಡಿರಿ...'' ತಾರವ್ವ ಸ್ವಲ್ಪ ಸಿಡುಕಿನ ಸ್ವರದಲ್ಲಿ ಎಂದಳು, ಒಂದೆರಡು ಹುಡುಗರನ್ನು ನೂಕುತ್ತ.

"ಸಾಕ ಬಿಡ ತಾಯಿ ! ನಿಮ್ಮ ಮಂಚ ಐತಿ ಅಂತ ಇಷ್ಟ ಮಾಡಬಾರದು...'' ಸುಮತಿ ಗೋಣು ಹಾಕುತ್ತ ತಾರಕ್ಕನಿಗೆ ಹೇಳಿದಳು. ಮತ್ತು ಉಳಿದ ಹುಡುಗರಿಗೆ "ನಡಿರೊ, ಈಕಿ ಇಷ್ಟ ಸಿಟ್ಟಿಗಿ ಬರೂತನಕ ನಾವ್ಯಾಕ ಇಲ್ಲಿ ಇರೋದು...? ಗೌಡರ ಅಂಗಳ ಬೇಕಾದಷ್ಟ ದೊಡ್ಡದ ಐತಿ......ಅಲ್ಲಿ ಆಡೋಣು..."

ಇಷ್ಟರಲ್ಲಿ ಒಳಗಿನಿಂದ "ತಾರಾ, ನೀನೂ ಊಟಕ ಬಾ. ಅನಂತನ ಕರಕೊಂಡ ಹುಡುಗರೆಲ್ಲಾ ಒಮ್ಮಿ ಉಂಡ ಎದ್ದಿರಂದರ ನಮ್ಮದ ಕೆಲಸ ಆದಂಗ ಆಯ್ತು......." ಎಂದು ಸುಂದರಾ ಕರೆದಳು.

ಮದುವೆಗೆ ಬಂದ ಆಪ್ತರ ಮೂರು ನಾಲ್ಕು ಹುಡುಗರೂ, ತಾರಕ್ಕ ಅನಂತ ಮೊದಲಾದವರೂ ಊಟಕ್ಕೆ ಒಳಗೆ ಹೋದರು.

"ನಡೀರಿ. ನಾವೂ ಹೋಗೋಣು ಮನೀಗಿ..." ಎಂದು ಸುಮತಿ ನಡೆದಳು. ಉಳಿದ ಹುಡುಗರೂ ಆವಳ ಜೊತೆಗೆ ಹೊರಟರು. ಹೋಗುವಾಗ ಹಲವು ಬಗೆಯ ಮಾತುಗಳನ್ನಾಡುತ್ತ ಇದ್ದರು.

ಒಬ್ಬಳು ಅಂದಳು "ಸುಮೀ ಗರೀಬ ಪರಾಣಿ !"

"ಅವರ ಮನೀ ಮುಂದ ಅಂತ...ಸುಮ್ನ ಬಿಟ್ಟಳ ಬಾ !" ಎಂದು ಇನ್ನೊಬ್ಬ ಕಿರಿ ಹುಡುಗ ಅಂದ.

"ಆ ऽ ऽ ವ್ವಾ ! ಟೊಪ್ಪಿಗಿಗಿ ಜರಾ ಕೈ ಹಚ್ಚಿದಕ ಎಷ್ಟ ಸೆಟಗೊಂಡಳೋ !" ತಾರಕ್ಕನನ್ನು ನಿಂದಿಸಲು ನುಡಿಯಿತೊಂದು ಹುಡುಗಿ.

ಸುಮತಿ ಕೈ ಮಾಡಿ ತೋರಿಸಿ .... "ಇಷ್ಟ ದೊಡ್ಡ ಹುಡುಗ ಆಗೇತಿ... ಇನ್ನ್ಯಎತ್ತಗೊಂಡ ತಿರಗತಾಳ ಇನ್ನೊಂದ ನಾಲ್ಕ ದಿನಾ ಇರತಾ, ಆಯ್ತ ಯಾರನಾ ಎತಕೋತಾಳ ಎತಕೋಲಿ..." ಎಂದು ತಾರಕ್ಕನ ತಪ್ಪು ತೆಗೆಯುತ್ತ ಮಾತಾಡಿದಳು.

"ಎತಕೋಕ ಆಕಿ ಆದರ ಎಲ್ಲಿ ಇರತಾಳ ತಗೋ, ನಾಳಿನ ಬುಧವಾರ ಗಂಡನ ಮನ್ಯಾವರ ಕರೀಕ ಬರತಾರು..."

"ಅತ್ತೀ ಮನ್ಯಾಗ ಯಽऽऽಲ್ಲ ತಿಳದೋತ ಐಸಿರಿ ಆಕಿಗಿ ! ಚಿಮ್ಮವ್ವ ಅತ್ತಿ ಕೈಯಾಗ...ನಂದೋಸೋದ ಯಾನ ಸುಮ್ನ ಇಲ್ಲಾ" ಕೈ ಮಾಡಿ ಸ್ವಲ್ಪ ಹಿರಿ ಹುಡುಗಿಯೊಬ್ಬಳಃ ನುಡಿದಳು.

"ಅಲ್ಲಿ ತನಕ ಯಾತ್ಕ ! ಇಂದ ಸಂಜಿಕೆ ತಿಳೀತೈತಿ ಕಿವ್ಯಾಗಿನ ಹುಜರು ಕಳ್ದಾಳು.. ಆಗ್ಯ ನಾ ಹೇಳಾಕಿ...ಅವರ ಮನ್ಯಾಗ ಆದರ ಜಗಳ ಬ್ಯಾಡಂತ ಸುಮ್ನ ಬಿಟ್ನಿ !" ಎಂದು ಸುಮತಿ ತಾನು ಎಷ್ಟು ಒಳ್ಳೆಯವಳೆಂಬ ಭಾವವನ್ನು ಪ್ರದರ್ಶಿಸುತ್ತ ಹೇಳಿದಳು.

ಆಗ ಎದುರಿಗೆ ಭರಮಪ್ಪ ಬಂದ. ಎಲ್ಲ ಹುಡುಗರೂ ನಗುತ್ತ ತುಂಟ ತನದಿಂದ ಅವನ ಸುತ್ತುಗಟ್ಟಿದರು.

"ತಾರಾನ ಎಂದ ಕರಕೊಂಡ ಬರತೀರಿ......?" ಗುಂಪಿನೊಳಗಿನ ಹುಡುಗಿಯೊಂದು ಕೇಳಿತು.

"ಯಾಕ ?"

"ಸುಮ್ಮ ಸುಮ್ನ ಜಗಳಾಡತಾಳ ಆಕಿ....ನಮ್ಮ ಗೂಡಾ...ಸಡ್ಲ ಬಿಡ ಬ್ಯಾಡ ಆಕಿನಾ ಅ್ಣ ?" ಎಂದು ಗೋಣುಹಾಕುತ್ತ, ಭರಮನ ಕೈ ಹಿಡಿದು ಚಿಕ್ಕ ಹುಡುಗಿಯೊಂದು ಹೇಳಿತು.

"ಜಗಳಾಡಿದರ ?" ನಗುತ್ತ ಭರಮ ಮುನ್ನಡೆದ.

ಹುಡುಗರೂ ದಾರೀ ಬಿಟ್ಟರು ಅವರಿಗೆ ಭರಮನ ಮಾತು ಸರಿಬರಲಿಲ್ಲ.

ಭರಮನ ತಂದೆಯ ಹೆಸರು, ಹೂವಣ್ಣ ಚೌಗುಲೆ ಎಂದು. ಚೌಗುಲೆ ಯವರು ಬೇರೆ ಓಣಿಯಲ್ಲಿ ಇರುತ್ತಿದ್ದರು. ಮಗದುಮರು ಅವರಿಗೆ ಮೊದಲಿ ನಿಂದಲೂ ಆಪ್ತರು. ಮಗದುಮರು ಸ್ವಲ್ಪ ಬಡವರು. ಹೊಟ್ಟೆಬಟ್ಟೆಗೆ ಸಾಲು ವಷ್ಟು ಹೊಲಮನೆಯಿದ್ದವರು. ಚೌಗುಲೆಯವರದು ದೊಡ್ಡ ಮನೆತನ. ಹತ್ತೆಂಟು ಕೂರಿಗೆ ಅಡವಿ ಇದ್ದವರು. ಊರಲ್ಲಿ ಒಂದೆರಡು ಮನೆಗಳೂ ಇವೆ. ಊರವರಿಂದ ಸ್ವಲ್ಪ ಮಾನ ಮರ್ಯಾದೆ ಸಿಕ್ಕುತ್ತದೆ. ಅಂದರೆ . ಮದುವೆ ಮುಂಜಿಗಳಲ್ಲಿ ಇವರು ಹೋಗದಿದ್ದರೂ, ಇವರ ಹಕ್ಕಿನ ಸಕ್ಕರೆಯ ದೊಣ್ಣೆ, ಎಲೆ ಅಡಿಕೆ ಇವರ ಮನೆಗೇ ಬರುವದು.

ಇರುಳು ಮಲಗುವ ಕಾಲಕ್ಕೆ ಪಡಸಾಲೆಯಲ್ಲಿ ಹಾಸಿಗೆಯ ಮೇಲೆ ಹತ್ತೆಂಟು ಹುಡುಗರು ಒತ್ತಟ್ಟಿಗೆ ಮಲಗಿದ್ದಾರೆ. ತಾರಕ್ಕನ ಹತ್ತರ ಅನಂತ ಮಲ ಗಿರುವನು. ಹುಡುಗರೆಲ್ಲ ತಮ್ಮತಮ್ಮಲ್ಲಿ ಏನೋ ಮಾತುಕತೆ ನಡೆಯಿಸಿದ್ದಾರೆ. ಇನ್ನೂ ಅವರಿಗೆ ನಿದ್ರೆಬಂದಂತಿಲ್ಲ. ಹಲವು ವಿಧದ ಹರಟೆಗಳು ನಡೆದಿವೆ. ಅನಂತ ತನ್ನ ಊರು ಸಾಲೆಗಳ ಬಗ್ಗೆ ಅನೇಕ ಸಂಗತಿಗಳನ್ನು ಗಂಭೀರವಾಗಿ ಉತ್ಸಾಹದಿಂದ ಹೇಳುತ್ತಿರುವನು. ತಾರಕ್ಕನಿಗೆ ಆ ಮಾತಿನಲ್ಲಿ ರುಚಿಯಿಲ್ಲ ಅನಂತನ ಆಚೆಗೆ ಮಲಗಿದ—ತನಗಿಂತ ಹಿರಿಯಳಾದ—ಹುಡುಗಿಯೊಬ್ಬಳ ಹತ್ತಿರ ಅತ್ತೆಯ ಮನೆಯ ಅನುಭವಗಳನ್ನು ಕೇಳಬೇಕಾಗಿದ್ದಿತು ಅವಳಿಗೆ.

ತಾನು ಹುಟ್ಟಿದಾಗಿನಿಂದಲೂ ಎಲ್ಲಿಯೂ ಹೋದವಳಲ್ಲ. ಒಂದೇ ಮನೆಯಲ್ಲಿ ಬೆಳೆದವಳು. ಹೊಸಮನೆಯಲ್ಲಿ ಹೋಗಿರುವ ಬಗ್ಗೆ ಅವಳಿಗೆ ಸ್ವಲ್ಪ ಗೂಢವೆನಿಸುತ್ತಿದ್ದಿತು....ಈ ವಿಚಾರ ತಿಳಿದುಕೊಳ್ಳುವುದಕ್ಕಾಗಿ ಅವಳ ಮನಸ್ಸು ತವಕಗೊಳ್ಳುತ್ತಿತ್ತು. ಆದಕ್ಕಾಗಿ ಅವಳು ಅನಂತನ ಮಾತಿಗೆ ನಡುವೆಯೇ ತಡೆ ಹಾಕಿ—

"ಅನಂತಾ, ಆಚಿ ಕಡೆ ಜರಾ ಮಲಗ ಹೋಗು....ಅಕ್ಕಾನ ಸಂಗಡ ಮಾತಾಡ್ತ್ಯಾನ ನಾ . ." ಎಂದಳು.

ಅನಂತ ತನ್ನ ಮಾತು ನಿಂತುದಕ್ಕೆ ಕೆರಳಿ..."ಇಲ್ಲ, ನೀನs ಹೋಗ...."

"ಅನಂತಾ, ನೀ ಭಾಳ ಹುಶ್ಯಾರ ಅಲ್ಲ...? ಜರಾನs ಹೋಗ ಮತ್ತ ಬರಾಕೆ. ನನ್ನ ಮಾತ ಕೇಳೂದಿಲ್ಲಾ...ಣ್ಣ ?"

"ಊಂಹೂ ! ನನ್ನ ಮಾತ ಕೇಳೂದುಲ್ಲ ಯಾಕ ನೀ ?" ಎಂದು ಕಣ್ಣು ಕೆರಳಿಸಿ ಕೇಳಿದ ಅನಂತ.

ತಾರಕ್ಕ ಪರಿಪರಿಯಿಂದ ಹೇಳಿ ನೋಡಿದಳು. ಬೇಡಿಕೊಂಡಳು. ಆದರೂ ಅನಂತ ಎದ್ದು ಹೋಗಲಿಲ್ಲ. ಕೊನೆಗೆ ತಾನೇ ಎದ್ದು ಆಚೆಗೆ ಹೋಗಬೇಕೆಂದು, ಯೋಚಿಸಿ ಎದ್ದು ಕುಳಿತಳು. ಅನಂತ ಹೋಗಗೊಡಲಿಲ್ಲ. ಸೆರಗು ಹಿಡಿದು ಎಳೆದ. ಕೈ ಹಿಡಿದ. ಅವಳು ಕೇಳಲಿಲ್ಲ, ಕೈ ಕೊಸರಿಕೊಂಡು ಹೋದಳು. ಅನಂತ ಮತ್ತೂ ಕೆರಳಿದ. ಇವರಿಗೆ ಮಾತಾಡಗೊಡಲಿಕ್ಕಿಲ್ಲವೆಂದು ಮನದಲ್ಲಿ ನಿಶ್ಚಯಿಸಿದ. ಒದರಿ ತನ್ನ ಪುಸ್ತಕದೊಳಗಿನ ಕವಿತೆಗಳನ್ನು ಅನ್ನತೊಡಗಿದ. ಗೊಂದಲ ಮಾಡಿದ. ತಾರಕ್ಕನ ಹತ್ತರ ಹೋಗಿ ಮಾತಿಗೆ ಅಡ್ಡಿಮಾಡಲು ಯತ್ನಿಸಿದ. ಈ ಗೊಂದಲ ಕೇಳಿ ಒಳಗಿನಿಂದ ಸುಮ್ಮಮಲಕ್ಕೋ ಅನಂತಾ..." ಎಂದು ಅವನ ತಾಯಿ ಹೇಳಿದಳು. ಆದರೂ ಅನಂತ ಸುಮ್ಮನಾಗಲಿಲ್ಲ. ಆಗ ತಾರಕ್ಕನಿಗೆ ತಡೆಯುವದಾಗಲಿಲ್ಲ. "ಇಲ್ಲೇದ ಸರಿ ಅತ್ತ !" ಎಂದು ಸುಗಿಸಿದಳು. ಅವಳ ಮಾತಿನಲ್ಲಿ ಸಿಟ್ಟು ಇತ್ತು.

"ನಾ ಹೋಗುದುಲ್ಲ...."

"ಯಾಕ ?"

"ನನ್ನ ಮರ್ಜಿ...ನೀ ಯಾನ ಕೇಳ್ತಿ."

ತಾರಕ್ಕ ಸಿಟ್ಟಿನಿಂದ ಅನಂತನ ರಟ್ಟೆ ಹಿಡಿದು ದೂರ ಎಳೆದೊಯ್ದು ನುಗಿಸಿ "ನಾಲ್ಕ ಮಾತ ಮಾತಾಡಬೇಕಂದ್ರ...ಇದೆಲ್ಲೀದ ನಡುವೆ ಬಂದಿತ್ತೊ ಖೋಡಿ....?" ಎಂದಳು.

ಅನಂತ ಮಾತನಾಡಲಿಲ್ಲ; ಸಿಟ್ಟಿನಿಂದ ಗಲ್ಲ ಉಬ್ಬಿಸಿಕೊಂಡು ಹಾಸಿಗೆಯ ಮೇಲೆ ಸುಮ್ಮನೆ ಕುಳಿತ. "ಇಲ್ಲೇ ಕೂಡ್ರು !" ಎಂದಳು ತಾರಕ್ಕ.

"ಬೇಕಾದ್ದ ಮಾಡು, ನಾ ಮಾತಾಡಗೊಡೂದುಲ್ಲ!" ಏನೋ ನಿರ್ಧಾರಕ್ಕೆ ಬಂದು ಗುಡುಗಿದ ಅನಂತ.

"ಯಾನ ಮಾಡ್ತಿ ಮಾಡಕೊ..." ಎಂದು ತಾರಕ್ಕ ತಿರುಗಿ ತನ್ನ ಸ್ಥಳಕ್ಕೆ ಹೋಗಿ ಮಲಗಿಕೊಂಡಳು.

ಅನಂತ ಅಲ್ಲೇ ಸ್ವಲ್ಪ ಹೊತ್ತು ಕುಳಿತ. ಸಿಟ್ಟು ತೆರೆತೆರೆಯಾಗಿ ಅವನ ಮನಸ್ಸಿನಲ್ಲಿ ಏಳುತ್ತಿದ್ದಿತು. ಅವನು ಚಿಕ್ಕವನಾದರೂ ಅವನ ಹಟವು ಮಾತ್ರ ಹಿರಿದಾಗಿಯೇ ಇದ್ದಿತು. ಅಲ್ಲೇ ನೆಲಕ್ಕೆ ಉರುಳಿ "ಊ ! ಊ ! ಊ ! " ಎಂದು ಸ್ವರ ತೆಗೆದು ಅಳಹತ್ತಿದ.

"ಯಾಕೋ ಅನಂತಾ, ಒಳಗ ಬಾ ಇಲ್ಲಿ .." ಎಂದು ರತ್ನಾಬಾಯಿ ಕರೆದಳು. ಅನಂತನ ಅಳುವಿಗೆ ಬೆಲೆ ಬಂದಂತಾಯಿತು. ಅಳುವು ಜೋರಾಯಿತು. ರತ್ನವ್ವ ಹೊರಗೆ ಬಂದಳು. "ಯಾಕ ಅಳ್ತೀಯೋ ಅನಂತಾ....?" ಎಂದು ಎತ್ತಿಕೊಳ್ಳಲು ಹೋಗಿ ಕೇಳಿದಳು.

"ತಾರಿ ಬಡಿದಳು !" ಎಂದು ಬಿಕ್ಕಿ ಬಿಕ್ಕಿ ಅಳುತ್ತ ನುಡಿದ.

ರತ್ನವ್ವ ಹುಸಿ ಮುನಿಸು ತೋರಿಸಿ...."ಯಾಕ ಬಡಿತಾಳ ಹುಡಗಗಾ, ಸೊಕ್ಕ ಬಂದಿತ್ಯಾನ ಆಕಿ ಮೈಯಾಗ ?" ಎಂದಳು.

"ಹುಜರು ಕಳದ್ವಾಳು....ನಿನಗ ಹೇಳ್ತಾನ್ಯ ಅನ್ನಾನ........ಬಡಿತಾಳ" ಎಂದು ಅಳುವನ್ನು ತಡೆದು ಹೇಳಿದ ಅನಂತ, ಗೆಲುವಿನ ದನಿಯನ್ನು ತಂದು.

ರತ್ನವ್ವ "ಹ್ಞ ? ಹುಜರು ಕಳೆದಳು........?" ತಾರಕ್ಕನ ಕಡೆಗೆ ಹೊರಳಿ "ಹೋಂದ ಯಾನs ? ಎಲ್ಲಿ ಕಳದಿ ?" ಎಂದು ಕೇಳಿದಳು. ತಾರವ್ವ ಏನೂ ಮಾತಾಡಲಿಲ್ಲ. ಸುಮ್ಮನೆ ಕಣ್ಣಲ್ಲಿ ನೀರು ತಂದು ಮಲಗಿದಳು "ಮೊನ್ನೆ ಮಾಡಿಸಿತ್ತಲ್ಲ...! ಇದನ್ನ ಗೂಡಿಸಿ...ಮೂರ ಆದು ಹುಜರೂ ಒಂದ

ಆಗಾಣೆ ಒಂದ ಕಳಿಶೀನs.......ಮೈನ್ಯಾಲ ಸುದ್ದಿ ಏತ್ಯಾನ ಇಲ್ಲ ನಿನಗ? ....ಇದೊಂದ ಸಣ್ಣ ಜೀನಸಾ...ಕಳದರ ಮಾಡ್ಸಿಕೋಟ್ಟೇವ...ಮತ್ತ್ಯಾನರ ಹೀಂಗs ಕಳದಿ ಅಂದರ ಎಲ್ಲೇದ ಮಾಡ್ಸಿಕೊಡೂಣಪ್ಪ ನಾವು? ದೊಡ್ಡಾಕಿ ಆಗೀದಿ...ತಿಳಿದುಲ್ಲ ನಿನಗ? ಎಲ್ಲಿ ಕಳದಿ ಆಗsರ ಹೇಳಬಾರದು....ಹುಡಕ ತಿದ್ದೇವರ ಅಲ್ಲ...."

"ಎಮ್ಮಿ ಕಟ್ಟತೀರಿ ಅಲ್ಲಿ; ನಾ ಹೇಳತ್ಯಾನ ಅನ್ನಾನಾ ಬಡಿತಾಳು..." ಅನಂತ ರತ್ನವ್ವನ ಮಾತಿಗೆ ಪುಟವನ್ನು ಕೊಟ್ಟ.

"ಖೋಡಿ ಎಲ್ಲಾ್ಯಕಿ..." ಎಂದು ಕೈನೆವರಿ ತಾರಕ್ಕನನ್ನು ಬಡಿಯಲು ಹತ್ತ್ರರ ಹೋದಳು.

ಒಳಗಿನಿಂದ ಸುಂದರಾಬಾಯಿ ಧಾವಿಸಿ ಬಂದಳು. "ಸಾಕ ಬಿಡ ತಾಯಿ, ಯಾನ ಬಾಯ್ ಮಾಡಲಾಕ ಹತ್ತೀದಿ...ಮನ್ಯಾಗ ನಾಕಮನೀ ಮಂದೀ ಮಕ್ಕಳಾ ಬಂದೀದಾರ ನಿನಗ ತಿಳಿದುಲ್ಲಾ...ಎಂದ ಯಾರ ಕಳಿದುಲ್ಲೋ ಬಿಡುದುಲ್ಲೋ...! ನೀವೊಬ್ಬಾಕಿ ಹೆಚ್ಚಿನಾಕೇ ಆಗೀದಿ. ಸಣ್ಣ ಜೀನಸ್ ಆಡೋಗ ಎಲ್ಲಿ ಬಿದ್ದ ಹೋಗೇತಿ......" ರತ್ನವ್ವನಿಗೆ ಸಮಾಧಾನ ಹೇಳ ಹೋದಳು.

"ಯಾನ ಆಟ ಇಕ್ಕೇದಾ...? ದೊಡ್ಡಾಕಿ ಆದಳು...ಮದುವಿ ಆಯತ್ತ ನಾಳಿ ಬೆಳಗಾದರ ಗಂಡನ ಮನೀಗಿ ಹೋಗಾಕಿ...ಇನ್ನs ಆಟ ಅಂದರs, ಜರಾ ತಿಳಿಯಬಾರದು? ಅಡಿಗ ಅಂಬಲಿ ಮಾಡಲಾಕ ಕಲೀಬೇಕ...ಅಡಿಗ ಮನ್ಯಾಗ ಇರಬೇಕ...ಎಲ್ಲಾ ಬಿಟ್ಟ ನಾಲ್ಕು ಹುಡುಗರ ಸಂತಿ ನೆರಸ ಕೊಂಡ ಹಗಲಿ ರಾತ್ರಿ ಆಟದಾಗs ಇರತಾಳು. ಇಂದ ಒಂದ ಕಳದಳು ನಾಳಿ ಮತ್ತೊಂದ ಕಳೀತಾಳು.. ಹೀಂಗs ಈಕಿ ಕಳೀತ ಹೋಗಾಕಿ ಆದಳು...ಇಕಡಿ ಮಾಡಿಸಿ ಕೊಡಾವರ ಗಟ್ಟಿ ಕಾಣಿಸಿದಾರ ಯಾನ..., ಇಕಿಗಿ?"

"ಸಾಕ ಬಿಡ ನಮ್ಮವ್ವ! ಹುಡುಗುರ ಅಂದ ಮ್ಯಾಲ ಕಳೇವ.... ಅಲ್ಲಾ! ಅದಕ ಯಾನ ಮಾಡೋದಾ? ಇದ್ಯಾನ ಹೇಳ್ತೀ? ಸಣ್ಣ ಹುಜುರು ಹೋಗೇತಿರs ಇಷ್ಟ ಒದರಾಡತೀ ನೀ...ಆಚ್ಚಿಬರೆ ನಮ್ಮ ಅಂತೂನ ಮದಿ ವ್ಯಾಗ....ಗೌಡರ ಮನ್ಯಾಗಿನ ಉಂಗರಾ ತಂದ ಹುಡುಗನ ಕೈಯಾಗ ಹಾಕಿ ದೇವು. ಸಣ್ಣ ಹುಡುಗರ ಮದವಿ ಮಾಡಬಾರದಂತ...ಕಾಯ್ದೆ ಬರತೇತಿ

ಅನ್ನನಾ-ಒಂದ್ಸ ಒಂದ ರಾತ್ರಿಗಿ ಊರಾಗ ಹತ್ತಿಸತ್ತ ಮದವಿ ಆದೂ ಅಲ್ಲಾ.... ಆಗ ರಾತ್ರೋರಾತ್ರಿ ಹುಡುಗನ ಮದವಿ ಮಾಡಿ ಬಿಡೋದಂತ ಹುರಗಳಿಸಿದ್ರು... ಅಂಥಾ ವ್ಯಾಳೇದಾಗ ಎಲ್ಲಿ ಮಾಡಸೋದ ಆಗತೈತಿ ಗಡಬಡ್ಯಾಗ····? ಅಂತ ಮಂದಿ ಹತ್ತರಾ ಬೇಡಿ ತಂದ ಹಾಕಿದ್ರು ಇಂವ ಕಳದ ಬಿಡಬೇಕೊ? ಕತ್ತಲಿ ವ್ಯಾಳೇದಾಗ ಸಣ್ಣ ಹುಡುಗನ ಕೈಯಾಗನಿಂದ ಎಲ್ಲ್ಯೋ ಬಿದ್ದ ಹೋಯ್ತು... ಬೆಳ್ಳಬೆಳ ತನಕ ಗ್ಯಾಸ ತಗೊಂಡ ಹಂದರಲ್ಲ ಹುಡುಕಿ ಹುಡುಕಿ ದಣದೇವ ..... ಸಿಗಲಿಲ್ಲಾ ಬಿಡಲಿಲ್ಲಾ. ಕಡೀಕ ಆವರಿಗಿ ಮಾಡಿಸಿಕೊಟ್ಟೇವಲ್ಲ, ಉಂಗರಾ. ಅದಕ ಯಾನ ಮಾಡೋದೈತಿ ?" ಎಂದು ಸುಂದರಾಬಾಯಿ ಹೇಳಿದಳು.

" ಹೋಂದ ; ಅದೊಂದ ಸಣ್ಣ ಹುಡುಗ ಇತ್ತು....ಕಳದರ ಕಳದಿದ್ದಾ ದೋತ ! ಅಂದೇವ. ಇಕಿಗಿ ಯಾನ ..? ದೊಡ್ಡಾಕಿ ಆಗೇದಾಳ ..ಒಂದೊಂದ ಮಾತ ಹೇಳಿದರ ಆಣೆಗಿ ಒಂಟೆಗಿ ನೆಗಿಬಾರದಂಥಾ ಮಾತ ಹೇಳತಾಳಲ್ಲ ! ಮತ್ತ ವ್ಯಾಲಿಂದ ವ್ಯಾಲೆ ಹೀಂಗ ಹುಜುರು ಹೋಯ್ತು ಹೊವ ಹೋಯ್ತು....ಅಂದರ ಯಾರ ಕಪ್ಪಾಳಿಗಿ ಹೊಡಿಲಾಕಿಲ್ಲ ?" ಎಂದಳು ರತ್ನವ್ವ. ಅವಳ ಮಾತಿನ ರೀತಿಯೂ ಕಟುವಾಗಿಯೇ ಇತ್ತು.

ತಾರವ್ವ ಅಲ್ಲೇ ಹಾಸಿಗೆಯಲ್ಲಿ ಬಿದ್ದುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಮನದಲ್ಲಿ, ಅನಂತನ ಮೇಲಿನ ಸಿಟ್ಟು ಆ ದುಃಖವನ್ನು ಮೀರುವುದರಲ್ಲಿತ್ತು.

## ೨

ಮರುದಿವಸ ಮುಂಜಾನೆ ಬಹಳ ಹೊತ್ತಿನವರೆಗೂ ತಾರಕ್ಕ ಹಾಸಿಗೆ ಯಿಂದ ಏಳಲಿಲ್ಲ ಅಲ್ಲಿಯೇ ಹಚ್ಚಡದಿಂದ ಮುಸುಕು ಹಾಕಿಕೊಂಡು ಮಲಗಿ ಬಿಟ್ಟಿದ್ದಳು. ಅವಳ ತಾಯಿ ಒಂಡೆರಡು ಸಲ ಎಬ್ಬಿಸಿದಳು. ಆದರೂ ಏಳಲಿಲ್ಲ. ಸುಂದರಾಬಾಯಿ 'ಯಾವಾಗ ಎದ್ದಾಗ ಏಳಲಿ ಬಿಡು' ಎಂದಳು. ಎಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದರು. ಸ್ವಲ್ಪ ಹೊತ್ತೇರಿದ ಮೇಲೆ ಸುಮತಿ ಬಂದು ಕೂಗಿದಳು.

"ಅಲ್ಲೇ ಬಿದ್ದಾಳ ನೋಡ ಹಾಸಗ್ಯಾಗ ಇನ್ನs !" ಎಂದು ರತ್ನವ್ವ ನುಡಿದು ಸುಮ್ಮನಾದಳು. ಸ್ವಲ್ಪ ಹೊತ್ತಿನ ಮೇಲೆ "ಹೋಂದ್ಸ ಸುಮೀ,

ಹ್ಯಾಂಗ ಹೋಯ್ತು ಹುಜುರು...? ನೀವೂ ಹೀಂಗs ಕಳೀತೀರ್ಯಾನ ಮನ್ಯಾಗ?" ಎಂದು ಮೊಸರು ಕಡೆಯುವುದನ್ನು ನಿಲ್ಲಿಸಿ ಕೇಳಿದಳು.

ಸುಮತಿ ಅಲ್ಲೇ ಸ್ವಲ್ಪ ಹೊತ್ತು ತೆಪ್ಪಗೆ ನಿಂತಳು. ಹುಜುರುವಿನ ಸಲುವಾಗಿ ಏನಾದರೂ ಅಂದಿರಬೇಕೆಂದು ತಿಳಕೊಂಡಳು. ಇದೇ ಸಂಗತಿಯು ನಿನ್ನೆ ಜರುಗಿದ್ದರೆ ಅವಳಿಗೂ ಸಂತೋಷವಾಗಬಹುದಾಗಿತ್ತು. ತಾನೂ ಒಂದೆರಡು ಮಾತು ಹೆಚ್ಚಿಗೆ ಹೇಳಿ ಬೈಸುತ್ತಿದ್ದಳೇನೋ ! ಆದರೆ ಇಂದು ಅವಳ ಮನಸ್ಥಿತಿ ನಿನ್ನಿನದಾಗಿರಲಿಲ್ಲ ಅಲ್ಲಿಯೇ ಸ್ವಲ್ಪ ಹೊತ್ತು ಕಂಬದಂತೆ ನಿಂತಳು. ಆಮೇಲೆ ಸಾವಕಾಶವಾಗಿ ಒಂದೊಂದೇ ಹೆಜ್ಜೆಗಳನ್ನು ಎತ್ತಿ ಇಡುತ್ತ ತಾರಕ್ಕನ ಹಾಸಿಗೆಯ ಬಳಿಗೆ ಹೋಗಿ ಮುಸುಕು ತೆಗೆದಳು.

ತಾರಕ್ಕ ಸನ್ನೆಯಿಂದ "ಬ್ಯಾಡ...." ಎಂದು ಗೋಣು ಹಾಕಿದಳು.

ಸುಮತಿ ಬೇಕಂತಲೇ "ತಾರಕ್ಕ ...." ಎಂದು ಒದರಿ ಕರೆದು ಮಾತನಾಡಿಸಿದಳು. ನಿರುಪಾಯಳಾಗಿ ತಾರಕ್ಕ ಎದ್ದು ಕುಳಿತಳು. ಆಮೇಲೆ ಸುಮತಿ "ನಾ ಗಜ್ಜಗಾ ಬಳೆಚೂರ....ತಂದಿದ್ಯಾನು...ಹಿತ್ತಲಾಗ ಮನಿ ಕಟ್ಟಿ ಆಡೋಣು....?...ಈಗ ವೀರೋಜ್ಯಾನ ಇಂದ್ರಿ ಬರತ್ಯಾನ ಅಂದಾಳ...ನೀ ನಡೀಲಾ ?" ಎಂದು ಕಳ್ಳದನಿಯಿಂದ ಹೇಳಿದಳು.

ಹಿತ್ತಲಿನಲ್ಲಿ ಚಿಕ್ಕದೊಂದು ಬೇವಿನ ಮರವಿತ್ತು. ಅದರ ನೆರಳಿನಲ್ಲಿಯ ಕಸಕಡ್ಡಿಗಳನ್ನು ಆರಿಸಿ ಸ್ವಚ್ಛ ಮಾಡಿದರು. ಅಲ್ಲಿಯೇ ಮನೆ ಕಟ್ಟುವದೆಂದು ಗೊತ್ತಾಗಿದ್ದಿತು. ಓಣಿಯೊಳಗಿನ ನಾಲ್ಕಾರು ಹುಡುಗಿಯರೂ ಬಂದಿದ್ದರು.

ಇತ್ತ ಅನಂತ ಮನೆಯಿಂದ ಬಂದ. ತಾರಕ್ಕ ಅವನ ಕಡೆಗೊಮ್ಮೆ ಹುಬ್ಬುಗಂಟಿಕ್ಕಿ ನೋಡಿದಳು. ಆಮೇಲೆ ಬೇರೆ ಕಡೆಗೆ ಮುಖದಿರುವಿ 'ಸೊಕ್ಕಿನಾವ ಸುಮ್ನs ಮನ್ಯಾಗ ಹೇಳಿ ಬೈಯಿಸಿದ....ನಿನ್ನಿ. ಈಗ ಬಂದಿದಾನೆಲ್ಲಕ....ಇಲ್ಲಿ, ಯಾರ ಗೂಡಾ ಆಡ್ತಾ ಆಡಲಿ ಅಲ್ಲ ! ' ಎಂದು ಬಾಯಲ್ಲಿಯೆ ಪುಟಪುಟಿಸಿದಳು. ಆಮೇಲೆ ಸುಮತಿಯನ್ನು ಕಣ್ಣ ಸನ್ನೆಯಿಂದ ಹತ್ತರ ಕರೆದು, ಕಿವಿಯಲ್ಲಿ ಏನೇನೊ ಹೇಳಿದಳು.

" ಅಕ್ಕಾs ಏ ಅಕ್ಕಾ...ನಾನೂ ಆಡಕ ಬರಲಿ ? " ಅನಂತ ಕೇಳಿದ.

ತಾರಕ್ಕ ಏನೂ ಮಾತಾಡಲಿಲ್ಲ. ಸುಮತಿಯೇ ಹೇಳಿದಳು. "ಹೆಂಗಸರ ಆಟದಾಗ ನಿಂದ್ಯಾನ ಕೆಲಸ....?" ಧ್ವನಿ ಸ್ವಲ್ಪ ಬಿರುಸಾಗಿದ್ದಿತು.

"ಯಾಕ ? ನಾ ಬರಬಾರದು ?''

" ಬ್ಯಾಡ; ನಿನ್ನಾ ಆಡಕ ಕರಕೊಳ್ಳೂದುಲ್ಲಾ ?'' ತಾರಕ್ಕ ಹೇಳಿದಳು.

"ಹಾಂಗಾರ ನನ್ನಾ ಕರಕೊಳ್ಳೂದುಲ್ಲಾ ?'' ಕಣ್ಣು ಕೆಂಪು ಮಾಡಿ ಕೇಳಿದ ಅನಂತ.

" ಇಲ್ಲಾ !'' ಎಂದಳು ತಾರಕ್ಕ, ಬಿಗುವಿನಿಂದ.

" ನಾ ಬರಾಂವ ನೋಡ '' ಎಂದು ಅನಂತ ಸಲಿಗೆಯಿಂದ ಅವರ ನಡುವೆ ಹೋಗಿ ಕುಳಿತ.

" ಹೋಗ ಇಲ್ಲೀದ....'' ಎಂದಳು ಸುಮತಿ ಕಠೋರ ಕಂಠದಿಂದ.

" ಇಲ್ಲ, ನೀವ್ಯ ಹೋಗರಿ.........ನಮ್ಮ ಹಿತ್ತಲಾಗಿಂದ ....''

ಸುಮತಿ ಸುಮ್ಮನಾದಳು. ತಾರಕ್ಕನ ಮುಖದ ಕಡೆಗೆ ನೋಡಿದಳು ಮಾತ್ರ.

" ಯಾರ ಹಿತ್ತಲಾ ? ನಮ್ಮ ಹಿತ್ತಲ ಐತಿ !" ತಾರಕ್ಕ ಬಿಂಕದಿಂದ ಹೇಳಿದಳು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಉರುವಲ ಬಣಿವೆಯೊಳಗಿನ ಮುಂಗುಲಿಯೊಂದು ಹೊರಗೆ ಬಂದು ಓಡಿಹೋಯಿತು. ಗಾಳಿ ಬೀಸುತ್ತಿರಲಿಲ್ಲ. ಗಿಡಗಳೆಲ್ಲ ಸ್ತಬ್ಧವಾಗಿದ್ದವು. ಸೂರ್ಯ ಮೆಲ್ಲನೆ ಮೇಲೇರುತ್ತಲಿದ್ದ. ಅಡುವ ಮನೆಯೊಳಗಿನ ಹೊಗೆಯು ಹಂಚಿನೊಳಗಿನಿಂದ ಸಾವಕಾಶವಾಗಿ ಮೇಲೇರಿ ಬರುತ್ತಲಿದ್ದಿತು.

" ಇಲ್ಲೀದ ಏಳು !'' ತಾರಕ್ಕ ಹೇಳಿದಳು.

" ನಾ ಇಲ್ಲೇ ಕೂಡಾಂವ...ನೀವ್ಯ ಏಳ್ರಿ !....ಬೇಕಾದ್ರ!" ಹಟದಿಂದ ನುಡಿದ ಅನಂತ.

ಸ್ವಲ್ಪ ಹೊತ್ತು ಸುಮ್ಮನೆ ಕುಳಿತಳು ತಾರಕ್ಕ. ಆಮೇಲೆ ಯೋಚಿಸಿ,– " ಬಾ ಸುಮೀ, ಆ ಗೋಡೆ ನೆರಳಾಗ ಮನೀ ಕಟ್ಟೋಣು " ಎಂದು ಎದ್ದು ನಡೆದಳು.

" ಹೋಂದ, ಒಂದ ಕಡೆ ಗೋಡಿನೂ ಐತಿ....ಮನಿ ಕಟ್ಟಿಕ ನೆಟ್ಟಗ....'' ಎಂದು ಸುಮತಿಯೂ ಆಟಿಗೆಯ ಸಾಮಾನು ತಕ್ಕೊಂಡು ಎದ್ದಳು.

ಉಳಿದ ಹುಡಿಗಿಯರೂ ಮನೆ ಕಟ್ಟುವ ದಂಟು ಕಟ್ಟಿಗೆಗಳನ್ನು, ಡಬ್ಬಿ ಗಜ್ಜುಗ ಬಳೆಚೂರು ಗೊಂಬೆಗಳನ್ನು ಒಯ್ಯುಹತ್ತಿದರು. ಸ್ವಲ್ಪ ಹೊತ್ತಿನಲ್ಲಿ ಅಲ್ಲಿ ಹೋಗಿ ಆಟಕ್ಕೆ ಆರಂಭಿಸಿದರು.

ಅನಂತ ಗಂಭೀರವಾಗಿ ಅತ್ತೊಮ್ಮೆ ನೋಡಿದ. ಅವನ ಮನಸ್ಸೂ ಅತ್ತ ಹರಿಯುತ್ತಿದ್ದಿತು. ಆದರೆ ಅಲ್ಲಿ ಹೋದರೆ ತನ್ನನ್ನು ಆಡಲು ಕರದು ಕೊಳ್ಳುವದಿಲ್ಲವೆಂಬುದು ಅವನಿಗೆ ಗೊತ್ತು. ಆದರೂ ಆಟ ಆಡದೆ ಇರುವುದು ಅವನಿಗೆ ಆಗದು. ಅನಂತ ಎದ್ದು ನಿಂತ. ಆಕಳಿಸಿದ, ಮೈಮುರಿದ. ಮೆಲ್ಲಗೆ ಹುಡುಗೆಯರ ಗುಂಪಿನ ಕಡೆಗೆ ನಡೆದ. ಅವರನ್ನುದ್ದೇಶಿಸಿ ತುಂಟಸ್ವರದಲ್ಲಿ „ ಇಲ್ಲೂ ಬರಾಂವ..." ಎಂದ.

ಶಾಂತರೀತಿಯಿಂದಲೂ ಗಾಂಭೀರ್ಯದಿಂದಲೂ ತಾರಕ್ಕ ಹೇಳಿದಳು· " ಇಲ್ಲಿ ಬರಬ್ಯಾಡ ನೀ...."

ಕೇಳದೆ ಅನಂತ ಅವರಲ್ಲಿ ಹೋಗಿ ಸೇರಿದ. ಸುಮತಿ ಸಿಟ್ಟಿನಿಂದ ಹೇಳಿ ದಳು, " ಜಗಳ ಆಗ್ತೇತಿ ನೋಡ ಅಣ್ಣಾ s s...ಅನಂತಾ..."

" ಆಗಲಿ ಹೋಗು, ಯಾನ ಆಗ್ತೇತಿ...ಆದ..." ಸುಮತಿಯನ್ನು ಹೀಯಾಳಿಸಿ ನುಡಿದ.

ಸುಮತಿಗೆ ಸಿಟ್ಟು ಬಂತು. ಅನಂತನನ್ನು ತಡೆಯ ಹೋದಳು. ಅನಂತನೂ ಅವಳ ಕೈಗೆ ಚೂರಿದ. ಆಕೆ ಕೆರಳಿ ಅವನನ್ನು ನುಗಿಸಿಕೊಟ್ಟಳು ನಂತನ ತಲೆ ಗೋಡೆಗೆ ಬಡಿಯಿತು. ಹಣೆಗೆ ಸ್ವಲ್ಪ ಪೆಟ್ಟೂ ತಾಗಿತು. ಅನಂತ. ಸಿಟ್ಟು ಬೆಂಕಿಯಾದ. ಕಣ್ಣಲ್ಲಿ ನೀರೂ ತುಂಬಿದವು. ತುಟಿಗಳು ಅದುರಿದವು. ಮುಖವು ಕೆಂಪಾಯಿತು. ಏನೂ ಮಾತಾಡದೆ ಮೆಲ್ಲನೆ ಎದ್ದು. ಸಾವಕಾಶ ವಾಗಿ ಮನೆಯ ಕಡೆಗೆ ನಡೆದನು. ಸ್ವಲ್ಪ ದೂರ ಹೋಗಿ ಹಿಂತಿರುಗಿ ನೋಡಿದ. ಆಮೇಲೆ ಜೋರಿನಿಂದ ಅಳುತ್ತ ನಡೆದ.

ತಾರಕ್ಕ ಕೂಗಿದಳು "ಅನಂತಾ ! ಅಂತೂ !" ಅನಂತ ಕೇಳಿಯೂ ಕೇಳ ದವನಂತೆ ನಡೆದಿದ್ದ. ತಾರಕ್ಕ ಮತ್ತೆ ಕರೆದಳು. " ಅನಂತಾ ಆಡಾಕ ಬಾ ! " ಅನಂತ ಉತ್ತರ ಕೊಡಲಿಲ್ಲ. ತಾರಕ್ಕ ಸ್ವಲ್ಪ ಹೆದರಿ, ಸುಮತಿಯ ಕಡೆಗೆ ಹೊರಳಿ " ಇಲ್ಲದ ಒಂದ ಮಾಡ್ತಿ ತಾಯಿ ! ಮನ್ಯಾಗ ನನಗ ಬೈಸಿ ಇಡತಿ ಮತ್ತ ! " ಎಂದಳು.

"ನಾ ಯಾನ ಮಾಡಿನು ...? ನೀನ ಹೇಳೂಲಾಗಿದ್ದಿ...ಮೊದಲ...? "

"ನಾ ಯಾನತ್ತ ಹೇಳಿನ್ನು ? ಆಡಕ ಕರಕೋಬ್ಯಾಡಂತ .ಹೀಂಗ ನುಗಸ ಅಂತ ಹೇಳಿನ್ನ್ಯಾನ....?"

ಸುಮತಿ ಬೇಸರದಿಂದ "ಇರಲಿ ಬಿಡ, ತಾಯಿ ! ನಿಂದ ಯಾವಾಗೆಲ್ಲಾ ಹೀಂಗs ನಿನ್ನಿ ಟೊಪ್ಪಿಗಿ ಮುರೀತಂತ ಆಟ ಮುರದೀ....ಇಂದ "

ತಾರಕ್ಕ ತಡೆದು "ಹೋಗಲಿ ಬಿಡು." ಎಂದಳು. ಅವಳ ಮನಸ್ಸು ಕದಡಿತ್ತು.

ಅನಂತ ಅಳುತ್ತ ಮನೆಗೆ ಹೋದ. ರತ್ನವ್ವ "ಯಾನಾಯ್ತು ?" ಎಂದು ಕೇಳಿದಳು! "ಅಕ್ಕಾ, ಆಡಕ ಕರಕೊಳ್ಳೂದುಲ್ಲ...." ಎಂದು ಹೇಳಿದ. ಈ ಸಂಗತಿಗಾಗಿ ಅವನು ಅಳುತ್ತಿರಲಿಲ್ಲ. ಸುಮತಿ ನುಗಿಸಿದ್ದು ಹೇಳಿದರೆ ತಾರಕ್ಕ ನಿಗೂ ಬೈಗಳು ಬರುವವೆಂದು ಅವನಿಗೆ ಗೊತ್ತು. ರತ್ನವ್ವ ಸಮಾಧಾನಗೊಳಿ ಸುತ್ತ ಹೇಳಿದಳು "ಬಾ, ನಿನಗೆ ತಿನ್ನಾಕ ಕೊಡತ್ಯಾನು......ಅವರ ಗೂಡಾ ಆಡಕs ಹೋಗಬ್ಯಾಡ ನೀ. ಅವರನಾ ಯಾನ ಮಾಡತಿ ? ಹುಚ್ಚ ಹುಡು ಗೂರ....'' ಎಂದು ಒಳಗೆ ಕರೆದುಕೊಂಡು ಹೋದಳು. ಅನಂತನಿಗೆ ಲಡ್ಡುಗೆ ಕರಜಿಕಾಯಿ ಉಂಡಿ ಮೊದಲಾದುವುಗಳನ್ನು ಒಂದು ಎಲೆಯಲ್ಲಿ ಹಾಕಿಕೊಟ್ಟಳು. ಅವನನ್ನು ಸಮಾಧಾನಗೊಳಿಸಬೇಕಾಗಿತ್ತಾದುದರಿಂದ ಅವನು ತಿನ್ನುವದಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ಹಾಕಿದ್ದಳು. ಅಷ್ಟರಲ್ಲಿ ಸುಂದರಾಬಾಯಿ ಯಾತಕ್ಕೋ ಒಳಗೆ ಬಂದು "ಅಷ್ಟ್ಯಾಕ ಹಾಕಿದಿ ? ಅವ್ಯಾನ ತಿನ್ನತಾನ ಯಾನ ಇಷ್ಟೆಲ್ಲಾ ...! ಚೆಲ್ಲಿ ಹಾಳ ಮಾಡತಾನು...." ಎಂದಳು.

"ಇರಲಿ ಬಿಡ, ತಿನ್ನಲಿ ; ಹರಿವತ್ತಿಂದೂ ಯಾನೂ ತಿಂದಿಲ್ಲ" ಎಂದು ಹೊರಗೆ ಹೋದಳು ರತ್ನಾ.

ಆಗ ಸುಂದರವ್ವನು ಅನಂತನಿಗೆ "ಅವ ತಿನ್ನ ಬ್ಯಾಡಪ್ಪ ! ಎಣ್ಣ್ಯಾಗಿನು ....ಎಂದ ಮಾಡಿದಾರೊ ಯಾನ್ಸೋ ! ಮೊದಲs ಕೆಮ್ಮತಿ ಬ್ಯಾರೇ ?" ಎಂದು ತನ್ನ ಟ್ರಂಕಿನ ಕೀಲೀ ತೆಗೆದು, ತಮ್ಮೂರಿಂದ ತಾನು ತಂದ ತುಪ್ಪದೊಳಗಿನ ಉಂಡಿಯೊಂದನ್ನು ತೆಗೆದುಕೊಟ್ಟಳು.

ಅನಂತ ಸ್ವಲ್ಪ ಹೊತ್ತು ಅಲ್ಲೇ ಕುಳಿತ ಏನೋ ಸ್ವಲ್ಪ ತಿಂದಂತೆ ಮಾಡಿದ. ಸುಂದರಾಬಾಯಿ ಹೊರಗೆ ಹೋಗಲು, ಮೆಲ್ಲನೆ ಎಲೆಯನ್ನು

ಮಿಡಚಿ ಶರಟಿನ ಉಡಿಯಲ್ಲಿ ಹಾಕಿಕೊಂಡು ಎದ್ದ. ಅತ್ತಿತ್ತ ನೋಡಿದ. ಬಾಗಿಲ ಕಡೆಗೆ ನಿರೀಕ್ಷಿಸಿದ. ನಡುಮನೆಯಲ್ಲಿ ಯಾರೂ ಇರಲಿಲ್ಲ. ಸಾವಕಾಶವಾಗಿ ಬಾಗಿಲವರೆಗೆ ಬಂದ. ಹೊರಗೆ ಇಣಿಕಿದ. ಓಡಿ ಹಿತ್ತಲಿಗೆ ಹೋದ.

" ಇದ ನೋಡ....ನಾ ತಿನ್ನಾಕ ತಂದಿದ್ಯಾನ...!" ಉಡಿಯನ್ನು ಹೆಮ್ಮೆಯಿಂದ ಅನಂತ ತೋರಿಸಿದ.

ತಾರಕ್ಕನಿಗೆ ಅನಂತನನ್ನು ಕಂಡು ಆನಂದವಾಯಿತು. ಈಗಾಗಲೇ ಹುಡಿಗೆಯರು ನಾಲ್ಕು ದಂಟು ನಿಲ್ಲಿಸಿದ್ದರು. ಮೇಲೆ ನಾಲ್ಕಾರು ದಂಟು ಕಟ್ಟಿ ತಮ್ಮ ಆಟದ ಮನೆಯನ್ನು ರಚಿಸಿದ್ದರು.

"ಹ್ಯಾಂಗಾದರೂ ಅಂತೂ ತಿನ್ನಾಕ ತಂದಿದಾನು...ಇದs ಹಂದರಂತ. ನಾವೂ ಮದಿವಿ ಮಾಡಿ ಆಡೋಣೂ? ಅ್ಲ ! ತಾರಕ್ಕಾ ?" ತಾರಕ್ಕನ ಕಡೆಗೆ ನೋಡುತ್ತ ಸುಮತಿ ಕೇಳಿದಳು.

ತಾರಕ್ಕ ಏನೂ ಹೇಳಲಿಲ್ಲ. ಅವಳ ಮುಖವು ಮಾತ್ರ ಒಪ್ಪಿಗೆಯನ್ನು ಸೂಚಿಸುತ್ತಿತ್ತು. ಇತ್ತ ಅನಂತ ಕರಜೀಕಾಯಿಯೊಂದನ್ನು ತೆಗೆದು ಕಚ್ಚಿ ಕಚ್ಚಿ ತಿನ್ನ ಹತ್ತಿದ. ಉಳಿದ ಹುಡುಗರು " ಹೋಂದ; ಮೊನ್ನಿ ತಾರಕ್ಕನ ಮದಿವಿ ಆಗೀತಿ ಹಾಂಗs ಆಡೋಣು....!" ಎಂದರು.

" ತಾರಕ್ಕನ ಮೈ ಹ್ಯಾಂಗಾದರೂ ಅರಿಷಿಣ ಆಗೇತಿ...ಆಕೇ ಮದ ಮಗಳ ಆಗಲಿ.." ಅನಂತನ ಕಡೆಗೆ ನೋಡಿ "ಅನಂತಾ, ನೀನೂ ಆಡಕ ಬಾ. ನೀ ತಾರಕ್ಕನ ಗಂಡಂತ ಅ್ಲ ?" ಎಂದು ಸುಮತಿ ಕೇಳಿದಳು.

ಈಗ ತಾರಕ್ಕ ಸುಮ್ಮನೆ ಕೂಡಲಿಲ್ಲ. ನಸುಲಜ್ಜೆಯಿಂದ "ಹೋಗ ತಾಯಿ! ನಾ ಒಲ್ಲಿ; ನನ್ನ ಮದಿವಿ ಆಗಿಲ್ಲಾ್ಯನ...? ಅವ್ಹಂಗ ನನ್ನ ಗಂಡ . ಇಲ್ಲದ ಒಂದ ಹೇಳ್ತಿ ?" ತನ್ನ ಅಸಮ್ಮತಿಯನ್ನು ಸೂಚಿಸಿದಳು.

"ಮದುವಿಯಾದರ ಯಾನಾಯ್ತು? ಆಟದಾಗ ಅವ ಗಂಡ ಆದರ ಯಾನ ಆಗ್ತೇತಿ...? ಯಾರ ಯಾನ ಹೀಂಗ ಗಂಡಾ ಹ್ಯಾಂತಿ ಅಂತ ತಿಳಕೊಳ್ಳೂದುಲ್ಲಾ........ಆಟದಾಗ . ?"

"ನಂಗ ಒಲ್ಲಿ ತಾಯಿ! ಇಂದ್ರಿ ಅವ ಆಗಲಿ ಬೇಕಾದ್ರ..."

"ಅದ್ಯಾನ ಚಂದ ಆಗುದುಲ್ಲ..." ಅನಂತನ ಕಡೆಗೆ ಹೊರಳಿ "ಬಾ

ಅನಂತಾ..." ಎಂದು ಕರೆದಳು.

ಅನಂತನಿಗೆ ಸ್ವಲ್ಪ ಹೆಮ್ಮೆ; ತಾನು ತಿನ್ನಲು ತಂದ ಕಾರಣ ಆಟಕ್ಕೆ ಕರೆಯುವರೆಂದು ಭಾವಿಸಿದ. ಏನೂ ಹೇಳದೆ ಸುಮ್ಮನೆ ಕುಳಿತ. ಸುಮತಿ ನಿರಾಶೆಯಿಂದ ಆಟದಲ್ಲಿ ತೊಡಗಿದಳು. ಉಳಿದ ಹುಡಿಗೆಯರೂ ಆಡಹತ್ತಿದರು. ಇನ್ನೊಮ್ಮೆ ಕರೆದರೆ ಹೋಗಬೇಕೆಂದು ಯೋಚಿಸಿದ, ಅನಂತ. ಆದರೆ ಅವರಾರೂ ಕರೆಯಲಿಲ್ಲ. ಅವನ ಮನಸ್ಸು ಆಟದ ಕಡೆಗೆ ಎಳೆಯುತ್ತಿದ್ದಿತು. ಕೊನೆಗೆ... "ತಿನ್ನಾಕ ಕೊಡತ್ಯಾನ ಬರ್‍ರಿ !" ಎಂದ. ಹುಡಿಗೆಯರು ಹೊರಳಿ ನೋಡಿದರಷ್ಟೇ. ಒಬ್ಬ ಚಿಕ್ಕ ಹುಡುಗಿ ಅನಂತನ ಹತ್ತಿರ ಬಂದಳು, ತಿನ್ನುವ ಆಶೆಯಿಂದ. ಅನಂತನ ಉದ್ದೇಶ ಸಫಲವಾಗಲಿಲ್ಲ. ಆದರೂ ಆ ಹುಡಿಗಿಗೆ ಹತ್ತರ ಕೂಡಲು ಹೇಳಿದ. ತಿನ್ನಲು ಕೊಟ್ಟ. "ನಾ ನಿನಗ ಒಂದ ಕತಿ ಹೇಳಲಿ ?" ಎಂದು ಕೇಳಿದ.

"ಹೂಂ !" ಅಂದಳು ಹುಡುಗಿ.

ಅನಂತ ತಮ್ಮ ಸಾಲೆಯಲ್ಲಿ ಮಾಸ್ತರರು ಕಲಿಸಿದ ಒಂದೊಂದೇ ಕತೆಯನ್ನು ಹೇಳಹತ್ತಿದ. ಅವನು ಕತೆ ಹೇಳಲು ಬಹಳ ಜಾಣ. ಸಾಲೆಯಲ್ಲಿ ಪರೀಕ್ಷಕರು ಬಂದಾಗ ಮಾಸ್ತರರು ಅವನನ್ನೇ ಕತೆ ಹೇಳಲು ಎಬ್ಬಿಸುತ್ತಿದ್ದರು. ಸ್ವಾಭಾವಿಕ ವಾಗಿ ಅವನ ಮಾತುಗಳು ಸವಿಯಾಗಿದ್ದುವು. ಮುದ್ದು ಮೊಗ, ನಗುತ್ತ ಹಾವ ಭಾವದಿಂದ ಕತೆ ಹೇಳತೊಡಗಿದನೆಂದರೆ ಎಂಥವರನ್ನೂ ಮೋಹಿಸಿ ಬಿಡುತ್ತಿದ್ದ ನಾತ. ಹಳ್ಳಿಯ ಹುಡುಗರಿಗಂತೂ ಇಂತಹ ಕತೆಗಳು ಬಹು ಸೊಗಸು ಅವರು ಎಂದೂ ಕೇಳಿ ಅರಿಯರು, ಇಂಥ ಕಥೆಗಳನ್ನು. ಆಗಾಗ ಹುಡುಗರೊಳಗೆ ಕತೆ ಹೇಳುತ್ತಿದ್ದ ಅನಂತ. ಅದಕ್ಕೆ ಹಳ್ಳಿಯ ಹುಡುಗರು ಮರುಳಾಗಿ ಕೇಳುವರು. ಅನಂತ ಮಂಗನ ಕಥೆ ಹಾವಭಾವದಿಂದ ಹೇಳಹತ್ತಿದ ಆಟದ ಹುಡುಗೆಯರ ಮನಸ್ಸು ಇತ್ತ ಹರಿಯಹತ್ತಿತು. ಆ ಕತೆ ಮುಗಿಸಿ ಮತ್ತೊಂದು ಕತೆಗೆ ಆರಂಭಿ ಸಿದ. ಒಬ್ಬೊಬ್ಬರೇ ಅನಂತನ ಕಡೆಗೆ ಬರಹತ್ತಿದರು, ಕಥೆ ಕೇಳಲೆಂದು. ಕಥೆ ಸರಾಗವಾಗಿ ನಡೆಯಿತು.

ಇಷ್ಟರಲ್ಲಿ ರತ್ನಪ್ಪನಿಂದ ಊಟದ ಕರೆ ಬಂದಿತು. ಎದ್ದು ಒಳಗೆ ಹೋದರು. ಉಳಿದ ಹುಡಿಗೆಯರೂ ತಮ್ಮ ತಮ್ಮ ಮನೆಗೆ ನಡೆದರು. ಅನಂತ ತಿನ್ನಲು

ಕೊಟ್ಟಿದ್ದನ್ನು ಹೊರಗೆ ತಕ್ಕೊಂಡು ಹೋದುದಕ್ಕೆ ಅನಂತನ ತಾಯಿ ಸುಂದರಾಬಾಯಿ ಮುಂಜಾವಿನಿಂದಲೂ ಸಿಟ್ಟಾಗಿದ್ದಳು. 'ಒಳಗೆ ಬರಲಿ, ಅವಗ ಛಲೋ ಬುದ್ಧಿ ಕಲಸತ್ಯಾನು' ಎಂದು ಯೋಚಿಸಿದ್ದಳು. ಅನಂತ ಊಟಕ್ಕೆ ಬಂದು ಕುಳಿತೊಡನೆಯೇ "ಇಲ್ಲಿ ಅತ್ತೀ ಮನೀಗಿ ಬಂದಾಗಿಂದೂ ಒಂದೊಂದs ಕೆಟ್ಟ ಚಾಳಿ ಕಲಿ ಹತ್ತೀದಿ ಯಾನ?....ಊರಿಗೇರ್‍ಯನಡಿ ಅವರಿಗಿ ಹೇಳ ತ್ಯಾನು...?" ಎಂದಳು. ಅನಂತ ಸುಮ್ಮನೆ ತಲೆ ಕೆಳಗೆ ಮಾಡಿ ಉಣ್ಣುತ್ತಿದ್ದ. ಸುಂದರಾಬಾಯಿ ಮಾತು ಮುಂದುವರಿಸಿದಳು. "ಬರೋಗ ಮನ್ಯಾಗ ಅವರಿಗಿ ಓದತ್ಯಾನಂತ ಹೇಳಿ ಪುಸ್ತಕ ತಗೊಂಡ ಬಂಯ್ದಾನ, ಇಲ್ಲಿ ಬಂದ ಮ್ಯಾಲಿ, ಒಂದಿನಾರ ಪುಸ್ತಕ ಕೈಯಾಗ ಹಿಡಿಬೇಕು...? ಇಲ್ಲ! ಬರೇ ಹುಡದಿ ಹುಡದಿ....ಹುಡದಿ—ಈ ಸಾರೆ ನಾಪಾಸರ್‍ಯ ಆಗಲ್ಲಾ....ಸಾಲೀ ಬಿಡಸಿ ದನಾ ಕಾಯ್ಕ ಹಚ್ಚತ್ಯಾನು...." ತಾರಕ್ಕನೂ ಮುಖ ಕೆಳಗೆ ಮಾಡಿ ಉಣ್ಣು ತ್ತಿದ್ದಳು. ಅವಳ ಮುಖವು ಸಪ್ಪಗಾಗಿದ್ದಿತು. ಕಣ್ಣಿನಲ್ಲಿ ನೀರಾಡುತ್ತಿದ್ದವು. ಅವಳಿಗೆ ತುತ್ತು ಗಂಟಲೊಳಗೆ ಇಳಿಯದಂತಾಗಿತ್ತು. ಅನಂತನ ಮನಸ್ಸು ಅಷ್ಟು ಮಿದುವಲ್ಲ. ಗಂಭೀರವಾಗಿ ಊಟಮಾಡುತ್ತಿದ್ದ. "ಎಲ್ಲಾರು ಕಲತ ವರ ಇರತಾರ್‍ಯಾನ ?"....ದನಾ ಕಾದಾನು....ಯಾನಾಯ್ತು ಕಾದರ...?" ಎಂದಳು ರತ್ನಾಬಾಯಿ.

"ಅದರ ಮಾಡಲಿ...ನಾಲ್ಕ ರೂಪಾಯರ್‍ಯ ಉಳದಾವ ನಮ್ಮೂರ ಬ್ಯಾಡರ ಪರಬ್ಯಾನ ಬದಲಿ..."

ಸುಂದರವ್ವನ ಈ ಮಾತಿಗೆ ಮಾತ್ರ ಅನಂತನ ಹೃದಯ ಹಾರಿತು. ಅವರ ಮನೆಯಲ್ಲಿ ದನ ಕಾಯಲು ಇದ್ದ ಹುಡುಗನ—ಆತನ ಹೆಸರು ಪರಬು ...ನೆನಪಾಯಿತೇನೋ. ಅವನಿಗೆ ಆತನ ಹರಕು ಅಂಗಿ....ಹೊಲಸು ಮೈ... ನೆನೆದು ಅಸಹ್ಯವೆನಿಸಿರಬೇಕು, ತಾನು ಹಾಗಾಗಬಾರದೆಂದು. ಗಡಬಡಿಯಿಂದ ಊಟ ತೀರಿಸಿದ. ಹೊರಗೆ ಹೋಗುವಾಗ ನಡುಮನೆಯಲ್ಲಿದ್ದ ತನ್ನ ಪುಸ್ತಕ ಕೈಯಲ್ಲಿ ತಕ್ಕೊಂಡೇ ಹೊರಗೆ ಹೋದ.

ತಾರಕ್ಕ ಉಂಡು ಪಡಸಾಲೆಗೆ ಬಂದಳು. ಅಲ್ಲಿ ಅನಂತನಿರಲಿಲ್ಲ. ಅತ್ತಿತ್ತ ನೋಡಿದಳು. ಹಿತ್ತಲಿಗೆ ಹೋಗಿ ನೋಡಿ ಬಂದಳು ಅಲ್ಲಿಯೂ ಅನಂತ ಕಾಣಲಿಲ್ಲ. ತಿರುಗಿ ಮನೆಯಲ್ಲಿ ಸುತ್ತಿ ನೋಡಿದಳು. ಕಾಣಲಿಲ್ಲ. ಕಂಬಕ್ಕೆ

ಆತು ಸುಮ್ಮನೆ ಕುಳಿತಳು. ಕೊಂಚಕಾಲ ಅನಂತ ಎಲ್ಲಿ ಹೋಗಿರಬಹುದೆಂದು ವಿಚಾರಿಸುವುದರಲ್ಲಿ ಕಾಲ ಕಳೆದಳು. ಇನ್ನೂ ಆಡಲು ಗೆಳತಿಯರಾರೂ ಬಂದಿರಲಿಲ್ಲ. ಹೊತ್ತು ಹೋಗದಾಯಿತು. ಎದ್ದು ಒಳಗಿನ ಮನೆಗೆ ಹೋದಳು. ಹೆಂಗಸರೆಲ್ಲ ಊಟಕ್ಕೆ ಕುಳಿತಿದ್ದರು. "ಇನ್ನೊಂದಿಷ್ಟು ಉಣತಿ ಯಾನ, ಬಾ ತಾರಾ?" ಎಂದು ಸುಂದರಾಬಾಯಿ ಕರೆದಳು.

"ಒಲ್ಲಿ...!" ಎಂದು ತಾರಕ್ಕ ಹೊರಗೆ ಹೊರಟಳು.

"ಈಗ ಉಂಡಿದಾಳ...ಆಕಿ.. ಎಲ್ಲ್ಯಾದರ ಅನಂತನಾ ಹುಡಕತಿದ್ದಾಳ" ಎಂದಳು ರತ್ನಾಬಾಯಿ.

ತಾರಕ್ಕ ಮತ್ತೆ ಪಡಸಾಲೆಗೆ ಬಂದಳು. ಏನೂ ಮಾಡಲಾರದೆ ಅಲ್ಲೇ ಇಟ್ಟ ಜೋಳದ ಚೀಲಗಳ ಹತ್ತಿರ ಹಾಸಿದ ಕಂಬಳಿಯ ಮೇಲೆ ಬೇಸರದಿಂದ ಉರುಳಾಡಹತ್ತಿದಳು. ಚೀಲದ ಆಚೆಗೆ ಯಾರೋ ಗುಣಗುಣಿಸುವುದು ಕೇಳಿಸಿತು. ಚಟ್ಟನೆ ಎದ್ದಳು, ತಾರಕ್ಕ ನಗುಮುಖದಿಂದ. ಚೀಲಗಳ ಸಂದಿಯಲ್ಲಿ ನೋಡಿದಳು. ಅನಂತ ಪುಸ್ತಕ ಓದುತ್ತಾ ಕುಳಿತಿದ್ದ!

"ಅನಂತಾ!" ಎಂದಳು ಹರುಷದಿಂದ.

ಅನಂತ ನಸುನಗೆಯಿಂದ ತಾರಕ್ಕನ ಕಡೆಗೆ ನೋಡಿ "ಯಾಕ?" ಎಂದ.

"ಆಡಲಾಕ ಹೋಗೋಣು, ಬಾ...ಲಾ!..."

"ಒಲ್ಲಿ; ಅವ್ವಾ ಬಯ್ಯತಾಳು!..."

"ನೀ ಆಕೀ ಮುಂದ ಹಾಂಗ್ಯಾಕ ಮಾಡತಿ..." ತಿನ್ನಾಕ ಕೊಟ್ಟರ... ಹೊರಗ ತಗೊಂಡ ಬಂದಿ, ಅದಕ್ಕ ಬೈದಳು..."

"ನೀ ಆಡಕ ಕರಕೋಲಿಲ್ಲಾ..., ತಿನ್ನಾಕ ತಂದರ ಕರಕೊಂಡಿ ಅಂತ ತಂದಿನು..." ಅನಂತ ನಿಟ್ಟುಸಿರೊಂದನ್ನು ಬಿಟ್ಟು ಹೇಳಿದ.

ತಾರಕ್ಕನ ಕಣ್ಣುಗಳೂ ನೀರಿನಲ್ಲಿ ತೇಲಿದುವು. ಪ್ರೀತಿಯಿಂದ ಅನಂತನ ಕೈ ಹಿಡಿದು—"ಇನ್ನೆಂದೂ ನಿನ್ನ ಬಿಟ್ಟ ಆಡೋದಿಲ್ಲ ಛಿ?" ಎಂದಳು.

ಅನಂತ ಗೋಣು ಹಾಕಿದ.

೩

ಹೀಗೆ ಎರಡು ಮೂರು ದಿನಗಳು ಕಳೆದುವು. ಬಹುತರ ಮದುವೆಗೆ ಬಂದ ಆಪ್ತರೆಲ್ಲ ಹೋದರು. ಸುಂದರಾಬಾಯಿಯೂ ಬಂದು ಒಂದು ತಿಂಗಳಾಗುತ್ತ ಬಂದಿತ್ತು. ಅವಳೂ ಹೊರಡುವ ಆತುರ ತೋರಿಸಹತ್ತಿದಳು. ಒಂದು ದಿನ ಮುಂಜಾನೆ ರತ್ನವ್ವ ತನ್ನ ಗಂಡನನ್ನು ಕರೆದು " ಸುಂದರಾನೂ ಹೋಗತ್ಯಾನಂತ ಹಚ್ಚಿದಾಳು...ನಾಲ್ಕ ದಿನಾ ನಿಂತ ತಾರಾನ ಅಷ್ಟ ಹಚ್ಚ ಕೊಟ್ಟs ಹೋಗಂದರ. ಹುಡಗನ ಸಾಲಿ ಐತಿ, ಅವನ ಅಭ್ಯಾಸ ಹಿಂದೆ ಬೀಳತೇತಿ....ಮನ್ಯಾಗೂ ಅಡಚಣಿ....ಹೋಗತ್ಯಾನs ಅಂತಾಳು...ಹೋಗೋದಾದರ ನಾಳೇ ಹೋಗಲಿ... ಸೀರಿ ಉಟ್ಟಕೊಂಡ ಹೋಗಾಕಿ........ದಿನಾನೂ ಛಲೂ ಐತಿ.......ಇಂದs ಸಂತೀ ಮಾಡಬೇಕು..." ಎಂದು ಹೇಳಿದಳು.

ಮಲ್ಲನು " ಮಳಿಗಿಗಿ ಹೋಗಿ ಗಾಡಿ ಮನ್‌ಸ್ಯಾನ ಕಡಿಂದ ಕಳಸತ್ಯಾನು, ಹೋಗಿ ಯಾನ ಹತ್ತತೇತಿ ಅದ ತಗೊಂಡ ಬರ್ರಿ. ಸೀರಿ ಆಕೀನs ನೋಡಿ ತಗೋಲಿ, ಆಕಿ ಮನಸಿಗೆ ಒಪ್ಪಿದಂಥಾದ...." ಎಂದ.

ನಡುಮನೆಯಲ್ಲಿದ್ದ ಸುಂದರಾಬಾಯಿ..." ಸಂತಿ ಬ್ಯಾಡಾ, ಯಾನ ಬ್ಯಾಡಾ....ನಾಳಿನ ನಸೀಕಿನಾಗs ನಾವ ಹೋಗಬಿಡತೇವ...ಈಗs ಮಾಡಬೇಕಂತ ಯಾನ ನೇಮ ಐತಿ...? ಮತ್ತ ಯಾವಾಗರ ಬಂದಾಗ ಮಾಡಿಕೊಂಡ ಹೋದ್ಯಾನಂತ.... ಈಗs ಖರ್ಚಿನೊಳಗ ಖರ್ಚ ಯಾತಕ ?" ಹಾಗೇ ಕಳಿಸುವದಿಲ್ಲೆಂದರಿತೇ ಈ ಮಾತನಾಡಿದಳು.

" ಹೂಂ ! ಮದವಿಗೆ ಬಂದ ಹಾಂಗs ಹೋಗತಿ ಯಾನ....? ಮಂದಿ ನಕ್ಕಾರವ್ವ ! ತಾರಾನ ಅರವಿ ಗೂಡಾನ ನಿನಗೂ ಒಂದ ಸೀರಿ ತರಬೇಕಂತ ಮಾಡಿದ್ದ್ಯ. ಆದರ ನಾವ ತಂದರ ನಿನ್ನ ಮನಸಿಗೆ ಬರಲಾಕಿಲ್ಲಾ....ಬಿಡಲಾಕಿಲ್ಲಾ.... ನೀನ ಬಂದ ಮ್ಯಾಲ ನೋಡಿ ತಗೊಂಡೀ ಅಂತ....ಬಿಟ್ಟ್ಯ, ಹೆಂಗಾದರ ನಾಲ್ಕು ದಿನಾ ಹಿಂದ ನಿಲ್ಲಕ್ಕಿ ಇರತಿ ಅಂತ. ಸುಮ್ನ ಮನೀ ಗಾಡಿ ಐತಿ ; ಹೋಗಿ ತಗೊಂಡ ಬರೋಣು ನಡಿ...." ಎಂದು ರತ್ನವ್ವ ಆಗ್ರಹ ಮಾಡಿದಳು.

ಸುಂದರಾಬಾಯಿ ಸುಮ್ಮನಾದಳು. ಪಡಸಾಲೆಯಲ್ಲಿದ್ದ ಅನಂತ ಓಡುತ್ತ ಒಳಗೆ ಬಂದು ಸಲಿಗೆಯಿಂದ "ಅವ್ವಾ, ನಾನೂ ಸಂತಿಗಿ ಬರಾಂವ...ಎತ್ತಿನ ಗಾಡಿ....ಗುಳುಗುಳು ಗೆಜ್ಜಿ ಬಹಳ ಛಂದ!" ಎಂದು ಕುಣಿಯತೊಡಗಿದ.

"ಯಾತಕ ಬರತಿ, ಬಿಸಲಾಗ? ಮನ್ಯಾಗ ನೀ, ತಾರಕ್ಕ....ಆಡರಿ...

"ಗಾಡಿ ಐತಿ...ಬರವಲ್ಲ...ಯಾಕ...? ನಮಗ್ಯಾನ ಭಾರ ಆಗ್ತಾ?" ಎಂದಳು ರತ್ನಾ. ರತ್ನವ್ವ ಹೀಗೆ ಹೇಳುವುದೇ ತಡ, ಅನಂತ "ಆಃ! ಆಃ! ನಾ ಸಂತಿಗಿ ಹೋಗತ್ಯಾನ...ಗಾಡ್ಯಾಗ ಕೂತ...'' ಎಂದು ಹರುಷದಿಂದ ಜಿಗಿಯುತ್ತ ಹೊರಗೆ ಹೋದ.

ಅಂಗಳದಲ್ಲಿ ತಾರಕ್ಕ ಕೇಳಿದಳು. "ಸಂತಿಗಿ ಯಾರ್ಯಾರ ಹೋಗ್ತಾರು?"

"ನಾ..."

"ಯಾರ ಒಯ್ಯತಾರ ನಿನ್ನಾ..."

"ಈಗ ಮಳಿಗಿಂದ ಗಾಡಿ ಬರತೇತಿ...ಅವ್ವಾ ನಾ ಅತ್ತಿ...ಎಲ್ಲರೂ, ಹೋಗತೇವು...''

"ಯಾರ ಹೇಳಿದ್ರು?"

"ಅವ್ವಾ!"

"ನೀ ಹೋಗಬ್ಯಾಡ ಅಣ್ಣಾ?''

"..............." ಅನಂತ ಸುಮ್ಮನಿದ್ದ.

"ನಾವ ಮದಿಂದಾಗ ಮನೀ ಕಟ್ಟಿ ಛಂದ ಛಂದ ಆಟ ಆಡೋಣು...."

"ಒಲ್ಲಿ; ನೀನೂ ಬಾ ಬೇಕಾದ್ರ ಸಂತಿಗಿ....'' ಎಂದ ಅನಂತ.

"ನನಗ ಬರಲಾಕ ಬರೂದುಲ್ಲ; ಇನ್ನ ಅರಿಷಿಣ ನೀರ ಇದಾವ..."

ಅನಂತನಿಗೆ ಕಾರಣ ಅಷ್ಟೇನು ಸರಿಯಾಗಿ ತಿಳಿಯಲಿಲ್ಲ. "ಬ್ಯಾಡಾದರ ಬಿಡು, ನಾ ಹೋಗ್ತ್ಯಾನು..." ಎಂದು ಸ್ಪಷ್ಟವಾಗಿ ಹೇಳಿದ.

"ನಾಳಿ ನಿಮ್ಮೂರಿಗಿ ಹೋಗತಿ; ಇಂದೊಂದ ದಿನಾರೇ ಕೂಡಿ ಆಡೋಣ ಬಾ....'' ಈ ಮಾತನ್ನು ಆಡುವಾಗಿನ ತಾರಕ್ಕನ ವಿನಯವನ್ನು ನೋಡಿ ಯಾವನೂ ಸಂತೆಗೆ ಹೋಗದೆ ನಿಲ್ಲಬಹುದಾಗಿತ್ತು! ಆದರೆ ಅನಂತನಿಗೆ ಅದರ ಅರಿವಿರಲಿಲ್ಲ. ಅವನು ದೊಡ್ಡ ಊರಲ್ಲಿ ಹುಟ್ಟಿ ಬೆಳೆದವನು. ಅಲ್ಲಿಯ ಬಾಲಕರ ಕ್ಷಣಿಕ ಗೆಳೆತನದ ಸ್ವಭಾವ ಅವನದು. ಹಳ್ಳಿಯ ಹುಡುಗರ ಮೃದು

ವಾದ ಗೆಳೆತನದ ಕಲ್ಪನೆ ಅವನಿಗಿರಲಿಲ್ಲ. ಆದ್ದರಿಂದ ಅವನು,—

"ನಾ ಹೋಗತ್ಯಾನು...ಇನ್ನs ನಾ ಆ ಊರ ನೋಡಿಲ್ಲ...." ಎಂದೇ ಹೇಳಿದ.

"ಹಾಂಗಾರ ಹೋಗು !'' ಎಂದಳು ತಾರಕ್ಕ. ಆದರೂ ಮನದಲ್ಲಿಯೇ ಯೋಚಿಸಿದಳು. 'ಅವ್ವಗ ಹೇಳಿ ಅನಂತನಾ ಮನ್ಯಾಗ ಇಟಕೋಬೇಕಂತ...." ಅದರಂತೆ ಪ್ರಯತ್ನಿಸಿದಳೂ ಕೂಡ. ಆದರೆ ಅವಳ ಬಯಕೆ ಈಡೇರಲಿಲ್ಲ. ಅವರೆಲ್ಲರೂ ಊಟ ಉಡಿಗೆ ಬೇಗನೇ ತೀರಿಸಿಕೊಂಡು ಸಂತೆಗೆ ಹೊರಟರು. ಗಾಡಿ ಬಾಗಿಲಲ್ಲಿ ಬಂದು ನಿಂತಿತು. ಅನಂತ ಎಲ್ಲರಿಗಿಂತ ಮೊದಲೇ ಗಾಡಿಯಲ್ಲಿ ಏರಿ ಕುಳಿತಿದ್ದ. ತಾರಕ್ಕ ಮನೆಯ ಮೆಟ್ಟಿಲುಗಳ ಮೇಲೆ ಸಪ್ಪಗೆ ಮುಖ ಮಾಡಿಕೊಂಡು ನಿಂತು ಕಳಿಸಿಕೊಡುತ್ತಿದ್ದಳು. ಅವಳು ಅನಿವಾರ್ಯವಾಗಿ ಮನೆಯಲ್ಲಿ ನಿಲ್ಲಬೇಕಾಗಿದ್ದಿತು. ಸುಂದರಾಬಾಯಿ ಗಾಡಿಯಲ್ಲಿ ಏರುತ್ತ ತಾರಕ್ಕನ ಮುಖವನ್ನವಲೋಕಿಸಿ,—

"ಒಬ್ಬಾಕಿಗೇ ಹೊತ್ತ ಹೋಗೂದುಲ್ಲ....ಸುಮೀನೂ ಖೋಡಿ ನಿನ್ನಿ ಊರಿಗಿ ಹೋಯ್ತು...ಅನಂತಾ, ನೀ ಮನ್ಯಾಗ ನಿಲ್ಲಬಾರದೇನೊ....?" ಎಂದಳು ಮಾತ್ರ. ಅದು ತಾರಕ್ಕನಿಗೆ ಅಶಕ್ಯವೆಂದು ಗೊತ್ತಿದ್ದಿತು. ಅಭಿಮಾನ ದಿಂದ ಅದಕ್ಕೆ ಅವಳೇನೂ ಹೇಳಲಿಲ್ಲ. ಗಾಡಿ ಹೊರಟಿತು. ಗಾಡಿ ಮರೆ ಯಾಗುವವರೆಗೆ ತಾರಕ್ಕ ಹಾಗೆಯೇ ನೋಡುತ್ತ ನಿಂತಳು. ಆಮೇಲೆ ಬೇಸರ ದಿಂದ ಒಳಗೆ ಹೋದಳು. ಮನೆಯಲ್ಲಿ ಯಾರೂ ಇರಲಿಲ್ಲ. ನಾಲ್ಕೆಂಟು ದಿನ ಮದುವೆಯ ಗೊಂದಲದಲ್ಲಿ ದಿನಗಳು ಹೇಗೆ ಕಳೆದಿದ್ದುವೆಂಬುದು ಅವಳಿಗೆ ಗೊತ್ತಿರಲಿಲ್ಲ. ಈಗ ಒಮ್ಮೆಲೇ ಯಾರೂ ಇಲ್ಲದಾಗಲು ಅವಳಿಗೆ ತೀರ ಅಸಹ್ಯ ವಾಯಿತು. ಕಣ್ಣು ಹನಿಗೂಡಿದುವು. ಮೆಲ್ಲಗೆ ಅವಳ ವಿಚಾರ ಗಂಡನ ಮನೆಯ ಕಡೆಗೆ ಹೊರಳಿತು.

'ನಾಳಿನ ಬುಧವಾರs ಗಂಡನ ಮನೀಗಿ ಹೋಗಬೇಕು, ಕರೀಕ ಬರತಾ ರಂತ. ಸಣ್ಣಾಗಿರತಾ....ಹೋಗಿ ಬಂದಿದ್ಯಾನ ಖರೇ....ಈಗ....ಹ್ಯಾಂಗ ಅಲ್ಲಿ ಹೋಗಿ ಇರೋದ ತಾಯಿ ! ಅವ್ವಾ ಅಪ್ಪನಾ . ಬಿಟ್ಟ, ಹೆಣ್ಣಿನ ಜನ್ಮ ಭಾಳ ಕೆಟ್ಟ ನೋಡ....ಹುಟ್ಟಿದ ಮನೀ ಬಿಟ್ಟ ಎಲ್ಲ್ಯರ ಹೋಗಿ ಜನ್ಮಾ ಮಾಡ

ಬೇಕಂತೆ'. ಈ ಎಲ್ಲ ವಿಚಾರಗಳು ಆಕೆಯ ತಲೆಯನ್ನು ಭಾರವಾಗಿಸಿದುವು. ಮನೆಯಲ್ಲಿ, ಗೊತ್ತುಗುರಿಯಿಲ್ಲದೆ ಒಳಹೊರಗೆ ಅಡ್ಡಾಡಿದಳು. ಮಾಡಲು ಏನೂ ಕೆಲಸವಿರಲಿಲ್ಲ. ಗೆಳತಿಯರಾದರೂ ಇಂದು ಬಂದಿರಲಿಲ್ಲ. ಸುಮತಿ ಯಂತೂ ನಿನ್ನೆಯೇ ಗಂಡನ ಮನೆಗೆ ಹೋಗಿದ್ದಳು. ತಾರಕ್ಕನ ಸಮ ವಯಸ್ಸಿನವಳೇ ಅವಳೂ. ಆದರೆ ಅವಳ ಮದುವೆ ಆ ಮೊದಲೇ ಆಗಿದ್ದಿತು. ಅವಳು ಒಂದೆರಡು ಸಲ ಗಂಡನ ಮನೆಗೂ ಹೋಗಿ ಬಂದಿದ್ದಳು. ನಿನ್ನೆ ಹೋಗುವಾಗ ಬಂದು, ಅಂತಃಕರಣದೊಳಗಿನ ಎಲ್ಲ ಮಾತುಗಳನ್ನು ಹೇಳಿ ಹೋಗಿದ್ದಳು. ತನ್ನ ಅತ್ತೆಯ ಆಳಿಕೆಯನ್ನೂ ಕಾಟವನ್ನೂ ಅರುಹಿದ್ದಳು. ಅವೆಲ್ಲವನ್ನು ನೆನೆದು ತಾರಕ್ಕ ಇಂದು ಕಣ್ಣೀರು ಕರೆದಳು. ತಾನೂ, ಸಮರಸ ಳಾಗಿ ಇದರಲ್ಲಿ ಸ್ವಲ್ಪ ವೇಳೆ ಹೋಯಿತು. ಆಡಲಿಕ್ಕೆ ಯಾರೂ ಇರಲಿಲ್ಲ. ಮಾಡಲಿಕ್ಕೆ ಕೆಲಸವಿರಲಿಲ್ಲ. ಅತ್ತಿತ್ತ ಹುಡುಕಾಡಿ ಮೊನ್ನೆ ಹರಿದ ಅನಂತನ ಮಲಮಲಿಯ ಶರಟೊಂದನ್ನು ಕೈಯಲ್ಲಿ ತಕ್ಕೊಂಡಳು. ಒಳಗೆ ಅಡಕಿಲದೊಳ ಗಿಂದ ಸೂಜಿದಾರ ಹುಡುಕಿ ತಂದು, ಹೊರಗೆ ಬಾಗಿಲಲ್ಲಿ ಕುಳಿತು ಹೊಲಿಯ ತೊಡಗಿದಳು. ಅವಳಿಗೆ ಅಣ್ಣ ತಮ್ಮಂದಿರಾರೂ ಇರಲಿಲ್ಲ. ಅನಂತನ ಕೆಲಸ ಮಾಡುವದೆಂದರೆ ತಾರಕ್ಕನಿಗೆ ಬಹಳ ಆನಂದ.

ಮಧ್ಯಾಹ್ನದಲ್ಲಿ ಕುಳಿತುಕೊಳ್ಳಲೆಂದು ನೆರೆಮನೆಯ ಮುದುಕಿಯೊಬ್ಬಳು ಬಂದಳು, "ಯಾನ ಮಾಡತಿಬೇ, ತಾರಾ ?" ಎನ್ನುತ್ತ.

ತಾರಕ್ಕ ಮೇಲೆ ಮುಖವೆತ್ತಿ "ಬಾ, ಚಾಂಗಲವ್ವ ಆಯಿ! ಮೊನ್ನಿ ಆಟದಾಗ ಅಂತೂನ ಅಂಗಿ ಹರಿದಿತ್ತು....ಹೊಲಿಕ ಹತ್ತಿದ್ಯಾನು...." ಎಂದಳು.

"ಎಂದ ಹೊಲಿಕ ಕಲ್ತಿ ನಮ್ಮವ್ವ ?" ಎಂದು ಕೂಡುತ್ತ "ಯಾರ ಇಲ್ಲಿ ಕಾಲಮಡದಿದಾರ‍್ಯಾನ ತಾಯಿ ?" ಎಂದು ನಿರೀಕ್ಷಿಸತೊಡಗಿದಳು.

ತಾರಕ್ಕ ಮನದಲ್ಲಿಯೇ "ಭಾಳ ಸೀಲಾ ಮಾಡಾಕಿ..." ಎಂದುಕೊಂಡು "ಇಲ್ಲ ; ಕೂಡ, ಇಲ್ಲ್ಯಾರ ಕಾಲಮಡೀಕ ಬರ‍್ತಾರ ಬಾಗಲಾಗ ?" ಎಂದು ಹೇಳಿ ಸುಮ್ಮನಾದಳು.

ಮುದುಕಿ ಸಾವಕಾಶವಾಗಿ ಗೋಡೆಯ ನೆರಳಲ್ಲಿ ಕುಳಿತಳು. ಆಮೇಲೆ ಮನೆಯಲ್ಲಿ ಹಣಿಕಿ ನೋಡಿ "ಮನ್ಯಾಗ ಯಾರ ಕಾಣೂದಿಲ್ಲ...?" ಎಂದಳು.

“ಎಲ್ಲಾರು ಸಂತಿಗೆ ಹೋಗಿದಾರ್ರ”

“ಈಗ್ಯಾಕ ಮತ್ತ ಸಂತಿಗಿ....?”

“ನಾಳಿ ನಮ್ಮಕ್ತಿ ಊರಿಗಿ ಹೋಗ್ತಾಳು....ಆಕಿಗಿ ಸೀರಿ, ಅನಂತಗ ಅಂಗಿ ಅರಿವಿ ತರತ್ಯಾನಂತ ಹೋಗಿದಾರ....”

“ಸುಂದರಾ ನಾಳೇ ಹೋಗ್ತಾಳು...? ಇನ್ನೊಂದ ನಾಲ್ಕ ದಿನಾ ನಿಂತ ಹೋದರ ಬರತಿತ್ತಲ್ಲ....ನಿನ್ನಾ ಕಳ್ಸಿ ?”

“ಅಂತೂನ ಸಾಲಿ ಭಾಳ ದಿನಾ ತಪ್ಪತೈತಿ ಅಂತ್ರ; ಅದಕ ಹೋಗತ್ಯಾನ ಅನ್ನಾಕ ಹತ್ತಿದಾಳು...” ಸ್ವಲ್ಪ ಅಸಮಾಧಾನದಿಂದಲೇ ತಾರಕ್ಕ ನುಡಿದಳು.

“ಸಣ್ಣ ಹುಡುಗ, ಈಗ್ಯಾನ ಅಂತಾದ ಕಲಿತಾನು...? ಎಂದಿಲ್ಲದೊವ್ಮಿ ಬಂದಿದಾಳು....ನಾಲ್ಕು ದಿನಾ ನಿಂತ ಹೋದರ ಬರೂದುಲ್ಲ ಯಾನ? ಈಗ್ಯಾನ ಆಕಿ ಮ್ಯಾಲಿಂದ ಮ್ಯಾಲಿ ಬರಾಕಿ ಇದಾಳ....!”

ಈ ಮಾತು ತಾರಕ್ಕನಿಗೆ ಸೇರಲಿಲ್ಲ. “ನೀ ಅನ್ನೋದ ಎಲ್ಲಾ ಖರೆ;.... ನಮ್ಮ ಅಂತೂಗ ಸಾಲಿ ಮ್ಯಾಲ ಭಾಳ ಧ್ಯಾನ....ಇನ್ನs ಇಷ್ಟs ಇದಾನು... ಈಗs ಮೂರನೇ ಎತ್ತೆ ಕಲಿತಾನು...ಇಲ್ಲಿ ಹುಡುಗೂರ್ನ ನೋಡಿದೀಯಲ್ಲ....? ಮುದಗತ್ತಿ ಆದರೂ ಇನ್ನs ಪಹಿಲೆ ಎತ್ತೇದಾಗ ಕೂಡತಾವ....” ಎಂದು ಅನಂತನನ್ನು ಮೇಲುಮಾಡಿ ನುಡಿದಳು.

“ಇಲ್ಲೇದ ಯಾನ ಸುಡತಿ ಸಾಲೀ, ಅದ ದೊಡ್ಡ ಊರಾ...ಒಂದನ ನೋಡಿ ಒಂದ ಕಲಿತಾವ ಹುಡುಗೂರ....”

“ಇನ್ನs ನಮ್ಮ ಅನಂತ ಭಾಳ ಕಲ್ಯಾಂವ ಇದಾನ....ಮಾಮಲೇದಾರಿ ಆಗ್ತಾನ ಅಂತ........” ಹೆಮ್ಮೆಯಿಂದ ಹೇಳಿದಳು ತಾರಕ್ಕ, ಮಾಮಲತಿ ಏನೆಂಬುದನ್ನರಿಯದೆ.

“ಆಗಲವ್ವ ನಮ್ಮವ್ವ ! ಸುಂದರಾಂದ ನಸೀಬ ತೆರೀತು; ಒಬ್ಬs ಮಗಾ ಅಲ್ಲಾ ಆಕಿಗೀ ? ಹುಡುಗನ ಮ್ಯಾಲ ಇನ್ನs ನಿಂತಿಲ್ಲಲ್ಲಾ...?” ಹುಡುಗಿಯ ಮಾತು ನಿಜವೆಂದೇ ಬಗೆದಳು, ಹಳ್ಳಿಯ ಮುದುಕಿ.

“ಇಲ್ಲ; ಅವನ ಬೆನ್ನ ಮ್ಯಾಲ ಹೆಣ್ಣ ಒಂದ ಹಡಿದೀಳಲ್ಲ....! ಆದರ ಸಯ್ತು...ಆ ಪೋರಿ ಬೆನ್ನ ಮ್ಯಾಲ ನಾಕೈದ ವರ್ಷ ಆಯ್ತು ಯಾನ....ಇಲ್ಲ” ದನಿಯಲ್ಲಿ ಸ್ವಲ್ಪ ಮರುಕ ಮೂಡಿತ್ತು.

"ಇರಲಿ ತಗೋ ! ಮತ್ತ ಆದಾವ... ಈಗ್ಯಾನ ಗಂಡಾ ಹ್ಯಾಂತಿ ಮುದುಕ ಆದರ ಯಾನ ? .." ಸ್ವಲ್ಪ ತಡೆದು.... "ಬಸ್ತಿಗಿ ಎಲ್ಲಾ ಹೋಗತಾಳಿಲ್ಲ.... ಸುಂದರಾ ...?" ಧರ್ಮದಿಂದ ನಡೆದರೆ ಎಲ್ಲ ಸಂಪತ್ತೂ ಸಿಕ್ಕುವದೆಂದು ಅವಳ ನಂಬುಗೆ. ಅಂತೇ ಹಾಗೆ ಚಾಂಗಲವ್ವ ಮುದುಕಿ ಕೇಳಿದುದು.

ಈ ರೀತಿ ಕೆಲವು ಹೊತ್ತು ಮಾತಾಡಿ ಮುದುಕಿ ಹೋದಳು. ತಾರಕ್ಕನೂ ಸ್ವಲ್ಪ ಹೊತ್ತು ಅತ್ತಿತ್ತ ಮಾಡಿ ಸಂಜೆಯ ಅಡಿಗೆಗೆ ಇಟ್ಟಳು. ಹೇಗೋ ಹೊತ್ತು ಹೋಯಿತು. ಸಂಜೆಗೆ ಸಂತೆಯಿಂದ ಎಲ್ಲರೂ ಬಂದರು. ಪಡಸಾಲೆಗೆ ತಾರಕ್ಕ ಧಾವಿಸಿ ಬಂದಳು. "ಮುಟ್ಟೀ, ದೂರ ನಿಲ್ಲ ; ಸಂತಿ ವ್ಯೈಲಿಗಿ...' ಎಂದಳು ಅವರ ತಾಯಿ. ಎಲ್ಲರೂ ಅರಿವೆ ಕಳೆದು ಬೇರೆ ಅರಿವೆ ಉಟ್ಟರು. ತಾರಕ್ಕ ಒಳಗಿನಿಂದ ಮಡಿ ಅರಿವೆಗಳನ್ನು ಅವರಿಗೆ ತಂದುಕೊಟ್ಟಳು. ಅನಂತನೂ ಶರಟು ಕಳೆದ. ಅವನಿಗೆ ಹಾಕಿಕೊಳ್ಳಲು ಒಳಗಿನಿಂದ ಮಧ್ಯಾಹ್ನ ದಲ್ಲಿ ತಾನು ಹೊಲಿದ ಶರಟು ತಂದುಕೊಟ್ಟಳು, ತಾರಕ್ಕ ಹೆಮ್ಮೆಯಿಂದ. ಅನಂತ ಅದನ್ನು ನೋಡಿದ. ಅವಳ ಹೊಲಿಗೆ ಅವನಿಗೆ ಚಂದ ಕಾಣಲಿಲ್ಲ. ಕೈ ಹೊಲಿಗೆಯದು. ಅದರಲ್ಲೂ ಸ್ವಲ್ಪ ದಪ್ಪ ದಪ್ಪ ಆಗಿದ್ದಿತು. ಯಂತ್ರದ ಮೇಲಿನ ಹೊಲಿಗೆಯನ್ನೇ ಕಂಡ ಅವನಿಗೆ ಸೋಜಿಗವೆನಿಸಿರಬೇಕು, ಆ ಹೊಲಿಗೆ ಯನ್ನು ಕಂಡು. ಅವ್ವನಿಗೆ ತೋರಿಸಿ ಆತ—"ಹ್ಯಾಂಗ ಹೊಲ್ದಾಳ ನೋಡು !" ಎಂದ ನಗುತ್ತ.

"ಕೈ ವ್ಯಾಲಿನ ಹೊಲಿಗಿ ಹಾಂಗs ಅಲ್ಲ....! ಯಾರ ಹೊಲದರು....?" ತಾರಕ್ಕನ ಕಡೆಗೆ ಹೊರಳಿ ಹರುಷದಿಂದ.... " ತಾರಾ, ನೀ ಹೊಲದಿ....?" ಎಂದು ಹತ್ತರ ಸೆಳೆದು ಅಪ್ಪಿಕೊಂಡಳು, ಸುಂದರಾಬಾಯಿ.

"ಹೋಂದ" ಎಂದಳು, ತಾರಕ್ಕ ಅನ್ಯಮನಸ್ಕಳಾಗಿ !

ಸುಂದರವ್ವ ತಾರಕ್ಕನ ತಲೆ ಸವರುತ್ತ, ಹೊಲಿದ ಅಂಗಿಯನ್ನು ಕೈಯಲ್ಲಿ ತಕ್ಕೊಂಡು ಮತ್ತೊಮ್ಮೆ ನಿರೀಕ್ಷಿಸಿ—"ಎಷ್ಟ ಚಂದ ಹೊಲ್ದೀದೀನs" ಎಂದು ಅಕ್ಕರೆಯಿಂದ ಲಟಕ್‌ನೆ ಲಟಿಕೆ ಮುರಿದು, ರತ್ನವ್ವನ ಕಡೆಗೆ ನೋಡಿ.... "ಮಗಳ ಅತ್ತಿ ಕೈಯ್ಯಾಗ ಹ್ಯಾಂಗ ನಂದೋಸತಾಳಂತ....ಚಿಂತಿ ಮಾಡತಿದ್ದಿ, ಪೋರಿಗಿ ಸ್ವತಃ ಬುದ್ಧಿ ಇಲ್ಲ. ಹೇಳ್ದ ಹೊರತಾಗಿ ಕೆಲಸಾನs ಮಾಡೂ

ದಿಲ್ಲ....ಕಲ್ಲಿನ ಹಂಗ ನಿಲ್ಲತಾಳ....ಅಂತೀ, ಹೊಲೀ ಅಂತ ಯಾರ ಹೇಳೀರ ಯಾನ ಆಕಿಗಿ....? ತಾನs ಮಾಡಿಲ್ಲ....? ನಮ್ಮ ಕನಸಿಮನಸಿನ್ಯಾಗರ ಇತ್ಯಾನ ಅಂಗೀ ಹೊಲೀಬೇಕೆಂತ....ಆಕಿನ ದಾರಾ ಸೂಜಿ ಹುಡುಕಿ ತಗೊಂಡ ಕೂತ ಹೊಲದಿಲ್ಲ ತಾನ ? ದೊಡ್ಡಾಕಿ ಆದಂಗ ಎಲ್ಲಾ ಬುದ್ಧಿ ಬರ್ತನ ಇರತೇತಿ ನಮ್ಮವ್ವ !" ಎಂದು ಅನಂತನಿಗೆ ಶರಟು ತೊಡಿಸಹೋದಳು.

"ಹೀಂಗ ಹೊಲ್ದ ಅಂಗಿ ಹಾಕೊಂಡ ಹೋದರs....ನಮ್ಮ ಸಾಲ್ಯಾಗಿನ ಹುಡಗೋರ ಎಲ್ಲಾ ನಕ್ಕಾವ....ಹಿಃ ! ಹಿಃ ! ಹಿಃ !" ಕೊಸರಿಕೊಂಡು ದೂರ ಸರಿದ.

ತಾರಕ್ಕನ ಮುಖದ ಮೇಲೆ ಮ್ಲಾನತೆಯ ತೆರೆಯೊಂದು ಇಳಿಯಿತು ; ಅದು ಸುಂದರಾಬಾಯಿಗೆ ಗೋಚರಿಸದಿರಲಿಲ್ಲ. ಸ್ವಲ್ಪ ಸಿಡುಕಿನಿಂದ "ಸಾಕ ಬಿಡ ನಮ್ಮಪ್ಪ ! ಸಾಲ್ಯಾಗಿನ ಹುಡಗೂರ ನಗತಾವಂತ ನಗಕ ಯಾನ ಆಗೇತಿ....? ಇಂಥಾ ಅಂಗಿ ಅವಕ್ಕ ಹಾಕೊಂಡ ಯಾನ ಗೊತ್ತ ?" ತಾರಕ್ಕ ನನ್ನು ಮೈದಡವಿ "ಇನ್ನೊಂದ ನಾಲ್ಕ ವರ್ಷ ಸಣ್ಣಾಕಿನರs ಆಗಿ ಹುಟ್ಟಬಾರ ದಿತ್ತು....ಅಂದs ನಮ್ಮ ಅನಂತಗರ ಮಾಡತಿದ್ದ್ಯ....ಓದ...." ಎಂದು ತಾರಕ್ಕ ನನ್ನು ಸಮಾಧಾನಗೊಳಿಸಲು ನುಡಿದಳು.

"ಹೂಂ ! ಅನಂತಗ ಯಾನ ಮಾಡತಿದ್ದರಿ ನೀವಾ....ನಿನ್ನ ತವರ ಮನೇದ....ಬಿಟ್ಟಾ....! ಒಂದs ರಾತ್ರಿಗಿ ಯಾರ ಕೇಳಿದರು ಯಾರ ಇಲ್ಲ.... ಅನಂತನ ಮದಿವಿ ಮಾಡಿಬಿಟ್ಟರಿ ! ಆಗ್ಯಾನ ಮದವಿ ವಯಾನೋ....ಯಾನ ಮಣ್ಣೋ....?" ಎಂದಳು ರತ್ನವ್ವ.

ಸುಂದರವ್ವ ಒಮ್ಮೆಲೇ ಹಾರಿಬಿದ್ದು.... "ನಂದ್ಯಾನ ತವರಮನೇದ ಮಾಡ ಬೇಕೆಂತ ಹಟಾ ಇರಲಿಲ್ಲ, ತಾಯಿ ! ಒಳಗಿಂದ ಮಾಡಿದರ, ಆದs ತರಲಿಲ್ಲ ; ಇದs ತರಲಿಲ್ಲಾ ಅಂತ ನಾಳಿ ಮತ್ತ ನಮ್ಮ ಕೊರಳಿಗೆ ಉರಲ ಅಲ್ಲಾ....? ಆಯ್ತೆ ವೇಳೆದಾಗ....ಹೊರಗ ಎಲ್ಲಿ ಹುಡಕತ ಹೋಗೂದಂತ....ಮನ್ಯಾಗಿಂದs ಪೋರಿ ಇತ್ತು, ತಾವ ತಂದ ಅಕ್ಕಿಕಾಳ....ಒಕ್ಕೊಂಡರು....! ನಂದ್ಯಾನ ಇದರಾಗ ಇಲ್ಲ, ತಾಯಿ !"

ಸಂಜೆಯ ಊಟ ಆಯಿತು. ಅದೇಕೊ ಅನಂತ ಬೇಗನೆ ಊಟ ತೀರಿಸಿ ಬಾಗಿಲಿಗೆ ಬಂದು ನಿಂತ. ತಾರಕ್ಕ ಊಟಮಾಡಿ ಬರಲು ದಾರೀ ಬಿಡದೆ ಹಾಗೇ ನಿಂತ, ತುಂಟತನದಿಂದ. ತಾರಕ್ಕ "ಹಾದ್ಯಾಗಿಂದ ಸರೀಯಲ್ಲ....?" ಎಂದಳು.

ಅನಂತ ಹಾಗೇ ನಿಂತ. "ಹಿಃ ! ಹಿಃ ! ಹಿಃ !" ಎಂದು ನಗುತ್ತ.

ತಾರಕ್ಕ "ಸರೀ, ಹಾದೀ ಬಿಡ....!" ಎಂದು ಅವನ ಕೈಹಿಡಿದು ಸರಿಸ ಹತ್ತಿದಳು, ಅವನ ಭಾವವನ್ನರಿತು.

"ಇಲ್ಲ ! ಗಂಡನ ಹೆಸರ ಹೇಳೂ, ಆಮ್ಯಾಲ"

ಆಕೀ ಗಂಡನ ಹೆಸರ್ಯ ಕೇಳತಿ....? ನೀ ಹೇಳಲ್ಲ....ನಿನ್ನ ಹ್ಯಾಂತಿ ಹೆಸರ....!" ಮಗಳ ಕಡೆಗಾಗಿ ನುಡಿದಳು ರತ್ನವ್ವ.

"ಹೋಂದ ಅನಂತಾ, ಹೇಳಪಾ ನಿನ್ನ ಹ್ಯಾಂತಿ ಹೆಸರಾ....! ನಾನೂ ಕೇಳಿಲ್ಲ. ಭಾಳ ದಿನಾ ಆಯ್ತು...." ಸುಂದರಾಬಾಯಿ ಮಗನಿಂದ ಹೆಂಡತಿಯ ಹೆಸರನ್ನು ಕೇಳುವ ಉಬ್ಬಿನಲ್ಲಿ ನುಡಿದಳು.

"ನಂದ್ಯಾನ ಮದಿವಿ ಆಗಿ ಭಾಳ ದಿನಾ ಆಯ್ತು ; ಆಕೀ ಮೊದಲ ಹೇಳ್ಲಿ. ಆಮ್ಯಾಲ ನಾ ಹೇಳ್ತ್ಯಾನು...."

ಅನಂತನ ಮಾತಿನ ಠೀವಿ ಸ್ವರಗಳ ಮೇಲಿಂದ ಅವನು ಹಿಂದಿನಿಂದ ಹೇಳುವುದಿಲ್ಲವೆಂಬುದನ್ನು ತಾರಕ್ಕ ತಿಳಿದುಕೊಂಡಳು. ಆದರೂ ಅವ್ವ ಅತ್ತಿ ಎಲ್ಲರೂ ಹೇಳು ಎಂದು ಆಗ್ರಹ ಮಾಡಿದನಂತರ ಲಜ್ಜೆಯಿಂದ :

"ಜೋಡೆಳಿ ಮುತ್ತ ಜೋಮಾಲಿ ಸರಾ, ಎಂಟೆಳಿ ಮುತ್ತಾ ಕಂಠಿ ಸರಾ, ಒಂಟಿ ಮ್ಯಾಲ ಕೂತ ಪೋಣಸತಾರ, ಆನಿ ಮ್ಯಾಲ ಕೂತ ದಾನ ಮಾಡ್ತಾರ, ಪಲ್ಲಕ್ಕ್ಯಾಗ ಕೂತ ಪಗಡಿ ಆಡ್ತಾರ, ಮಂಚದ ಮ್ಯಾಲ ಕೂತ ಮಗನ ಆಡಸ ತಾರ, ಆಕ್ಕಿ ಚೀಲಮ್ಯಾಲ ಕೂತ ಲೆಕ್ಕಾ ಮಾಡತಾರ, ಲೆಕ್ಕ ಬರೂಲ್ಲ ಆಗಾನಾ ಅಕ್ಕನ ಕರದ ಕೇಳತಾರ ಭ....ರ....ಮ....ಗೊಂಡ....!" ಎಂದು ತಾರಕ್ಕ ಮೆಲ್ಲನೆ ಗಂಡನ ಹೆಸರು ಹೇಳಿದಳು. ಆಮೇಲೆ "ನೀ ಹೇಳ ಇನ್ನ....ನಿನ್ನ ಹ್ಯಾಂತಿ ಹೆಸರ....?" ಎಂದು ಅನಂತನನ್ನು ಕೇಳಿದಳು.

"ನೀನೂ ಒಂದ ಛಲೂ ಒಗಟಾ ಹಾಕಪ್ಪಾ! ಆಕೀ ಮ್ಯಾಲ ಸವಾಲ

ಆಗಬೇಕ ನೋಡ....!" ಎಂದು ಮಗನಿಗೆ ಸುಂದರಾಬಾಯಿ ಬೋಧಿಸಿದಳು.

"ನನಗ ಗೊತ್ತಿಲ್ಲ....ಆ ಕರೀ ಪೋರಿನಾ....ನಾ ಮದಿವೇ ಆಗಿಲ್ಲ.... ಮೊದಲ...ಹಃ ! ಹಃ ! ಹಃ !" ಎಂದು ನಗುತ್ತ ಹೊರಗೆ ಓಡಿದ, ಅನಂತ.

ಅದು ಏನೂ ಅರಿಯದ ಸಣ್ಣ ಹುಡುಗನ ನಗೆಮಾತಾಗಿದ್ದರೂ, ಸುಂದರವ್ವನ ಎದೆಗೆ ಬರೆಕೊಟ್ಟಂತಾಗದೆ ಇರಲಿಲ್ಲ.

೪

ಅನಂತ ಅಂದು ಬೆಳಗಿನತನಕ ತಮ್ಮೂರಿಗೆ ಹೋಗುವ ಕನಸನ್ನೇ ಕಂಡ. ಇರುಳು ಎಚ್ಚರಾದಾಗ ಅವನಿಗೆ ಒಮ್ಮೊಮ್ಮೆ ಐನಾಪುರದಲ್ಲಿ ಮಲಗಿದಂತೆಯೂ, ಗೆಳೆಯರೊಡನೆ ಸಾಲೆಗೆ ನಡೆದಂತೆಯೂ ಭಾಸವಾಗುತ್ತಿತ್ತು. ಈಗ ಒಂದು ತಿಂಗಳಿಂದ ಚಂದೂರಿನಲ್ಲಿ ನಿಂತು ಬೇಸರ ಬಂದಿದ್ದಿತವನಿಗೆ. ಮೊದಲೇನೋ ನಾಲ್ಕುದಿನ ಹಳ್ಳಿ ಊರು, ಎಲ್ಲರೂ, ಪ್ರೀತಿಯಿಂದ ಮಾತಾಡಿಸುವವರು ಎಂದು ಆನಂದದಲ್ಲಿಯೇ ಹೋಯಿತು. ಆಗ ತಮ್ಮೂರಿಗಿಂತ ಇಂಥ ಹಳ್ಳಿಯೇ ಇರಲಿಕ್ಕೆ ಒಳ್ಳೆಯದೆಂದು ತೀರ್ಮಾನಿಸಿದ. ಆದರೆ ಬರಬರುತ್ತ ಹಳ್ಳಿಯಲ್ಲಿ ಗೆಳೆಯರಿಲ್ಲ. ದೊಡ್ಡ ಸಾಲೆಯಿಲ್ಲ. ಇದ್ದೂ ಬಿದ್ದೂ ಆಡಿದರೆ ಮನೆಯಲ್ಲಿಯ ತಾರಕ್ಕನ ಗೂಡ ಇಲ್ಲವೆ ಓಣಿಯೊಳಗಿನ ಹುಡುಗರ ಗೂಡ ಆಡಬೇಕು. ಹೀಗಾಗಿ ಅವನ ಮನಸ್ಸು ಊರ ಕಡೆಗೆ ಹರಿಯುತ್ತಿದ್ದಿತು. ಮರುದಿನ ಮುಂಜಾನೆ ಸ್ವಲ್ಪ ಲಗೂನೆ ಎದ್ದು ಅನಂತ ಹಾಸಿಗೆಯಲ್ಲಿ ಕುಳಿತು ಸುತ್ತಲೂ ನಿರೀಕ್ಷಿಸಿದ. ಊರಿಗೆ ಹೊರಡುವ ಸಿದ್ಧತೆ ನಡೆದಂತಿರಲಿಲ್ಲ. ಮನದಲ್ಲಿ ಕಳವಳಗೊಂಡು... "ಅವ್ವಾ !" ಎಂದು ಕೂಗಿದ.

"ಯಾಕ ಬಾಳಾ, ಲಗೂನ ಎದ್ದಿ ?" ಎಂದು ಅವನ ತಾಯಿ ನಡುಮನೆ ಯಿಂದ ಕೇಳಿದಳು.

"ಊರಿಗಿ ಯಾವಾಗ ಹೋಗೋದಾ....?"

ಸುಂದರಾಬಾಯಿ ಉತ್ತರಕೊಡಲಿಲ್ಲ. ಮಗನು ಊರಿಗೆ ಹೋಗಲಿಕ್ಕೆ ಆತುರ ಪಡುವುದನ್ನು ನೋಡಿ ಗಹಗಹಿಸಿ ನಕ್ಕಳು. ಅನಂತ ಆತುರದಿಂದ "ಅವ್ವಾ !" ಎಂದ.

"ಇನ್ನ ಊರಗಿ ಹೋಗೋದ ಇಲ್ಲಾ, ಬಿಡೋದ ಇಲ್ಲ....ಇಲ್ಲೇ ನಮ್ಮ ಮನ್ಯಾಗsು ದನಾ ಕಾಯಕೋತ....ಇರ...." ಎಂದಳು ರತ್ನಾಬಾಯಿ ನಗುತ್ತ.

ಅನಂತ ಸಚಿಂತಮುದ್ರೆಯಿಂದ ಶಾಲು ಹೊತ್ತುಕೊಂಡು ಮತ್ತೆ ಮಲಗಿದ. ಮನದಲ್ಲಿ ಊರಿಗೆ ಹೋಗುವುದು ನಿಂತುದಕ್ಕೆ ತಳಮಳಿಸುತ್ತಿದ್ದ. ಹೊರಡದ್ದಕ್ಕೆ ಅಪ್ಪನ ಮೇಲೆಯೂ ಸಿಟ್ಟಾದ. ಹಾಗೆಯೇ ಸಿಟ್ಟಿನ ಅತಿರೇಕದಲ್ಲಿ ಅಳುವಂತೆಯೂ ಆಯಿತವನಿಗೆ. ಅಪ್ಪನನ್ನೂ ಮನೆಯನ್ನೂ ಎಂದೋ ನಾಲ್ಕೈದು ವರ್ಷಗಳ ಹಿಂದೆ ಬಿಟ್ಟುಬಂದಂತೆ ಅನ್ನಿಸಿತವನಿಗೆ. ಆದರೆ ಅದೇ ತಾರಕ್ಕನಿಗೆ ತುಂಬ ಆನಂದವಾಗಿದ್ದಿತು, ಅನಂತ ಊರಿಗೆ ಹೋಗುವುದು ನಿಂತುದಕ್ಕಾಗಿ. ಪಡಸಾಲೆಯಲ್ಲಿ ಯಾರೂ ಇಲ್ಲದಾಗ "ಅನಂತಾ....ನೀ ಊರಿಗಿ ಹೋಗೋದ ನಿಂತುಹೋಯ್ತಲ್ಲ!" ಎಂದು ತಾರಕ್ಕ ನಗುತ್ತ ಹೇಳಿದಳು.

"ಯಾಕ....ಹರಿವತ್ತ ಅತ್ತ್ಯಾ ಹೇಳುತ್ತಿದ್ದಳ?" ಅನಂತ ಆತುರದಿಂದ ಕೇಳಿದ.

"ಬುಧವಾರ ಹೋಗಾಕಿ ಅಂತ....ನಾ ಅವರ ಮನೆಗೆ ಹೋದ ಮ್ಯಾಲ...."

"ಇಲ್ಲ; ನಾವ ಇಂದ ಹೋಗಾವ್ರ!" ತಾಯಿ ಎಂದೂ ನಿಲ್ಲಲಾರಳೆಂದು ಭಾವಿಸಿದ ಅನಂತ ನುಡಿದ.

"ಯಾರ ಗೂಡಾ ಹೋಗತಿ....?"

"ಅವ್ವಾ ಬರತಾಳಲ್ಲ....!"

"ಆಕೀ ಹೊರಗಾಗಿದಾಳ....ಮೊದ್ಲ....!" ಎಂದು ಗೋಣು ಹಾಕಿದಳು ತಾರಾ.

ಅನಂತನ ಮುಖ ಒಮ್ಮೆಲೇ ಕಪ್ಪಿಟ್ಟಿತು. ಅವ್ವನು ಮುಂಜಾನೆ ನಕ್ಕು ಸುಮ್ಮನಾದುದು ಇದಕ್ಕಾಗಿಯೇ ಎಂದರಿತ. ಆದರೂ ಅವನಿಗೆ ತಾರಕ್ಕನ ಮಾತಿನ ಮೇಲೆ ನಂಬುಗೆ ಹುಟ್ಟಲಿಲ್ಲ. ಹಾಸಿಗೆಯಿಂದ ಮೆಲ್ಲನೆ ಎದ್ದು ನಡುಮನೆಗೆ ಹೋದ. ಒಂದು ಮೂಲೆಯಲ್ಲಿ ಸುಂದರಾಬಾಯಿ ಕುಳಿತಿದ್ದಳು. ಸಂಶಯದೃಷ್ಟಿಯಿಂದ ನೋಡಿದ. ಅಷ್ಟರಲ್ಲಿ "ಅತ್ತ ಮುಟ್ಟೇಯಪ್ಪ, ಸೀರಿ ಐತಿ" ಎಂದಳು ಅವರ ತಾಯಿ. ಈಗ ಅವನಿಗೆ ನಿಜವೆನಿಸಿತು. ಕುಗ್ಗಿದ

ಕಂಠದಿಂದ "ಇಲ್ಲ!" ಎಂದು ಒಳಗೆ ಹೋದ. ಆಮೇಲೆ ಮುಖ ತೊಳೆದು ಕೊಂಡು ಹೊರಗೆ ಆಡಲು ಹೋದ, ಬೇಸರದಿಂದ.

ಅನಂತ ನಾಲ್ಕು ದಿನಗಳ ಲೆಕ್ಕ ಹಾಕುತ್ತಿದ್ದ. ಈಗ ಅನಂತ ತಾರಕ್ಕ ರಿಬ್ಬರೇ ಜೊತೆಗಾರರು. ತಾರಕ್ಕ ಮದುಮಗಳಾದುದರಿಂದ ಇಷ್ಟರಲ್ಲಿ ಮನೆ ಬಿಟ್ಟು ಹೊರಗೆ ಹೋಗುವಂತಿರಲಿಲ್ಲ. ಆದುದರಿಂದ ಮನೆ, ಹಿತ್ತಲು, ಅಂಗಳ ಇಷ್ಟೇ ಅವರ ಆಟದ ಕ್ಷೇತ್ರವಾಗಿದ್ದಿತು. ಮನೆ ಕಟ್ಟುವದು, ಗಾಡಿ ಮಾಡು ವದು, ಮೊದಲಾದ ಆಟಗಳನ್ನು ಆಡುತ್ತಿದ್ದರು. ಒಮ್ಮೊಮ್ಮೆ ಅನಂತ ತಮ್ಮ ಸಾಲೆಯೊಳಗಿನ 'ಕೋಳಿಕೋತಿ' ತುಡುಗನ ಆಟಗಳನ್ನು ವಿವರಿಸಿ ಹೇಳುವ. ಅದರಲ್ಲಿ ತಾರಕ್ಕನಿಗೆ ಏನೂ ತಿಳಿಯದಿದ್ದರೂ ಉತ್ಸುಕತೆಯಿಂದ ಕೇಳುವಳು. ಒಮ್ಮೊಮ್ಮೆ ಆಟದಲ್ಲಿ ಬೇಸರ ಬಂದಾಗ ಅನಂತ ತಾರಕ್ಕನಿಗೆ ತನ್ನ ಪುಸ್ತಕ ಓದಿ ತೋರಿಸುವ. ಅದರಲ್ಲಿಯ ಕವಿತೆ ಅಂದು ತೋರಿಸುವ. ಅನಂತನ ಜಾಣತನಕ್ಕೆ ತಾರಕ್ಕ ಮನದಲ್ಲಿಯೇ ಹಿಗ್ಗುವಳು. ಒಮ್ಮೊಮ್ಮೆ ಆಡಿಯೂ ತೋರಿಸುವಳು. ಮತ್ತೊಮ್ಮೆ ಆಶ್ಚರ್ಯದಿಂದ "ಅನಂತಾ, ಇಂಥಾ ಸಣ್ಣ ಅಕ್ಷರ ಹ್ಯಾಂಗ ಓದತಿಯೋ....?" ಎಂದು ಕೇಳುವಳು. ಅದಕ್ಕೆ ಅನಂತ ನಕ್ಕು "ಇವ ಸಣ್ಣ ಯಾನ....ಆರನೇ ಯೋಳನೇ ಎತ್ತೇದ ಪುಸ್ತಕದಾಗ ಭಾಳ ಸಣ್ಣ ಅಕ್ಷರ ಇರತಾವ....ಅವ ನೋಡಿದರ ನೀ ಯಾನ ಅಂದಿ....!" ಎಂದು ಹೆಮ್ಮೆಯಿಂದ ಹೇಳುವ. ಅದರಿಂದ ಅವಳು ಸಾಲೆ ಕಲಿಯುವುದು ಬಹಳ ಕಠಿಣ ಎಂದುಕೊಂಡು ಸುಮ್ಮನಾಗುವಳು. ಇದರಿಂದ ತಾರಕ್ಕನ ಮನಸ್ಸು ಅನಂತನ ಜಾಣತನಕ್ಕೆ ಮೆಚ್ಚುವುದು, ಒಲಿಯುವುದು. ಅನಂತನ ಓದುವಿಕೆ....ಮಾತುಗಾರಿಕೆ ಆಟಗಳನ್ನೆಲ್ಲ ಒಂದು ಕೌತುಕ ಮಾಡಿ ತಂದೆಗೆ ಹೇಳುವಳು. ಸಂಜೆ ಮಲ್ಲ ಮಳಿಗೆಯಿಂದ ಮನೆಗೆ ಬಂದರೆ ಕೇಳಲಿಕ್ಕೆ ಇದೊಂದು ನಲ್ಗತೆಯೇ ಇರುತ್ತಿದ್ದಿತೀಗ.

ಒಂದು ದಿನ ಮಧ್ಯಾಹ್ನದಲ್ಲಿ ತಾರಕ್ಕನನ್ನು ಮುಂದೆ ಕೂಡಿಸಿಕೊಂಡು ರತ್ನವ್ವ ಸುಂದರಾಬಾಯಿಯರಿಬ್ಬರೂ ಕೂಡಿ ಅತ್ತೆಯ ಮನೆಯಲ್ಲಿ ಹೇಗಿರ ಬೇಕು, ಮಾವನೊಡನೆ ಹೇಗೆ ನಡೆದುಕೊಳ್ಳಬೇಕು, ಮೊದಲಾದ ಸಂಗತಿಗಳ ನ್ನೆಲ್ಲ ತಾಸೆರಡು ತಾಸುಗಳವರೆಗೆ ಉಪದೇಶ ಮಾಡಿದರು. ಆ ಮಾತುಗಳ

ನ್ನೆಲ್ಲ ಕೇಳಿ ಅವಳಿಗೆ ಅತ್ತೆಯ ಮನೆಯೆಂದರೆ ಒಂದು ದೆವ್ವದ ಮನೆಯೆಂದು ಭಾಸವಾಗಿರಬೇಕು. ಆದರೆ ಅದೆಲ್ಲವನ್ನು ತಿಳಿದುಕೊಂಡು ಚಿಂತಿಸುವಷ್ಟು ಅವಳ ಮನಸ್ಸು ಪ್ರೌಢವಾಗಿರಲಿಲ್ಲ. ಹೇಗೊ ಮುಂದೆ ಕುಳಿತು ಅವರು ಹೇಳಿದ್ದನ್ನೆಲ್ಲ 'ಹೂಂ! ಹೂಂ!' ಎಂದು ಕೇಳಿದಳು. ಅವಳ ಮನಸ್ಸು ಮಾತ್ರ ಅಲ್ಲಿರಲಿಲ್ಲ. ಅನಂತನೊಡನೆ ಹೊರಗೆ ಆಡುತ್ತಿದ್ದಿತು. ಹೊರಗೆ ಅನಂತ ಆಡಲು ಯಾರೂ ಇಲ್ಲದುದರಿಂದ ದನಗಳ ಕೊಟ್ಟಿಗೆಯಲ್ಲಿ ಹೋಗಿ ಆಕಳಕರುವಿನ ಗೂಡ ಆಡುತ್ತಿದ್ದ. ಆಗಾಗ ಬಾಗಿಲ ಕಡೆಗೆ ಬೆದರಿ ನೋಡುವ ಅವ್ವ ತನ್ನ ಆಟ ಕಂಡರೆ ಬಯ್ಯುವಳೆಂದು ಅವನಿಗೆ ಗೊತ್ತು. ಅದಕ್ಕೊಂದು ಉಪಾಯವನ್ನು ಹೂಡಿಟ್ಟದ್ದನಾತ. ಅಲ್ಲೇ ಸಮೀಪದಲ್ಲಿ ತನ್ನ ಪುಸ್ತಕ ಇಟ್ಟು ಕೊಂಡಿದ್ದ. ಒಳಗಿನಿಂದ ಸುಂದರಾಬಾಯಿ ಬರುವಂತೆ ತೋರಿದರೆ ಕೂಡಲೆ ಪುಸ್ತಕವನ್ನು ಕೈಯಲ್ಲಿ ತಕ್ಕೊಂಡು ಓದುತ್ತಿರುವಂತೆ ನಟಿಸುವ. ಯಾರೂ ಇಲ್ಲದಾಗಲು ಕರುವಿನ ಮೇಲೆ ಕೂಡುವದು, ಅದರ ಬಾಲ ಹಿಡಿಯುವದು, ಅದರ ಕೊರಳಿಗೆ ಜೋತುಬೀಳುವದು, ಹೀಗೆ ಅನೇಕ ಪ್ರಕಾರವಾಗಿ ಆಡುವ. ಆ ಸಣ್ಣ ಕಾಗರವು ಅವನಿಗೊಂದು ಆಟದ ಒಡವೆಯಾಗಿದ್ದಿತು. ಹೀಗೆ ಅದೆಷ್ಟೋ ಹೊತ್ತು ಆಡುತ್ತ ಆಡುತ್ತ ಅದರ ಮೇಲೆ ಕುಳಿತು, ಮೋಜಿಗಾಗಿ ಅದರ ಕಿವಿಗಳನ್ನು ಹಿಡಿದು ತಿರುವಿದ. ಅದು ಒಮ್ಮೆಲೇ ಮೈ ಕೊಡಹಿ ಎದ್ದು ನಿಂತಿತು. ಅನಂತ ನೆಲಕ್ಕೆ ದೊಪ್ಪೆಂದು ಬಿದ್ದ. ಪೆಟ್ಟು ತಗಲಿತು.

"ಆಃ? ಆಂss....ಆಂsss....ಆಂsssss? ಎಂದು ಸ್ವರ ತೆಗೆದು ಅಳ ಹತ್ತಿದ.

ಕೂಡಲೇ ರತ್ನವ್ವ ಒಳಗಿನಿಂದ ಧಾವಿಸಿ ಬಂದು "ಯಾನ ಮಾಡಕೊಂಡ್ಯೋ....ಕರಾ ಕಾಲ ತುಳೀತ ಯಾನ....?" ಎಂದು ಎತ್ತಿಕೊಂಡಳು. ಇಷ್ಟರಲ್ಲಿ ಅನಂತನೂ ಕೈಯಲ್ಲಿ ಪುಸ್ತಕವನ್ನು ಹಿಡಿಯಲು ಮರೆತಿರಲಿಲ್ಲ. ಕಣ್ಣೀರು ಒರಸಿ.... "ಒಳಗ ಕೂತ ಓದಬೇಕಪಾ....ಅಲ್ಯಾಕ ಹೋಗೀದಿ....?" ಎಂದು ನಡುವಿನ ಮೇಲೆ ಕೂಡಿಸಿಕೊಂಡು ಒಳಗೆ ಒಯ್ದಳು. ಈ ಗೊಂದಲದ ಸಂಧಿಯನ್ನು ಸಾಧಿಸಿ ತಾರಕ್ಕ ಎದ್ದು ಹೊರಗೆ ಬಂದಳು. ಸುಂದರಾಬಾಯಿ ಸಿಡುಕಿನಿಂದ "ಅವನಾ ಯಾತಕ ತರತಿದ್ದಿ....?....ಅಲ್ಲೇ ಬೀಳವಲ್ಲ....! ದನೀನ ಕಾಲಾಗs....ಕರೀನ ಕೂಡಾ ಆಡಬ್ಯಾಡಂತ ಹೇಳಿ ಹೇಳಿ ನನಗೆ

ಬ್ಯಾಸರ ಬಂದ ಹೋಯ್ತು....ಮತ್ತ ಅಲ್ಲೇ ಹೋಗಿ ಹುಕ್ಕೋತಾನ ಹಗಲೀ ರಾತ್ರಿ...." ಎಂದಳು. ಆದರೂ ಹತ್ತರ ಬಂದು ಕಾಲು-ಗೀಲು ತುಳಿಸಿಕೊಂಡಿರುವನೇನೆಂದು, ನಿರೀಕ್ಷಿಸದೇ ಇರಲಿಲ್ಲ. ರತ್ನವ್ವ ರಮಿಸಿ ಒಂದು ಉಂಡಿಯನ್ನು ಕೊಟ್ಟಳು ಅನಂತನಿಗೆ. ತಕ್ಕೊಂಡು ಆಡಲು ಹೊರಗೆ ಓಡಿದನಾತ.

ಎಣ್ಣೆಯೊಳಗಿನ ಆ ಉಂಡಿಯನ್ನು ತನ್ನ ಮಗ ಎಲ್ಲಿ ತಿನ್ನುವನೇನೋ ಎಂದು ಆತುರಗೊಂಡು ಸುಂದರವ್ವ— "ಅಂತೂ....ಇಲ್ಲಿ....ಬಾರಪ್ಪ........ ಹೊರಗ ತಗೊಂಡ ಹೋಗಬ್ಯಾಡ...." ಎಂದಳು. ಅನಂತ ಹಾಗೇ ಹೊರಟ. ಮತ್ತೆ ಸುಂದರಾಬಾಯಿ ಬಿರುಸು ದನಿಯಿಂದ—ಒದರಿ ಹೇಳಿದಳು. "ಅಂತ್ಯಾ ....ನಾ ಯಾನ ಹೇಳತ್ಯಾನ....ತಿಳೀತೇತಿ ಯಾನ ಇಲ್ಲ....? ಹುಡುಗೂರ ಅಂದರ ಹ್ಯಾಂಗ ಇರಬೇಕ....ಕಣ್ಣ ಮೂಗಿನ ಅಂಜಿಕ್ಯಾಗ ಇದ್ದರsನs ಮಕ್ಕಳ ....ಇಲ್ಲಾದರ ಯಾನ ಮಾಡೋದ....ಇಂಥಾವ ತಗೊಂಡ....?!" ಎಂದು ಒಟಗುಡುತ್ತ ಒಳಗೆ ಹೋಗಿ, ತುಪ್ಪಿನೊಳಗಿನ ಒಂದು ಉಂಡಿಯನ್ನು ತನ್ನ ಟ್ರಂಕಿನೊಳಗಿಂದ ತಕ್ಕೊಂಡು, ರತ್ನವ್ವನಿಗೆ ಕಾಣದಂತೆ ಸೀರೆಯ ಸೆರಗಿನಲ್ಲಿ ಮುಚ್ಚಿಕೊಂಡು ಹೋಗಿ ಅನಂತನಿಗೆ ಕೊಟ್ಟು, ಆ ಉಂಡಿಯನ್ನು ಕಸಿದು ತಾರಕ್ಕನ ಕೈಯಲ್ಲಿ ಕೊಟ್ಟು ಬಂದಳು.

ಮರುದಿನ ಮುಂಜಾನೆ ತಾರಕ್ಕ ಅನಂತ ಕೂಡಿ ಪಡಸಾಲೆಯಲ್ಲಿ ಆಡುತ್ತಿದ್ದರು. ಎರಡು ತಾಸು ಹೊತ್ತೇರಿತ್ತು. ಪಡಸಾಲೆಯಲ್ಲಿ ಬಿಸಿಲು ಬಿದ್ದಿತ್ತು. ಅದು ಹುಡುಗರ ಮನಸ್ಸನ್ನು ಇನ್ನಿಷ್ಟು ಅರಳಿಸಿದೆ. ಆಟವೂ ಆನಂದದಿಂದ ಸಾಗಿದೆ. ಅಷ್ಟರಲ್ಲಿ ತಾರಕ್ಕನ ಮಾವ ಬಂದು,

"ರತ್ನಾ, ನಾಳಿ ಹರೀಪತ್ತ ತಾರಕ್ಕನ ಕರಕೊಂಡ ಹೋಗತೇವವ್ವ.... ಮುಂದ ಲಗೂ ಮುಹೂರ್ತ ಇಲ್ಲಂತ...." ಎಂದ.

ರತ್ನವ್ವ ಗಡಿಗೆ ತೊಳಿಯುವುದನ್ನು ಅಷ್ಟಕ್ಕೆ ನಿಲ್ಲಿಸಿ, ಕೈ ತೊಳೆದುಕೊಂಡು ಸೀರಿಗೆ ಒರಿಸಿಕೊಳ್ಳುತ್ತ ಅವಸರದಿಂದ ಹೊರಗೆ ಬಂದು— "ಬಾ, ಕೂಡಲ್ಲ...." ಎಂದು ಕಂಬಳಿಯೊಂದನ್ನು ನೆಲುವಗಣಿಯಿಂದ ಎಳೆದು ಹಾಸಿಕೊಡುತ್ತಾ, ತಾರಕ್ಕನ ಕಡೆಗೆ ಸಿಟ್ಟಿನಿಂದೊಮ್ಮೆ ನೋಡಿ, "ನಾವೂ ಪಂಡಿತರನ್ನ ಕೇಳಿದೇವು....ನಾಳೇ....ದಿನಾ ಚಲೋ ಐತಿ....ಕರಕೊಂಡ ಹೋಗರಿ....

ಅದs ಜೋಡಣ್ಯಾಗ ಇದೇವ....ನಾವೂ...." ಎಂದಳು.

ಅತ್ತ ತಾರಕ್ಕ ಓಡಿ ಹಿತ್ತಲಿಗೆ ಹೋದಳು. ಅನಂತ ಇದನ್ನೇನೂ ಅರಿಯದೆ ನಡುಮನೆಯತ್ತ ನಡೆದ. ಹೂವಣ್ಣ—ತಾರಕ್ಕನ ಮಾವ—ಕಂಬಳಿಯ ಮೇಲೆ ಕೂಡುತ್ತ,

"ಹಾಂಗಾರ ನೀವೂ ತಯಾರದಾಗ ಇದೀರಿ ಅನ್ನು ?" ಎಂದ ಸ್ವಲ್ಪ ತಡೆದು.

"ಹೂಂ! ಹೊಸದಾಗೆ ಬರಾಕಿ ತಾರಾ...., ಸಂಗಾಟ ಯಾರ? ಸುಂದರಾ ಬರತಾಳು....?...." ಎಂದು ಕೇಳಿದ

"ಇಲ್ಲ; ನಾನೂ ನಾಳೆ ಊರಿಗೆ ಹೋಗತ್ಯಾನು....ಮನ್ಯಾಗ ಅಡಚಣಿ ಐತಿ...., ಬಂದ ತಿಂಗಳಾಗ್ತ ಬಂತಲ್ಲ....?" ಎಂದು ಒಳಗಿನಿಂದಲೇ ಸುಂದರಾ ಅಂದಳು.

"ನಾನs ನಾಲ್ಕ ದಿನಾ ಬರ್ತಾ ಹೋಗ್ತಾ ಇರತ್ಯಾನಲ್ಲ....; ಯಾನ ಹೊಸಾ ಮನೀ ಐತಿ ?....ಹ್ಯಾಂಗ ಇದ್ದಾಳ ಅನ್ನೋದ ಐತಿ....?" ಎಂದಳು ರತ್ನಾ.

"ಎಲ್ಲಾ ಬಂದ ಹೋದದ ಮನೀನ ಐತಿ....ಅದ್ಯಾನ ಇಲ್ಲ. ಆದರ ಆದೊಂದ ರೀತಿ ಐತಿ ಅಲ್ಲಾ, ಅದಕs ಕೇಳ್ನಿ....?" ಎಂದು ಹೂವಣ್ಣ ಏಳಹತ್ತಿದ.

"ಏಳಬ್ಯಾಡ....s, ಚಹಾ ಜರಾ ತಗೊಂಡ ಹೋಗು...." ಎಂದಳು, ರತ್ನಾ.

"ಈಗ ತಗೊಂಡಿದ್ಯಾನ....ಬ್ಯಾಡ....ಹೊಲಕ ಹೊಂಟನ್ನಿ....ಹಾಂಗs ಹೇಳಿ ಬಾ ಅನ್ನಾನ....ಆಕಿ. ಬಂದಿನ್ನು....ವ್ಯಾಳೀ ಆಗತೇತಿ....ನಾ ಹೋಗತ್ಯಾನು...."

ನಡುವೆಯೇ ಬಾಯಿ ಹಾಕಿ ಒಳಗಿನಿಂದ ಸುಂದರವ್ವ ಅಂದಳು. "ಹೊಸ ಬೀಗ ಆಗೇದಿ....ಚಹಾ ಕುಡದ ಹೋಗಾಕs" ಧ್ವನಿಯಲ್ಲಿ ನಗೆ ಗೂಡಿತ್ತು.

"ನಮ್ಮದ್ಯಾನ ಹೊಸಾದ ಇಲ್ಲವ್ವ! ಮೊದಲ ಇದ್ದಾಂಗs....ಐತಿ...."

"ಹಾಂಗ್ಯಾಂಗ ಆದೋತು....? ಈಗ ಸೊಸಿನಾ ಮಾಡೀದಿ....ಆಗ್ಯಾನ ಬೀಗನ ಮನೀ ಅಂತ ಬರತಿದ್ರಿ....ಆ ಮಾತs ಬ್ಯಾರೆ ಇತ್ತು....!"

"ಅದ್ಯಾನ ಇಲ್ಲವ್ವ! ಆಗೂ ಬೀಗನ ಮನೀನ ಇತ್ತು; ಈಗೂ ಬೀಗನ ಮನೀನ ಐತಿ. ಹೆಣ್ಣ ಕೊಟ್ಟರಂತ ಈಗ್ಯಾನ ಹೊಸಾ ಮನೀ ಆಗಲಿಲ್ಲಾ.... ಯಾನ....ಇಲ್ಲಾ...." ಎಂದು ಎದ್ದು ನಡೆದ

"ಹೊರಟಿ ಯಾಕ? ಒಳಗ ಒಲೀ ಮ್ಯಾಲ ಇಟ್ಟದ್ಯಾನಲ್ಲ, ಚಾಹಾಕ ಎಸರ....ತಗೊಂಡ....ಹೋಗು...." ಎಂದು ರತ್ನವ್ವ ಆಗ್ರಹ ಮಾಡಿದಳು. ಮತ್ತು ಒಳಗೆ ಹೋಗಿ, ಅರಿವೆಯ ಗಂಟು ತಂದು, ನಿನ್ನೆ ಸಂತೆಯಿಂದ ತಂದ ಸೀರೆ ಕುಪ್ಪಸ ಮೊದಲಾದವುಗಳನ್ನೆಲ್ಲ ತೋರಿಸಿದಳು. ಹೂವಣ್ಣ ಎಲ್ಲವನ್ನೂ ನೋಡಿದ. ತನಗೆ ತಿಳಿದಂತೆ ಆ ಅರಿವೆಗಳ ಬೆಲೆ ಮಾಡಿದ. ರತ್ನವ್ವ ಅರಿವೆಗಳನ್ನು ತೋರಿಸುತ್ತ....ನಡುವೆ ಒಮ್ಮೊಮ್ಮೆ ಒಳಗೆ ಹೋಗುತ್ತ.... ಚಹಾ ತಯಾರಿಸಿ ತಂದುಕೊಟ್ಟಳು. ಹೂವಣ್ಣ ಚಹ ಕುಡಿಯುತ್ತಾ "ಸುಂದರಾನ....s ಪೋರೀಗೂಡಾ ಬಂದಿರ....ನಾವs ಉಡಸಿದ ಸೀರೀನ ಉಟಗೊಂಡು ಹೋಗತಿದ್ದಳಲ್ಲ....ಖರ್ಚಿನ್ಯಾಗ ಖರ್ಚ ಈಗ್ಯಾಕ ಮತ್ತ ಸೀರಿ ತರತಿದ್ದರಿ....?" ಎಂದ.

"ನಾನೂ ಅದs ಅನತಿನ್ನ; ಆದರ ಇವರs ಕೇಳಲಿಲ್ಲ...." ತಾರಕ್ಕನ ಜೊತೆಯಲ್ಲಿ ಐದು ದಿನ ಹೋಗಿ, ಆದೊಂದು ಸೀರೆಯನ್ನು ಒಯ್ಯಬೇಕೆಂಬ ವಿಚಾರ ಸರಣಿಯಲ್ಲಿ, ಸುಂದರವ್ವನ ಬಾಯಿಂದ ಮಾತು ಹೊರಟಿತು.

"ಹಾಂಗs ಯಾನರ ಮಾಡಕ ಬಂದೋತ ಅಂತ....ನಾವೂ ತಂದಿರ ಲಿಲ್ಲ....ಆಕೀಗ ಸೀರಿ....ಆದರ ಹೋಗಾಕೇ ಅಂತ....ಹೊರಟ ನಿಂತಳು.... ಮೊನ್ನಿ...."

ನಡುವೆಯೇ ಮಾತು ಸೇರಿಸಿ "ಈಗsರ ಯಾನ ಆಯ್ತು....ಇದ ಸೀರಿ ತಿರುಗಿ ಕೊಡೋಕ ಬಂದೋತ....ಈಗ್ಯಾನ ಗಳಿಗೀ ಮುರದಿಲ್ಲಾ ಯಾನ.... ಇಲ್ಲಾ...." ಸುಂದರಾಬಾಯಿ ಅಂದಳು, "ತಿರುಗಿ ಇನ್ನ್ಯಾನ ಕೊಡುತಾರು?" ಎನ್ನುವ ಮನಸ್ಸನ್ನು ಒತ್ತಿಟ್ಟು.

ಈ ಮಾತಿನ ಹೊಲಬನ್ನರಿತೋ ಏನೋ—ರತ್ನಾಬಾಯಿ "ಯಾನ ಒಲ್ಲಿ; ಕಾರಣ್ಯಾನ ವ್ಯಾಲಿಂದ ಪ್ಯಾಲ ಆಗೂದುಲ್ಲ. ನಿನ್ನ ಹೆಸರಲೆ ತಂದ ಸೀರಿ ನೀ ಉಟಗೊಂಡ ಹೋಗ....ಅವರ ಎಂಥಾದ ಯಾಕ ಉಡಸವಾರು....ಅದ ನಮ್ಮ ಮನ್ಯಾಗ ಇರಲಿ" ಎಂದಳು.

ನಾಲ್ಕು ದಿನ ನಿಂತು ಎರಡು ಸೀರಿ ಒಯ್ಯಬೇಕೆಂದು ಯೋಚಿಸುತ್ತಿದ್ದ ಸುಂದರಾಬಾಯಿಯ ವಿಚಾರ ಈ ಮಾತಿನಿಂದ ತಲೆಕೆಳಗಾಯಿತು. ಆದುದ ರಿಂದ "ನಾವ ನಾಳೀ ಹೋಗತೇವ....ನೀವ ಯಾನ ಯಾಕ ಮಾಡಕೋ ವಾರಿ....?" ಎಂದಳು ಸುಂದರಾ.

ಅಲ್ಲೇ ಇದ್ದ ಅನಂತ ಮೊದಮೊದಲು ಮತ್ತೆ ನಾಲ್ಕು ದಿನ ಇಲ್ಲಿ ನಿಲ್ಲ ಬೇಕಾಗುವದೇನೋ ಎಂದು ಚಿಂತಿಸುತ್ತಿದ್ದ. ಆದರೆ ತನ್ನ ತಾಯಿಯ ಮಾತಿ ನಿಂದ ಹಾಗೇನಾಗುವದಿಲ್ಲವೆಂದು ತಿಳಿದುಕೊಂಡು ಆನಂದದಿಂದ ಕುಣಿದಾಡಿದ. ಸ್ವಲ್ಪ ಹೊತ್ತಿನಲ್ಲಿ ಚಹ ಕುಡಿದು ಹೂವಣ್ಣ ಹೋದ.

ಅನಂತರ ರತ್ನಪ್ಪ ತಾರಕ್ಕನನ್ನು ಕರೆದು ಚನ್ನಾಗಿ ಸಿಟ್ಟು ಮಾಡಿದಳು. ಮಾವ ಮನೆಗೆ ಬಂದರೆ ಚಟ್ಟನೆ ಎದ್ದು ಹಾಸಿಕೊಡಲಿಲ್ಲ; ಹಾಗೇ ಆಡುತ್ತ ಕುಳಿತಳು....ನಾಳೆ ಅತ್ತೆಯ ಮನೆಯಲ್ಲಿ ಹೇಗೆ ಇರುವಳೋ....? ಇವೇ ಸಂಗತಿ ಗಳು ಅವಳ ಸಿಟ್ಟಿಗೆ ಕಾರಣವಾಗಿದ್ದವು. ಆದರಿಂದ ತಾರಕ್ಕನ ಮನಸ್ಸು ಉದಾಸೀನವಾಯಿತು. ಮನೆಯ ಮೂಲೆಯಲ್ಲಿ ಒತ್ತಟ್ಟಿಗೆ ಹೋಗಿ ಸುಮ್ಮನೆ ಕುಳಿತಳು. ಅವಳ ಮನಸ್ಸಿನಲ್ಲಿ 'ಅತ್ತೀ ಮನ್ಯಾಗ ಹ್ಯಾಂಗ ಇರೋದಾ.... ತಿಂಗಳಾಯ್ತು, ....ನನಗ ಹೇಳ್ತಾರು....ಇನ್ನ ತೀರಿವಾತು, ಅಲ್ಲಿ ಹುಚ್ಚರಂಗ ಮಾಡತ್ಯಾನ ಯಾನ ಯಾರಿಗೆ ಗೊತ್ತ....' ಎಂದು ಚಿಂತಿಸಿದಳು. ಕೆಲ ಹೊತ್ತಿನ ಮೇಲೆ ಅದೇ ಚಿಂತೆಯಿಂದ ಭಾರವಾದ ಮನಸ್ಸಿನಿಂದ ಎದ್ದು, ಮೆಲ್ಲನೆ ಒಳಗೆ ಸುಂದರಾಬಾಯಿಯ ಹತ್ತರ ಹೋಗಿ, "ನಾಳಿ ನಿಮ್ಮನ್ನೆಲ್ಲಾ....ಬಿಟ್ಟ ....ಅಲ್ಲಿ ಒಬ್ಬಾಕೇ ಹ್ಯಾಂಗ ಇರೋದ್ವ ತಾಯಿ?" ಎಂದು ತಾನೇ ಕೇಳಿ ದಳು.

"ಇದೆಲ್ಲಾ....ವ್ಯಾಲಿನ ಮಾತ್ವ....ಒಮ್ಮೆ ಎರಡಸಾರೆ ಹೋಗಿ ಬರಾನಾ, ಎಲ್ಲೀ, ಅವ್ವ ಇಲ್ಲಾ! ಅಪ್ಪ ಇಲ್ಲಾ! ಗಂಡನೊಳಗ್ವ ಬೆರಗಾಗಿ ಇರತೀರಿ....

ಮನದಾಗ ನಾಳಿ ಬೆಳಗ ಯಾವಾಗ ಆದೋತಂತ ಹಾದೀ ನೋಡತಿದ್ವಾದಿ....?" ಎಂದು ಗೋಣು ಹಾಕಿ ನುಡಿದಳು, ಸುಂದರವ್ವ. ಮುಖದಲ್ಲಿ ಮುಗುಳುನಗೆ ಮೂಡಿತ್ತು...., ಸಹಜ ಪರಿಹಾಸವನ್ನು ಬೀರುತ್ತ.

ಸೋದರತ್ತೆಯ ಮಾತಿನ ಭಾವವನ್ನರಿಯದೆಯೇ "ಅವ್ವಾನ ಬಿಟ್ಟ ಒಂದ ದಿನಾ ಎಲ್ಲಿ ನಿತ್ತಿಲ್ಲ....ನಾನs...." ಎಂದಳು ತಾರಕ್ಕ.

"ಅದಕ್ಯಾನ ? ಇದ್ದೂರ ಐತಿ....ದಿನಾ ಬೆಳಗಾದರ ಅವ್ವನ ಮಾರಿ ನೋಡತಿ ನೀ, ಎಲ್ಲಿ ಆದರ ಪರವೂರಿಗಿ ಕೊಟ್ಟಿದ್ದರ....ಯಾನ ಮಾಡಿ....? ಒಮ್ಮೆ ಹೋದರ ಆರಾರ ತಿಂಗಳ ಅತ್ತs....ಸುಮಿಾ ನೋಡಲಿಲ್ಲ....? ಮೊನ್ನಿ ಹೋದಳು....ಇನ್ನ ಹಚಕೊಟ್ಟರ ಪಂಚಮಿಗಿ ಬರಬೇಕೂ....ಇಲ್ಲಾದರ ದೀಪಾವಳಿಗೆ ಹಬ್ಬತನಕ ಹೋದಳ ನೋಡು....ಎಲ್ಲೀ ತವರಮನೀ ಇಲ್ಲಾ ಬಿವರ ಮನೀ ಇಲ್ಲಾ" ಎಂದು ದನಿ ಸರಿಪಡಿಸಿಕೊಂಡು ಸುಂದರವ್ವ ನುಡಿದಳು.

"ಹೋಂದ; ಸುಮೀ ಘಟ್ಟಿ ತಾಯಿ ! ನಂದ ಇದ್ದೂರ ಐತಿರs ಹೀಂಗ ?"

"ಹೂ ! ಇದ್ದೂರ ಐತಿ ಅಂತ....ಮ್ಯಾಲಿಂದ ಮ್ಯಾಲ ಮನೀಗ ಬರ ಬಾರದ ಳ್ಣ ? ಅಲ್ಲೀದ ಇಲ್ಲಿ ಹೇಳಬಾರದು, ಇಲ್ಲೀದ ಅಲ್ಲಿ ಹೇಳಬಾರದು. ಅತ್ತೀ ಮನೀ ಐತೆವ್ವಾ ! ಊರಾಗ ಜಗಳಾ ಹಚ್ಚಿ ಇಟ್ಟ, ಒಬ್ಬರಿಗೊಬ್ಬರಿಗಿ ? ಕೂಡ, ನಿಂಗೆಲ್ಲ ಹೇಳತ್ಯಾನ...." ತಾರಕ್ಕ ಕುಳಿತುಕೊಳ್ಳಲಿಲ್ಲ. ಅತ್ತೆಯ ಮನೆಯೆಂದರೆ ಅವಳಿಗೆ ಒಂದು ಒಡೆಯದ ಒಗಟೆನಿಸಿತು. ಯೋಚಿಸುತ್ತ ಹಾಗೇ ನಿಂತಳು. ಸುಂದರವ್ವ ಮುಂದೆ ಹೇಳಲು ಆರಂಭಿಸಿದಳು. "ಈಗ್ಯಾನ ನೀ ಸಣ್ಣಾಕಿ ಅಲ್ಲ. ಹರಿವತ್ತ ನಿನ್ನಾ ಎಬ್ಬಿಸಬೇಕ. ಹಿಂಗ್ಯಾನ ಇಲ್ಲ. ಅತ್ತಿ ಎಬ್ಬಿಸುಕಿಂತ ಮೊದಲ ಎದ್ದ ಬೀಸಕ್ಕ ಹಾಕಬೇಕ. ಅತ್ತಿ ಬೀಸಕ ಹಾಕಿದ್ರ, ಆಕಿ ಬ್ಯಾಡ ಬ್ಯಾಡ ಅಂದರೂ ಬೀಸಕ್ಕ ಹಿಡೀಬೇಕ....ಕೆಲಸ ಇಲ್ಲದ ಕೂಡ ಬಾರದ....ಇಲ್ಲಿ ನಿಮ್ಮವ್ವ ಯಾನ ಬ್ಯಾಡ ಅನ್ನಾನಾ....ಹ್ಯಾಂಗ ಗಪ್ ಕೂಡತಿ ಹಾಂಗ ಕೂಡಬಾರದ. ಇಲ್ಲೀ ಹಂಗ ನಿನ್ನ ಕೈಲೆ ತಗೊಂಡ ತಿನಬಾರದ.... ಅತ್ತಿ ಎತ್ತಿ ಕೊಟ್ಟದ ಅಷ್ಟs ತಿನ್ನಬೇಕ ?...." ಎಂದು ಹಲವು ಮಾತುಗಳನ್ನು ಹೇಳಿ ಸುಮ್ಮನಾದಳು.

ಅದೊಂದು ದಿನ ತಾರಕ್ಕ ನಿರುತ್ಸಾಹದಿಂದಲೇ ಕಳೆದಳು. ಆ ಹೊತ್ತು ಮಧ್ಯಾಹ್ನದಲ್ಲಿ ಅನಂತನ ಕೂಡ ಆಡಲೂ ಕೂಡ ಹೋಗಲಿಲ್ಲ. ಸಂಜೆಯವರೆಗೆ ಜೋಳ ಹಸನುಮಾಡುವುದು, ಮನೆಯ ಕಸ ಹೊಡೆಯುವುದು, ಹಿತ್ತಲಿನಿಂದ ಉರವಲು ತರುವದು, ಇತ್ಯಾದಿ ಮನೆಗೆಲಸದಲ್ಲಿಯೇ ತೊಡಗಿದಳು. ಅನಂತ ನಡುನಡುವೆ ಬಂದು ಅವಳನ್ನು ಆಡಲು ಕರೆಯುತ್ತಿದ್ದ. ಅವಳ ಮನಸ್ಸೂ ಆಡಲು ಹರಿಯುತ್ತಿರಬೇಕು, ಆಡಲಿಕ್ಕೆ ಮಾತ್ರ ಅವಳು ಹೋಗಲಿಲ್ಲ. ಅನಂತನ ತಾಯಿಯೂ ಅವನಿಗೆ—

"ನಾಳಿ ಊರಿಗೆ ಹೋಗೋದಾ, ನಿನ್ನ ಪುಸ್ತಕ ಓದೋಗ....ಹೋಗ " ಎಂದು ಹೇಳಿದಳು. ಈ ಮಾತನ್ನು ಕೇಳಿ ಅನಂತನಿಗೆ ಹಿಡಿಸಲಾರದಷ್ಟು ಹಿಗ್ಗು. ಆ ಹಿಗ್ಗಿನ ಬುಗ್ಗೆಯಲ್ಲಿ ಪುಟನೆಗೆಯುತ್ತ ತನ್ನ ಆಟದ ಹಂಬಲವನ್ನೇ ಬಿಟ್ಟ. ಅದರಂತೆ ಓದುವದನ್ನೂ ಮರೆತ. ಆ ದಿನ ಸಂಜೆಗೆ ಮಾತ್ರ ಅನಂತ ನೊಡನೆ ತಾರಕ್ಕ ಬಹಳ ಹೊತ್ತಿನವರೆಗೆ ಮಾತನಾಡಿದಳು. ಅನಂತ ಎಲ್ಲದಕ್ಕೂ 'ಹೂಂ ! ಹೂಂ !' ಅಂದ. ಕೊನೆಗೆ ತಾರಕ್ಕ ಕೇಳಿದಳು,

"ಅಂತಾ, ನಾಳಿ ಊರಿಗಿ ಹೋಗತಿ, ಮತ್ಯಾವಾಗ ಬರತಿ....?"

"ಯಾತಕ ?"

"ಮತ್ತ ಯಾವಾಗರ ಬಾರಲ್ಲ" ಎಂದಳೇ ವಿನಹ ತಾರಕ್ಕ ಕಾರಣವನ್ನು ಹೇಳಲು ಸಮರ್ಥಳಾಗಲಿಲ್ಲ.

"ಸೂಟಿ ಇದ್ದಾಗ ಅಪ್ಪಾನ ಕೇಳಿ ಬರತ್ಯಾನ ಆದರ ಭಾಳ ದಿನಾ.... ಇರಾಂವ....ಇಲ್ಲ !" ಸ್ವಲ್ಪ ತಡೆದು ನುಡಿದ ಅನಂತ.

"ನಾಲ್ಕು ದಿನಾ ನಿಂತ ಹೋಗು ಆಯ್ತಲ್ಲ ?" ಎಂದು ಅನಂತನ ಕೈ ಹಿಡಿದು ತಾರಕ್ಕ ಹೇಳಿದಳು. ಕಂಠದಲ್ಲಿ ಕಾರುಣ್ಯವಿತ್ತು.

ಮರುದಿನ ಮುಂಜಾನೆ ಹೂವಣ್ಣ ಕರೆಯಲು ಬಂದ. ತಾರಕ್ಕ ಗಂಡನ ಮನೆಗೆ ಹೊರಡು ಸಿದ್ಧಳಾಗಬೇಕಾಯಿತು. ಓಣಿಯೊಳಗಿನ ಹೆಂಗಸರೆಲ್ಲ ಕಳಿಸಿಕೊಡಲು ಕೂಡಿದರು. ತಾರಕ್ಕ ಹೊಸ ಸೀರೆ ಉಟ್ಟಳು. ಐದು ಮನೆ ಗಳಿಗೆ ಹೋಗಿ ಮುತ್ತೈದೆಯರಿಂದ ಉಡಿಯಕ್ಕಿ, ಫಲ ಹಾಕಿಸಿಕೊಂಡು ಬಂದಳು. ಸುಂದರಾಬಾಯಿ ಒಳಮನೆಗೆ ಕರೆದು ಸ್ವಲ್ಪ ತಿನ್ನಲು ಕೊಟ್ಟಳು.

ತಾರಕ್ಕನಿಗೆ ತುತ್ತು ನುಂಗದಾಯಿತು. ಹಾಗೆಯೇ ಒಂದೆರಡು ತುತ್ತು ತಿಂದು ಹೊರಗೆ ಬಂದಳು. ಅನಂತರ ತಾಯಿ ಹೇಳಿದ ಪ್ರಕಾರ ಜಗುಲಿಗೆ ಹೋಗಿ ದೇವರಿಗೆ ವಂದಿಸಿ ಬಂದಳು. ಆಮೇಲೆ ತಂದೆತಾಯಿಗಳಿಗೂ ಉಳಿದ ಹಿರಿಯರಿಗೂ ನಮಸ್ಕಾರ ಮಾಡಿದಳು. ನೆರೆದ ಜನರಲ್ಲಿ ತಾರಕ್ಕನ ಗುಣವರ್ಣನವು ಗುಜುಗುಜು ಎಂದು ನಡೆಯಿತು. ತಾರಕ್ಕನ ಮುಖ ಕೆಂಪಾಗಿದ್ದಿತು. ಕಣ್ಣಲ್ಲಿ ತುಳು ತುಳು ನೀರು ತುಂಬಿದ್ದವು. ಜಡವಾದ ಹೆಜ್ಜೆಗಳನ್ನು ಇಡುತ್ತ ಓಣಿಗೆ ಬಂದಳು. ಹೆಂಗುಸರೆಲ್ಲ ಹಿಂಡಾಗಿ ಅವಳ ಹಿಂದೆ ಬಂದರು. ಮುಂದೆ ಮಾವ ನಡೆದಿದ್ದ. ಐದು ಜನ ಸುಮಂಗಲಿಯರು ಬಾಳೆಯ ಹಣ್ಣಿನ ದುರುಡಿಗಳನ್ನು ತಕ್ಕೊಂಡು ನಡೆದರು. ದಾರಿಗೆ ಬಂದು ನಾಲ್ಕೆಂಟು ಹೆಜ್ಜೆ ಮುಂದೆ ನಡೆದೊಡನೆ ಸುಂದರಾಬಾಯಿ— "ತಾರಾ, ನೀರ ತಗೋ....ಬಾಯಿ ಮುಕ್ಕಳಿಸು...." ಎಂದಳು. ತಾರಕ್ಕ ಸೋದರತ್ತೆಯ ಕೈಯೊಳಗಿನ ತಂಬಿಗೆಯನ್ನು ತಕ್ಕೊಂಡು ಬಾಯಿ ತೊಳೆದುಕೊಂಡಳು.

"ಇದ್ದೂರ ಐತಿ....ಬೆಳಗಾದರ ..ಅವ್ವ ಅಪ್ಪನ ಮಾರಿ ನೋಡತಿ.... ಯಾನ ಕಣ್ಣಾಗ ನೀರ ತರಬ್ಯಾಡ...." ಎಂದು ಹೆಂಗಸರ ಗುಂಪಿನೊಳಗಿಂದ ಯಾರೋ ಹೇಳಿದರು.

ರತ್ನವ್ವನ ಕಣ್ಣೊಳಗೂ ನೀರು ಬಂದವು. ಕೂಡಿದ ಹೆಣ್ಣುಮಕ್ಕಳ ಕಣ್ಣಲ್ಲೂ ನೀರೂರಿದವು. ಮಲ್ಲ ಉಟ್ಟ ಧೋತರ ಸೆರಗಿನ ತುದಿಯಿಂದ ಕಣ್ಣು ಒರಿಸಿಕೊಂಡ. ಇಲ್ಲಿಯವರೆಗೆ ತಾರಕ್ಕನ ಕಣ್ಣಲ್ಲಿ ತಡೆದು ನಿಂತ ನೀರು ಧಾರೆಯಾಗಿ ಹರಿಯುತ್ತಿದ್ದವು. ಈಗ ಸೋದರತ್ತೆಯನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಇದನ್ನು ಕಂಡು ಅನಂತನೂ ಅಳದೇ ಇರಲಿಲ್ಲ. ಹೂವಣ್ಣ ಹಿಂದಿರುಗಿ "ಅಲ್ಲಾ್ಯನ ನಿನ್ನ ಸೂಲಕ ಏರಸೋದಕ ಒಯ್ಯುದಲ್ಲ ಬಾ . " ಎಂದ, ಬಿರುದನಿಯಿಂದ.

"ನಗತ ನಗತ ಹೋಗಬೇಕವ್ವ ಗಂಡನ ಮನೀಗಿ ..ಪುರಾಣದಾಗ ಕೇಳಿಲ್ಲಾ ? ಗಂಡನ ಬೆನ್ನಹತ್ತಿ ಸೀತಾ ಹ್ಯಾಂಗ ಅಡವಿಗೆ ಹೋದಳು...." ಎಂದಳು, ದೂರದಲ್ಲಿ ಹಿಂದಕ್ಕೆ ನಿಂತ ವಿಧವೆ ಚಾಂಗಲವ್ವ.

ತಾರಕ್ಕ ಮುಂದೆ ನಡೆದಳು. ಹೆಂಗಸರೂ ನಾಲ್ಕು ಹೆಜ್ಜೆ ಹಿಂಬಾಲಿಸಿದರು. ತಾರಕ್ಕ ತಿರುಗಿ ಕೈಮಾಡಿ ಎಲ್ಲರಿಗೂ ನಿಲ್ಲಲು ಹೇಳಿದಳು, ಹರಕು ಮುರುಕು ಮಾತುಗಳಿಂದ. ಒಬ್ಬೊಬ್ಬರೇ ಹೆಂಗಸರು ನಿಲ್ಲಹತ್ತಿದರು. ಹೂವಣ್ಣ ಧಡಿಯ ದೋತರ ಹೊತ್ತುಕೊಂಡು ಹತ್ತೆಂಟು ಹೆಜ್ಜೆ ಮುಂದೆ ಹೋಗಿದ್ದ. ಹಣ್ಣುಗಳನ್ನು ಹೊತ್ತುಕೊಂಡ ಹೆಂಗಸರೂ ಮುಂದಾಗಿದ್ದರು. ತಾರಕ್ಕ ಹತ್ತೆಂಟು ಹೆಜ್ಜೆ ಹೋಗಿ, ಹೊರಳಿ "ಅನಂತಾ, ಬಾ ಅಲ್ಲ; ಮತ್ತ ತಿರಗಿ ಬರಾಕೆ ಅಂತ....?" ಎಂದು ಕರೆದಳು.

ಅನಂತ ಅನುಮಾನಿಸಿದ. ಹಾಗೇ ನಿಂತ. ಅವನ ತಾಯಿ ಹೇಳಿದಳು.

"ಅಕ್ಕನ ಗೂಡಾ ಹೋಗಲ್ಲ....?" ಎಂದು.

ಅನಂತ ಓಡುತ್ತಾ ಹೋಗಿ ತಾರಕ್ಕನನ್ನು ಕೂಡಿದ. ಸ್ವಲ್ಪ ಹೊತ್ತು ಅತ್ತಿಗೆ ನಾದಿನಿಯರಿಬ್ಬರೂ ತಾರಕ್ಕ ಹೋಗುವತ್ತ ನೋಡುತ್ತ ನಿಂತರು. ತಾರಕ್ಕನೂ ಮರೆಯಾಗುವಷ್ಟರಲ್ಲಿ ಹತ್ತು ಸಲ ಹಿಂದಿರುಗಿ ನೋಡಿರಬೇಕು. ಅವಳು ಮರೆಗಾದೊಡನೆ ನಿಟ್ಟುಸುರು ಬಿಟ್ಟು ಇವರೂ ಮನೆಯತ್ತ ಹೊರಳಿದರು.

"ಹುಟ್ಟಾ ಮನಿ ಬಿಟ್ಟು ಹೋಗಿ ಗೊತ್ತಿಲ್ಲ....ಆಕಿಗಿ...." ರತ್ನವ್ವ ಕಣ್ಣೀರು ಒರಿಸಿಕೊಂಡು ನುಡಿದಳು.

"ಯಾನ ಬಿಡ ತಾಯಿ! ಆದ್ಯಾನ ಹೊರಗಿನ ಮನೀ....ಐತಿ....?" ಎಂದಳು ಒಬ್ಬಾಕಿ.

"ಪೋರಿ ಭಾಳ ಮಾಯಾಳುನ್ಸ, ಅಂತೂನ ಮಾಲ್ಯ ಎಷ್ಟ ಸಾಗರ ಬೀಳತಾಳ ನೋಡಲಾ....? ಹಿಂದ ನಿಂತ ಮತ್ತ ಕರಕೊಂಡ ಹೋದಳು...." ಸುಂದರಾಬಾಯಿ ತನ್ನ ನಾಲ್ಕು ದಿನದ ಸಹವಾಸದ ಫಲವನ್ನು ಅರುಹಿದಳು.

"ಎಲ್ಲಿ ಹೋದರೂ ಪೋರಿ, ಮುಂದಿನ ಯಾನ ನೂಸಾಕಿ ಅಲ್ಲs.... ಹಳೀ ಹುಣ್ಣಿಗಿ ಕಟ್ಟಿರ ಮಾಯಿಬೇಕ....ಅಂಥಾಕಿ ನೋಡವ್ವ....ಎಲ್ಲಾರಿಗೂ ಹಚಕೊಂಡ ಹೊಂದಕೊಂಡ ಇರಾಕಿ...."

"ಹೊಂದಸಕೋಳವರs ಬೇಕಲ್ಲ....? ಆಕೆಲ್ಲ ಭಂಗಾರ ಇದಾಳ...."

"ಬಿಡ ತಾಯಿ! ಯಾರಿಗಿ ಯಾನ ಬ್ಯಾಡ ಆಗೇತಿ ಯಾನ....ತನ್ನs

ಸೊಸೀ ತನ್ನ್ಕ ಮಗಾ....ಜರಾ ಹರಕ ಇದಳಾಯ್ತು....ನಾಳಿ ಬಸ್ತಿಗಿ ಬರಲಿ, ನಾ ಹೇಳತ್ಯಾನ ಆಕಿಗಿ....ಇನ್ನ ಮಗಾ ಸೊಸೀ ಮಾಡವರ ಬಂದರು....ನೀ ಪೂಜಿ ಪುನಸ್ಕಾರ ಮಾಡಕೋತ........ಇರತ ಬಾ ಅಂತ...." ಎಂದು ಅಭಯ ದಾನವನ್ನು ಕೊಟ್ಟಳು, ಚಾಂಗಲವ್ವ ಮುದುಕಿ.

ಎಲ್ಲರೂ ತಮ್ಮ್ಮ ತಮ್ಮ ಮನೆಗೆ ತೆರಳಿದರು. ಒಂದು ತಾಸಿನಲ್ಲಿಯೇ ಅನಂತ ಓಡಿ ಮನೆಗೆ ಬಂದ. "ಯಾಕೋ ಅನಂತಾ, ಲಗೂ ಬಂದಿ?" ಎಂದು ಅನಂತನನ್ನು ಸುಂದರಾಬಾಯಿ ಕೇಳಿದಳು. ಮತ್ತು ತನ್ನಲ್ಲಿಯೇ "ಹುಡುಗಗ ಮಂದಿ ಮನೀ ಅಂದರ ಒಂದ ಘಳಿಗಿ ಆಗೂದಲ್ಲ....ನೋಡು...." ಎಂದು ಪುಟಪುಟಿಸಿದಳು.

"ಅಕ್ಕಾ ಒಳಗ ಹೋಗಿ ಕೂತಳು...! ಅಲ್ಲ್ಯಾಕ ನಾ ಇರೋದ....?"

"ಭರಮಣ್ಣ ಇಲ್ಲ ಆಗಿದ್ದ ಯಾನೊ ?"

"ಇದ್ದಲ್ಲ ; ಜೋಳದ ಚೀಲ ಮ್ಯಾಲ ಕೂತಿದ್ದ ! ಯಾನ ಮಾತಾಡಸ ಲಿಲ್ಲ, ಬಿಡಲಿ....!" ಎಂದು ಕೈಮಾಡಿ ಗೋಣುಹಾಕುತ್ತ ಅನಂತ ನುಡಿದ.

"ಯಾನ ಬೆರಕಿ ಇದಾನ ತಾಯಿ ಇವ !"

ಅನಂತನ ದನಿ ಕೇಳಿ ಒಳಗಿನಿಂದ ರತ್ನವ್ವ ಬಂದು "ನಿವಾಳಿ ತಗೊಂಡ ಯಾರ ಬಂದಿದ್ದರೋ ಅನಂತ....?" ಎಂದು ಆತುರದಿಂದ ಕೇಳಿದಳು.

"ಚಿಮ್ಮವ್ವತ್ತೀನ ಬಂದಿದ್ದಳಲ್ಲ........!" ಎಂದು ಅಂಗಳಕ್ಕೆ ಓಡಿದ, ಮಲ್ಲ ಇದೀಗ ಬಿಸಲಿಗೆ ಬಿಟ್ಟ ಕಾಗರವನ್ನು ಹಿಡಿಯಲೆಂದು.

ಅದೇ ದಿನ ಇಳಿಹೊತ್ತಿನಲ್ಲಿ ಸುಂದರವ್ವನನ್ನು ಕಳಿಸಿಕೊಡಲೆಂದು ಮಲ್ಲ ಕರೆಯಲು ಹೋಗಲು, ತಾರಕ್ಕ ಅತ್ತೆಯನ್ನು ಕೇಳಿ ತವರುಮನೆಗೆ ಬಂದಳು. ಅವಳು ಬರುವಷ್ಟರಲ್ಲಿ ಬಾಗಿಲಲ್ಲಿ ಗಾಡಿ ಸಿದ್ಧವಾಗಿ ನಿಂತಿತ್ತು. ಅನಂತ ಊರಿಗೆ ಹೋಗುವ ಉಬ್ಬಿಸಿಂದ ಗಾಡಿಯಲ್ಲಿ ಕುಳಿತಿದ್ದ. ಸುಂದರವ್ವ ಇನ್ನೂ ಒಳಗೆ ಇದ್ದಳು. ತಾರಕ್ಕ "ಅಂತೂ, ಬಾ...." ಎಂದು ಕರೆದು ಮನೆಯಲ್ಲಿ ಹೋದಳು.

ತಾರಕ್ಕ ಬಂದೊಡನೆ ಸುಂದರಾಬಾಯಿ "ಯಾನಾದರೂ....ಜರಾ ತಿನ್ನ ಬಾ...." ಎಂದು ಒಳಮನೆಗೆ ಕರೆದೊಯ್ದು, ಊರಿಗೆ ಒಯ್ಯಲೆಂದು ಸಿದ್ಧ

ಪಡಿಸಿದ ದಶಮಿ ಉಂಡಿಗಳನ್ನು ತಿನ್ನಲು ಕೊಟ್ಟಳು. ತಾರಕ್ಕ ತಿನ್ನುವ ಮೊದಲು ಅನಂತನನ್ನು ಮತ್ತೊಮ್ಮೆ ನೆನಿಸಿದಳು.

"ಅಂವ್ಯಾನ ಇಷ್ಟೊತನಕಾ ತಿಂಯ್ದಾನ, ನೀ ತಿನ್ನ........" ಎಂದು ಸುಂದರವ್ವ ಹೇಳಲು, ಅವಸರದಿಂದ ತಿಂದು ಎದ್ದಳು. ಊರಿಗೆ ಮುಟ್ಟಲು ಕತ್ತಲಾಗುವುದೆಂದು ಹೊರಗೆ ಮಲ್ಲನ ತಗಾದಿ ಹೆಚ್ಚಾಗಿದ್ದಿತು. ಆದುದರಿಂದ ಗಡಿಬಿಡಿಯೊಳಗೆ ನಾಲ್ಕಾರು ಜನರಿಗೆ ಹೇಳಿ ಬಂದು, ಗಾಡಿಯನ್ನು ಹತ್ತಿದಳು ಸುಂದರಾಬಾಯಿ. ಗಾಡಿ ಹೊರಡುವುದರಲ್ಲಿತ್ತು. ತಾರಕ್ಕ ಹೇಳಿದಳು, ತನ್ನ ಮನದ ಹಂಬಲವನ್ನು ಹೊರಗೆಡಹಿ ಹೃದಯವನ್ನು ಹಗುರಾಗಿಸುವುದಕ್ಕೆ:

"ಹರಿವತ್ತ ಉಂಡ ಹೋಗ ಅಂದರ ಹಾಂಗs ಓಡಿ ಬಂದ ಅನಂತ!" ಎಂದು.

ಸುಂದರಾ ಹಾಯಾಗಿ ಕೂಡುತ್ತ "ಅಂಯ್ದ ಯಾನ ಉಣತ್ಯಾನಂತ ಕೂಡಬೇಕ ಯಾನ ನಿಮ್ಮ ಅತ್ತಿ ಮುಂದ....?" ಎಂದು ರತ್ನವ್ವನ ಕಡೆಗೆ ನೋಡುತ್ತ ಕೇಳಿದಳು. ಮುಖದಲ್ಲಿ ನಗೆಯೊಂದು ಮೂಡಿ ಮಾಯ ವಾಯಿತು. ಆದರಿಂದ 'ತಾರಕ್ಕನಿಗಾದರೂ ತಿಳಿಯಬಾರದೇನು ?' ಎಂಬ ಅವಳ ಭಾವ ಪ್ರಕಟವಾಗುವಂತಿತ್ತು.

"ಎಷ್ಟ ಆದರ ಅತ್ತಿಮನಿ ಸೊಸೀ ಈಕಿ....ಇಕಿಗಿ ಹ್ಯಾಂಗ ಕರದ ಉಣ ಸಕ ಬರತೇತಿ....ನೋಡು....? ನಾವ ಇಕೀಗ ಅಂದರs....ಚಿಮ್ಮವ್ವನs ಕೈ ಹಿಡದ ಓದ ಉಣಸಬೇಕ ತಾಯಿ!"

"ಇಕೀದ ಯಾನ? ಇನ ಒಳಗೊಂದ ಕಾಲ ಹೊರಗೊಂದ ಕಾಲ.... ಆಕೇದ ಹೇಳತ್ಯಾನ ನಾ........ಎಷ್ಟ ಧವಳಕ್ಕಿ ಆದರ ಯಾನಾಯ್ತು....ರೀತಿ ರಿವಾಜಾ ಬ್ಯಾಡಾ........?" ಎಂದು ಸ್ವಲ್ಪ ಸುಧಾರಿಸಿಕೊಂಡು ನುಡಿದಳು. ಆದರೂ ತುಂಬ ಬಿಂಕದ ಮಾತುಗಳಿದ್ದವವು.

ಈ ಮಾತುಗಳಿಂದ ತಾರಕ್ಕನ ಮನಸ್ಸು ಕಲಕಿ ಹೋಯಿತು. ಆದರಲ್ಲಿ ಒಂದು ತೀಕ್ಷ್ಣವಾದ ನೋವಿನ ಸುಳಿಯುಂಟಾಯಿತು. ಆ ನೋವು ಯಾಕೆ? ಏನು? ಹೇಗೆ? ಅದೂ ಅವಳಿಗೆ ಗೊತ್ತಾಗಲಿಲ್ಲ. ಅವಳು ಎರಡನೆಯ ಕಡೆಗೆ ಮನಸ್ಸು ಹರಿಯಿಸಿ, ಅದನ್ನು ಮರೆಯಲು ಯತ್ನಿಸುತ್ತಾಳೆ. ಮತ್ತೆ

ಅದೇ ಸುಳಿಯ ಸೆಳೆತ! ಆ ತಿರುಗಣಿಯಲ್ಲಿ ಸುತ್ತುತ್ತಲೇ ಅವಳು ಅತ್ತೆಯ ಮನೆಯನ್ನು ಸೇರಿದಳು.

೫

ಮರುದಿವಸ ಊರೆಲ್ಲ ಬಾಳೆಯ ಹಣ್ಣುಗಳನ್ನು ಬೀರಿದರು; ಸೊಸೆ ಮನೆಗೆ ಬಂದ ಉಬ್ಬಿನಲ್ಲಿ ಚಿಮ್ಮವ್ವ ಸ್ವಲ್ಪ ಹಣ್ಣು ಕಡಿಮೆ ಬೀಳಲು, ತಾನೇ ಹನ್ನೆರಡಾಣೆಯ ಹಣ್ಣುಗಳನ್ನು ಕೊಂಡು, ಊರಲ್ಲಿ ಒಂದು ಮನೆಯೂ ನಿಲ್ಲ ದಂತೆ ಬೀರಿದಳು. ಇದ್ದ ಒಬ್ಬ ಮಗಾ, ನಮ್ಮ ಮನೀಗಿ ಊರದ ಬಾಳಿ ಕಾಯಿ ಬರತಾವು, ಇದ ಯಾನರ ಆಗಲಿ ಇನ್ನs ಮೂರನಾಲ್ಕ ಮಂದಿ ಸೊಸೆದೇರ ಬರಾವರ ಇದಾರು, ಆಗ ಬೀರಿದರ ಬಂದೋತ ಅನ್ನೂ ಹಂಗ ಯಾನ ಐತಿ....? ಅಂದ ಮ್ಯಾಲಿ ಒಬ್ಬರಿಗಿ ಕೊಟ್ಟ ಒಬ್ಬರಿಗೆ ನಾ ಯಾಕ ಬಿಡಲಿ?' ಎಂಬುದೇ ಅವಳ ಮನದ ಆಶಯವಾಗಿತ್ತು. ಅಕ್ಕಾತಾಯಿಯು ಹಿರಿಹಿರಿ ಹಿಗ್ಗಿದಳು. ತನ್ನ ಜೊತೆಗೆ ಆಡಲು ಅಣ್ಣನ ಹೆಂಡತಿ ಬಂದಳೆಂದು. ತಾರಕ್ಕ ಅತ್ತೆಯ ಮನೆಗೆ ಬಂದ ಆ ದಿನ ಇಳಿಹೊತ್ತಿನಲ್ಲಿ ಅವ್ವ ತನಗೆ ಬಾಳೆ ಹಣ್ಣು ಗಳನ್ನು ತಿನ್ನಲು ಕೊಡಲು—

"ತಾರಕ್ಕಗ ಬಾಳಿಕಾಯಿ ಕೊಡುದುಲ್ಲಾ....?" ಎಂದು ಕೇಳಿದಳು.

ಚಿಮ್ಮವ್ವ ಕೈನೆವರಿ "ಕಪ್ಪಾಳಿಗಿ ಹೊಡೆದ್ಯಾನ, ತಾರಕ್ಕ ಅಂತೀ? ಅಕ್ಕ್ಯಾನ ನಿನ್ನ ವಾರಿಗ್ಯಾಕಿ....? ವೈನಿ ಅಂತ ಕರೀತ ಬಾ....ಹಂಗ ಅನಕ ನಿನಗ ನಾಚಿಕಿ ಬರತ್ತಿದ್ದರ ಸರಳ ಅಕ್ಕಾ ಅಂತ ಕರೀಬೇಕ....ಇನ್ನೊಮ್ಮಿ ಹೀಂಗ ಅಂದದ ಕೇಳಿದರ ನಿನ್ನ ನಾಲಿಗಿ ಕಿತ್ಯಾನ ನೋಡ!" ಎಂದು ಸಿಟ್ಟು ಮಾಡಿದಳು.

ಅಕ್ಕಾತಾಯಿ ಸುಮ್ಮನಾದಳು. ಸಪ್ಪಗೆ ಮೋರೆ ಮಾಡಿಕೊಂಡು ಒತ್ತಟ್ಟಿಗೆ ಹೋದಳು. ಚಿಮ್ಮವ್ವ ತಾರಕ್ಕನಿಗೂ ಕರೆದು ಬಾಳೆಯ ಹಣ್ಣು ಗಳನ್ನು ಕೊಟ್ಟಳು. ತಾರಕ್ಕ ಪಡಸಾಲೆಗೆ ಹೋದಳು. ಅವಳ ಬೆನ್ನುಹತ್ತಿ

ಅಕ್ಕಾತಾಯಿಯೂ ಹೊರಟು ಹೋದಳು. ಹೊರಗೆ—ಇಬ್ಬರೂ ಕೂಡಿ ಬಾಳೆಯ ಹಣ್ಣುಗಳನ್ನು ತಿಂದರು. ಆಮೇಲೆ ಅಕ್ಕಾತಾಯಿ ತಾರಕ್ಕನನ್ನು ಕರೆದು ತನ್ನ ಆಟಿಗೆಗಳನ್ನೆಲ್ಲ ತೋರಿಸಿದಳು. ಆಟದ ಉತ್ಸಾಹ ಒಳಗಿನಿಂದ ಉಕ್ಕಿ ಬರುತ್ತಿದ್ದಿತಾದರೂ ಅದನ್ನು ವಿವೇಕದಿಂದ ತಡೆಯುತ್ತಿದ್ದಳು. 'ತಾನಿಲ್ಲಿ ಗಂಡನ ಮನೆಗೆ ಆಡಲು ಬಂದಿಲ್ಲ....' ವೆಂದು ಅವಳ ವಿವೇಕ ಹೇಳುತ್ತಿದ್ದಿತು. ಅವಳ ತಾಯಿ ಸೋದರತ್ತೆಯರ ಉಪದೇಶ ಇಷ್ಟರಲ್ಲಿಯೇ ಅವಳನ್ನು ಪ್ರೌಢೆಯನ್ನಾಗಿ ಮಾಡಿದ್ದಿತು. ಎಲ್ಲ ಆಟಿಗೆ ತೋರಿಸುವದಾದ ಬಳಿಕ ಅಕ್ಕತಾಯಿಯು ತಾರಕ್ಕನ ಮುಖದ ಕಡೆಗೆ ನೋಡುತ್ತ "ನಾಳಿ ನಾ ನೀ ಕೂಡಿ ಆಡೋಣು ?" ಎಂದು ಆತುರ ಬೆರೆತ ಧ್ವನಿಯಲ್ಲಿ ಕೇಳಿದಳು.

ತಾರಕ್ಕ ಏನೂ ಹೇಳದೆ ಸುಮ್ಮನೆ ನಿಂತಿದ್ದಳು. ಉರುವಲನ್ನು ತಕ್ಕೊಂಡು ಒಳಗೆ ಹೊರಟಿದ್ದ ಚಿಮ್ಮಮ್ಮನೇ ಹೇಳಿದಳು. "ಆಡ್ಲಾಕ ನಿನ್ಹಂಗ ಆಕ್ಯಾನ ಸಣ್ಣಾಕಿ....? ಮನ್ಯಾಗ ಅಡಗಿ ಅಂಬಲಿ ಮಾಡ್ಲಾಕ ಬ್ಯಾಡಾ....? ನಾಳಿ ನೀನೂ ಗಂಡನ ಮಾಡಿಕೊಂಡ ಹೋದಿ ಅಂದರ ತಿಳಿದೋತ, ನಿನಗೂ....!" ಎಂದು. ಮಾತು ಮುಗಿಯುವುದರಲ್ಲಿಯೇ ತಾರಕ್ಕ ಅಡಿಗೆಯ ಮನೆಯನ್ನು ಸೇರಿದಳು. ಅತ್ತೆಗೆ ವಿನಯದಿಂದ ಕೇಳಿದಳು "ಅತ್ಯಾ....ಸಂಜಿಗಿ ಯಾನ ಮಾಡೋದಾ .. ? " ಎಂದು.

"ಅಕ್ಕಿಗಿ ಎಸರ ಇಟ್ಟಿದ್ಯಾನು, ಚಿಟ್ಟಿ, ಮೂರ ಕೊಳವಿ ಅಕ್ಕಿ ಹಸನ ಮಾಡಿಕೊಂಡ ಬಾ. ಕುಡಿ ಮ್ಯಾಲ ಕೈ ಕಾಲಿಗಿ ನೀರ ಇಡು ಆಯ್ತು. ಈಗ ನಿಮ್ಮ ಮಾವಾ ಬಂದಾ, ಲಗೂನ ಹ್ವಾಸಕ ಆಗ್ಲಾಕ ಬೇಕು...." ಎಂದು ಚಿಮ್ಮವ್ವ ಆಜ್ಞಾಪಿಸಿದಳು.

ತಾರಕ್ಕ ಎಲ್ಲವನ್ನೂ ಲಕ್ಷ್ಯಗೊಟ್ಟು ಕೇಳಿಕೊಂಡಳು ಅದರಂತೆ ಚಟುವಟಿಕೆಯಿಂದ ಬೇಳೆ ಕೂಡಿಸಿದ ಅನ್ನ ಮಾಡಿದಳು ಕೈ ಕಾಲಿಗೆ ನೀರು ಕಾಯಿಸಿದಳು. ಅಷ್ಟರಲ್ಲಿ ಹೊರಗಿನಿಂದ ಮಾವ ಸಂಜೆಯ ಊಟಕ್ಕೆ ಬಂದ. ತಾರಕ್ಕ ಆದರದಿಂದ ಮಾವನ ಕೈಕಾಲಿಗೆ ನೀರು ಕೊಟ್ಟಳು. ಮಾವ ಕೈಕಾಲು ತೊಳೆದುಕೊಂಡು ಬರುವಷ್ಟರಲ್ಲಿ ತಾಟು ಮಣೆ ಹಾಕಿ ಸಿದ್ಧಪಡಿಸಿ, ಪಡಸಾಲೆಯಲ್ಲಿದ್ದ ಚಿಮ್ಮವ್ವನನ್ನು,

"ಅತ್ತ್ಯಾ....!" ಎಂದು ಕೂಗಿದಳು.

ಚಿಮ್ಮವ್ವ ಕುಳಿತಲ್ಲಿಂದಲೇ "ಯಾಕ....ಇಕ್ಕಲ್ಲ....!" ಎಂದು ಹೇಳಿದಳು.

"ಪೋರಿಗಿ ರೊಟ್ಟಿ ದುರುಡಿ ಕೈಗ ಬರೂದುಲ್ಲ...., ನೀನsಬಾ ಅಲ್ಲಾ. ಹೊರಗ ಅಲ್ಲ್ಯಾನ ಮಾಡಕ ಹತ್ತಿದಿ....?" ಎಂದು ಹೂವಣ್ಣನೇ ಕರೆದ.

''ರೊಟ್ಟಿ ದುರುಡಿ ನೆಲುವ ಮ್ಯಾಲ ಐತಿ ಹೋಂದ....?" ಎಂದು ಎದ್ದು ಒಳಗೆ ಬರುತ್ತ— "ನಾಳಿ ಅಕೀರ್ತಿ....ಬಸ್ತ್ಯಾಗ ಪೂಜೆ ಐತ್ತ್ಯಲ್ಲ.... ಯಾನರ ಜೋಡಣಿ ಮಾಡಕ ಬ್ಯಾಡಾ....? ಒಂದ ಹಿಡಿ ಮುಕ್ಕಾಗದ ಅಕ್ಕಿ ಕಾಳ ಪೂಜ ಕಾಳಕ ಆರಸತ ಕೂತಿನ್ನ....ಅಲ್ಲ್ಯಾನ ಖಾಲೆ ಕೂತಿನ್ನ ಅಂತೀರ್ಯಾನ....?" ಎಂದು ಕೇಳುತ್ತ ಕೈ ತೊಳೆದುಕೊಂಡು, ರೊಟ್ಟಿ ದುರುಡಿ ಇಳಿಸಿ ಹೂವಣ್ಣನಿಗೆ ಬಡಿಸಿದಳು.

"ಹ್ಯಾಂಗಾದರೂ ನಾಳಿ ಪೂಜಿ ಐತಿ....ಸಹಜಾನ ಸಹಜ ಬಾಳಿಕಾಯಿ ಒಂದ ಹಣಿಗಿ ಕೊಟ್ಟುಬಿಡಿರಿ...." ಎಂದು ಹೂವಣ್ಣ ರೊಟ್ಟಿ ಮುರಿಯುತ್ತ ಹೇಳಿದ.

ತಾರಕ್ಕ ಹೊರಗೆ ಹೋಗಿ ಅತ್ತೆ ಮಾಡುತ್ತಿದ್ದ ಕೆಲಸವನ್ನು ಪೂರ್ಣಗೊಳಿಸಿದಳು. ಅದಾದ ನಂತರ ನಾಳೆ ಬಸ್ತಿಗೆ ಒಯ್ಯಲು ಹೂಬತ್ತಿಗಳನ್ನು ಮಾಡತೊಡಗಿದಳು.

ಮರುದಿನ ಮಧ್ಯಾಹ್ನದಲ್ಲಿ ಬಸ್ತಿಯೊಳಗೆ ಪೂಜೆಯನ್ನು ನೋಡಿಕೊಂಡು ಅತ್ತೆಸೊಸೆಯರಿಬ್ಬರೂ ಮನೆಗೆ ನಡೆದಿದ್ದರು. ಹಿಂದಿನಿಂದ ಯಾರೋ "ಚಿಮ್ಮಾ!" ಎಂದು ಕರೆದರು. ಚಿಮ್ಮವ್ವ ಹೊರಳಿ ನೋಡಿದಳು. ಬಸ್ತಿಯ ಕಡೆಯಿಂದ ಚಾಂಗಲವ್ವ ಲಗುಬಗೆಯಿಂದ ಬರುತ್ತಿದ್ದಳು. ಕೈಯಲ್ಲಿ ಅಷ್ಟಕ ಮಾಡುವ ಒಂದು ಸಣ್ಣ ತಾಟು ಇತ್ತು. ಅದರಲ್ಲಿ ಎರಡು ಬೆಳ್ಳಿಯ ಆರತಿಗಳಿದ್ದವು. ಚಾಂಗಲವ್ವ ಸಮೀಪಕ್ಕೆ ಬರುತ್ತ "ಯಾಕ ಗಂಧೋದಕ ತಗೋಲಿಲ್ಲ....?" ಎಂದು ಕೇಳಿದಳು.

"ಅದ್ಯಾಕ? ಗಂಧೋದಕ ಇಲ್ಲದ ಯಾಕ ಬರೂನು....ಪೂಜಿ ನೋಡಿ! ಲಗೂನ ಹೋಗಿ ಮುಂದs ಕೂತಿದ್ಯು....ಲಗೂ ಹಾಕೊಂಡ ಬಂದ್ಯು ಆಯ್ತು

....ಮನ್ಯಾಗ ಗನಸರ ಹಸ್ತ....ಹಾದೀ ನೋಡತಿರಬೇಕು ." ಸೊಸೆಯ ಕಡೆ ತಿರುಗಿ "ನೀ ಮುಂದ ನಡಿ ಬಾಳಾ....ನಿಮ್ಮ ಮಾವಗ ಇಕ್ಕ ನಡಿ, ನಾ ಬಂದೀನು...." ಎಂದು ಹೇಳಿದಳು.

"ಯಾನ ಯಾಕ ಆಗವಲ್ತು ಪೋರಿ ಹುಶ್ಯಾರ ಇದಾಳು...."

"ಇನ್ನs ಅಲ್ಲಡ ಹುಡಗೂರ . ತಿಂದ ತಿರುಗಾಡುವಯ್ಯಾ.... ಈಗ್ಯಾನ ತಿಳೀತೇತಿ...." ಎಂದಳು ಚಿಮ್ಮವ್ವ.

"ಸಣ್ಣಾಕಿ ಆದರ ಯಾನಾಯ್ತು ; ಹುಟ್ಟಾ ಹುಟ್ಟಾ ನಾ ನೋಡತ ಬಂದಿದ್ಯಾನಲ್ಲ....ನೋಪಿ ತಂಗೊಂಡಿಳ ಆಗ....ಮನೀ ಮ್ಯಾಲ ಪೂಜಿಕಾಳ ಇಟ್ಟರ...ಚಂದ್ರಾಮ ತಗದರ ಹ್ಯಾಂಗ ತಗೀತಿಳ ಅಂತಿ ನೀ....? ಆಕಿ ಯಾವಾಗ ಯಾಕ ಬಸ್ತಿಗಿ ಬಂದ ಹೋಗವಾಳು....ನಾ ಹೋದಿನ ಅಂದರ... ತಾರಾ ಬಂದ ಹೋಗಿದಾಳೋ ಇಲ್ಲೋ ಅನ್ನೋದೆಲ್ಲಾ...ಪೂಜಿಕಾಳ ಮ್ಯಾಲಿಂದ ತಿಳಿಕೊಳ್ಳಾಕಿ...." ಎಂದು ತಾರಕ್ಕನ ಹೊಗಳುವಿಕೆಯಲ್ಲಿ ತನ್ನ ಜಾಣತನವನ್ನು ಪ್ರದರ್ಶಿಸಿದಳು.

"ಅದಕ್ಕೆಲ್ಲಾ ಹುಶ್ಯಾರು ಕಾಣಸತಾಳು....ನಾಳಿ ಮನೀ ಜನ್ಮಕ ಹ್ಯಾಂಗೋ....?" ನಡುವೆಯೇ ಮಾತು ಸೇರಿಸಿ ಚಾಂಗಲವ್ವ...."ಛೀ ಹುಚ್ಚೀ, ನೋಡಾಕೆ ಬೇಕಾರ ಪೋರಿ ಎಲ್ಲಾಕು ಹುಶ್ಯಾರ ಆಗ್ತೇತಿ. ತಲಿ ಭಾಳ್ ಹಗರ ಆಕೇದ. ಪಂಡಿತ ಎರಡ ದಿನಾ ಹೇಳೂದರಾಗ...ನವೋಕಾರ ಮಂತ್ರಾ...ಚೋವಿಸ ತೀರ್ಥಂಕರ ಹೆಸರಾ....ಎಲ್ಲಾ ತಾನsಹೇಳ್ಕ ಕಲ್ತಿಳು, ದವಳಕ್ಕ" ಎಂದಳು.

ಇಬ್ಬರೂ ಕೂಡಿ ನಡೆಯುತ್ತ...."ಸಣ್ಣ ಪೋರಿಗೊಳ, ಲಗೂ ಧ್ಯಾನ ದಾಗ ಕೂಡತಾವ ಅವಕ್ಕ....ನಮ್ಮ ಅಂಥಾವರಗಿ ಬಾ ಅಂದರ ಹ್ಯಾಂಗ ಬಂದಾವು....? ಮೊದಲ ನಾಲ್ಕು ದಿನಾ ನಾಲಿಗೇ ಹೊಳ್ಳೂಲ."

"ಇನ್ಯಾನ ನಿನ್ನ ನಾಲಿಗೆ ಹೊಳ್ಳತೇತೇ? 'ಭಕ್ತಾಮರ ಸ್ತೋತ್ರ' ಅನ್ನಲಾಕ ಹೋದರ, ಹತ್ತ ಜಾಗಾದಾಗ ನಾ ಇನ್ನs ತಪ್ಪತ್ಯಾನು...."

"ಹುಟ್ಟಾ ನಿನ್ನ ಜನ್ಮ ಆದರಾಗs ಹೋಯ್ತಲ್ಲಾ...." ಎಂದು ಆಶ್ಚರ್ಯ ವನ್ನು ಸೂಚಿಸಿ ಚಿಮ್ಮವ್ವ ನುಡಿದಳು.

"ಯಾನ ಮಾಡೋದಾ........ಹೀಂಗ ನೆರದ ಎರಡ ವರ್ಷ ಆಗಿತ್ತು.

ಅವರ ಕಣ್ಣ ಮುಚ್ಚಿದ ದ್ಯಾವರ........ನಮ್ಮ ಹಣೆಬರಾ ಇಂಥಾದ—ನಮ್ಮ ಅಬಚಿ....ಮಗಾ ಬಂದಾ...ಆ ಕಡೆ ಎಲ್ಲ್ಯರ ಓದ ಮಾಡಿ ಕೊಡತ್ಯಾನಂದ—ಪರಾದ ಪೋರಿನಾ ಮನ್ಯಾಗ ಇಟಕೊಂಡ ಕೂಡೋದ ಬ್ಯಾಡಂತ....' ಅಪ್ಪಗ ಮೂರು ದಿನ ಹೇಳಿದ. ಆದರ ನಮ್ಮ ಮನ್ಯಾಗ ಯಾರನ ಹೀಂಗ ಮಾಡಿ ಕೊಟ್ಟಿಲ್ಲ. ಬ್ಯಾಡಂತ ಅಪ್ಪ ಅಂದ. ನಾನೂ ಅಯ್ಯು....ಮನಗಿಸಿ, ಗಂಡನ ಸುಖಾನs....ನನ್ನ ನಸೀಬದಾಗ ಇದ್ದರ........ಅಂವ್ಯಾಕ ಸತ್ತಿರೋ ಅಂತ. ಅಂದಿಂದೂ ನನ್ನ ಮನೀ ಯಾನೋ ಬಸ್ತಿ ಯಾನೋ, ಬ್ಯಾರೇ ಪಂಚೀತೀನ ಇಲ್ಲ...." ಎಂದು ನಿರಾಶೆಯ ಉಸಿರೊಂದನ್ನು ಬಿಟ್ಟು ನುಡಿದಳು. ಅವಳ ಕಣ್ಣ ಕುಣಿಗಳೂ ಅದೇಕೊ ಹಸಿಯಾಗಿದ್ದುವು.

"ಎಲ್ಲಾ ಗೊತ್ತs ಐತಿ ಏಳ ತಾಯಿ! ಯಾನ ಹೊಸದಾಗೇ ಐತಿ ..? ಮನೀ ನೆರೀನ ಅಲ್ಲ; ಈಗೊಂದ ಈ ಗಲ್ಲಿಗಿ ಬಂದರ ಯಾನಾಯ್ತು...?" ಸ್ವಲ್ಪ ತಡೆದು ವಿಷಯ ಬದಲಿಸಿ...."ನೀವ್ಯಾನ ಕೊಟ್ಟೀರಿ ಪೂಜೀಗಿ....?" ಎಂದು ಕೇಳಿದಳು.

"ಈ ಅಕೀತಿ ಪೂಜಿಗಿ ಅಂದರ ಕಬ್ಬಿನ ರಸಾ ಒಳ್ಳೆ ಮಾನ...."

ನಡುವೆಯೇ ತಡೆದು ಚಿಮ್ಮವ್ವ "ಹಿಂಗ್ಯಾನ...?" ಎಂದು ಕೇಳಿದಳು.

"ಹೋಂದ; ಅಕೀತಿ ದಿನಾನs ಶ್ರೀಯಾಂಸ ರಾಜಾ...ಆದಿನಾಥ ಸ್ವಾಮಿಗಿ ಕಬ್ಬಿನ ಹಾಲ ಕುಡೀಕ ಕೊಟ್ಟಿದಾ....ಅದಕs....ಇಂದ...ಎಲ್ಲಿ ಇಲ್ಲ ದಲ್ಲೀದ ಕಬ್ಬಿನ ರಸಾ ತರಿಸಿ, ಪೂಜಿ ಮಾಡತಾರ....ಅಂತ ಹೇಳೀ ನಮ ಮಾವನ ಮನ್ಯಾಗ ಗಾಣ ನಡೆದಿತ್ತು...ಅವರಿಗಿ ಹೇಳಿ ಕಳ್ಸೀನಿ...ಎಂಟ ದಿನಾ ಆಗಾವನs....ಅಕೀತಿಗಿ ಯಾನ ಇಲ್ಲಾದರೂ ಒಂದ ತಂಬಿಗಿ ತಾಜಾ ರಸಾ ಹಚಕೊಡರಿ....ಅಂತ" ಸ್ವಲ್ಪ ತಡೆದು ಸುತ್ತೆಲ್ಲ ನೋಡಿ ನಾಲ್ಕು ಹೆಜ್ಜೆ ನಡೆದ ಮೇಲೆ "ಖೋಡಿಗೋಳ....ಅವಕ ಇಂಥಾದ ಎಲ್ಲಾ....ಯಾನ ಗೊತ್ತಾ....? ಅವ ಹೂಂನೂ ಅನಲಿಲ್ಲ . ಇಲ್ಲ ಅಂತನೂ ಹೇಳಿ ಹಚಕುಡ ಲಿಲ್ಲ...." ಗಲ್ಲದ ಮೇಲೆ ಬೆರಳಿಟ್ಟು "ಇನ್ನ್ಯಾನ ಮಾಡೋದ ತಾಯೀ.... ಅಂತ....ನಿನ್ನಿ ಅಣ್ಣಾ ಮಿರಜಿಗೆ ಹೋದಾ...ಅವನ ಕೈಯಿಂದ ಒಂದ್ಯೆದ ಮಾವಿನ ಕಾಯಿನs ತರಿಸಿನ, ಸಿಕರಾಣಿ ಪೂಜೀರ ಮಾಡಸಬೇಕೆಂತ...

ದ್ಯಾವರ ಪೂಜಿ ಮಾಡಸದ ನಾ ಸಿಕರಾಣಿನೂ ಉಣ್ಣೂ ಹಂಗಿಲ್ಲ.... ಅದೂ ಆಯ್ತು ಅಂತ ಮಾಡ್ನಿ". ಮುಗಿಲೆಡೆಗೆ ಕೈಮಾಡಿ "ಆದರ ಭಗವಾನಗ ಯಾನ ಕಣ್ಣ ಇಲ್ಲ....? ಇಂದ ಹಳೀವತ್ತ ಅಂದರ ಕಬ್ಬಿನ ರಸಾನೂ ಹಚ್ಚ ಕೊಟ್ಟರ ಅವರ....! ಒಂದ ನಿಚ್ಚವಲೆ ಭಕ್ತಿ ಮಾಡಿದ ಮ್ಯಾಲ ದ್ಯಾವರs ಎಲ್ಲಾ ಒದಗಿಸಿ ಕೊಡಲಾಕಬೇಕು...."

ಚಿಮ್ಮವ್ವ ಕೇಳಿದಳು.... "ಸಿಕರಾಣಿನೂ ಯಾರ ಕೊಟ್ಟೀರಲ್ಲ....?"

"ದ್ಯಾವರ ಹೆಸರಲೆ ಬಂದ ಕಾಯಿ ನಾವ ಯಾತಕ ಇಟಕೊಳ್ಳೂಣು ? ಹಿಂಡಿ ಒಂದ ಸಣ್ಣ ತಂಬಿಗಿ ಆಗಿತ್ತ ಅಷ್ಟ ರಸಾ ಕೊಟ್ಟನ್ನು; ಮತ್ತ ಗೌಡರ ಬ್ಯಾರೆ ಕೊಟ್ಟೀರಂತ...."

ಇಷ್ಟರಲ್ಲಿ ಇಬ್ಬರ ಮನೆಗೆ ಹೋಗುವ ಹಾದಿಗಳೂ ಬೇರೆ ಬೇರೆಯಾದುವು. ಚಿಮ್ಮವ್ವ ತನ್ನ ಮನೆಯ ಕಡೆಗೆ ಹೊರಳುತ್ತ "ಹೋಗ ತಾಯಿ! ಬಿಸಲ ಆಯ್ತು; ಇನ್ನ ಹೋಗಿ ಉಣಬೇಕ....ಬ್ಯಾಸಗಿ ದಿವಸ...ಜರಾ ವ್ಯಾಳಿ ಆಯ್ತಂದರ ಕೂಳs ಹೋಗುದುಲ್ಲ....ತುತ್ತಿಗೊಮ್ಮೆ ನೀರs ಕುಡಸತೈತಿ.... ಅಂದಳು.

"ನಿನ್ನಿ ಶುಕ್ರಾರ ನಂದೂ ಒಪ್ಪತ್ತ್ನ...." ಎಂದು ಚಾಂಗಲವ್ವ ನಿನ್ನೆಯಿಂದಲೂ ತಾನು ಉಪವಾಸ ಇದ್ದುದನ್ನು ಸೂಚಿಸಿದಳು. ಅವಳ ಮಾತಿನಲ್ಲಿ, ನೀವ ಒಂದ ದಿನಾ ವ್ಯಾಳೇ ಆದದ್ದಕ್ಕ ಹೀಂಗ ಅನ್ನತೀರಿ; ನಾ ಹ್ಯಾಂಗ ಇರತಿರಬೇಕು—ಅನ್ನುವ ಭಾವ ಇಡುಗಿತ್ತು.

ಚಿಮ್ಮವ್ವ ತಿರುಗಿ ನಿಂತು "ಎಷ್ಟಂತ ಉಪಾಸ ಮಾಡತಿ ತಾಯಿ ನೀ.... ಉಪಾಸಕ ಗಟ್ಟಿ ನೋಡವ್ವ. ವಾರದಾಗ ಮೂರ ನಾಲ್ಕ ದಿನ ಇರತೀತೀ ನಿಂದ ಉಪಾಸ...." ಎಂದಳು.

"ತಿಂದ ಬೆಳಸಿ ಯಾನ ಮಾಡೋದ ಈ ಕೊಡ್ಡಾ....? ಎಂದಾದರೊಮ್ಮೆ ಈ ಹೆಣ್ಣಿನ ಜನ್ಮ ನೀಗಿ ಹೋಗೋದ್ಯ ಅಲ್ಲ....! ಈ ಹೆಣ್ಣಿನ ಕಾಯ ಮಣ್ಣಿನ ಸಮಾನ....ಇನ್ನ್ಯಾತಕ ಬರೋದೈತಿ....ತಿಂದ ಉಂಡ....?" ಎಂದು ತಾನು ಉಪವಾಸ ಮಾಡುವ ಕಾರಣವನ್ನು ಸೂಚಿಸಿದಳು....ಅವಳ ಕಂಠ ಒಣಗಿತ್ತು. ತುಟಿಗಳೂ ಒಣಗಿದ್ದುವು. ಸ್ವಲ್ಪ ತಡೆದು ದನಿ ಸರಿಪಡಿಸಿಕೊಂಡು—

"ತಾರಾ ಅಷ್ಟಮಿ ಚತುರ್ದಶಿ....ಉಪಾಸ ಮಾಡ್ತಾಳು....?" ಎಂದು ಕೇಳಿದಳು.

"ನೋಪಿ ತಗೊಂಡಾಕಿ ಇದಾಳಂತ....ಈಗನಕ ಮಾಡತಾಳು; ನಾಳಿ ಸುಗ್ಗಿ ದಿನದಾಗ ನಮಗ ಹ್ಯಾಂಗ ಆಗಬೇಕು....? ಅಡವಿಗಿ ಹೋಗಾವರ ಕತ್ತಲಾಗಿ ಬರಾವರ....ಅದಕ್ಕ ಸೋಸಿ ನೀರ ಕುಡೀಕಬೇಕ....ಮಡೀಲೆ ಉಣ್ಣಾಕ ಬೇಕು...ನಾವ ಅಡವ್ಯಾಗ ಮಣ್ಣಿನ ಕೊಡದಾಗಿನ ನೀರ ಕುಡವರ ಕುಡದೇವ ....ಹಳ್ಳದಾಗಿಂದ ಕುಡದರ ಕುಡದೇವ. ವೇಳೇಕ ತಂಗಳ ಸಿಕ್ಕರ ಸಿಕ್ಕೀತ.... ಬಿಸೇದ ಸಿಕ್ಕಿರ ಸಿಕ್ಕಿತ...ತಿಂದ ಕೆಲಸಕ ಓಡಕಬೇಕು. ಆದ ನಮ್ಮ ಮನ್ಯಾಗ ಯಾನ ನಡ್ಯೋದ ಇಲ್ಲ, ಮುಂದ. ಸುಮ್ನ ಮಾಡತಾಳಂತ ಹೇಳಿ....ಪಾಪ ದಾಗ ಬೀಳೋದ ಬ್ಯಾಡ....ಮಾಡೋದಿದ್ರ ಒಂದ್ಸ ನಿಚ್ಚೀವಲೆ ಮಾಡಬೇಕು. ಇಲ್ಲಾದರ ಅದನ್ನ ಹಿಡೀನ್ಸ ಬಾರದ...." ಎಂದು ಚಿಮ್ಮವ್ವ ನಡೆದಳು. ಅವಳ ನಡಿಗೆಯ ರೀತಿಯಲ್ಲಿ ಮಾತಿನ ಧ್ವನಿಯಲ್ಲಿ ತಾರಕ್ಕನ ತವರು ಮನೆಯವರನ್ನು ವ್ಯಂಗ್ಯವಾಗಿ ಸೂಕ್ಷ್ಮವಾಗಿ ನಿಂದಿಸುವ ಭಾವವಿತ್ತು.

ಅದನ್ನರಿತುಕೊಂಡು ಚಾಂಗಲವ್ವ "ಯಾನ ಆದರ ನೀನ್ಸ ಗೆದ್ದಿ ಏಳ.... ಚಿಮ್ಮಾ, ಎಂಟ ದಿನದಾಗ ಮದಿವಿ ಮಾಡಕೊಂಡ....ಸೊಸೀನಾ ಮನ್ಯಾಗ ತಗೊಂಡ ಬಂದಿ! ಅಡವೀ ಮನಸೇರ ನಿಮಗೆ ಅಷ್ಟಮಿ ಚತುರ್ದಶಿ ಯಾನ ಮಾಡೋದಾ...?" ಎಂದಳು. ಅವಳ ಅಂತರಾತ್ಮ ಹಾಗೆ ಹೇಳುತ್ತಿರಲಿಲ್ಲ ವಾದರೂ ಚಿಮ್ಮವ್ವನೆದುರಿಗೆ ಹಾಗೆ ಹೇಳಬೇಕಾಯಿತವಳಿಗೆ.

ಚಿಮ್ಮವ್ವ ಮತ್ತೆ ತಿರುಗಿ ಬಂದು "ಗೆಲ್ಲಲಾಕ ಯಾನ? ಯಾವಾಗಾದರ ನಮ್ಮದ್ಸ ಇತ್ತಲ್ಲ....! ಆಕಿ ಎಷ್ಟ ಹಾರ್‍ಯಾಡಿದರ ಯಾನ ಆಗೋದಾ? ನಮ್ಮ ಅಣ್ಣ ಯಾನ ಆಕಿ ಮಾತ ಕೇಳತಾನು....?" ಸ್ವಲ್ಪ ಹೆಮ್ಮೆಯಿಂದಲೇ ಹೇಳಿ ದಳು.

"ಆದ ಖರೇನ....! ಆದರ ಆಕಿ ಮಾತ ನೀ ಮನಸಿನ್ಯಾಗ ಹಿಡಿದ ಪೋರಿಗಿ ಕಾಡಬ್ಯಾಡ ಮತ್ತ!"

"ಹೇ ಹುಚ್ಚವ್ವ, ನನಗ್ಯಾನ ತಿಳಿದುಲ್ಲಯಾನ....?" ಹಣೆಗೆ ಗಂಟು ಹಾಕಿ—"ರತ್ನಾನ ಹಾಂಗ ನಾನೂ ಕಿವೀ ಕಡೆ ತುತ್ತ ಒಯ್ಯುದುಲ್ಲ...? ಆಕಿ

ಮಾತ ತಗೊಂಡ. ನನಗ್ಯಾನ ಮಾಡೋದ ಏತಿ...? ಒಳಗಿಂದ ಮಾಡಿದ್ಯಾನ ಅಂದ ಮ್ಯಾಲ, ಆಕಿ ಮೂಗಿನ ಮ್ಯಾಲ ಕಟಿಯೂ ಹಂಗ... ನಂದೋಸಕೊಂಡ ತೋರಸತ್ಯಾನು... ನನ್ನ ಸೊಸೀಗಿ ನಾ ಯಾಕ ನೂಸಲಿ...?" ಎಂದು ಹೇಳಿದವಳೇ ವೇಳೆ ಆಯ್ತೆಂದು ಹೋಗಿಬಿಟ್ಟಳು. ಚಾಂಗಲವ್ವ ಸ್ವಲ್ಪ ಹೊತ್ತು, ಅವಳು ಹೋಗುವದನ್ನು ನೋಡುತ್ತ, ಅಲ್ಲೇ ನಿಂತು, ಮೆಲ್ಲನೆ ಹೊರಳಿ ಮನೆಯ ಕಡೆಗೆ ಹೋದಳು.

...ಚಿಮ್ಮವ್ವನಿಗೆ ರತ್ನಾಬಾಯಿಯ ಮನದ ಇಂಗಿತ ಗೊತ್ತಿದ್ದಿತು. 'ತನ್ನ ಒಬ್ಬಳ ಮಗಳ ಒಳಗಿನ ಆಸ್ತಿತ್ವದಲ್ಲಿ ಕೊಟ್ಟರೆ... ಸುಖವಾಗಲಿಕ್ಕಿಲ್ಲ... ಅನ್ನ ಲಾಕ ಬರೂದುಲ್ಲ... ಆಡಲಾಕ ಬರೂದುಲ್ಲ' ಅನ್ನೋದು ತನ್ನ ನಾದಿನಿಯ ಭಾವನೆ ಎಂಬುದನ್ನು ಅವಳು ಮದುವೆಯಾಗುವ ಮುಂಚೆಯೇ ತಿಳಿದಿದ್ದಳು. ಆದರೆ ಹುಡುಗೆಯನ್ನು ಈಗ ಹೊರಗೆ ಕೊಟ್ಟರೆ ತನ್ನ ತವರು ಮನೆಯ ಸಂಬಂಧ ಮುಂದೆ ಏನೂ ಉಳಿಯುವುದಿಲ್ಲವಲ್ಲ! ಎಂಬುದು ಚಿಮ್ಮವ್ವನ ಚಿಂತೆಯಾಗಿದ್ದಿತು. ಇಷ್ಟೇ ಅಲ್ಲದೆ ಅವಳಿಗೆ ಇನ್ನೂ ಒಂದು ಬಲವಾದ ಆಸೆಯಿತ್ತು. ಅಣ್ಣನಿಗೆ ಗಂಡು ಮಕ್ಕಳಿಲ್ಲ; ಇದ್ದ ಒಂದೆರಡು ಕೂರಿಗಿ ಅಡವಿ, ಯಾವಾಗಾದರೂ ಹೆಣ್ಣು ಮಕ್ಕಳಿಗೇ ಆಗತಕ್ಕದ್ದು. ಅದನ್ನಾದರೂ ಹೊರಗೆ ಯಾಕೆ ಹಾಕಬೇಕು? ಈ ಎಲ್ಲ ಕಾರಣಗಳಿಗಾಗಿ ಮಗನಿಗೆ ಸ್ವಲ್ಪ ದೊಡ್ಡವಳಾದರೂ ತಾರಕ್ಕನನ್ನು ಸೊಸೆಯನ್ನಾಗಿ ಮಾಡಿಕೊಂಡಿದ್ದಳು.

ಮುಂದೆ ಒಂದು ತಿಂಗಳ ನಂತರ ರತ್ನವ್ವ ತನ್ನ ಮಗಳನ್ನು ಕಾರ ಹುಣ್ಣಿವೆಗೆಂದು ಕರೆಯಲು ಬಂದಾಗ, ಆ ಮಾತು ಈ ಮಾತು ಆಡಿದ ನಂತರ ಚಿಮ್ಮವ್ವ—"ಯಾನ ಎಲ್ಲಿ ಇದ್ದರೂ ಒಂದs ಐತಿ ತಗೊ! ಅಲ್ಲಿ ನಾಲ್ಕ ದಿನಾ ಇಲ್ಲಿ ನಾಲ್ಕ ದಿನಾ ಇರವಲ್ಲಳ್ಯಾಕ..." ಧನಿ ಬದಲಿಸಿ—"ಊರಾಗ ಮಗಳನ್ನ ಕೊಟ್ಟೇದಿ ಅಂತs... ಯಾವಾಗ ಬೇಕಾದಾಗ ಕರಕೊಂಡ ಹೋಗಕ ಬರತೇತಿ. ಯಾತ ಬೇಕಾದವರ ಬಂದರೂ ನಡೀತೇತಿ... ಈಗ ನೀನ ಬಂದೀ, ಕರಕೊಂಡ ಹೊರಟಿ; ಪರವೂರಾಗಾದರ ಹೀಂಗ ಹ್ಯಾಂಗ ಬಂದೋತು...? ಪರವೂರಾಗ ಮಗಳನ್ನ ಕೊಟ್ಟರ... ಇಲ್ಲಿ ನಿಮ್ಮ ಜೀವಕಾ ಭಾವಕಾ ಬಂದರ ಯಾರ ಇದ್ದಾರು...? ಅಲ್ಲಿಂದ ಅವರ ಎತ್ತಿ ಬಂದ ಯಾನ ಪುರ್‍ಸೋತ್ತಾರು...?

ಅಲ್ಲದ ತುಪ್ಪ ಬಿದ್ದರೂ ಖಿಚಡ್ಯಾಗs ಬಿದ್ದಾಂಗ ಆಯ್ತು...." ಎಂದು ಹೇಳಿದಳು.

ರತ್ನವ್ವ ಈ ಮಾತಿನ ಅರ್ಥವನ್ನು ಚೆನ್ನಾಗಿ ಗ್ರಹಿಸಿಕೊಂಡು ನಸುನಗೆಯೊಂದನ್ನು ಬೀರಿದಳು. ಅವಳ ಆ ನಗೆಯಲ್ಲಿ ಎಷ್ಟೊಂದು ಉಪಹಾಸವಿತ್ತೆಂಬುದನ್ನು ಇಲ್ಲಿ ಹೇಳಲಸಾಧ್ಯ. ಅದೇಕಾಲಕ್ಕೆ ಅವಳ ಮುಖದ ಮೇಲೆ ಚಿಂತೆಯ ತೆರೆಯೂ ಒಂದು ಸುಳಿದುಹೋಗದಿರಲಿಲ್ಲ. ಈ ಉತ್ಪನ್ನದ ಹಂಬಲಕ್ಕೆ ಬಿದ್ದು, ಮಗಳಿಗೆ ಕಷ್ಟ ಕೊಟ್ಟರೆ ಏನು ಗ್ರತಿ...? ಎಂದು ಅವಳ ಹೃದಯವೂ ನಡುಗಿತು. ತನ್ನ ಹೊಲಮನಿ ಯಾವ್ವಾಗಾದ್ರೂ ಮಗಳಿಗೇ ಆಗುವುದು. ಇದು ಕಟ್ಟಿಟ್ಟ ಸಂಗತಿ. ಆದರೆ ತಾವಿನ್ನೂ ಪ್ರಾಯದವರು. ಈಗಲೇ ಎರಡನೆಯವರಿಗೆ ಮಾಡಿ ಮಂದಿ ಚಪ್ಪರೆದ ಸೂರಗೆ ಬಿದ್ದು ಬದುಕುವುದೇ ? ಛೀ !

"ನಾವರ ಎಲ್ಲಿ ಹೊರಗ ನೋಡತ್ತಿದ್ದೇವ... ಆಕಿ ಹುಟ್ಟಿದಾಗನs ಭರಮಗ್ಗ ಕೊಡೋದಂತ ಹೆಸರ ಇಟ್ಟಬಿಟ್ಟಿದ್ದೇವ. ಆದರ ನೀವs" ನಮ್ಮ ಹುಡುಗಗ ಅಷ್ಟ..ಕೊಡತಾರ ಇಷ್ಟು ಕೊಡತಾರ ಅಂತ ಹಾರ್‍ಯಾಡಿದಿರಿ. ಅದ ನೋಡಿ ನಾವ ಹಿಂದಕ ಸರದೇವ ತಾಯಿ !" ಗಲ್ಲದಮೇಲೆ ಕೈಯಿಟ್ಟು, ಸ್ವಲ್ಪ ತಡೆದು "ನಾವ ಹಳ್ಳಿನ ಮ್ಯಾಲ ಮಾಸ ಇಲ್ಲದವರು; ಇದ್ದದ ಎರಡ ಕೂರಿಗಿ; ಅಡವಿಗಿಡವಿ ಯಾರರ ಧನ್ನ ಮಾಡಿ ನಾಳಿ ಯಾರು ಬಾಗಲಾಗ ಬಿದ್ದು ಸಾಯೂನ್ಲೂ ತಾಯಿ ? ಆಗ್ಯಾರ ಕುಡಲಾಕ ಬರತಾರು! ಸಕ್ಕರಿ ಇದ್ದಲ್ಲೇ ಇರುವಿ ಮುಕ್ಕರೋವ್ಸ."

ಈ ಮಾತುಗಳನ್ನು ಕೇಳಿ ಚನ್ನವ್ವನ ಮುಖ ಕಪ್ಪಿಟ್ಟಿತು. ಆದರೂ ಅವಳೆಂದಳು. "ಯಾನ ಹುಚ್ಚವ್ವ ನೀ ! ಮುಪ್ಪಿನ ಕಾಲದ ಚಿಂತೀ ಮಾಡತಿ. ಯಾರ ಯಾನ ಹೊರ ಕೈಲೆ ಹೋಡೀತಾರ ಯಾನ್ಸ...? ಊರಾಗ ಮಗಳ ಇದಾಳೆ. ಹುಲೀ ಅಂಥಾ ಅಳ್ಯಾನ ಮಾಡೀದಿ. ಅಲ್ಲದ ಅತ್ತ ನಿನ್ನ ತವರಮನಿ ಬಳಗ ಏತಿ, ನಿನ್ನ ತಲ್ಯಾಗ ಕೂದಲ ಇರಲಾಕಿಲ್ಲ ಅಷ್ಟ...."

"ಎಲ್ಲಾರು ತಮ್ಮ ತಮ್ಮ ಜನ್ನಕ ಹುಶಾರ...ಯ್ಯಾರ್ತ ಮುಸ್ಸರೀ ಕೈಲೆಕಾಗಿ ಹೊಡೀದುಲ್ಲ ತಾಯಿ ! ತವರಮನ್ಯಾಗ ಅಣ್ಣ ಒಂದ ನಮ್ಮಾವ ಆದರ

ಅಣ್ಣನ ಹೆಂಡರ ಯಾರವರವ್ವಾ...! ಎಲ್ಲಾ ಹಂತ್ಯಾಕ ಗಂಟ ಇದ್ದ ರನ್ನs ಬರಾವರ. ಇಲ್ಲ ಆದರ ಯಾರ ಹಣಿಕಿ ಹಾಕಿ ನೋಡೂದುಲ್ಲ ಸುದ್ಧಾ...!"

ಮಾತುಗಳು ಇಷ್ಟು ಮುಗಿದುವು. ಆದರೆ ಆ ವಿಷಯ ಅಷ್ಟಕ್ಕೆ ನಿಲ್ಲಲಿಲ್ಲ. ಸಂಜೆಗೆ ಹೂವಣ್ಣ ಹೊಲದಿಂದ ಬಂದು, ಪಡಸಾಲೆಯಲ್ಲಿ ತಂಬಾಕು ಸೇದುತ್ತ ಕುಳಿತಾಗ ಸಹಜ ಚಿಮ್ಮವ್ವ ಮಾತು ತೆಗೆದಳು.

"ಪೋರಿನಾ ಕರೀಲಾಕ ರತ್ನಾನs ಬಂದೀಳು...."

"ಹೋಂದ ; ಸಂಜೀವ್ಯಾಳೇದಾಗ...ಮಲ್ಲಾ ಮಳಗಿಗಿ ಹೋಗತಾ ಗಂಟ ಬಿದ್ದಿದ್ದ. ಮಳಗ್ಯಾಗಿಂದ ಎಲ್ಲಿ ಮೇವ ಹೋಗಲಾಕ ಹತ್ತೇತಿ ಅಂತ.... ಮುರು ಸಂಜೆ....ಕಾವಲಕ ಕೂಡತ್ಯಾನಂತ...ಹೋದ...ಅದಕs ಆಕೆ ಬಂದಿರ ಬೇಕು....ಯಾರ ಬಂದರ ಯಾನ" ಅಲ್ಲೇ ಬಿದ್ದ ಕಸಬರಗಿಯ ಕಡ್ಡಿಯೊಂದನ್ನು ಮುರಿದು ಚಿಲಿಮೆಯಲ್ಲಿ ಸೇರಿಸುತ್ತ ಹೂವಣ್ಣ ನುಡಿದ.

"ಇದs ನಾ ಹೇಳ್ಕ ಹೋದರ...ರತ್ನಾನ ಮನಸಿಗಿ ಬರೂದುಲ್ಲಾ !"

"ಅಂದರ ಯಾನ ? ನೀ ಅನ್ನೋದ ನನಗೆ ತಿಳಿವಲ್ಲು...." ಹೂವಣ್ಣ ಚಿಲುಮೆಯಲ್ಲಿ ತಂಬಾಕು ಹಾಕುತ್ತಾ ಕೇಳಿದ.

"ಯಾನಿಲ್ಲ ; ರತ್ನಾ ಬಂದಾಗ ನಾನs ಅಂದಿನು...'ಊರಾಗ ಮಗಳ್ನ ಕೊಟ್ಟ, ಬೇಕಾದವರ ಕರೀಕ ಬಂದರ ನಡೀತೇತಿ. ಅಡ್ಡಿ ಆಪತ್ತಿನೊಳಗ ಒಬ್ಬರ್ಗಿ ಒಬ್ಬರ ನೋಡಕ ಬರತೇತಿ...ಮುಪ್ಪಿನವರ ಆಗಾನಾ ಇಲ್ಲೇ ಮಗಳ ಒಂದ ಬಿಸಿ ರೊಟ್ಟಿ ಮಡಚಿ ಕೈಯಾಗ ಕೊಟ್ಟಾಳ, ಅವ್ವಾ ಅಪ್ಪಾ ಅಂತ....?" ಎಂದು ಚಿಮ್ಮವ್ವ ಒಳಗಿನಿಂದ ಬೆಂಕಿಯ ಕಿಡಿ ತಂದು ಕೊಡುತ್ತ ಹೇಳಿದಳು.

ಚಿಲುಮೆಯ ಮೇಲೆ ಬೆಂಕಿ ಇಡುತ್ತ "ಅದ್ಯಾಕ ಈಗ ಹೊಂಟಿತ್ತು ?" ಹೂವಣ್ಣ ಪ್ರಶ್ನೆ ಮಾಡಿದ.

"ಮಾತಿಗೆ ಮಾತ ಹೊರಟಾಗ...ಗಂಡಸ ಮಕ್ಕಳ ಇಲ್ಲಾ...ಯಾವಾ ಗಾದಾರ ಮಗಳೀಗೇ ಆಗೋದಾ..."

ಅವಳ ಮಾತನ್ನು ತಡೆದು ಹೂವಣ್ಣ—"ಯಾನ ಹುಚ್ಚ ಇದಾಳ ಇಕ್ಕೆ....? ಇನ್ನ ಅವರ ಗಂಡಾ ಹ್ಯಾಂತಿ...ಧಡಧಡೀತ ಇದಾರ...ಅವರ

ಹೊಲಾ ಮನೀ ಮಗಳಿಗಿ ಆಗ್ತ್ರೇತಿ ಅಂತ....ಮಗಳಿಗಿ ಯಾಕ ಆಗ್ತ್ರೇತಿ....? ಅವರ ಇನ್ನs ಹಡದಾರಲ್ಲ ? ಇಲ್ಲಾದರ ಆವರ ಹೊಲಾ–ಮನೀ ಅವರ ಯಾನ ಯಾಕ ಮಾಡಕೋವಾರು....ಅದರ ಮ್ಯಾಲ ಯಾಕ ನಿನ್ನ ಕಣ್ಣ ?..." ಬಾಯಿಂದ ಹೊಗೆ ಹೋಗುತ್ತಿರಲು ಹೂವಣ್ಣ ಬೆದರಿಸಿದ.

ಸ್ವಲ್ಪ ಸಿಟ್ಟಿನ ಸ್ವರದಲ್ಲಿ ಚಿಮ್ಮವ್ವ "ನಾ ಯಾದಕ ಅವರ ಬದಕಿಗಿ ಆಶಾ ಮಾಡಕ ಹೋಗಲೇ....? ಎಲ್ಲಾ ಹಾಳ ಆಗಿ ಹೋಗವಲ್ದ ಯಾಕ....! ತಾರಾನs ಕೇಳಿಲು....ಅವ್ವಾ ನಂಗ ದೊಡ್ಡ ಗುಳದಾಳಿ ಮಾಡಿಸಿಕೊಡಂತ. ಅದಕ ತಾಸತನಕ ಉಪ್ಪಾಖಾರ ಹಚ್ಚಿ, ಇದs ಮದಿವಿ ಸಾಲದಾಗ ಮುಳುಗಿ ಮುಳುಗಿ ಏಳಕ ಹತ್ತಿದೇವು, ಸುಗ್ಗಿ ಆಗಲಿ ನೋಡುನು....' ಎಂದಳು. ಅದಕ್ಕ ಅವ್ವ ಮಗಳಿಗಿ ವಾದ ಆಯ್ತು. ಆಗ ನಾ ಬಾಯಿ ಹಾಕಿ ಹೇಳಿನು.... 'ಸಾಲ ಯಾನ ಭಾಳ ಐತಿ ? ಇಂದ ಇಲ್ಲ ನಾಳಿ ಕಳದೋತ....ಯಾವಾಗಾದರ ಎಲ್ಲಾ ಆಕೇದ ಐತ್ಯಲ್ಲ !' ಅಂತಾ....ಅದಕ್ಕ....ಇಷ್ಟೆಲ್ಲ....ಮಾತಾಡಿ ಹೋದಳು...." ಎಂದು ಏನೋ ಒಂದು ಕಾರಣ ಹೇಳಿ ತಾನೂ ನಿರ್ದೋಷಿಯಾಗಲು ಯತ್ನಿಸಿದಳು.

ಚಿಮ್ಮವ್ವ ದೋಷಿಯೆ ಆಗಲಿ, ನಿರ್ದೋಷಿಯೆ ಆಗಲಿ, ಅದರ ನ್ಯಾಯಾಧೀಶತ್ವ ನಮಗೆ ಬೇಕಿಲ್ಲ. ಆದರೆ ಚಿಮ್ಮವ್ವನ ಈ ಭಾವನೆ ತಾರಕ್ಕನ ಬಾಳಿನಲ್ಲಿ ಬೇಗೆಯನ್ನು ಹೇಗೆ ಹರವಿತೆಂಬುದನ್ನು ಹೇಳಬೇಕಾಗಿದೆ.

ಆ ದಿನ ರಾತ್ರಿ ಗಂಡ ಯಾವಾಗ ಹೊಲದಿಂದ ಬಂದಾನು, ತಾ ಎಲ್ಲ ಸಂಗತಿಯನ್ನು ಯಾವಾಗ ಹೇಳಿಬಿಟ್ಟೇನೆಂದು, ರತ್ನವ್ವನೂ ಆತುರಚಿತ್ತಳಾಗಿಯೇ ಇದ್ದಳು. ಪತಿಯ ಮುಂದೆ, ಮಗಳನ್ನು ಕರೆಯಲು ಹೋದಾಗ ನಡೆದ ಮಾತುಕತೆಗಳನ್ನೆಲ್ಲ ಹೇಗೆ ಹೊಂದಿಸಿ ಹೇಳಬೇಕೆಂಬ ಯೋಚನೆಯನ್ನು ಹತ್ತಾರು ಸಲ ಮನದಲ್ಲಿಯೇ ಮಂಡಿಸಿ, ಸರಿಪಡಿಸಿ ಇಟ್ಟಿದ್ದಳು. ಆದರೆ ಮಲ್ಲಮಳಿಗೆಯಿಂದ ಬರುವಾಗ ತಾನೊಂದು ವಿಶೇಷ ಸಂಗತಿಯನ್ನೇ ಹೇಳಲು ಆತುರನಾಗಿದ್ದ. ಆತ ಮನೆಯ ಮೆಟ್ಟಿಗಲ್ಲು ತುಳಿಯುತ್ತಲೇ, "ನಾಲ್ಕು ದಿನಾ ಆಯ್ತು, ಮೇವ ಹೋಗತೇತಿ ಅಂತ....ಹೇಳತಿದ್ದಿನಲ್ಲ....? ಚೌಗಲೇರ ಭೀಮ್ಯಾನs ಒಯ್ಯತಿದ್ದ ನೋಡ....! ಮುದುಕ ಆಗೇದಾ ಇಂಥಾ ಕೆಲಸ

ಮಾಡಕ್ಕ ನಾಚಿಕಿಬರಭಾರದು....ಶ್ರೀಂ" ಎಂದು ಸಿಟ್ಟಿನಲ್ಲಿಯೇ ಹೇಳಿದ. ಕೈಕಾಲಿಗೆ ನೀರು ತಂದು ಕೊಡುತ್ತ ರತ್ನವ್ವ "ಯಾರ...? ಹೌಗಲೇರ ಭೀಮಪ್ಪ ಮುದುಕಾ...?" ಎಂದು ಅನ್ಯಮನಸ್ಕಳಾಗಿ, ಆದರೂ ಆಶ್ಚರ್ಯದಿಂದ ಕೇಳಿದಳು.

"ಹೂಂ ಅವನು. ಈಗ ಬರೇ ತುಡುಗರೆಲ್ಲಾ.. ತುಡುಗ ಮಾಡೋದ ಬಿಟ್ಟೇದಾರ....ಊರಾಗಿನವರಾ ನೇಹೊರ್ಯಾವರನ ಮಾಡತಾರ........ ನೋಡಲ್ಲ ಯಾನ ದೊಡ್ಡ ಜೀನಸಾ? ಮುಂದೀ ಮಳಗ್ಯಾಗ ಬಂದ ಬಿತ್ಯ ಬೇಕೆಂದರ....! ಯಾನ ಇಲ್ಲದಾವನರ ಇನಾನ ಆನಬೇಕ....?" ಎಂದ. ಕೈಕಾಲು ತೊಳೆಯುತ್ತ ನಡುವೆಯೇ ಮಾತು ಸೇರಿಸಿ "ಸುಟ್ಟರ ಸುಡಬಾರದಷ್ಟು ಐತ್ಯಲ್ಲಾ....ಇದಕ್ಯಾಕ ಇಷ್ಟ ಸಣ್ಣ ಮನಸ ಮಾಡತ್ಯೋ, ಮುದುಕ ಆಗಿ? ಪಾವಣೇರ ಪೈರೊಳಗ ಹೇಂಗ ಮಾಡಬಾರದ...." ಎಂದು ತನ್ನ ನೀತಿಯನ್ನು ಮಂಡಿಸಿದಳು.

"ಪಾವಣೇರ ಅಂತ್ಯ ಹೂವಣ್ಣನ ಮಾರಿ ನೋಡೇ ಬಿಟ್ಟ, ಇಲ್ಲಾದರ ಚಾವಡಿಗೆ ತರಾಂವ ಮೇವಿನ ಹೊರೀ ಸಂಗಡಾ...ಮತ್ಯಾರರ....ಆಗೀತ...." ಎಂದು ತಾನು ಭೀಮಪ್ಪನಿಗೆ ದಯತೋರಿದ ಕಾರಣವನ್ನು ಹೇಳಿದ.

ರತ್ನವ್ವ ತಗ್ಗಿದ ದನಿಯಲ್ಲಿ "ಚಾವಡಿಗ ಯಾನ ತರತಿ........? ಕೊಂಗ್ಯಾಮನಸ್ಯಾ ಅಂವ....ಯಾನರ ಮಾಡಕೋತ ಹೋಗಾರವ........ ಕುಲಕರ್ಣೇರಿಗಿ ಅವಗ ನೆಟ್ಟಗೇತಿ...." ಅಂದಳು.

"ಯಾನ ಮಾಡಾರವ ಇದಾ?.... ನಾವ ಯಾರ ಹಸೀ ತೊಪ್ಪಲ ಮ್ಯಾಲ ಕಾಲ ಕೊಡೂದುಲ್ಲ. ಆ ತರದ್ಯಾನ ಅಂಜಿಕಿ ಇಲ್ಲ....ಯಾನಂ ಆದರ ಊರಾಗ ನಡತನ ಕೂಡೇತಿ....ದೊರನಾವ ಯಾಕ ಆಗವಲ್ಲ. ಬೀಗ ಆಗತಾನು...." ಎಂದು ಹೇಳುತ್ತ ಪಡಸಾಲೆಗೆ ಬಂದ ಕುಳಿತುಕೊಳ್ಳಹತ್ತಿದನು.

"ಕೂಡತಿ ಯಾಕ....? ಕತ್ತಲಿ ಆಗೇತಿ....ಉಣ್ಣಲಾಕ ಏಳ....?" ಎಂದು ಊಟಕ್ಕೆಯೇ ಎಬ್ಬಿಸಿದಳು. ಮೈಲ್ಲಿ ಅರಿವೆಗಳನ್ನು ಕಳೆದು ಊಟಕ್ಕೆ ಬಂದು ಕುಳಿತು, "ಯಾವಾಗ ಬಂದೆವ್ವಾ ತಾರಾ? ನನಗ ಬರಕ ಆಗಿಲಿಲ್ಲಾ....ಸಂಜೀ ವೇಳೇದಾಗ ಮಳಗೀಗಿ ಬಂದ ಹೋಗ ಬೇಕಾಗಿತ್ತಿಲ್ಲ... ಇದರ ಸಲುವಾಗಿ" ಎಂದ್ಲ.

ಗೂಡಾನ ರೊಟ್ಟಿ ತಗೋಳುಣು ಅಲ್ಲ!" ಎಂಬ ತಾರಕ್ಕನ ನುಡಿ ಕೇಳಿ ದೊಡನೆ ಕೂಡಲೆ ತಂಗಾಳಿಯಾಗಿ ತೀಡತೊಡಗಿತು.

ರತ್ನಾಬಾಯಿಗೆ ತಾನು ಇನ್ನೂ ಗಂಡು ಮಗುವನ್ನು ಹಡೆಯಬಹುದೆಂದು ಆಶೆಯಿತ್ತು. ಇಂದಿಲ್ಲ ನಾಳೆ ತಮ್ಮ ಸಂಸಾರದ ನಂದನವನದಲ್ಲಿ ಕಂದನ ಮುಖಕಮಲ ಅರಳಬಹುದೆಂದು ಗಂಡನಲ್ಲಿಯೂ ನಂಬಿಗೆ ಇದೆ ಎಂದು ಅವಳು ಭಾವಿಸಿದ್ದಳು. ಆದರೆ ಇಂದಿನ ಈ ಗಂಡನ ಮಾತು ಕೇಳಿ, ಅವನು ನಿರಾಶೆ ಗೊಂಡಿರುವನೆಂದು ಅರಿತಳು. ಆದರಿಂದ ಅವಳ ಮನಸ್ಸು ಉಕ್ಕೇರುವ ಸಾಗರದಲ್ಲಿ ತೇಲಿ ಬಿಟ್ಟ ತೆಪ್ಪದಂತೆ ಹೊಯ್ದಾಡಹತ್ತಿತು.

ಮಲ್ಲನ ಮನಸ್ಸಿನ ಸ್ಥಿತಿಯು ಹಾಗಿರಲಿಲ್ಲ. ಆತ ಸರಳಜೀವಿ. ಹೊಲ ಮನೆಗೆಲಸದಲ್ಲಿ ಹಗಲಿರುಳು ಕಳೆಯುವವ. ನೇಗಿಲಯೋಗಿ. ಅವನ ವಿಚಾರದ ನೆಲೆಯಿಷ್ಟೆ: "ದೇವರ ದಯದಿಂದ ಮಗಳಿಗೆ ಮನಿ ಒಂದು ನೆಟ್ಟಗ ಸಿಕ್ಕಿತು. ಲಗೂನ ಆಕಿ ದೊಡ್ಡಾಕಿ ಆಗಿ, ಮಗನ ಒಂದ ಹಡೀಲಿ, ಅಂದರ ತನ್ನ ಹೊಟ್ಟೆಲೆ ಒಂದ ಗಂಡ ಮಕ್ಕಳ ಇಲ್ಲಾದ ಇಲ್ಲ; ಮೊಮ್ಮಗನಾರ ಒಂದ ಹತ್ತರ ತಂದ ಇಟಕೋಕ ಬಂದೋತು" ಹೀಗಿರುವದರಿಂದಲೇ ಆತನು ತಾರಕ್ಕ ದಿನ ದಿನಕ್ಕೆ ಮೈ ತುಂಬಿ ನವತಾರುಣ್ಯದಲ್ಲಿ ಕಾಲಿಡುತ್ತಿರುವದನ್ನು ಕಂಡು ಹಿರಿಹಿರಿ ಹಿಗ್ಗುವನು. ಮಗಳು ಮೈನೆರೆದು ಬೇಗನೇ ಚೊಚ್ಚಲು ಮಗನನ್ನು ಹಡೆಯಲೆಂದೇ ಆಗಾಗ ದೇವರ ಹತ್ತಿರ ಬೇಡಿಕೊಳ್ಳುತ್ತಿದ್ದ ಮತ್ತು ಆ ಶುಭಸಮಯದ ದಾರಿ ಕಾಯುತ್ತಿದ್ದ. ತಾರಕ್ಕ ನಗುಮುಖದಿಂದ ಎದುರಿಗೆ ಬಂದು ನಸು ಲಜ್ಜೆಯಿಂದ ತಲೆ ತಗ್ಗಿಸಿದಾಗೊಮ್ಮೆ ಆ ಸುದಿನ ಸಮೀಪಿಸಿ ದಂತೆ ಅನ್ನಿಸುವದವನಿಗೆ. ಆಗಾಗ ತಂಗಿ—ಚಿಮ್ಮವ್ವ—ದೊರಕಿದಾಗ ನಗೆಯ ಮೇಲೆ ಹಾಕಿ "ನಮ್ಮ ತಾರಾ ದೊಡ್ಡಾಕಿ ಆದಳ ನೋಡು. ಹುಡುಗ ದೊಡ್ಡವ ಆಗಲಿ! ಬರೀ ಅಡವೀದಗದದಾಗs ತುರಕಬ್ಯಾಡರಿ....ದಿನಾ ಎರಡ ಮಾಪ ಹಾಲ ಕುಡೀಕಕೊಡತ....ಬಾ, ಲಗೂ ಕಣ್ಣಕಿತ್ತಲಿ ಭರವು. ನಾಳಿ ಪೋರಿ ಎದಿಮ್ಯಾಲಿ ದೊಡ್ಡಾಕಿ ಆಗಿ ನಿಂತಾಳು" ಎಂದು ಸೂಚಿಸದೆ ಇರುತ್ತಿರ ಲಿಲ್ಲ.

ಐದಾರು ತಿಂಗಳುಗಳು ಉರುಳಿದವು. ಒಂದು ದಿನ ಚಿಮ್ಮವ್ವ ಗಂಡ ನಿಗೆ "ಹಬ್ಬಾ ಹುಣ್ಣಿವಿ ಎಲ್ಲಾ ಆದು, ಇನ್ನ ತಾರಾನಾ ಕರಕೊಂಡ ಬರ್ರಿ!

ಬರೇ ನಾನs ಎಷ್ಟ ಟೊಂಕಾ ಕಟ್ಟಿಕೊಂಡ ಕೆಲಸಾ ಮಾಡಲಿ? ಕೈಗುಟಕಿಗಿ ಪೋರಿ ಬಂದೋತ, ಅಂದರ ಸುಗ್ಗೀ ದಿನದಾಗ, ನೀವ ಕರೀಕ ಹೋಗು ವಲ್ಲರಿ...." ಎಂದು ಹೇಳಿದಳು. ಹೂವಣ್ಣನಿಗೂ ಈಗ ಸೊಸೆಯನ್ನು ಕರೆದು ತರುವುದ ಸರಿಯೆನಿಸಿತು. ಅದೇ ದಿನ ಇಳಿಹೊತ್ತಿನಲ್ಲಿ ಮಗದುಮರ ಮನೆಗೆ ಹೇಳಲುಹೋದ. ಎರಡು ಮೂರು ದಿನಗಳಲ್ಲಿ ದಿನಾ ಚಲೋ ನೋಡಿ ಕಳಿಸಿ ಕೊಡಿರೆಂದ. ಆದರೆ ಅವನು ಅಲ್ಲಿ ಹೋಗುವಷ್ಟರಲ್ಲಿ ಒಂದು ವಿಶೇಷ ಸಂಗತಿ ನಡೆದಿದ್ದಿತು. ತಾರಕ್ಕ ಒತ್ತಟ್ಟಿಗೆ ಮೂಲೆಯಲ್ಲಿ ಕುಳಿತಿದ್ದಾಳೆ. ಮುಖ ಬಾಡಿದೆ, ಮನೆಯಲ್ಲಿ ಮತ್ತಾರೂ ಇಲ್ಲ. ಹೂವಣ್ಣ ಹೋಗಿ ಕೇಳಿದ "ಮನ್ಯಾಗ ಯಾರ ಇಲ್ಲ ಯಾನ, ತಾರಾ?" ಎಂದು.

ತಾರಕ್ಕ ಮಾವ ಬಂದನೆಂದು ಹಾಸಿ ಕೊಡಲು, ಮೊದಲಿನಂತೆ ಎದ್ದು ಬರದೆ ಕುಳಿತಲ್ಲಿಂದಲೇ "ಇಲ್ಲ; ಅವರ ಮಳಗಿಗೇ ಹೋಗಿದಾರs ಯಾನ ಕೆಲಸ ಇತ್ತು........?" ಎಂದು ತಲೆಕೆಳಗೆ ಮಾಡಿಯೇ ಕೇಳಿದಳು. ಲಜ್ಜೆಯು ಅವಳು ಮುಖವೆತ್ತದಂತೆ ಮಾಡಿದ್ದಿತು. ಹೂವಣ್ಣ ಅಷ್ಟಕ್ಕೇನೆ ತಿಳಿದು ಕೊಂಡು,

"ಯಾನಿಲ್ಲ!" ಎಂದು ಹೇಳಿ ಮನೆಗೆ ಬಂದು ಹೆಂಡತಿಗೆ ಹೇಳಿದ.

"ಪೋರಿ ನೆರದಂಗ ಕಾಣಸ್ತೇತಿ!" ಧ್ವನಿಯಲ್ಲಿ ಉತ್ಸಾಹವಿತ್ತು.

"ಯಾವಾಗ? ನಮಗ್ಯಾನ ಗೊತ್ತs ಇಲ್ಲಲ್ಲಾ........? ಗೊತ್ತಿದ್ದರ ನಾವ್ಯಾಕ ಕರೀಕ ಹೋಗತಿದ್ದೆವು?" ಎಂದಳು.

"ರತ್ನವ್ವ ಎಲ್ಲಾ ಹೊಲಕ ಹೋದ ಮ್ಯಾಲಿ, ಈಗ ನೆರದಿರಬೇಕ.... ಮನ್ಯಾಗ ಅವರ ಯಾರ ಇಲ್ಲ....ಪೋರಿ ಒಂದs ಮೂಲ್ಯಾಗ ಸಪ್ಪಗ ಮಾರಿ ಮಾಡಕೊಂಡ ಕೂತೇತಿ....ಅದಕ್ಕ ಅಂದಿನು...."

"ಎಲ್ಲೀದ ಏಳ; ಇಲ್ಲದ ಒಂದ ಹೇಳತ ಬರತಿ...."

"ಅಲ್ಲs; ಅದರ ಚಿನ್ಹ ಕಾಣಸುದಲ್ಲ ಯಾನ ನನಗ....?"

"ಇದ್ದರ ಇದ್ದೋತ ಏಳ" ಎಂದು ಸ್ವಲ್ಪ ತಡೆದು "ಇದೊಂದ ಛಲೂನ ಆಯ್ತು; ಇನ್ನೊಂದು ನಾಲ್ಕ ದಿನಾ ಹೊರಗಿ ನಮ್ಮ ಮನ್ಯಾಗ ಬಂದ ನೆರೀತಿಳ....ಕೂಡಸೋದಾ ಬಿಡೋದಾ ಎಲ್ಲಾ ನಮ್ಮ ಸುತ ಹತ್ತತಿತ್ತ....

ಅಲ್ಲೇ ಆಯ್ತು ನೆಟಿಗಾಯ್ತು!" ಎಂದಳು.
"ಅವರರ ಯಾನ ಕೂಡಸತಾರು...? ಅವರದೂ ಎಲ್ಲಾ ಹರತಾಟ ಆಗೇತಿ.... ಮದವಿ ಮಾಡಿಕೊಟ್ಟ ಇನ್ನ ಮೂರು ವರ್ಷ ತುಂಬಿಲ್ಲ" ಎಂದ ಹೂವಣ್ಣ ಆಕಳಿಸುತ್ತಾ.
"ಯಾನ ಆಯ್ತು ಹರತಾಟ ಆದರ, ಕೂಡಸ್ಯಾರಲ್ಲ...! ಯಾನ ಪ್ಯಾಲಿಂದ ಪ್ಯಾಲಿ ಆಗ್ಹೋಗ ಏತಿ...? ತಮ್ಮ ಮಗಳ ಬಿಸಿರಿ. ಯಾವಾಗ ಆಗೋದ ಆಯ್ತಲ್ಲ...?" ಎಂದು ಹಟಾತ್ತಾಗಿ ಚೆನ್ನಮ್ಮವ್ವ ಚುಚ್ಚಿ ನುಡಿದ್ದಳು.
"ನಿನ್ನ ಮಗನವ್ವೂ ಬಿಸಿರಿ ಇಲ್ಲಾ ಬೈನ, ಅನ್ನಾವರಲಾ ಅವರೂ!" ಸಹಜ ನುಡಿದ ಹೂವಣ್ಣ.
ಚೆನ್ನಮ್ಮವ್ವ ಸಿಡುಕಿನಿಂದ ಹರಿದು ಬಿದ್ದು "ಹೂಂ! ನೀನ್ಯಾ ಅನ್ನ ಅವರ ಕಡೆ ಆಗಿ..! ಇಷ್ಟು ಅವರ ಮುಂದ ಅನ್ನ ಅಂದರ, ಅವರ್ಯಾಕ ಏರೇ ಕೂಡ ತ್ತಾರ...! ಯಾನ ಸಿಗೋದ, ಈಗ್ಯ ಸಿಗೋದ, ಮುಂದ ಯಾನ ಸಿಗ ತೇತಿ...?" ಅಂದ್ದಳು. ಸ್ವಲ್ಪ ತಡೆದು "ನಿನಗೂ ಚಂದ ಕಾಣಾಕ ಹತ್ತೇತಿ— ಮನ್ಯಾಗಿ ಸೊಸೀನಾ ತಂದ ಕೂಡಸ ..ಮಕರಾ ಕಟ್ಟ, ಬಾರಸಲಾಕ ಹಚ್ಚಿ ಊರಿಗಿ ಊಟ್ಹಾ ಹಾಕಲ್ಲ; ನಂದ್ಯಾನ ಹೋಗತೇತಿ...." ಕೊಂಕು ನುಡಿ ಆಡಿದಳು, ಅಣಕದ ಸ್ವರದಲ್ಲಿ ಗೋಣು ಹಾಕುತ್ತಾ.
"ಹಾಲಿಲ್ಲ ಬಟ್ಟಲ ಇಲ್ಲ....ಈಗ್ಯ ಗುಟಕ್ ಅಂತ....ಆಕಿ ನೇಲರ ಕೂಡಸಲಾಕ ಬಂದೋತ, ಎಲ್ರೆ....? ನಮ್ಮ ಮನ್ಯಾಗರ ಈಗೆಲ್ಲಿ ಹತ್ತೆಂಟ ಕಾರಣ ಆಗಿದಾವು, ಬ್ಯಾಸರಸಲಾಕ....? ಬರೇ ಜನ್ಮದಾಗ ದುಡದ ದುಡದ ಬರೇ ದುಡ್ಡು ಗೋಳೇ ಮಾಡೋದ ಆಯ್ತಲ್ಲ, ಹೆಗ್ಗಣ ಮಣ್ಣಾ ಗೊಳೆ ಮಾಡಿ ದಂಗ....ಒಮ್ಮೆ ನಾಲ್ಕು ಮಂದಿ ಬೀಸಯಾಗ ಅನ್ನಾ ಹಾಕೂನು ಅಲ್ಲಿ...ಯಾನ ಸತ್ತರ ಸಂಗಾಟ ಒಯ್ಯೊದೇತಿ....ಅಷ್ಟು ಬಿಡಕೋತಿ....!"
"ಹತ್ತ ತೊಲಿ ಬಂಗಾರ ಹಾಕತಾರ ಯಾನ ಕೇಳ್ರಿ, ಅಲ್ಯಾಗ...ಕೂಡ ಸೂನು.... ನಮ್ಮದ್ಯಾನ ಹೋಗತೇತಿ..!" ತನ್ನ ಗುಣ ಬಿಡಲಿಲ್ಲ ಚೆನ್ನಮ್ಮವ್ವ.
ಹೂವಣ್ಣ ಮುಂದೇನೂ ಮಾತಾಡಲಿಲ್ಲ. ಅಪ್ಪನೆದಲ್ಲಿಯೆದ್ದು "ಹೆಂಗಸರ ಸಮಜುತಿ ಕಡಮಿ..." ಎಂದುಕೊಂಡು ಹೊರಗೆ ಹೋದ.
....ಸಂಜೆಗೆ ರತ್ನವ್ವ ಹೊಲದಿಂದ ಬಂದಳು. ಬರುವಷ್ಟರಲ್ಲಿ ಮನೆಯೊಳಗೆ

ಮಗ್ಗಳು ಮೈನೆರೆದು ಕೂತಿದ್ದಳು. ಬಂದಕೂಡಲೆ ರತ್ನಪ್ಪ ತಲೆಯ ಮೇಲಿನ ಬುತ್ತಿಯ ಹೆಡಿಗೆಯನ್ನಿಳಿಸಿಟ್ಟವಳೇ ನೀರೊಲೆಗೆ ಉರಿ ಮಾಡಿದಳು. ಲಗುಬಗೆಯಿಂದ ಹೋಗಿ, ನೆರೆಹೊರೆಯ ನಾಲ್ಕೈದು ಜನ ಮುತ್ತೈದೆಯರಿಗೆ ನೀರೆರೆಯಲು ಬರಹೇಳಿದಳು. ಅಡಕಿಲದೊಳಗಿನ ಅರಸಿಣಬೇರು ಹುಡುಕಿ ತಂದು, ಕುಟ್ಟಿ ಬೀಸಿ ಬಟ್ಟಲೊಳಗೆ ಕಲಿಸಿಟ್ಟಳು. ಎಣ್ಣೆಯ ಸೀಸೆಯೊಳಗೆ ಎಣ್ಣೆ ಇದೆಯೋ ಇಲ್ಲವೋ ನೋಡಿ, ಇದ್ದಷ್ಟು ಎಣ್ಣೆ ಬಟ್ಟಲದಲ್ಲಿ ಹಾಕಿಟ್ಟಳು. ಅಷ್ಟರಲ್ಲಿ ಓಣಿಯೊಳಗಿನ ಹೆಂಗಸರೆಲ್ಲ ಕೂಡಿದರು. ಐದು ಜನ ಮುತ್ತೈದೆಯರು ತಾರಕ್ಕನಿಗೆ ಎಣ್ಣೆ ಹೊಸಿ, ನೀರೆರೆದರು. ಅರಸಿಣ ಹಚ್ಚಿದರು. ಮಣೆ ಹಾಕಿ ಕೂಡಿಸಿ ಹಾಡಿದರು ಕೂಡ. ಆ ಹೊತ್ತು ಮನೆಯೊಳಗಿನ ಅಡಿಗೆ ಉಣಬಾರದೆಂದು, ಚಾಂಗಲಪ್ಪ "ಮುದ್ಲುಕಿ ಶಾವಿಗೆ ಪಾಯಸ ಅನ್ನ ಮಾಡಿ, ತನ್ನ ಸೋದರಸೊಸೆಯ ಕೈಯಿಂದ ತುಂಬಿ ಕಳಿಸಿದಳು. ಮತ್ತೂ ಮೂರು ನಾಲ್ಕು ಮನೆಯವರು ತಾಟು ತುಂಬಿ ತಂದಿಟ್ಟರು." ಇಷ್ಟೆಲ್ಲ ಆಗುವ ವರೆಗೆ ಮೂರು ನಾಲ್ಕು ತಾಸು ರಾತ್ರಿಯಾಯಿತು. ರತ್ನವ್ವ "ಇಂದ್ಯಾ ಅವರೂ ಮಳಗಿಗಿ ಪಟ್ಟಿಗಿ ಹೋದರು. ಈಗ ಯಾರ ಕೈಲೆ ಹೇಳು ಹಚಕುಡೋದು ಕತ್ತಲ್ಯಾಗ, ಹರಿವತ್ತ ಮನೀಗಿ ಬಂಧ, ಸಕ್ಕರಿ ಕೊಟ್ಟ ಹಚ್ಚ ಕೊಟ್ಟರಂತ ಚೌಗಲೇರ ಮನೆ ತನಕೆಲ್ಲ!" ಎಂದಳು.

"ಇಳಿಹೊತ್ತಿನ್ಯಾಗ ಮಾವಾ ಬಂದಿದ್ದ" ಎಂದು ತಾರಾ ಮೆಲ್ಲಗೆ ಹೇಳಿದಳು.

"ಇಂದ್ಯು ಅವರಿಗೂ ಗೊತ್ತಾಗಿರಬೇಕಲ್ಲ..." ಎಂದು...ಮನದಲ್ಲಿಯೇ ಅಂದುಕೊಂಡು, ಹಾಸಿಗೆ ಹಾಸಿ ಮಲಗಿಕೊಂಡಳು ರತ್ನಾ. ಆ..ಹೊತ್ತು ಬಹಳ ಹೊತ್ತಿನ ವರೆಗೆ ಅವಳಿಗೆ ನಿದ್ರೆ ಬರಲಿಲ್ಲ. ಮನಸ್ಸಿನಲ್ಲಿ "ಪೋರಿ ನೆರೆದು ಕೂತಿತು. ಕೂಡಸದಿದ್ದರ ಮಂದಿ ಯಾನ ಅಂದಾರು...? ಒಬ್ಬಾಕೆ ಮಗಳ "ಮೊನ್ನೆ ಮದವಿ ಮಾಡಿ ಕೈ ಖಾಲೆ ಆಗಿದೇವು...ಅವರವರ ಯಾನ ಇದ್ದ ತರೊಳಗೆ ಗುಂಡಕ ಮಾಡಿಕೋಳವರ ಇದ್ದಾರು? ಅಟ್ಟೇದಾಕ್ಕಿ ಚಿವ್ಮಾ? ಯೋಚಿಸಿ ಯೋಚಿಸಿ ಯಾವ ನಿರ್ಣಯಕ್ಕೂ ಬರಲಾಗದೆ, "ಅಂಪ" ಇದಾ, ಆಕಿ ಇದಾಳು....ಬೆನ್ನಿಗೆ ಬಿದ್ದಾವರ ಒಬ್ಬರಿಗೊಬ್ಬರ ಯಾನ ಯಾಕ ಮಾಡಕೋನಾರು?" ಎಂದುಕೊಂಡು ಮಲಗಿಬಿಟ್ಟಳು.

ಅತ್ತ ಚಿನ್ನುವ್ವ ರಾತ್ರಿ ಬಹಳ ಹೊತ್ತಿನ ವರೆಗೆ ದಾರಿ ಕಾಯ್ದಳು, ಯಾರಾದರೂ ಹೇಳಲಿಕ್ಕೆ ಬಂದಾರೆಂದು. ಆದರೂ ಯಾರೂ ಹೇಳಲಿಕ್ಕೆ ಬಾರದಿರಲು ಅವಳಿಗೆ ಇರುಳೆಲ್ಲ ನಿದ್ರೆಯೇ ಹತ್ತಲಿಲ್ಲ. ಇನ್ನು ನಸುಕಿರುವಾಗಲೇ ಎದ್ದು ಅಣ್ಣನ ಮನೆಗೆ ಬಂದಳು. "ನಿನ್ನೆ ಮದಿನದಾಗs ಪೋರಿ ನೆರೆದ ಕೂತೇತಿ, ಯಾರ ನಮಗ ಹೇಳೋದ ಇಲ್ಲ ಯಾನ?" ಎಂದು ಕೇಳಿದಳು.

"ನಾವ ಯಾನ ಮಾಡೂಣು ತಾಯಿ! ಸುಗ್ಗಿ ದಿನಾ. ದಿನಾ ಹೊಲಕ ಹೋಗಹಂಗ ಹೋಗಿದೇವು....ಮದಿನ್ನದಾಗ ನೆರೆದ ಕೂತಿದಾಳು....ಮಾವ ಬಂದ ನೋಡಿ ಹೋಗಿದಾ....ಇಲ್ಲೇ ಹೊಳೀ ಹಾದೀ ಮ್ಯಾಲ ಮಳಗ್ಯಾಗs ಇದ್ದೇವ....ಹಳ್ಳೀ ಹೊಡದ ಹೇಳೋದ ಇಲ್ಲ....?" ಎಂದು ಅವರ ಮೇಲೆಯೇ ತಪ್ಪು ಹೊರಳಿಸುತ್ತ ರತ್ನವ್ವ ನುಡಿದಳು.

ಚಿನ್ನುವ್ವ ಸಿಡಿದು ಬಿದ್ದು "ಎಲ್ಲಾರು ಶಾಣ್ಯಾರ?"

ಮುಂದೆ ಮಾತಾಡಗೊಡದೆ ರತ್ನವ್ವ ಹೇಳಿದಳು..."ಈಗ ಮಳಗಿಗಿ ಹೇಳಿ ಹಚಕೊಟ್ಟದ್ಯಾನು....ಅವನೂ ನಿನ್ನಿಂದs ವಸ್ತೀ ಇದಾ, ಈಗ ಬಂದಾ, ಪಂಡಿತರನ ಕರದ ಸಕ್ಕರಿ ಕೊಟ್ಟ ಹಚ್ಚಕೊಟ್ಟಾರಂತ...."

"ಸಕ್ಕರಿ ಕುಡಲಾಕ ಯಾನ....? ಊರಾಗಿಂದ ಊರಾಗ ಎಲ್ಲಾರು ಕೇಳಿದಾರಲ್ಲ...." ಸ್ವಲ್ಪ ನಿಂತು ತಾರವ್ವನ ಕಡೆಗೆ ನಿಟ್ಟಿಸಿ ನೋಡಿ... "ಪೋರೀನಾ ಹಿಂಗ್ಯಾಕ ಕೂಡಸಿದೀರಿ....? ನಾಕ್ಕ ಮಂದಿನಾ ಕರದ ನೀರ ಹಾಕೋದಾ....ಅರಷಿಣ ಹಚ್ಚೋದಾ ಬಿಟ್ಟ....ನೆರದಂಗರ ಕಾಣಸ್ತೇತ್ಯಾನ ಪೋರಿ....?"

"ನಿನ್ನೆ ರಾತ್ರಿ ನೀರ ಹಾಕಿದ್ಯು ಅಲ್ಲ; ನಮಗ್ಯಾನ ತಿಳೀದುಲ್ಲಾ....? ನನ್ನ ಮಗಳ ನೆರದರ ನನಗ್ಯಾನ ಖಿಸಿರಿ ಬ್ಯಾಡಾಗೇತಿ ಯಾನ? ಹನ್ನ್ಯಾಡ ಮಂದಿ ಇದಾರು, ಹ್ಯಾಂಗ ಮಾಡೋನು ಅನ್ನೂ ಹಂಗ ಏತಿ....?" ಎಂದು ಸ್ವಲ್ಪ ಸಿಟ್ಟಿಗೆ ಬಂದೇ ರತ್ನವ್ವ ನುಡಿದಳು.

"ಅದಕ ನಿನ್ನಿಂದೂ ಮುಚ್ಚಿಟ್ಟೇದಿಯಲ್ಲ....? ಯಾರಿಗೂ ಹೇಳುಲ್ಲದ" ತಿರಸ್ಕಾರದಿಂದ ನುಡಿದಳು ಚಿನ್ಮಾ.

"ಮುಚ್ಚಲಾಕ ಅದ್ಯಾನ ಗಡಗೀ ಬಾಯಿ ಏತಿ....? ಊರಾಗಿಂದ

ಊರಾಗ ಅದ್ಹಿಂಗ ಅಡಗೀತು....ಇಂದ ಮುಚ್ಚಿದರ ನಾಳಿ ಆದರೂ ನಾವs ಕೂಡಸಕ ಬ್ಯಾಡಾ....?"

"ಅದಕ್ಕs ಮುಹೂರ್ತ ಎಂದ ಏತಿ ನೋಡಿ ಕೂಡಸರಿ ಅಲ್ಲಾ....ಬಾರ ಸಾವರನಾ ಹಚ್ಚಿ....!"

"ಕೂಡಸೋದಾ ಬಿಡೋದಾ....ನನ್ನ ಕೈಯಾಗ ಯಾನ ಏತೆವ್ವ! ಆವರ ಬಂದ ಮ್ಯಾಲ ಯಾನ ಅಂಬೋದ ತಿಳ್ಯೋದ...."

"ತಿಳಿಲಾಕ ಯಾನ? ಮಾಡೋದ ಮಾಡಕ ಬೇಕಲ್ಲ....ಯಾನ ಬಿಡೋದ ಐತಿ....? ನಮ್ಮಲ್ಲೆ ನೆರದಿದ್ದರ ನಾವ ಕೂಡಸತಿದ್ಯ....?" ಎಂದು ಮನಸ್ಸಿನಲ್ಲಿ ಇಲ್ಲದಿದ್ದರೂ ಆಡಿತೋರಿಸಿದಳು.

"ಎಲ್ಲಿ ನೆರದರೆ ಯಾನ ಆಯ್ತು....ಎಲ್ಲಾ ಒಂದೇ ಮನೀ ಇದ್ದಾಂಗ ಏತಿ. ಅಲ್ಲಿ ಒಯ್ದು ಕೂಡಸರಿ....ನಾವೂ ಈಗ ತಾಪತ್ರೇದಾಗ ಇದೇನ....ಇನ್ನ ಒಂದು ವರ್ಷ ಆಗಿಲ್ಲ....ಮದಿವಿ ಮಾಡಿಕೊಟ್ಟ....!" ಅವಳ ಮಾತನ್ನು ಅವಳ ಕೊರಳಲ್ಲಿಯೇ ಕಟ್ಟಲು ರತ್ನವ್ವ ಯತ್ನಿಸಿದಳು.

ಚಿಮ್ಮವ್ವ ಕೆರಳಿ " ಯಾನ ಆಯ್ತ ಮದಿವಿ ಮಾಡಿಕೊಟ್ಟರ....? ಕಾಲಿಗಿ ಅರಿವಿ ಕಟ್ಟಿಕೊಂಡ ಹನ್ನಾ್ಯಡ ವರ್ಷ ತಿರಗಿದ್ದರ....ಮಗಳಿಗಿ ಇಂಥಾ ಮನೀ ಸಿಗೋಲ್ಲ....ಆಗತಿತ್ತ...." ಸ್ವಲ್ಪ ಧೇನಿಸಿಕೊಂಡು...."ನಿಮ್ಮ ಕೈಲೆ ಆಗ ದಿದ್ದರ ಬಿಡರಿ ನಾವ ಕೂಡಸತೇವ....ಅಳ್ಯಾಗ ಯಾನ ತರತೀರಿ....?" ಎಂದು ಕೇಳಿದಳು.

"ತರೋದ ಬಿಡೋದ ನನ್ನ ಕೈಯಾಗ ಯಾನ ಐತೇ....? ಒಂದ ತಾಯಿ ಹೊಟ್ಟೀಲೆ ಹುಟ್ಟಿದವರs ಇದೀರಿ....ಬರಾನಾ ಅವನ ಕೈ ಹಿಡಿದ ಕೇಳಲ್ಲ...ಅಳ್ಯಾಗ ಯಾನ ಕೊಡತಿ ಅಂತ...."

"ನಿನ್ನ ಕೈಯಾಗ ಯಾನ ಇಲ್ಲಾ....ಯಾತಕ ಮಾತಾಡತಿ.... ಮಾರಿತಗೊಂಡ....?" ಎಂದು ಒಟಗುಡುತ್ತ ಸಿಟ್ಟಿನಿಂದಲೇ ಚಿಮ್ಮವ್ವ ನಡೆದಳು.

"ಹಾಂಗ ಯಾಕ ಸಿಟ್ಟಿಗೆ ಬರತೀನs...? ಯಾನ ಮಾಡಕೊಳ್ಳೋದ ಹೇಳಿರಿ, ಜರಾ ಸಮಾಧಾನಲೆ ಮಾಡಕೋರಿ....ನನ್ನ ಮ್ಯಾಲ ಹರದ ಬಿದ್ದರ ಯಾನ ಮಾಡಾಕಿ, ಹೆಂಗಸ ಬಾಲಿ....ನಾ...." ಎಂದು ಮೃದುಸ್ವರದಲ್ಲಿ

ಹೇಳುತ್ತ ಬಾಗಿಲವರೆಗೆ ಬಂದಳು. ಹಿಂದಿರುಗಿಯೂ ಕೂಡ ನೋಡದೆ ಹೋಗಿಬಿಟ್ಟಳು.

೩

"ಸಾಮಾನು ಸಹಿತ ಎಲ್ಲಾ ಕಟ್ಟಿ ತಯಾರ ಆಗೇತೆಲ್ಲಾ ?" ಎಂದು ಕೇಳುತ್ತ ಸುಂದರಾಬಾಯಿ ಮನೆಯೊಳಗೆ ಪ್ರವೇಶಿಸಿದಳು, ತಲೆಯ ಮೇಲಿನ ಬುತ್ತಿಯ ಬುಟ್ಟಿಯನ್ನು ಕೆಳಗೆ ಇಳುಹುತ್ತ.

ಒಳಗಿನಿಂದ ಆತುರದಲ್ಲಿ ಬಂದು, ರತ್ನವ್ವ ಬುಟ್ಟಿಯನ್ನು ತೆಕ್ಕೊಳ್ಳುತ್ತ "ಬಾ ಸುಂದರಾ, ಒಬ್ಬಾಕಿ ಬಂದೀ? ರಾಮಣ್ಣ ಬರಲಿಲ್ಲಾ? ಹುಡುಗನೂ ಕಾಣಸುವುಲ್ಲ....!" ಸ್ವಲ್ಪ ಬಾಡಿದ ಮುಖದಿಂದ ಬಂದೇ ಉಸುರಿನಲ್ಲಿ ಕೇಳಿದಳು. ಸ್ವಲ್ಪ ತಡೆದು "ನೀರ ತರಲ್ಯಾನ ಕುಡೀಕ್ಕಾ...?" ಎಂದು ಕೇಳಿದಳು.

"ಈಗ್ಯಾನ ಬ್ಯಾಡ, ನೀರಡಿಕಿ ಆಗಿಲ್ಲ; ಹುಡುಗನ ಪಾಸ-ನಾಪಾಸ ಹ್ಯೇಳಾವರ ಇದ್ದರ ಇಂದ... ಅದಕ್ಕ ಆಂವ ಬರಲಿಲ್ಲ..."

ರತ್ನವ್ವ ಅವಳಿಗೆ ಮುಂದೆ ಹೇಳಗೊಡದೆ, "ನಾಳೆ ಸಂಜಿಗೇ ಉಡೀ ತುಂಬ್ಯೋಧ್ಯಾ, ಎಂದಿಂದೂ ಮುಂಧ್ಯಾಗಲೆ. ಹೇಳಕೋತ ಬಂದಿದ್ಯಾನೊ ಮತ್ತ! ಮದವಿಗೂ ಬರಲಿಲ್ಲ ಅಣ್ಣ ! ಈಗೂ ಇಲ್ಲ !" ಕಣ್ಣಲ್ಲಿ ಬಂದ ನೀರನ್ನು ಸೀರೆಯ ಸೆರಗಿನಿಂದ... ಒರಸುತ್ತ "ಬಡವರ ಮನೀಗ್ಯಾ ಯಾತಕ ಬಂದಾನಪ್ಪ ಆಂವಾ !" ಎಂದಳು.

"ಇಲ್ಲ ; ನಾಳಿ ಹರಿವತ್ತಕ ಬರತಾನ... ಹುಡುಗನ ಸಾಲ್ಯುಕಲ್ ಮಾಸ್ಯೆರ ಮುಂದ ಕೂಡಸಕೊಂಡ. ಇಂದಕ್ಕ ಇಬ್ಬರೂ ಬಂದರ, ಹರಪ್ತ ಮನ್ಯಾಗಾ ಅಂಗ ಡ್ಯಾಗಾ ಯಾರ ಬ್ಯಾಡಾ...?" ಎಂದು ಸಮಾಧಾನಪಡಿಸಿದಳು.

"ಇಂದ ಗಾಡೀ ಗೂಡಾ ಬರಲಿಲ್ಲ....! ನಾಳಿ ಯಾನ ಬರತಾ ಹಿಂದಿಂದ...? ಯಾವಾಗೆಲ್ಲ ಮನೀ ಅಂಗಡಿ ಅಂತ ತಮ್ಮ ಜನ್ಮಕ್ಕಾ ಬಡ ಕೋಳವರು ಇಕಡ್ಯೇದವ್ವರದ. ಯಾನ ಪರವಿ ಆಪರಿಗ...?" ಎಂದು ರತ್ನವ್ವ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದಳು.

ರಾಮಣ್ಣ ರತ್ನವ್ವನ ಅಣ್ಣ. ಸ್ವಲ್ಪ ಕಲಿತವ. ಜಿನಾಪುರದಲ್ಲಿ ಒಂದು ಚಿಕ್ಕ ತಕ್ಕಡಿ ಅಂಗಡಿಯೊಂದನ್ನು ಇಟ್ಟುಕೊಂಡಿದ್ದಾನೆ. ಹಿರಿಯರಿಂದ ಬಂದ ಸ್ವಲ್ಪ ಭೂಮಿಯೂ ಇದೆ. ಹೊಲದಲ್ಲಿಯ ಬೆಳೆ ಹಾಗೂ ತನ್ನ ಅಂಗಡಿಯಲ್ಲಿ ಆಗುವ ಉಳಿತಾಯಗಳಲ್ಲಿ ಮನೆತನ ಚೆನ್ನಾಗಿ ಸಾಗಿಸುತ್ತಿದ್ದ. ಅವನಿಗೆ ರತ್ನವ್ವ ಒಬ್ಬಳೇ ತಂಗಿ. ತಂಗಿಯ ಮಗಳ ಮದುವೆಗೂ ಅವನಿಗೆ ಬರಲಾಗಲಿಲ್ಲ. ಕೇವಲ ಹೆಂಡತಿ ಮಗನನ್ನಷ್ಟೇ ಕಳುಹಿದ್ದ. ಈಗ ಬರಬೇಕೆಂದು ಯೋಚಿಸಿದ್ದ. ತಂಗಿಯ ಮನೆಯಿಂದ ಕರೆಯಲು ಬಂದ ಗಾಡಿಯಲ್ಲಿ ಹೆಂಡತಿ–ಸುಂದರಾಬಾಯಿಯನ್ನು ಮುಂದೆ ಕಳುಹಿದ್ದ. ಅವಳು ಬಂದಾಗಿನ ಮಾತುಕತೆಗಳೇ ಇವು.

"ನೋಡಕ್ಕ, ... ನಾಳಿ ಹರಿವತ್ತ ಬರತಾರ ಯಾನ ಇಲ್ಲ. ಅಂದ್ರ ನನಗ ಅನ್ನಾಕೆ...."

ಇಷ್ಟರಲ್ಲಿ ಒಳಗಿನಿಂದ ತಾರಕ್ಕ ಬಂದು, "ಅಂತೂ ಬರಲಿಲ್ಲ ಅಂತ?" ಎಂದು ಕೇಳಿದಳು.

ಸುಂದರಾಬಾಯಿ ಹೊರಳಿ ನೋಡಿದಳು, ತಾರಕ್ಕನನ್ನು. ಎರಡು ಎರಡೂವರೆ ವರ್ಷಗಳ ಹಿಂದೆ... ಅವಳ ಮದುವೆಯ ಕಾಲಕ್ಕೆ ಅವಳು ನೋಡಿದ ಛಾಕೆ ಆಗಿನ ಹುಡುಗಾಟ ಈಗ ತಾರಕ್ಕನಲ್ಲಿರಲಿಲ್ಲ. ಅವಳ ಅಂಗಾಂಗಗಳಲ್ಲೆಲ್ಲ ನವತಾರುಣ್ಯೋದಯ ಹೊರಹೊಮ್ಮುತ್ತಿತ್ತು. ಮೊದಲೇ ಲಿಂಬೆಯ ಹಣ್ಣಿನ ಅವಳ ದೇಹಕಾಂತಿ ಈಗ ಅರಿಷಿಣ ತೊಡೆದುದರಿಂದ ಮತ್ತಿಷ್ಟು ಕಾಂತಿಯುಕ್ತವಾಗಿತ್ತು. ಸುಂದರವ್ವ ಹೆಂಗಸಾದರೂ ಒಂದು ಕ್ಷಣ ನಿಟ್ಟಿಸಿ ನೋಡಿ, "ಯಾನ ಅರಿಷಿಣಾ ಬಡಕೊಂಡಿದಿ ತಾಯಿ ಮೈಯ್ಯಲ್ಲಾ? ಜರಾ ಹಚ್ಚ ಅನಬೇಕವ್ವಾ. ಹೊರಗ ಹೋಗಾಕ ಮಾಡಾಕ..." ಸ್ವಲ್ಪ ತಡೆದು "ರತ್ನಾನ ಸಲುವ ಬಡಗಿ ಮಾಡಬೇಕಂತ ಮಾಡೀದಿರಿ ಕಾಣಸ್ತೇತಿ.... ಗಂಡ ಗ್ಯಾಂತಿ ಕೂಡಿ ನೀವ...." ಎಂದು ನಸುನಗೆ ಬೀರಿ ನಗೆಯಾಡಿದಳು.

"ನೀವೊಂದಿಷ್ಟು ಅಂಥ ಜಗಳಾ" ತಗೋವ್ವ ಇನ್ನ ನಾ ಇಷ್ಟು ಅಂಥ ತಲಿಮ್ಯಾಲ ತಟ್ಟಿ ಹೊತ್ತೀನು." ರತ್ನವ್ವನಕಿಂತ ಸ್ವಲ್ಪ ಒಣಗಿದ್ದಿತ್ತು.

"ಯಾಕ? ಯಾನಾಯ್ತು?" ಎಂದು ಕುತೂಹಲದಿಂದ ಕೇಳಿದಳು, ಸುಂದರಾಬಾಯಿ.

"ಯಾನ ಇಲ್ಲ; ನಮ್ಮ ಮನ್ಯಾಗ ಮದಿವೆ ಆಗೇತಿ. ನಿಮ್ಮಲ್ಲೇs ಕೂಡಸರಿ, ಅಳ್ಯಾಗ ನಾವ ಯಾನ ತರೋದ ತರತೇವ....ಇಂಥಾ ದಿನದಾಗ ನಮ್ಮ ಕೊಳ್ಳಿಗಿ ಮತ್ತ ಉರಲ ಹಾಕಬ್ಯಾಡರಿ ಅಂದರ...."

ನಡುವೆಯೇ ಅಣಕದ ಸ್ವರದಲ್ಲಿ "ಎಲ್ಲಾ ಹೀಂಗs ಅನತೀರಿ ತಗೋ! ಗಂಡಾ ಹ್ಯಾಂತಿ ನೀವ! ಮನಸಿನ್ಯಾಗ, ಮಗಳ ಯಾವಾಗ ನೆರೆದಾಳು ಯಾವಾಗ ಕೂಡಸೇವ ಅಂತ....ಹಾದಿ, ನೋಡತಿದ್ದಾದೀರಿ ತಗೋ...." ಕೈಮಾಡಿ ಸುಂದರವ್ವ ನುಡಿದಳು.

"ಇಲ್ಲಾ; ಕೂಡಸೋದ ಮನಸಿನ್ಯಾಗ ಇದ್ದವ್ಯಾಲ ಆಗs ಕೂಡಸ ವಲ್ಲೇವ ಯಾನ? ಸುಮ್ನ ಒಂದ ವರ್ಷ ಒತ್ತಕೋತ....ಬಂದೇವ....ಕಡೀಕ ಅವರ ತಮ್ಮ ಹಟಾನs ಬಿಡಲಿಲ್ಲ...."

"ಹಟಾ ಹಿಡಿಲಾಕ ಇದರಾಗ ಯಾನೇತೀ ?" ಸ್ವಲ್ಪ ತಡೆದು "ಎಲ್ಲ ಕಡಿಸಿದ್ರೂ, ಅಳ್ಯಾಗ ಮಗಳಿಗಿ ಮಾಡೋದ ಮಾಡತಿದ್ರೆಲಾ! ಇದರಾಗ ಯಾನ ಏತಿ? ಊರಿಗೆಲ್ಲಾ ಊಟಾ ಹಾಕಿದರಾಗ...." ತುಸು ಯೋಚಿಸಿ, ಮನಸ್ಸಿನಲ್ಲಿ, ಅತ್ತಿಗೆಯ ಮನಸ್ಸಾದರೂ ಏನಿದೆ ತಿಳಕೊಳ್ಳಬೇಕೆಂದು "ಯಾನ ಆದರೂ....ಮಗಳಾ ಅಳ್ಯಾಗನ ಎಲ್ಲಾ ಆಗೋದಲ್ಲಾ! ಯಾವಾಗಾದರ!" ಹೀಗೆ ಒಂದು ಮಾತು ಒಗೆದಳು.

ರತ್ನವ್ವ ನಿಟ್ಟುಸುರು ಹಾಕಿ "ನೀವೊಬ್ಬಾಕಿ....ಕಡಿಮಿ ಆಗಿದ್ದ್ಯಾ ನವ್ವ ಹೀಂಗೆ ಅನ್ನಾಕಿ....?" ಬೇಸರದ ದನಿಯಲ್ಲಿ ಕೇಳಿದಳು.

"ನಾನs ಅನ್ನಲಾಕ ಯಾನ? ಮಗಳಿಗಿ ಮಾಡಲಾಕ ಬ್ಯಾಡಾ?" ತಾರಕ್ಕನ ಕಡೆಗೆ ನೋಡಿ "ಯಾನವ್ವಾ ತಾರಾ....?" ಎಂದು ಕೇಳಿದಳು.

ರತ್ನವ್ವ ಮನಸ್ಸಿನಲ್ಲಿಯೇ ಅಂದುಕೊಂಡಳು. "ಎಲ್ಲಾರು ಹೀಂಗ ಹೇಳಾವರ, ನನಗೆಷ್ಟ ಮಾಡಿದಾ ಇಕ್ಕಿ ಗಂಡ....?" ಎಂದು ಹಣೆಗೆ ಹದಿ ನಾರು ಗಂಟಿಕ್ಕಿ ಕೆಲಹೊತ್ತು ಕಳೆದು "ಅದಕ ನಾವೂ ಸುಗ್ಗಿ ಆಗಲಿ, ಸಾಲ ಕಳೀಲಿ; ಕೈಯಾಗ ದುಡ್ಡು ಆಗಾನಾನ ಮಾಡಬೇಕಂತ ವರ್ಷಾನ ವರ್ಷ ಮುಂದ ಹಾಕಿದೇವಲ್ಲ!" ಎಂದು ಏನೋ ಒಂದು ಮಾತಾಡಬೇಕೆಂದು ಮಾತಾಡಿದಳಾದರೂ ಅವಳ ಮನಸ್ಸು ಮುಂದೊರಿದು "ಮಾಡಸಕೋಲಾಕ

ಅಂದರ ಎಲ್ಲಾರು ನಾ ಅಂತ....ಬರತಾರ....ಕೊಟ್ಟರ ಒಂದ ಯಾಕ ಎರಡ ಸೀರಿ ಬೇಕ ಅಂತಾರ....! ಹಾಂಗs ನಮಗ ಯಾರ ಮಾಡಕ ಬರೂದುಲ್ಲಾ!" ಎಂದು ಮಾತಾಡದಿರಲಿಲ್ಲ.

ಸುಂದರವ್ವನ ಮುಖ ಸ್ವಲ್ಪ ಕಪ್ಪಾಯಿತು. ಆದರೂ "ಯಾರ್‍ಯಾರ ದೈವದಾಗ ಎಷ್ಟೆಷ್ಟ ಐತಿ ಅಷ್ಟಷ್ಟ ಮಾಡಸಕೋತಾರಲ್ಲ....? ಆಕೀ ದೈವದಾಗ ಐತಿ ಆಕೀಗಿ ಮಾಡಿರಿ...." ಎಂದು ನುಡಿದಳು. ಅವಳ ಅಂತರ್ಯದಲ್ಲಿ "ನಿಮ್ಮ ನಸೀಬದಾಗ ಇದ್ದಿಲ್ಲ....!" ಎಂದು ಮಾತು ಮುಂದೊರಿಯಿತು. ಬೇಕಂತಲೆ ಮಾತಿನ ದಿಸೆ ಬದಲಿಸಬೇಕೆಂದು, "ಯಾವಾಗ ನಸೀಕಲೆ ಮಾಡಿ ಕಟ್ಟೇತಿ ; ರೊಟ್ಟಿ ಬಿಚ್ಚಿ ಸ್ವಲ್ಪ ಆರಾಕಬೇಕು..." ಎಂದಳು.

"ಬಿಚ್ಚಿ ಆರಾಕೋದ್ಯಾನ···ಮನ್ಯಾಗ ಒಟ್ಟೆ ವಾಲಗ ಆಗೇತಿ, ಅಡಿಗಿ ಆಳ್ಯಾಗಿನ ನಾಲ್ಕ ಮಂದಿಗಿ ಕೊಟ್ಟರs ಬರಲಿ...."

"ಯಾನರೆ ಮಾಡಕೋರಿ ತಾಯಿ !" ಎಂದು ಅಲ್ಲೇ ಹಾಸಿದ ಕಂಬಳಿಯ ಮೇಲೆ ಉಸ್ಸೆಂದು ಉರುಳಿದಳು, ಸುಂದರಾ.

"ಯಾಕ ಉಸ್ಸ ಉಸ್ಸ ಮಾಡಕ ಹತ್ತೀದಿ........ಯಾನ ನಿಂತಿತಿ ಯಾನಬೇ ? ಎಷ್ಟ ದಿನಾ ಆಯ್ತು ಮುಡಚಟ್ಟ ಆಗಿ....?" ಎಂದು ರತ್ನವ್ವ ಕೇಳಿದಳು, ಅವಳನ್ನು ಚೆನ್ನಾಗಿ ನಿರೀಕ್ಷಿಸುತ್ತ.

ಸುಂದರಾಬಾಯಿ ನಸುಲಜ್ಜೆಯಿಂದ "ಯಾನ ಇಲ್ಲ ; ಹೀಂಗs ತಡೀತೀತಿ ಯಾವಾಗರ····ಎರಡೆರಡ ತಿಂಗಳ...." ಎಂದು ಮಾತ್ರ ಒಪ್ಪಿಕೊಂಡಳು.

"ನಿಂತೋತ ಏಳ! ನಾಲ್ಕೈದ ವರ್ಷ ಆಯ್ತು...ನಡವ ಒಂದ ಪೋರಿ....ಆಗೀ ಆಗೂಲ್ದಂಗ ಆಯ್ತು...." ಎಂದು ಅನ್ನುತ್ತ ಒಳಗೆ ಹೋಗಿ... ಏನೋ ನೆನಪಾದಂತಾಗಿ "ಮಧ್ಯಾನ್ನದಾಗ ಮನ್ಯಾಗ ದಿನಾ ಚಹಾ ತಗೋಳಾಕಿ....ಇಂದ ನಿನ್ನ ಚಾ ತಪ್ಪಿತಿ ಯಾನೋ ?" ಎಂದು ಒಳಗೆ ಕೆಲಸ ಮಾಡುತ್ತಿರುವ ಆಪ್ತರ ಹುಡುಗೆಗೆ "ಒಂದೆರಡು ಕಪ್ಪ ಚಾಕ್ಕ ಇಡವ್ವ ?" ಎಂದು ಆಜ್ಞಾಪಿಸಿದಳು.

"ಯಾನ ತಪ್ಪಿಲ್ಲ ತಗೋ ! ಹಾದ್ಯಾಗ ಸಿರುಗುಪ್ಪಿ ಹಾಟೀಲದಾಗಿಂದ ಬ್ಯಾಡ ಬ್ಯಾಡ ಅಂದ್ರೂ ಬಸಪ್ಪ ಒಂದ ಕಪ್ಪ ತಂದಕೊಟ್ಟ...." ಎಂದು ಹೇಳಿ

ದಳು. ಆದರೂ ಮತ್ತೊಮ್ಮೆ ಚಹ ಕುಡಿಯಲು ಅವಳ ಮನಸ್ಸು ತವಕ ಗೊಳ್ಳುತ್ತಲೇ ಇತ್ತು. ಅದಕ್ಕೆಂತಲೇ ಸ್ವಲ್ಪ ತಡೆದು.... "ಹಾಟೀಲದಾಗಿಂದ ಯಾತರ ಚಾ, ಬಿಸಿನೀರ ಕುಡದಂಗ!" ಎಂದು ನುಡಿದಳು.

ಇಷ್ಟರಲ್ಲಿ ಒಳಗಿನಿಂದ ಒಬ್ಬ ಹುಡುಗಿ ಅರಷಿಣದ ಬಟ್ಟಲನ್ನು ತಕ್ಕೊಂಡು ಬಂದು "ನಿಮ್ಮತ್ತಿ ಅರಿಷಿಣಾ ತಂದಿದಾಳ ಹಚ್ಚತ್ಯಾನ ನಡೀ" ಎಂದು ಮಂಚದ ಮೇಲೆ ಕುಳಿತ ತಾರಕ್ಕನಿಗೆ ಕೈತುಂಬ ಅರಿಷಿಣ ಹೂಡಿ ದಂಡೆಕಟ್ಟಿ ಹೋದಳು.

ಒಳಗಿನಿಂದ ರತ್ನವ್ವ "ಇಷ್ಟುಕೂನ ರೊಟ್ಟಿ ಯಾಕ ಬಡದ ತಂದಿ ತಾಯಿ! ಬರಿಗೈಲೆ ಬರಬಾರದಂತ ಅಷ್ಟs ಹತ್ತೆಂಟ ಮಾಡಕೊಂಡ ಬರೋದಾ...." ಸ್ವಲ್ಪ ತಡೆದು "ಹಿಟ್ಟಾ ಅಕ್ಕಿ ಬ್ಯಾರೇ ತಂದೀದಿಯಲ್ಲಾ?" ಎಂದಳು.

"ಅದೂ ಅಲ್ಲೇ ಮಾಡಕೊಂಡ ಬರಬೇಕಂತ ಒಡೆದಾ ಬೀಸಿ ತಯಾರ ಮಾಡಿದ್ನಿ, ಗೋದಿ. ಆದರ ಅವರ ಅಂದರು. "ಎಲ್ಲಾ ಇಲ್ಲೇ ಯಾತಕ್ಕ ಮಾಡಕೊಂಡ ಹೋಗತಿ? ಅಲ್ಲಿ ಮನೀ ತುಂಬ ಅಡಿಗಿ ಇರೋದ, ಅಲ್ಯಾಗಿನ ನಾಲ್ಕೆಂಟ ಮಂದಿ ಮಾಡಿಕೊಡಾವರ....ನೀ ಹಂಗs ಕಟ್ಟಿಕೊಂಡು ಹೋಗು.... ಅಲ್ಲೇ ಮಾಡ ಅಂವರ ಮಾಡಾಕೇ....ಇಲ್ಲಾದರ....ಮತ್ಯಾನರ ಮಾಡ್ಯಾ ರಂತ....ಅನ್ನಾಣಾ ಇತ್ತs ತಗೊಂಡ ಬಂದಿನು...." ಎಂದು ಹಿಟ್ಟಕ್ಕಿ ತಂದ ಕಾರಣವನ್ನು ವಿವರಿಸಿದಳು.

ಸಂಜೆಯಾದಂತೆ ಮನೆಯಲ್ಲಿ ಬಂದು ಹೋಗುವವರ ಗೊಂದಣವೇ ಗೊಂದಣ! ಯಾರು ಉಂಡರು? ಯಾರು ಉಣಲಿಲ್ಲ? ಒಂದೂ ತಿಳಿಯು ವಂತಿರಲಿಲ್ಲ. ಮರುದಿನವೇ ಉಡಿಯ ತುಂಬುವರೆಂದು ಊರೊಳಗಿನ ಜನರು–ಇಲ್ಲಿಯವರೆಗೆ ತಾರಕ್ಕನಿಗೆ ಊಟಕ್ಕೆ ಅಡಿಗೆ ಮಾಡಿ ಕಳಿಸದವರು - ಇಂದೇ ಕಳಿಸಿಕೊಟ್ಟಿದ್ದರು. ಮಲ್ಲ ಊರಿಗೇ ಬೇಕಾದವ. ಯಾರ ಮನೆಯಲ್ಲಿ ಕಾರಣ ವಾದರೂ ಮಲ್ಲನು ತನ್ನ ಶಕ್ತಿ ಇದ್ದಷ್ಟು, ಉಡುಗೊರೆ ಕಳಿಸದೆ ಇದ್ದವನಲ್ಲ. ಆದುದರಿಂದ ಈಗ ನಾಲ್ಕೆಂಟು ದಿನಗಳಿಂದ ಮಲ್ಲನ ಮನೆಗೆ ಜನರಿಂದ ಹಿಟ್ಟಿ ಕ್ಕಿಯ ರೂಪದಿಂದ, ಅಡಿಗೆಯ ರೂಪದಿಂದ—ಒಂದೇ ಸಮನೆ ಬರುತ್ತಿದ್ದಿತು.

ನಾಳೆಯೂ ಉಡಿಯ ತುಂಬುವ ಕಾಲಕ್ಕೆ ಊರ ಜನರೆಲ್ಲರೂ ಕಾಯಿ ಕುಪ್ಪಸ ತರದಿರಲಾರರೆಂದು ಅವನಿಗೆ ಗೊತ್ತು. ಆದುದರಿಂದ ಮರುದಿನ ಊರಿಗೇನೇ ಊಟ ಹಾಕಬೇಕಾಗುವದು. ಇಂಥ ಗೊಂದಲಕ್ಕಾಗಿಯೇ—ಮಿತಿಮೀರಿದ ಖರ್ಚಿಗಾಗಿಯೂ—ಈ ಶೋಭನ ತಮ್ಮಲ್ಲಿ ಬೇಡವೆಂದು ಮಲ್ಲನಿಗೆ ಎನಿಸಿರಬೇಕು. ಈ ಎನಿಸಿಕೆ ಹೊಣೆಗಾರಿಕೆಗಳ ವಿಚಾರ ಮನೆಯೊಡೆಯನಿಗಾದರೆ ಉಳಿದವರಿಗೇನು ? ಹಿರಿಯರಿಗೆ ಇಲ್ಲೇ ಎರಡು ದಿನ ನಿಂತು ತಿಂದು, ತಿದ್ದಿ ತೀರಿಸಬೇಕೆಂಬ ಲವಲವಿಕೆ ; ಕಿರಿಯರಿಗೆ ಸವಿಯೂಟ ಸಿಗುವದೆಂಬ ಹಿಗ್ಗು ; ದಿನದಕ್ಕಿಂತ ಹೊಸ ಸೀರೆ ಕುಪ್ಪಸ ತೊಡಲಿಕ್ಕೆ ಸಿಕ್ಕುವದೆಂದು ಹುಡಿಗೆಯರಿಗೆ ಹಿಗ್ಗು ; ಹೀಗೆ ಮನೆಯೆಲ್ಲ ಹಿಗ್ಗಿನ ಬುಗ್ಗೆಯಾಗಿದ್ದಿತು.

ನಸುಗತ್ತಲೆಯಾಯಿತು. ರತ್ನವ್ವ, ಓಣಿಯೊಳಗೆ ಇನ್ನೂ ಊಟಕ್ಕೆ ಬಾರದೆ ಉಳಿದ ಜನರನ್ನು ಕರೆದು ಕರೆದು ಉಣಿಸುವುದರಲ್ಲಿದ್ದಳು. ಹೊರಗೆ ಬಾರಿಸುವವರಿಗೆ ಇನ್ನೂ ತುಂಬಿ ಕಳಿಸುವದು ಅವಳ ಕೆಲಸ. ಅಷ್ಟರಲ್ಲಿ ಶೋಭನ ಪದಗಳನ್ನು ಹಾಡುವ ಐದಾರು ಜನ ಹೆಂಗಸರೂ ಬಂದರು. ಅವರನ್ನಿಷ್ಟು ಆಗ್ರಹ ಮಾಡಿ—ಅವರು ತೋರಿಕೆಗಾಗಿ ಹಸಿವಿಲ್ಲ ಎನ್ನುತ್ತಿದ್ದರೂ—ಊಟಕ್ಕೆ ಹಾಕಹತ್ತಿದಳು. ಅದರಲ್ಲಿಯೇ ಹೊರಗೆ ತಿರುಗಾಡುವ ಬಸಪ್ಪನನ್ನು ಕರೆದು, ಹಾಡು ಕೇಳಲು ಬೀಗರ ಮನೆಯವರಿಗೆಲ್ಲ ಬರಲು, ಹೇಳಿಕಳಿಸಿದಳು. ಇಂಥ ಗಡಿಬಿಡಿಯಲ್ಲಿಯೇ ಪಂಡಿತರ ತವನಪ್ಪನಿಗೊಂದು ಆತುರ. ಮಕರದ ಕೆಲಸ ಇನ್ನಿಷ್ಟು ಉಳಿದಿದೆ, ಈಗಲೇ ತೀರಿಸಿಬಿಡಬೇಕೆಂದು, ಹರೆಯದ ಹೆಣ್ಣುಮಕ್ಕಳು ಕೆಲವರು ಇತ್ತ ತಾರಕ್ಕನನ್ನು ಸಿಂಗರಿಸಿ, ದಂಡೆ ಕಟ್ಟಿ, ಹೂವು ಮುಡಿಸಿ, ಮಂಚದ ಮೇಲೆ ಕೂಡಿಸುವುದರಲ್ಲಿದ್ದಾರೆ. ಕೆಲವರು ಸಮಯದೊಳಗಿನ ದೀಪಗಳನ್ನು ಹೊತ್ತಿಸುತ್ತಿರುವರು. ತಾರಕ್ಕ ಮನದಲ್ಲಿ "ಅಂತೂ ಬಂದೀರ ಮಕರದ ಸುತ್ತ ಗೊಂದಲಾಹಾಕಾವ....ಇಷ್ಟರೊಳಗೆ....! " ಎಂದು ಧೇನಿಸುತ್ತಿದ್ದಳು. ಈ ವಿಚಾರದಲ್ಲಿ ಯಾರು ಏನು ಹಾಡಿದರು ? ಕೇಳಲಿಕ್ಕೆ ಯಾರು ಯಾರು ಬಂದಿದ್ದರು ? ಎಂಬುದರ ಕಡೆಗೆ ಅವಳ ಗಮನವೇ ಇರಲಿಲ್ಲ.

ಹಾಡುಗಾರಿಕೆ ಮುಗಿದ ಮೇಲೆ ಚಿಮ್ಮವ್ವ ಕೇಳಿದಳು, "ಯಾವಾಗ ಬಂದೇ ಸುಂದರಾ....?" ಎಂದು.

"ಇಂದs ಇಳಹೊತ್ತಿನ್ಯಾಗs ಬಂದಿದ್ಯಾನ!" ಸ್ವಲ್ಪ ತಡೆದು, "ಒಳ್ಳೀ ಗರ್ದಿಲೇನs ಎಬ್ಬಿಸೀದೀರಲ್ಲಾ ಕಾರಣಾ....?" ಎಂದು ಕೇಳಿದಳು.

"ಯಾನ ಪ್ಯಾಲಿಂದ ಮ್ಯಾಲ ಆಗೋದ ಐತಿ....ಜನ್ಮದಾಗ ಬಂದ ಒಮ್ಮೆ ಆಗೋದ ಹುಡುಗರ ಐಸಿರಿ! ನಾವ ಮಾಡಿ ನೋಡದಿದ್ದರ ಯಾರ ಮಾಡಬೇಕ....?"

"ಆಯ್ತು ಏಳವ್ವ ತಾಯಿ! ಪೋರಿಗಿ ಸೀರಿ ಎಂಥಾದ ತಗೊಂಡಿ ದೀರಿ....?" ಸ್ವಾಭಾವಿಕವಾಗಿ ಸುಂದರಾಬಾಯಿ ಕೇಳಿದಳು.

"ಪೋರೀ ಸೀರಿನ ಕೇಳತಿ; ಅಳ್ಯಾಗ ಯಾನ ತಂದೀದೀರಿ ಹೇಳಾಕಿ ಇಲ್ಲ ಯಾನ ನೀ?" ಮತ್ತೊಬ್ಬಾಕಿ ನಡುವೆ ಬಾಯಿ ಹಾಕಿದಳು.

"ಯಾನ್ಯಾನ ತಂದಿದಾರ ಯಾರಿಗೆ ಗೊತ್ತವ್ವ! ನಾನೂ ಇಂದs ಬಂದಿದ್ಯಾನೂ..." ಎಂದಳು ಸುಂದರಾ ತಡವರಿಸುವ ದನಿಯಿಂದ.

"ಕೇಳಿರ ಯಾನ ಆಯ್ತು ಬಿಡ! ಇದರಾಗ ಯಾನ ಐತಿ....?" ಸ್ವಲ್ಪ ನಿಧಾನಿಸಿ ವಿಚಾರಮುದ್ರೆಯಿಂದ "ಅತ್ತಿ ಮನ್ಯಾವರ ಎಂಥ ಸೀರೀ ತಂದರೂ ಅದ್ಯಾನ ತವರ ಮನ್ಯಾವರಿಗಿ ನಿಲ್ಲೋದ ಐತಿ....? ಯಾವಾಗಾದರೂ ಅದೂ ಅತ್ತೀ ಮನೀಗೆ ಹೋಗೋದ ಅಲ್ಲ್ಯಾನ....? ತಮ್ಮ ಸೊಸಿಗಿ ಎಂಥಾದ ಯಾಕ ತರವಲ್ಲರು!" ಎಂದು ಮತ್ತೊಬ್ಬಾಕೆ ನುಡಿದಳು.

ಸುಂದರವ್ವ ಸ್ವಲ್ಪ ಕೆರಳಿದ ದನಿಯಲ್ಲಿ "ಹಾಂಗ್ಯಾಕ ಅಂತೀರೇ? ನೀವೆಲ್ಲಾ ಒಂದs ಕೈಲೆ ಚಪ್ಪಾಳಿ ಬಡ್ಯಾವರ ಕಾಣಸ್ತೀತಿ........ನಮ್ಮ ಮಗಳಿಗೆ ಯಾನ ತಂದಿದೀರಿ ಅಂತ ಕೇಳೂ ಹಕ್ಕ ಇಲ್ಲ್ಯಾ ನಮಗೆ?" ಎಂದಳು.

"ಹಕ್ಕಲೆ ಮಾಡಬೇಕು, ಹಕ್ಕಲೆ ಮಾಡಸ್ಕೋಬೇಕು....ಯಾರ ಒಲ್ಲಿ ಅಂತಾರು?" ಚಿಮ್ಮವ್ವ ಮುಂದಾಗಿ ಕೇಳಿದಳು.

"ಇದರಾಗ ಯಾತರ ಹಕ್ಕ? ಕೂಡಿದ ಮ್ಯಾಲ್ಯಾನ ಕಾಡೋದ ಐತಿ....? ಒಬ್ಬರ ಒಬ್ಬರ ಹೊಂದಕೊಂಡ ಹೋಗಾದಾ; ಎಲ್ಲಾ ನಿಮ್ಮದ ಐತಿ...." ತಾರವ್ವನನ್ನು ಕೈಮಾಡಿ ತೋರಿಸಿ "ಬಂಗಾರ ರಾಶೀನ ಕೊಟ್ಟಿದೇವ ನೋಡ....ಆಕಿಕಿಂತ ಹೆಚ್ಚಿನ ಬಂಗಾರ ಯಾನ ಏತಿ ನಿಮಗ ಕುಡೋದಾ....?" ಎಂದು ಹೊಂದಿಸಹೋದಳು ಸುಂದರವ್ವ.

"ಅದ ಅಂತೂ ಐತೇ ಅಲ್ಲ! ಅವರ ನಾಲ್ಕ ಮಂದ್ಯಾಗ ಅಳ್ಯಾಗ ಚಂದ ಕಾಣಸೂ ಹಂಗ....ಮಾಡಕ ಬ್ಯಾಡಾ....ಯಾರಾದರ ಯಾನಾಯ್ತು" ಎಂದು ಮಾತು ಮುಗಿಸಿ, ಕತ್ತಲಾಗುವದೆಂದು ಹೊರಟಳು. ಅವಳ ಕೂಡ ಹಾಡು ಕೇಳಲು ಬಂದ ನಾಲ್ಕೆಂಟು ಜನ ಹೆಂಗಸರೂ ಎದ್ದು ಹೋದರು.

ಕತ್ತಲಾಯಿತು. ಜನರ ಗೊಂದಲವೂ ಕಡಮೆಯಾಯಿತು. ಹೊರಗೆ ಮಲ್ಲ ಮರುದಿವಸ ಯಾರು ಯಾರು ಏನೇನು ಮಾಡಬೇಕೆಂಬುದನ್ನು ಈಗಲೇ ಹೇಳಿಡುತ್ತಿದ್ದಾನೆ. ಹಾಡುವ ಹೆಂಗಸರೂ ಎಲೆ ಅಡಿಕೆ ತಕ್ಕೊಂಡು ನಡೆದರು. ರತ್ನವ್ವ "ನಾಳಿ ಒಂದ ದಿನ ಲಗೂನ ಬರ್ರಿ! ಅಂದರಾತು...." ಎಂದು ಹೇಳಿ ತನ್ನ ಕೆಲಸ ಮಾಡಿದಳು.

"ಛಲೂ ನಾಲ್ಕ ಹಾಡಾ ನೆನಪ ಮಾಡಕೊಂಡ ಬರ್ರಿ, ಹಳೇವ ಬ್ಯಾಡಾ ಪರವೂರ ಮಂಪೆಲ್ಲಾ ಬರೋದ........" ಎಂದು ಸುಂದರವ್ವ ಸೂಚಿಸಿದಳು. ಆಮೇಲೆ ತಾರಕ್ಕನ ಕಡೆಗೆ ಹೊರಳಿ "ನೀನೂ ಮಲಕ್ಕೋಳೋಗ ಬಾಳಾ.... ನಾಳಿ ಸರವತ್ತ ತನಕಾ ಕೂಡಕಬೇಕ....ನಿನ್ನ ರಾಜಾನ ಜೋಡಿ....!" ಎಂದು ಹೇಳಿದಳು.

ತಾರವ್ವ ಮಂಚವನ್ನಿಳಿದು ಬರುತ್ತ "ಅನಂತ ಇಲ್ಲದಕ್ಕ ಮನೀ ಎಲ್ಲಾ ಭಣಾ ಭಣಾ ಮಾಡತೇತಿ....ನೋಡು...." ಎಂದು ಹೇಳದೆ ಇರಲಾಗ ಲಿಲ್ಲ.

ಮರುದಿನ ಮುಂಜಾನೆ ರಾಮಪ್ಪ ಅನಂತನನ್ನು ಕರೆದುಕೊಂಡು ಬಂದ. ಇನ್ನೇನು ಅಣ್ಣ ಬಂದ; ಎಲ್ಲ ನೋಡಿಕೊಳ್ಳುವನೆಂದು ರತ್ನವ್ವನ ಅರ್ಧ ಚಿಂತೆ ದೂರಾಯಿತು. ಅಣ್ಣನಿಗೆ ಕೈ ಕಾಲಿಗೆ ನೀರು ಕೊಟ್ಟು, ಸ್ವಲ್ಪ ತಿನ್ನ ಲಿಕ್ಕೂ ಕೊಟ್ಟು, ಒಂದು ಕಪ್ಪು ಚಹಾ ತಂದು ಕೊಟ್ಟಳು. ಆಮೇಲೆ ಸಾವಧಾನವಾಗಿ ನಡುಮನೆಯಲ್ಲಿ ಕುಳಿತು ಸ್ವಲ್ಪ ಹೊತ್ತು ಅಣ್ಣ ತಂಗಿ ಮಾತನಾಡಿದರು. ಕೊನೆಗೆ ರತ್ನವ್ವ ಒಳಗೆ ಹೋಗಿ ಪೆಟ್ಟಿಗೆಯೊಳಗಿಂದ ಒಂದು ಅರಿವೆಯ ಗಂಟು ತಂದು "ಇದ ನೋಡ, ನೀವ ಸಂತಿ ಪ್ಯಾಟಿ ಮಾಡ ತೀರಿ, ಈ ಪಟಕೇದ ಕಿಮ್ಮತ್ತು ಮಾಡು........" ಎಂದು ಪಟಕೆ ಕೈಯಲ್ಲಿ ಕೊಟ್ಟಳು.

ರಾಮಪ್ಪ ಪಟಕೆ ಕೈಯಲ್ಲಿ ತಕ್ಕೊಂಡು, ಕೆಳಗೆ ಮೇಲೆ ಹೊರಳಿಸಿ ನೋಡಿ ಎಪ್ಪತ್ತು ಎಪ್ಪತ್ತೈದು ರೂಪಾಯಿಗಳೆಂದು ಬೆಲೆ ಮಾಡಿದ. ಆ ಬೆಲೆ ಅಷ್ಟು ತಪ್ಪಲ್ಲವೆಂದು ಕಂಡು ಬಂದುದದರಿಂದ ರತ್ನವ್ವ ಹೊತ್ತುಕೊಳ್ಳಲು ತಂದ ದೋತರವನ್ನು ತೋರಿಸಿ, ತಾನೇ ಹದಿನೈದು ರೂಪಾಯಿ ಕೊಟ್ಟೆವೆಂದು ಹೇಳಿದಳು. ಆಮೇಲೆ ನಾಲ್ಕು ಉಂಗುರಗಳನ್ನು ತೆಗೆದು ಅಣ್ಣನ ಕೈಯಲ್ಲಿಟ್ಟಳು. ರಾಮಪ್ಪ ಉಂಗುರ ಕೈಯಲ್ಲಿ ತಕ್ಕೊಂಡು—

"ನಾಲ್ಕ ಯಾಕ ಮಾಡಿಸಿದೀರಿ....?" ಎಂದು ಕೇಳಿದ.

"ಎರಡs ಮಾಡಿದರ ದೊಡ್ಡು ಆಗ್ತಾವು....ಹುಡುಗನ ಬಟ್ಟ ಇನ್ನೂ ಅಷ್ಟ ಬಲತಿಲ್ಲ. ಮೂರ ಮಾಡಬಾರದು—ಮೂರಾ ಬಟ್ಟ ಆದೋತಂತ—ನಾಲ್ಕ ಮಾಡಿಸಿರ ಆಯ್ತು...." ಎಂದು ರತ್ನವ್ವ ನಾಲ್ಕು ಉಂಗುರ ಮಾಡಿಸಿದ ಕಾರಣ ಹೇಳಿದಳು.

"ಆಯ್ತು ಏಳ; ಮೊದಲ ಮೂರ ಕೊಡರಿ. ಸಿಟ್ಟ ಮಾಡಿ ಕೂತ ಅಂದರ ಅದೂ ಒಂದ ಕೊಡಾಕಿರಂತ........" ಎಂದು ಉಪಾಯ ಸೂಚಿಸಿದ ರಾಮಪ್ಪ.

"ನೀನs ಬಂದೀದಿಯಲ್ಲ! ನಾವ ಪಾರ ಬಿದ್ದೇವ ಇನ್ನ; ಈ ಗಂಟ ಐತಿ, ನೀ ಇದ್ದೀ, ಅಳ್ಯಾನ ಹ್ಯಾಂಗ ಸಮಾಧಾನ ಮಾಡಿ ಕಳಸತಿ ಕಳಸು...."

"ಸಮಾಧಾನ ಮಾಡಿ ಕಳಸಲಾಕ ಯಾನ? ಇಷ್ಟ ಹಾಕಿದರ ಜಿಗ ವಾಡತ ಹೋಗವಲ್ಲ್ಯಾನ....? ಇವ್ಯಾನ ಡೊಡ್ಡ ಇನಾಮದಾರ ಇದಾನ, ಹಂಗ ಸಿಟ್ಟ ಮಾಡಲಾಕ....?"

ಅಣ್ಣನ ಮಾತು ನಿಜವೆನಿಸಿತು ರತ್ನವ್ವನಿಗೆ, "ಆದರೆ ಅವರವ್ವನ ಹಾರಿಕೆ ಭಾಳ ದೊಡ್ಡದೈತಿ!" ಹೀಗೆ ಅನ್ನುತ್ತ ಅಡಿಗೆಯ ಮನೆಯತ್ತ ಹೊರಳಿ "ಅಣ್ಣಾನ ಸಲವಾಗಿ ಒಳಗ ಅಡಗಿಗಿ ಇಡರಿ; ಹೊರಗಿಂದ ಅವ ಗ್ಯಾನ ನಡೀಲಾಕಿಲ್ಲ....!" ಎಂದು ಅಡಿಗೆಯ ಮೇಲ್ವಿಚಾರಣೆಯಲ್ಲಿದ್ದ ಸುಂದರಾಬಾಯಿಗೆ ಹೇಳಿದಳು.

ಸ್ವಲ್ಪ ಹೆಮ್ಮೆಯಿಂದ ರಾಮಪ್ಪ "ನನಗ್ಯಾತಕ್ಕ ಬ್ಯಾರೇ....ಬೇಕು, ಆದರಾಗs ನಡೀತೀತೆಲ್ಲ....ಊರ ಹೊರತಾಗಿ ನಂದ ಊಟ ಯಾನ? ನಡುವ

ಮನ್ಯಾಗ ಆದೆಲ್ಲಾ....ಕಾರಣದಾಗ ಯಾನ ಆಗತೇತಿ....?" ಎಂದು ನುಡಿದ.

"ಇಲ್ಲ ; ಗೌಡರಾ ಎಲ್ಲಾ ಉಣಕ ಬರಾವರ ಇದಾರು, ಒಳಗೂ ನಾಲ್ಕೆಂಟ ಮಂದೀ ಅಡಗಿ ಆಗಲಾಕ ಬೇಕಲ್ಲ! ಎಂದಳು ರತ್ನಾ.

ಇದೇ ಹೊತ್ತಿಗೆ ಹೂವಣ್ಣ ಚೌಗುಲೆಯು ತನ್ನ ಅಣ್ಣ ತಮ್ಮಂದಿರಿಗೂ ಬಳಗದವರಿಗೂ ಇಷ್ಟಮಿತ್ರರಿಗೂ ಬೀಗರ ಮನೆಗೆ ಮಧ್ಯಾಹ್ನ ಊಟಕ್ಕೆ ಹೋಗುವದೆಂದು ಹೇಳಲು ಊರಲ್ಲಿ ತಿರುಗುತ್ತಿದ್ದ. ಅವನ ಜೊತೆಗೆ ಆಪ್ತರ ಪರವಾಗಿ ಅನಂತ ಹೋಗಿದ್ದ. ಅನಂತ ಚಂದೂರಿಗೆ ಬರುವಾಗ, ತಾರಕ್ಕನ ಕೂಡ ಬಹಳ ಮಾತಾಡಬೇಕು, ಕತೆ ಹೇಳಬೇಕು, ಎಂದು ತವಕಗೊಂಡು ಬಂದಿದ್ದ. ಆದರೆ ಅವನು ನಿರಾಶನಾದ. ಈ ಸಲ ತಾರಕ್ಕ ಮೊದಲಿನವ ಳಾಗಿರಲಿಲ್ಲ. ಯಾವಾಗಲೂ ಗಂಭೀರವಾಗಿಯೇ ಇರುವಳು. ಅವಳು ಅನಂತನ ಕೂಡ ಪ್ರೇಮದಿಂದ ವರ್ತಿಸುತ್ತಿರಲಿಲ್ಲವೆಂತಲ್ಲ. ಅನಂತನ ಮೇಲೆ ಅವಳಿಗೆ ತುಂಬ ಪ್ರೀತಿ. ಅನಂತನ ಜೊತೆಗೆ ಮಾತಾಡಲು ಅವಳ ಮನಸ್ಸೂ ಹರಿಯು ತ್ತಿದ್ದಿತು. ಆದರೂ ಅವಳಿಂದ ಮೊದಲಿನಂತೆ ಬಾಯಿತೆರೆದು ಮಾತಾಡಲಾಗು ತ್ತಿರಲಿಲ್ಲ. ಈಗೀಗ ಅವಳಿಗೆ ತಂದೆ ತಾಯಿಗಳೂ ಮುಗುದೆಯೆನ್ನುತ್ತಿದ್ದರು. ಹೆಚ್ಚಿಗೆ ಮಾತಾಡದಿದ್ದರೂ ಕೂಡ ತಾರಕ್ಕ ಆಗಾಗ ಅನಂತನಲ್ಲಿದ್ದ ತನ್ನ ಪ್ರೀತಿಯನ್ನು, ಅವನ ಅಂಗಿಗೆ ಗುಂಡಿಗಳನ್ನು ಹಾಕುವದರಿಂದಲೂ, ಹೊಸ ಅಂಗಿಯನ್ನು ಗಂಟಿನೊಳಗಿನಿಂದ ತೆಗೆದು ತೊಡಿಸುವುದರಲ್ಲಿಯೂ ಮೇಲಿಂದ ಮೇಲೆ ಕರೆದು ತಿನ್ನಲು ಕೊಡುವದರಿಂದಲೂ ವ್ಯಕ್ತಗೊಳಿಸದೆ ಇರುತ್ತಿರಲಿಲ್ಲ.

ಮಧ್ಯಾಹ್ನ ಜನವೆಲ್ಲ ಮಲ್ಲನ ಮನೆಗೆ ಊಟಕ್ಕೆ ಬಂದರು. ಅದರಲ್ಲಿ ಚೌಗಲೆಯವರ ಭೀಮಪ್ಪ ಮಾತ್ರ ಬಂದಂತಿರಲಿಲ್ಲ. ತುಪ್ಪ ಬಡಿಸುತ್ತಿದ್ದ ರತ್ನವ್ವ ಇದನ್ನು ಕಂಡುಹಿಡಿದಳು. ಅವಳ ಮುಖದ ಮೇಲೆ ಯಾವುದೋ ಒಂದು ಚಿಂತೆಯ ಚಿಹ್ನೆ ಒಂದರೆಕ್ಷಣ ಮಿಂಚಿ ಮಾಯವಾಯಿತು. ಅವಳು ಹೂವಣ್ಣ ನನ್ನು ಕರೆದು "ಭೀಮಪ್ಪ ಎಲ್ಲಿ ಬಂದಾಗ ಕಾಣಸೂದುಲ್ಲ....?" ಎಂದು ವಿಚಾರಿಸಿದಳು.

"ಅಂವ ಎಲ್ಲಿ ಮಳಗಿಗಿ ಹೋಗಿದ್ದ....ಹಿಂದಿಂದ ಬಂದಾನು...."

"ಹೋದ ಮ್ಯಾಲ ಹಚಕುಡರಿ, ಮರೀಬ್ಯಾಡರಿ....!" ಎಂದು ಹೇಳಿದಳು.

ಬೀಗತಿ ಪ್ರತಿಯೊಬ್ಬರ ಸಲುವಾಗಿಯೂ ಎಷ್ಟು ಲಕ್ಷ್ಯಗೊಟ್ಟು ಹೇಳುವ ಳೆಂದು ಹೂವಣ್ಣ ಮನದಲ್ಲಿಯೇ ಅವಳ ಆದರಬುದ್ಧಿಗೆ ಮೆಚ್ಚಿರಬೇಕು !

ಇವರಿತ್ತ ಊಟಕ್ಕೆ ಬಂದಕಾಲಕ್ಕೆ ಮನೆಯಲ್ಲಿ ಭರಮಪ್ಪ ಒಬ್ಬನೇ ಇದ್ದ. ಅವನು ಈಗ ಊಟಕ್ಕೆ ಹೋಗುವಂತಿರಲಿಲ್ಲ. ಅಳಿಯನಲ್ಲವೆ? ಅವನಿನ್ನೂ ಮಾವನ ಮನೆಗೆ ಮುಹೂರ್ತದಲ್ಲಿ ಹೋಗಬೇಕು. ಆದುದರಿಂದ ಮನೆಯಲ್ಲಿ ಒಬ್ಬನೇ ಕುಳಿತಿದ್ದ. ಆ ಕಾಲಕ್ಕೆ ಭೀಮಪ್ಪ ಕೆಮ್ಮುತ್ತ ಮೆಲ್ಲನೆ ಬಂದ. ಭೀಮಪ್ಪನನ್ನು ಕಂಡು ಜಿರಗಾಗಿ "ಯಾಕ ಕಾಕಾ, ನೀ ಉಣ್ಣಾಕ ಹೋಗ ಲಿಲ್ಲ ?" ಭರಮು ಕೇಳಿದ.

"ನನಗ ಮಳಗಿಂದ ಬರಲಾಕ ಜರಾ ವ್ಯಾಳೀ ಆಯ್ತು; ಎಲ್ಲಾರು ಹೋದರು ? ಹೋಗಲಿ !" ಎಂದು ಹೋಗಲಾರದ್ದಕ್ಕೆ ಒಂದು ನೆಪವನ್ನು ಮೊದಲೇ ಯೋಚಿಸಿಟ್ಟಂತೆ ಹೇಳಿದ.

"ಈಗ ಹೋಗಿದಾರು, ಇನ್ನ ಊಟಕ್ಕ ಕೂತಿರಲಾಕಿಲ್ಲ....ನೀನೂ ಹೋಗು !" ಎಂದ ಭರಮು, ಅವನ ಮನೋಗತವನ್ನರಿಯದೆ.

"ಇರಲಿ ಬಿಡ ! ಹೋದಂಗ ಐತೆಲ್ಲ....!" ಎಂದು ಕಂಬಳಿಯ ಮೇಲೆ ಕುಳಿತು ಸಲಿಗೆಯ ದನಿಯಲ್ಲಿ "ಮಾವ ಯಾನ್ಯಾನ ಹಾಕೋದ ಮಾಡಿ ದಾನಪಾ ನಿನಗ....? ಎಂದು ಕೇಳಿದ.

"ಆದರದ್ಯಾನ ಮಾತಕತೀ ಮಾಡಿಲ್ಲಲಾ ?" ಎಂದು ತಿರುಗಿ ಭರಮು ಕಕ್ಕನನ್ನೇ ಕೇಳಿದ.

"ಮಾತಕತಿ ಮಾಡದಿದ್ರು....ಯಾನಾಯ್ತು? ೫-೬ ತೊಲಿ ಬಂಗಾರ ಹಾಕ್ಯಾನಲ್ಲ....? ನಾಲ್ಕು ತೊಲಿ ಪೋಚೆ, ಒಂದ್ಯಾಡ ತೊಲಿ ಉಂಗುರಾ ಅಂತ ಯಾನರ ಮಾಡಿಸಿರಬೇಕಲ್ಲ....?" ಉಂಗುರಗಳನ್ನಷ್ಟೇ ಮಾಡಿಸಿರುವರೆಂದು ತಿಳಿದೂ ಕೂಡ ಹೀಗೆ ಹೇಳಿದ ಭೀಮಪ್ಪ.

"ಅಷ್ಟ್ಯಾಕನ ಹಾಕಲಾಕಿಲ್ಲ ?"

"ಯಾನ ಹುಚ್ಚಪ್ಪ ನೀ....ನಾ ಕೇಳಿದ್ಯಾನು....ಪೋಚೆ ಮಾಡಿಸಿ ದಾರಂತ...." ಸ್ವಲ್ಪ ತಡೆದು "ಉಂಗರಾ ಅಷ್ಟs ಹಾಕಾನಾ ಎದ್ದೀ ಮತ್ತ ಮಕರದಾಗಿಂದ....!" ಎಂದ ಹಣೆಗೆ ಗಂಟು ಹಾಕಿ. ಮೆಲುನಗೆ ನಗುನಗುತ್ತ, "ಇಂಥಾ ಅಳ್ಯಾ, ಇಂಥಾ ಮನೀ ಸಿಕ್ಕಮ್ಯಾಲ ಯೋಳೆಂಟ ತೊಲಿ ಬಂಗಾರ

ಯಾನ ಭಾಳ ಯಾನ....? ಹೊರಗಿನ ಪೋರಿನಾ ಮಾಡಿಕೊಂಡೀರ....ಹತ್ರ ತೊಲಿ ಬಂಗಾರ ಹಾಕಿ ವ್ಯಾಲ ಮತ್ತ ಅಣ್ಣಾ ಅನ್ನತೀರ...." ಎಂದು ಮೊದಲಾಗಿ ಇಲ್ಲದ ಸಲ್ಲದ ವಿಚಾರಗಳನ್ನೆಲ್ಲ ಭರಮನ ಮನದಲ್ಲಿ ಬಿತ್ತಿದ ಭೀಮಪ್ಪ.

ಕಕ್ಕನ ಈ ಮಾತುಗಳನ್ನು ಕೇಳಿ ಭರಮ ಹಿಗ್ಗಿದ. ಅವನ ಮುಖ ಅರಳಿತು. ಅವನು ಈ ಮೊದಲು ತಾವು ಉಂಡುಟ್ಟು ಇರಲಿಕ್ಕೇನೂ ಕೊರತೆ ಇಲ್ಲವೆಂದು ಭಾವಿಸಿದ್ದ. ಈಗ ತನ್ನ ಮನೆತನ ದೊಡ್ಡದು! ಊರಲ್ಲಿ ಮಾನ ಮರ್ಯಾದೆಯುಳ್ಳದು....ಮಾವನಿಂದಲೂ ನನ್ನ ಮನೆತನಕ್ಕೆ ತಕ್ಕಂತೆ ನನಗೆ ಮಾನಮರ್ಯಾದೆಯಾಗಬೇಕು, ಆಗಿಯೇ ಆಗುವದೆಂದು ಯೋಚಿಸಿದ. ಈ ಯೋಚನೆಯ ತೆರೆಗಳೆಲ್ಲ ಅವನ ಮುಖದ ಮೇಲೆ ಒಡಮೂಡುತಲಿದ್ದುವು. ಧೂರ್ತನಾದ ಭೀಮಪ್ಪ ಇದನ್ನು ಅರಿತುಕೊಂಡು "ಆಯಾರ ಮಾಡಕೊಳ್ಳೋಗ....ನಾ ಹೇಳಿದಂಗ ನಡೀ ಅಂದರಾಯ್ತು" ಎಂದು ಸೂಚಿಸಿದ.

ಇಷ್ಟರಲ್ಲಿ ಊಟ ಮಾಡಿ ಜನರೆಲ್ಲ ಬಂದರು. ಹೂವಣ್ಣ ಭೀಮನನ್ನು ಕಂಡೊಡನೆ ಕೇಳಿದ: "ನೀ ಊಟಕ ಬರಲಿಲ್ಲ ಭೀಮಾ? ಮನೀಗಿ ಎರಡೆರಡ ಸಾರೆ ಎಡತಾಕಿನ್ನು, ಮನ್ಯಾಗ ಇಲ್ಲ ನೀ. ರತ್ನಾನೂ ಬರಲಾಕ ಹೇಳಿದಾಳ ನೋಡ ಮತ್ತ! ನಡೀ ಊಟ ಮಾಡಿ ಬರ ನಡೀ...."

"ಯಾನ ಬ್ಯಾಡ, ಉಂಡ್ಹಂಗ ಐತೆಲ್ಲ....! ಆಗs ಬಂದಿನ್ನು ಇಲ್ಲೇ ಭರಮಣ್ಣನ ಗೂಡಾ ಮಾತಾಡತ ಕೂತಿನ ಆಯ್ತು...."

"ಇರವಲ್ಲ ಬಿಡ! ಇಲ್ಲೇ ಉಂಡಾನು? ಭರಮಗ ಅಂತ ತುಂಬಿ ಕಳಿಸಿದಾರು, ಅಷ್ಟ್ಯಾಕನ ಅಂವ ಉಣ್ಣತಾನ ಯಾನಾ...." ಎಂದು ಚಿಮ್ಮವ್ವ ಭೀಮಪ್ಪನಿಗೆ ಇಲ್ಲೇ ಉಣ್ಣಲು ಆಮಂತ್ರಣ ಕೊಟ್ಟಂತೆ ಮಾಡಿದಳು.

ಜನರ ಊಟ ಉಡಿಗೆಗಳಲ್ಲಿ ಹೊತ್ತು ಮುಳುಗಿ ಹೋದ ಅರಿವು ಬಹು ಜನರಿಗಿರಲಿಲ್ಲ. ಪಂಡಿತರು ಬಂದು "ಎಲ್ಲ ಲಗೂನ ತೀರಸರಿ, ತಾಸೆರಡ ತಾಸ ರಾತ್ರಿಯೊಳಗs ಮುಹೂರ್ತ ಐತಿ" ಎಂದು ಹೇಳಲು ಎಲ್ಲರೂ ಅವಸರ ಮಾಡ ಹತ್ತಿದರು. ಹೊಲೆ ಹುಬುಚಿಗಳ ಊಟವೇನೋ ಹಾಗೆ ಸಾಗುವದು, ಬಾರಿಸುವವರಿಗಷ್ಟು ಬೇಗ ಊಟಕ್ಕೆ ಹಾಕಿ ಅಳಿಯನನ್ನು ಕರೆತರಲು ಕಳಿಸಬೇಕೆಂದು ಯೋಚಿಸಿದರು. ಮಲ್ಲ ಆಳಿಗೆ ಹೇಳಿ, ಕುದುರೆ ತರಿಸಿದ. ಪಂಡಿತರೂ ಹಲ ಕೆಲವು ಪ್ರಮುಖರೂ ಕೂಡಿ ಅಳಿಯನನ್ನು ಕರೆಯಲು ಹೋದರು.

ಒಳಗೆ ಮಗಳನ್ನು ಸಿಂಗರಿಸಿ ಮಂಚದ ಮೇಲೆ ತಂದು ಕೂಡಿಸಲು ರತ್ನವ್ವ ನಾದಿನಿಗೆ ಹೇಳಿದಳು. ಹಾಗೆಯೇ ಹಾಡುವ ಹೆಂಗಸರನ್ನು ಕರೆಯಲೂ ಒಬ್ಬನನ್ನು ಓಡಿಸಿದಳು. ಒಂದಿಬ್ಬರು ಗಂಡಸರು, ಆಪ್ತರೂ ಕೂಡಲಿಕ್ಕೆ ಗುಡಾರ ಹಾಸುವುದರಲ್ಲಿದ್ದರು. ಪಂಡಿತರಲ್ಲೊಬ್ಬ ಆತುರ ಮಾಡಿ, ಒಳಗನಿಂದ ಆಳಿಯನ ಉಡುಗೊರೆ ತರಿಸಿ ಮಂಚದ ಮುಂದಿರಿಸಿದ. ಸಮಯಗಳಲ್ಲಿ ಎಣ್ಣೆ ಹಾಕ ಹೇಳಿದ. ಅಷ್ಟರಲ್ಲಿ ಮಲ್ಲಿಗೆಯ ದಂಡೆ ಕಟ್ಟಿಕೊಂಡು, ತಾರಕ್ಕ ಗಂಭೀರ ವಾಗಿ ಬಂದು ಮಂಚನೇರಿದಳು. ಇತ್ತ ಹಾಡುವ ಹೆಂಗಸರೂ ಬಂದರು. ಹಿರಿಯ ಹುಡುಗಿಯರಿಬ್ಬರು ಬಂದು ತಾರಕ್ಕನ ಕಿವಿಯಲ್ಲಿ, ಹೇಗೆ ಕೂಡಬೇಕು? ಯಾವ ಬಾಜುವಿಗೆ ಕೂಡಬೇಕು? ಎಂಬುದನ್ನೆಲ್ಲ ಕಳ್ಳದನಿಯಲ್ಲಿ ಹೇಳಿ ಹೋದರು. ರಾಮಪ್ಪ ಜರದ ರುಮಾಲು ಸುತ್ತಿಕೊಂಡು ಕೋಟು ಹಾಕಿ, ಮೇಲ್ವಿಚಾರಣೆ ಮಾಡುತ್ತ ಪಡಸಾಲೆಯಲ್ಲಿ ಸುಳಿದಾಡುತ್ತಲಿದ್ದ. ಅನಂತ ಏನು ಆಗುವುದೆಲ್ಲವೂ ತನಗೆ ತುಂಬ ಕಾಣಬೇಕೆಂಬ ಬಯಕೆಯಿಂದಲೋ ಏನೋ ತಾರಕ್ಕನ ಹತ್ತಿರವೇ ಮಂಚದ ಒಂದು ತುದಿಯ ಮೇಲೆ ಕುಳಿತಿದ್ದಾನೆ! ಸುಂದರವ್ವ ಒಮ್ಮೆ "ಬಾರಾಕೋ ಸೀ ಯಾಕ ಅಲ್ಲಿ? ಈಗ ಆಕಿ ಗಂಡ ಬರತಾನು?" ಎಂದು ಮಗನನ್ನು ಕರೆದಳು.

ಅನಂತ ಬಾರದಿರಲು "ನಿನ್ನ ಹ್ಯಾಂತಿಯೂ ನೆರ್ಯಾನಾ ಕೂಡಕ್ಕೆ ಬಾ" ಎಂದು ನಗೆಗೂಡಿದ ಸರದಲ್ಲಿ ಸಲಿಗೆಯಿಂದ ಇನ್ನೊಮ್ಮೆ ಕರೆದಳು.

"ಈಗs ಕೂತರ ಯಾನ ಆಗತೀತಿ....?" ಎಂದ ಅನಂತ, ಒರಟಾಗಿ.

ಸುಂದರವ್ವ "ಹುಡುಗ ಒರಟ ಇದಾನು ಬರೂದುಲ್ಲ" ಎಂದುಕೊಂಡು ಸುಮ್ಮನಾದಳು.

ಇಷ್ಟರಲ್ಲಿ ಊದುತ್ತ ಬಾರಿಸುತ್ತ ಆಳಿಯ ಭರಮನನ್ನು ಕರೆದುಕೊಂಡು ಬಂದರು. ಹುಡುಗರು ಮುಂದಾಗಿ ಓಡಿಬಂದು ತಮಗೆ ಸ್ಥಳಗಳನ್ನು ಹಿಡಿದರು. ಹಿರಿಯರೆಲ್ಲ ತಮತಮಗೆ ಉಚಿತವಾದ ಸ್ಥಳಗಳಲ್ಲಿ ಕುಳಿತರು. ಭರಮಪ್ಪ ಮಂಚದ ಮೇಲೆ ಹೋಗಿ ಕುಳಿತ, ತಾರಕ್ಕನ ಬಲಗಡೆಯಲ್ಲಿ. ಮುಂದೆ ಇಟ್ಟ ಉಡುಗೊರೆಯ ತಾಟಿನ ಕಡೆಗೆ ನಿಟ್ಟಿಸಿ ನೋಡಿದ. ಅಷ್ಟ ರಲ್ಲಿಯ ಒಬ್ಬ ಹೆಣ್ಣುಮಗಳು ತಾರಕ್ಕನಿಗೆ ಉಡಿಸುವ ಸೀರೆಯನ್ನೂ ಉಡಿಯ

ತುಂಬುವ ಸಾಮಾನುಗಳನ್ನೂ ತಂದು ಮಂಚದ ಮುಂದಿಟ್ಟಳು. ಆಗ ಪಂಡಿತ ಹೇಳಿದ.

"ಹೋಗರಿ ಒಳಗ, ಹೆಣ್ಣುಮಗಳಿಗಿ ಸೀರಿ ಉಡಸಕೊಂಡ ಬರ್ರ್ಹೋಗರಿ....! " ಎಂದು.

ಸುಂದರವ್ವ ಮುಂದೆ ಬಂದು ಸೀರೆಯ ಗಳಿಗೆ ಕೈಯಲ್ಲಿ ತಕ್ಕೊಂಡಳು. ಗ್ಯಾಸದ ಬೆಳಕಿಗೆ ಕೆಳಗೆ ಮೇಲೆ ಹೊರಳಿಸಿ ನೋಡಿದಳು. ಒಂದು ಮೂಲೆಯನ್ನು ತೆರೆದು ಸೆರಗನ್ನು ನಿರೀಕ್ಷಿಸದಿರಲಿಲ್ಲ. ತಾರಕ್ಕ ಮೆಲ್ಲನೆ ಎದ್ದು, ಒಳಗೆ ನಡೆದಳು. ಭರಮು ತನಗಾಗಿ ತಂದಿಟ್ಟ ಹೊಸ ಅರಿವೆಗಳ ಕಡೆಗೆ ನೋಡಿ, ನಿರೀಕ್ಷಿಸಿ ಪಂಡಿತನ ಮುಖದ ಕಡೆಗೆ ನೋಡಹತ್ತಿದ. ಅಳಿಯನ ಭಾವವನ್ನರಿತು ಪಂಡಿತನು,

"ಇಷ್ಟs ಅಲ್ಲ....ಇನ್ನ ಜೀನಸ ಬರೋವ ಇದಾವು....ನೀ ಯಾಸ ಗಾಬರಿ ಆಗಬ್ಯಾಡ !" ಎಂದು ಹೇಳಿದ.

ಅಲ್ಲೇ ತಿರುಗಾಡುತ್ತಿರುವ ರಾಮುಪ್ಪ ತನ್ನ ಹತ್ತರಿದ್ದ ಮೂರು ಉಂಗುರಗಳನ್ನು ತೆಗೆದು ಪಂಡಿತನ ಕೈಯಲ್ಲಿ ಕೊಟ್ಟ. ಆಗ ಪಂಡಿತ "ಇದ ನೋಡಿದಿ? ಉಂಗುರ ಬಂದ್ವು ! ಒಂದ ಪೆಟ್ಟಿಗೆ ಮೂರ....! " ಎಂದು ಅಳಿಯನ ಬೆರಳಿಗೆ ಹಾಕಲು ಹೋದ. ಭರಮು ಬೆರಳು ಕೊಡಲಿಲ್ಲ. ಸಮೀಪದಲ್ಲಿ ಕುಳಿತ ಭೀಮುಪ್ಪನ ಕಡೆಗೊಮ್ಮೆ ಹೊರಳಿ ನೋಡಿದ. ಅಷ್ಟರಲ್ಲಿ ಪಂಡಿತ ಪರಿಹಾಸ್ಯವಾಗಿ,

"ಈಗ್ಯಾಕ ಹಾಕೊಂಡಾ ಅಂಪ ! ಹ್ಯಾಂತಿ ಬರಾನಾ ಹಾಕೋಳ್ತಾಂವ !" ಎಂದು ಹಾಡುವ ಹೆಂಗಸರತ್ತ ಹೊರಳಿ, "ನೀವ ಯಾಕ ಗಪ್ಪ ಕೂತರಿ...? ಒಂದ ಶೋಭನ ಪದಾರ ಆಗಲಿ ; ಅಲ್ಲಿ ತನಕಾ ಅಳ್ಯಾನ ಮನಸೂ ಜರಾ ಒಲಿತೇತಿ....! " ಎಂದು ಹೇಳಿದ.

ಹಾಡಲೆಂದೇ ಸಿದ್ಧರಾಗಿ ಕುಳಿತ ಇಬ್ಬರು ಹೆಂಗಸರು ಇನಿದನಿಯಿಂದ ಹಾಡತೊಡಗಿದರು ; ಮತ್ತಿಬ್ಬರು ಹಿಂದೆ ಕುಳಿತು ಸೋಗೊಡಹತ್ತಿದರು.

"ಬಾಳೀಯ ಬನವು ಕೌಂಗೆಲಿ ಕುಸುಮ,
ಬಾಳ ಮಲ್ಲಿಗಿ ನನೆಯೆ ||
ಬ್ಹಾಳ ಹೊನ್ನ ನಾ ನಿನಗ ಸೂರಿ ಮಾಡಿ ತಂದೇನ
ಬಾಲಿ ವೀಳೆಯ ಹಿಡಿಯೆ || ಸೋಬಾನವ || || ೧ ||

ನಿಂಬೀಯ ಬನವು ಕೌಂಗೆಲಿ ಕುಸುಮ,
ತುಂಬ ಮಲ್ಲಿಗಿ ನನೆಯೆ ||
ತಂಬಿಗಿ ಹೊನ್ನ ನಾ ನಿನಗ ಸೂರಿ ಮಾಡಿ ತಂದೇನ
ರಂಬಿ ವೀಳೆಯ ಹಿಡಿಯೆ || ಸೋ.... || ೨ ||

ತೆಂಗೀನ ಬನವು ಕೌಂಗೆಲಿ ಕುಸುಮ,
ದುಂಡಮಲ್ಲಿಗಿ ನನೆಯೆ ||
ಬಂಡಿಯ ಹೊನ್ನ ನಾ ನಿನಗ ಸೂರಿ ಮಾಡಿ ತಂದೇನ
ನಾರಿ ವೀಳೆಯ ಹಿಡಿಯೆ || ಸೋ.... || ೩ ||

ಖಾರೀಕ ಬನವು ಕೌಂಗೆಲಿ ಕುಸುಮ,
ಕದರ ಮಲ್ಲಿಗಿ ನನೆಯೆ ||
ಕುದರಿಯ ಹೊನ್ನ ನಾ ನಿನಗ ಸೂರಿ ಮಾಡಿ ತಂದೇನ
ಚದುರಿ ವೀಳೆಯ ಹಿಡಿಯೆ || ಸೋ.... || ೪ ||

ಶಾವಂತಿಗೆ ಬನವು ಕೌಂಗೆಲಿ ಕುಸುಮ,
ಉದರ ಮಲ್ಲಿಗೆ ನನೆಯೆ ||
ಜಾಳಿಗಿ ಹೊನ್ನ ನಾ ನಿನಗೆ ಸೂರಿ ಮಾಡಿ ತಂದೇನ
ಜಾಡಿ ವೀಳೆಯ ಹಿಡಿಯೆ || ಸೋ.... || ೫ ||

ಅತ್ತೀ ಮಾವನ ಹೊಟ್ಟೀಲೆ ಹುಟ್ಟಿ ತಾವು 'ಭರಮೇಶಾ'
ತೂಗೂ ಮಂಚದ ದೊರಿಯ ||
ನಾಲ್ಕೈದು ವರುಷ ನಾ ನಿಮಗೆ ತಪನಿದ್ದೆ
ಅರಸ ವೀಳೆಯ ಹಿಡಿಯ || ಸೋ.... || ೬ ||

ಅತ್ತೀ ಮಾವನ ಹೊಟ್ಟೀಲೆ ಹುಟ್ಟಿ ತಾವು....
ಬೆಳ್ಳೀ ಮಂಚದ ಒಡೆಯ ||
ಯೋಳೆಂಟು ವರುಷ ನಾ ನಿಮಗ ತಪನಿದ್ದೆ
ಸೆಟ್ಟಿವೀಳೆಯ ಹಿಡಿಯ || ಸೋ... || ೭ ||

ಅತ್ತೀ ಮಾವನ ಹೊಟ್ಟೀಲೆ ಹುಟ್ಟಿ ತಾವು....
ಎದುರ ಮಂಚದ ಸಿರಿಯ ||
ಹನ್ನೆರಡ ವರುಷ ನಾ ನಿಮಗ ತಪನಿದ್ದೆ,
ರಾಜರ್ ವೀಳೆಯ ಹಿಡಿಯ || ಸೋ.... || ೮ ||

ಚಿಕಣಿಯ ಅಡಕಿ ಚಿಗುರಿನ ಎಲೆಯು,
ಕಾಚ ಬಿಳಪಿನ ಸುಣ್ಣಾ ||
ಲವಂಗ ಪತ್ತರಿ ಜಾಜಿಕಾಯಿ ಹಾಕಿದ,
ಜಾಣ ವೀಳೆಯ ಹಿಡಿಯ || ಸೋ.... || ೯ ||

** ** ** **

ಹಾಡು ಮುಗಿಯಿತು. ಹಾಡು ಕೇಳುವುದರಲ್ಲಿ ಮೈಮರೆತ ಜನ ಮಕರದ ಕಡೆಗೆ ನೋಡುವಲ್ಲಿ ಅದಾವಾಗಲೋ ತಾರಕ್ಕ ಬಂದು ಕುಳಿತಿದ್ದಳು. ಹೆಂಗಸರು ಇನ್ನೊಂದು ಹಾಡು ಆರಂಭಿಸಲು ಸಿದ್ಧರಾಗಿದ್ದರು. ಜನರೂ ಹಾಗೆ ನಿರೀಕ್ಷಿಸಿದ್ದರು. ಆದರೆ ಪಂಡಿತನು ಅದಕ್ಕೆ ತಡೆ ಹಾಕಿ "ಮಹೂರ್ತ ಹೋಗತೇತಿ, ಮೊದಲ ಉಡ್ಯಾಗ ಫಲಾ ಹಾಕಿ ಎಬ್ಬಸತ್ಯಾನು.... ಆಮ್ಯಾಲಿ ಬೆಳತನಕ ಹಾಡಕೋತ ಕೂಡರಿ, ನಿಮಗ್ಯಾರ ಬ್ಯಾಡ ಅಂತಾರು!" ಎಂದ.

"ಉಡ್ಯಾಗ ಫಲಾ ಹಾಕಾಂವ ಮೊದಲ ಅಳ್ಯಾನಾ ಸಮಾಧಾನ ಮಾಡಲಿ!" ಚಿಮ್ಮವ್ವ ನುಡಿದಳು, ಧ್ವನಿ ಸ್ವಲ್ಪ ತಿರಸ್ಕಾರಕ್ಕೆ ತಿರುಗುತ್ತಿರಲು.

"ಆವಾಗಿಂದೂ ಅದ್ಯ ನಡಸಿದ್ಯಾನು, ಅದ್ಯಾನ ನನ್ನ ಕೈಲೆ ಬಗೀ ಹರೀ ಹೆಂಗ ಕಾಣಸೂದುಲ್ಲ...." ಎಂದು ಪಂಡಿತ ಹೇಳಿದ.

ಅನಂತರ ರಾಮಪ್ಪ, ಅಳಿಯನಿಗೆ ತಿಳುವಳಿಕೆಯ ನಾಲ್ಕು ಮಾತು ಹೇಳಿ,

ಅದೂ ಒಂದು ಉಂಗುರವನ್ನು ಕೊಟ್ಟನು. ಆದರೂ ಭರಮನ ಮುನಿಸು ತೀರಲಿಲ್ಲ. ಆಗ ರತ್ನವ್ವ ಸ್ವತಃ ಮುಂದೆ ಬಂದು "ಈಗ್ಯಾನ ಆಯ್ತಾನ ಇಷ್ಟರ ಮ್ಯಾಲ ? ಇನ್ನರ ಹಡೇಕಿ ಇದಾಳ, ಹಿಂಗಾಕಿ ಇದಾಳ. ಆಗೂ ಮಾಡೋ ದೇತೆಲ್ಲ ! " ಎಂದು ಅಳಿಯನಿಗೆ ಮುಂದಿನ ಆಶೆ ತೋರಿಸಹೋದಳು.

ಚಿಮ್ಮವ್ವ ಅತ್ತೆಯ ಮಾತಿಗೆ ಮಗನೆಲ್ಲಿ ಗೋಣುಹಾಕುವನೋ ಏನೋ ಎಂಬ ಆತುರದಲ್ಲಿ "ಆಗಿಂದ ಆಗ, ಈಗಿಂದ ಈಗ...." ಎಂದಳು.

ಗಂಡಸರ ಗುಂಪಿನೊಳಗಿಂದ ಮಲ್ಲ ಹೇಳಿದ "ಯಾವಾಗಾದರ ಎಲ್ಲಾ ಅವರದ ಏತೈಲ್ಲ ! " ಎಂದು.

ಇಷ್ಟಾದರೂ ಅಳಿಯನ ಸಿಟ್ಟು ಇಳಿಯಲಿಲ್ಲ. ಆಗ ಹಿರಿಯ ಮುದುಕ ನೊಬ್ಬ ಎದ್ದು ಬಂದು "ಆಯ್ತು, ಸುತ್ತ ಇನ್ನ ಪಟಕೆ, ಮಲ್ಲ ಇಷ್ಟ ಹೇಳಿದ ಮ್ಯಾಲ ಇನ್ನ ಸಿಟ್ಟ ಮಾಡಬಾರದ...." ಎಂದು ಪಟಕೆ ಕೊಡಲು ಪಂಡಿತನಿಗೆ ಹೇಳಿದ. ಭರಮ ಸುತ್ತದಿರಲು "ಹುಡಗಾ ಹರೀತನಕಾ ಜಗ್ಗಬಾರದ ಲ್ಹಾ ; ಮುಂದಿಂದ ಎಲ್ಲಾ ತಿಳದ ನೋಡಬೇಕು...." ಎಂದು ಹಲವು ವಿಧದಲ್ಲಿ ಹೇಳಿ ದರೂ ಉಪಯೋಗವಾಗಲಿಲ್ಲ.

ಕೊನೆಗೆ ಹೂವಣ್ಣನೂ ಒಂದು ಮಾತು ಹೇಳಿದ ಮೇಲೆ ಪಂಡಿತನು ನಿರುಪಾಯನಾಗಿ ತಾರಕ್ಕನ ಉಡಿಯಲ್ಲಿ ಫಲ ಹಾಕಿ ಮುಹೂರ್ತ ಸಾಧಿಸಿದ ! ಆದರೂ ಚಿಮ್ಮವ್ವ ಮಗನಿಗೆ ಉಡುಗೊರೆ ಮಾಡಿಕೊಳ್ಳಲು ಹೇಳಬಯಸಲಿಲ್ಲ. ಅವಳಿಗೆ "ನನ್ನ ಮಗನ ತೆಕ್ಕ ಉಡುಗೊರೆ ತಂದಿಲ್ಲ ; ಇದ್ದ ಅರಿವಿ ಮ್ಯಾಲ. ದೇವರಿಗೆ ಹೋಗಿ ಬರವಲ್ಲ ಯಾಕ...." ಎಂದೇ ಅವಳ ಮನಸ್ಸು ಹೇಳುತ್ತಿತ್ತು.

## ೭

ತಾರಕ್ಕ ಪತಿಯ ಮನೆಗೆ ಬಂದು ಆರು ತಿಂಗಳು ಕಳೆದುವು. ಮೊದಲ ಸಲ ಬಂದಾಗ ಅತ್ತೆ ತೋರಿಸಿದ ಸಹಾನುಭೂತಿ ಈಗ ಇಲ್ಲದಾಯಿತು. ಇದ ನ್ನರಿತು ಹೂವಣ್ಣನೂ ಮನದಲ್ಲಿ ನೊಂದುಕೊಂಡ. ಒಮ್ಮೊಮ್ಮೆ ಇನ್ನು ಕೆಲ

ದಿನಗಳಲ್ಲಿ ಹೆಂಡತಿಯ ಮನಸ್ಸು ಸರಿಯಾದೀತೆಂದು ಅಪೇಕ್ಷಿಸಿದ. ದಿನಗಳೆದಂತೆ ಅವನ ಆಶೆ ನಿರಾಶೆಯಾಗುತ್ತ ಬಂತು. ಇನ್ನು ಸುಮ್ಮನಿದ್ದು ಉಪಯೋಗವಿಲ್ಲೆಂದು, ಒಂದು ದಿನ ಚಿಮ್ಮವ್ವನನ್ನು ಕರೆದು, "ತಾರಾ ದೊಡ್ಡಾಕಿ ಆದಳು, ಮದವಿ ಆಗುಲಕಿಂತ ಮುಂಚಿ ಸಣ್ಣದ ಇತ್ತು; ಕಳಸ ನೀರ ಬಿದ್ದ ಮ್ಯಾಲ ಕಣ್ಣ ಕಿತ್ತೀತಿ, ಹುಡುಗನು ದೊಡ್ಡಾವ...."

ಚಿಮ್ಮವ್ವ ಮುಂದೆ ಮಾತಾಡಗೊಡಲಿಲ್ಲ. ಹಣೆಗೆ ಗಂಟು ಹಾಕಿ,

"ಸೊಸೀ ಅಂದರ ಏರಿಸಿ ತಲಿಮ್ಯಾಲ ಇಟಕೊಂಡೀದಿ. ಮಗಳ ಬರೋಬರಿ ತಿನಸೋದ ಯಾನ....ಬಾಳಾ ಬಾಳಾ ಅಂತ ಯಾನರ ಇಷ್ಟ ಇದ್ದರ ತಿನ್ನಕ ಕೈಯಾಗ ಹಾಕೋದ ಯಾನ, ಅಂದ ಮ್ಯಾಲ ಬೆಳೆದ ನಿಲ್ಲದ ಯಾನ ಮಾಡ್ಯಾಳು? ಆಕಿ ಹತ್ಯಾಕ ಹುಡುಗ ನಿಂತರ ಎಲ್ಲೀದ ಕುರಕಲ ಕಾಣಸ್ತಾನು...." ಎಂದಳು.

"ಈಗ ಹೀಂಗ ಅನ್ನಾಕಿ, ಮೊದಲ ನಿನಗ ಮಾಡ ಅಂತ ಯಾರ ಅಂದಿದ್ರೂ? ಪೋರಿ ದೊಡ್ಡಾಕಿ ಆಗತಾಳಂತ ಹೇಳಿ ಬಿಟ್ಟದ್ರ ಬರ ತಿತ್ತಲ್ಲ....?" ಎಂದು ಮೂಲವನ್ನೇ ವಿಚಾರಣೆಗೆ ತಕ್ಕೊಂಡ ಹೂವಣ್ಣ.

"ಹ್ಯಾಂಗ ಮಾಡಿದ್ಯಾನ ಹಾಂಗ ತೀರಸ್ತ....ಇದ್ಯಾನಲ್ಲ ನಾ! ನೀ ಸೊಸೀ ಕಡೆ ಆಗಿ, ಇಷ್ಟ ಏರ ಇಟ್ಟ ಯಾಕ ಮಾತಾಡ್ತಿ....?" ಎಂದಳು ಚಿಮ್ಮವ್ವ. ಸ್ವಲ್ಪ ಹೊತ್ತು ಯೋಚಿಸಿ...."ಎಲ್ಲಾರು ನಿನ್ನ ಹಂಗ ಮಾಡಿದರ್‍ಯ, ಆಕಿ ಮನ್ಯಾಗ ಹ್ಯಾಂಗ ಇರಬೇಕು....?" ಎಂದು ಹೂವಣ್ಣ ಕೇಳಿದ. ಆದರೆ ಅದಕ್ಕೆ ಉತ್ತರ ಕೊಡಲಿಕ್ಕೆ ಚಿಮ್ಮವ್ವ ಅಲ್ಲಿರಲಿಲ್ಲ. ಈ ಮೊದಲೇ ಒಳಗೆ ಹೋಗಿದ್ದಳು. ಕ್ರಿಯೆಗೆ ಪ್ರತಿಕ್ರಿಯೆಯಾಗುವುದು ಸ್ವಾಭಾವಿಕ. ಆದರಲ್ಲಿ ಚಿಮ್ಮವ್ವನಂತಹ ಮನಸ್ಥಿತಿಯವರಲ್ಲಿ ಅದನ್ನು ಕೇಳಲಿಕ್ಕೇ ಬೇಡ. ತಾನು ಮಾಡುವ ಕೃತಿಗೆ ಯಾರಾದರೂ ವಿರೋಧಿಸುತ್ತಾರೆಂದು ತಿಳಿದರೇ ಸಾಕು. ಅದನ್ನು ತಾನು ದೃಢನಿಶ್ಚಯದಿಂದ ಕೊನೆಗಾಣಿಸಿಯೇ ಬಿಡುವ ಸ್ವಭಾವ ಅವಳದು.

ಮನೆಯಲ್ಲಿ ಮಗಳೊಬ್ಬಳೇ ಇದ್ದಾಗ ಕರೆದು "ನೀ ಇಂದಿನಿಂದು ತಾರಾನ ಗೂಡಾ ಉಣಕ ಕೂಡತಿರಬ್ಯಾಡಾ...." ಎಂದು ಬೋಧಿಸಿದಳು, ಚಿಮ್ಮವ್ವ.

ತಾಯಿಯ ಮಾತು ಕೇಳಿ ಸಣ್ಣ ಹುಡಗಿಯದು ಗೊಂದಲದಲ್ಲಿ ಬಿತ್ತು. ಸಹಜ ಕುತೂಹಲದಿಂದ ಅವಳ ಬಾಯಿಂದ "ಯಾಕ?" ಎಂಬ ಪ್ರಶ್ನೆ ಹೊರಬಿತ್ತು.

"ಆಕೀ ಗೂಡಾ ಉಂಡರ ಕಾಲಧೂಳಿಯಾಗಿ ಹೊಟ್ಟೆ ಕಡೀತೇತಿ ನಿಂದ...." ಈ ಮಾತಿನಲ್ಲಿ ನಂಬಿಗೆ ಹುಟ್ಟಲಿಲ್ಲ ಹುಡಿಗೆಗೆ. "ಯಾರ ಹೇಳ್ಯಾರು?" ಎಂದು ಕೇಳಿದಳು.

"ಅಂವ ಹೇಳಿದಾ, ಉಣಬ್ಯಾಡ...."

ಈಗ ಚಿಮ್ಮವ್ವನ ಸ್ವರದಲ್ಲಿ ಆದ ಬದಲಾವಣೆಯನ್ನು ಕಂಡು ಹುಡುಗಿ ಹೆದರಿತು. ಅಕ್ಕಾತಾಯಿ ಇನ್ನೂ ಚಿಕ್ಕ ಹುಡುಗಿ, ಹೆಚ್ಚಿಗೆ ಕೇಳುವ ಧೈರ್ಯ ವಾಗಲಿಲ್ಲ ಅವಳಿಗೆ. ಸಂಜೆಗೆ ಇನ್ನೂ ಸ್ವಲ್ಪ ಹೊತ್ತಿರುವಾಗಲೇ ಚಿಮ್ಮವ್ವ ಸೊಸೆಯನ್ನು ಹೊರಗೆ ಕೆಲಸಕ್ಕೆ ಕಳಿಸಿದಳು. ಆಗ ಮಗಳನ್ನು ಕರೆದು ಊಟಕ್ಕೆ ಹಾಕಿದಳು. ಕೊನೆಗೆ, ತಾವೆಲ್ಲರೂ ಊಟ ಮಾಡಿದ ನಂತರ ಒಣರೊಟ್ಟಿ ಕಾರ, ತಾಟಿನಲ್ಲಿ ಹಾಕಿಟ್ಟು, ಉಳಿದುದೆಲ್ಲವನ್ನು ಮೇಲೆ ತೆಗೆದಿಟ್ಟು "ತಾರಾ, ಉಣ್ಣೋಗ" ಎಂದು ಹೇಳಿ, ತಾನು ಪಡಸಾಲೆಗೆ ಬಂದಳು.

ತಾರವ್ವ ನಿತ್ಯದಂತೆ "ನೀ ಉಣುದುಲ್ಲಾ, ಅಕ್ಕಾ?" ಎಂದು ಕೇಳುತ್ತ ಒಳಗೆ ಹೋದಳು. ಅದಕ್ಕೆ ಅಕ್ಕಾತಾಯಿ ಉತ್ತರ ಕೊಡುವ ಮೊದಲೇ ಚಿಮ್ಮವ್ವ "ಆಕಿ ಆಗ್ಲೇ ಉಂಡಿದಾಳು....ನೀ ತಿನ್ನೋಗ ತಾಟನ್ಯಾಗ ಹಾಕಿ ಇಟ್ಟೆದ್ಯಾನ ನೋಡ...." ಎಂದು ಬಿರುಸಾದ ಸ್ವರದಲ್ಲಿ ಹೇಳಿದಳು. ತಾರಕ್ಕ ಹೆಚ್ಚಿಗೆ ಮಾತಾಡದೆ ತಾಟನಲ್ಲಿ ಹಾಕಿಟ್ಟದ್ದನ್ನಷ್ಟು ಹೇಗೋ ತಿಂದಳು. ಅಂದಿನ ಅತ್ತೆಯ ಈ ರೀತಿ ಅವಳಿಗೆ ತುಸು ವಿಚಿತ್ರವಾಗಿ ಕಾಣಿಸಿತು. ಇದಕ್ಕೂ ಹೆಚ್ಚು ಅವಳ ಮನಸ್ಸು ನೊಂದುಕೊಂಡಿತು. ಇಂದಿನವರೆಗೆ ಹೀಗೆ ಅವ ಳೊಬ್ಬಳೇ ಎಂದೂ ಉಂಡವಳಲ್ಲ.

ಅಂದಿನಿಂದ ದಿನದಿನಕ್ಕೆ ಮನೆಯಲ್ಲಿ ತಾರಕ್ಕನಿಗೆ ಕೆಲಸ ಹೆಚ್ಚಾಯಿತು. ದಿನಾಲು ಮುಂಜಾನೆ ನಾಲ್ಕು ಗಂಟೆಗೆ ಎದ್ದು ಮೂರು ನಾಲ್ಕು ಸೇರು ಜೋಳ ಬೀಸಬೇಕು. ಅನಂತರ ಮನೆಯೊಳಗಿನ ಮುಂಜಾನೆಯ ಕಸ ಮುಸುರೆ ಮಾಡಿ ಕೊಂಡು ಬೇಗನೆ ಅಡಿಗೆಗೆ ತೊಡಗಬೇಕು. ಅಡಿಗೆಯಾದ ಮೇಲೆ ಅತ್ತೆ

ಬಡಿಸಿದ್ದನ್ನು—ಬಡಿಸಿದಷ್ಟು—ತಿಂದು ಮಾವನ ಬುತ್ತಿ ತಕ್ಕೊಂಡು, ಹೊಲಕ್ಕೆ ಹೋಗಬೇಕು. ಹೊಲದಲ್ಲಿ ಮಾವ ತೋರಿಸಿದ ಕೆಲಸ ಮಾಡಬೇಕು. ಇಳಿ ಹೊತ್ತಿಗೆ ಮಾವನು ಮಾಡಿಕೊಟ್ಟ ಮೇವಿನ ಹೊರೆಯನ್ನು ಹೊತ್ತುಕೊಂಡು ಮನೆಗೆ ಬರಬೇಕು. ಬಂದೊಡನೆಯೇ, 'ಬರಲಿಕ್ಕೆ ಇಷ್ಟೇಕೆ ವೇಳೆ ?' ಎಂದು ಅತ್ತೆಯ ಬಾಯಿಂದ ನಾಲ್ಕು ಹೂವೇರಿಸಿಕೊಂಡು, ಹೊಳೆಗೆ ನೀರಿಗೆ ಹೋಗ ಬೇಕು, ಮನೆಗೆ ಹತ್ತುವಷ್ಟು ನೀರು ತಂದಾದ ಮೇಲೆ ಸಂಜೆಯ ಅಡಿಗೆ ಮಾಡುತ್ತ ನಾಳಿನ ಜೋಳ ಹಸನು ಮಾಡಿಕೊಳ್ಳಬೇಕು. ಅಷ್ಟರಲ್ಲಿ ಮಾವ ಹೊಲದಿಂದ ಬರಲು, ಅತ್ತೆ ಒಳಗೆ ಅವನಿಗೆ ಊಟಕ್ಕೆ ಹಾಕಹತ್ತಲು, ಅವಳ ಅಜ್ಞೆಯ ಮೇರೆಗೆ ಈಕೆ ದನಗಳ ಕೊಟ್ಟಿಗೆಯನ್ನು ಸ್ವಚ್ಛಮಾಡಬೇಕು. ಸಂಜೆ ಅತ್ತೆ ಕೊಟ್ಟ ನಾಲ್ಕು ತುತ್ತು ರೊಟ್ಟಿ ತಿಂದು ಒತ್ತಟ್ಟಿಗೆ ಮಲಗಬೇಕು. ಇದಿಷ್ಟು ಅವಳ ದಿನದ ಕೆಲಸ. ಮೊದಮೊದಲು ತಾರಕ್ಕ ಎಲ್ಲವನ್ನು ಯಾರಿಗೂ ಹೇಳದೆ ಅಭಿಮಾನದಿಂದ ಮಾಡಹತ್ತಿದಳು. ತನ್ನ ಕಷ್ಟವನ್ನು ಯಾರ ಮುಂದೆಯೂ ಉಸುರುಗರೆಯಲಿಲ್ಲ. ಉಸುರುವದಾದರೂ ಯಾಗೆ ? ಒಮ್ಮೆ ಅವ್ವನಿಗೆ ಹೇಳಬೇಕೆಂದಳು. ಕೂಡಲೆ "ಇದ್ದೂರು, ಅತ್ತೆಯ ಮನೆಯ ಮಾತು ತವರುಮನೆಯಲ್ಲಿ ಹೇಳಬಾರದು...." ಎಂಬ ಸೋದರತ್ತೆಯ ಹಿತವಚನ ವನ್ನು ನೆನೆದು, ಹೇಳದೆ ಹಲವು ದಿನ ಕಳೆದಳು. ಕೊನೆಗೆ ಬೇಸತ್ತು ನೀರಸ ಜೀವನಕ್ಕೆ ಕಣ್ಣೀರು ಸುರಿಸಿ, ಹೃದಯವನ್ನು ಹಗುರಮಾಡಿಕೊಳ್ಳಹತ್ತಿದಳು.

ಒಂದು ದಿನ ಸಂಜೆ ತಾರಕ್ಕ ಕೊಟ್ಟಿಗೆಯಲ್ಲಿ ಕಸ ಗುಡಿಸತೊಡಗಿದ್ದಳು. ಸ್ವಲ್ಪ ಉಡುಗುವದಾದ ಮೇಲೆ ಕಸಬರಿಗೆಯನ್ನು ಕೆಳಗೆಸೆದು, ಅಂಗೈಯನ್ನು ನೋಡಿಕೊಳ್ಳಹತ್ತಿದಳು. ಅವಳ ಕಣ್ಣುಗಳಿಂದ ಎರಡು ಹನಿಗಳು ಆ ಕೈಗಳ ಮೇಲೆ ಉದುರಿದುವು. ಕೈಗೆ ತೊಡೆದ ಹೊಲಸನ್ನು ತೊಳೆಯಲೆಂದೋ ಏನೋ ? ಅಷ್ಟರಲ್ಲಿ ದನಗಳಿಗೆ ಮೇವು ಹಾಕಲೆಂದು ಭರಮು ಅಲ್ಲಿ ಬಂದ. ತಾರಕ್ಕ ಒಮ್ಮೆಲೇ ಚಕಮಕಿಸಿದಳು. ಕೂಡಲೆ ಉಡುಗೋಲನ್ನು ಹಿಡಿದಳು, ಬೆದರಿ ಹಣೆತುಂಬ ಕಿರುಬೆವರೊಡೆಯಿತು. ಹೇಗೋ ಉಡುಗತೊಡಗಿದಳು.

ಭರಮನೂ ಮುದುರಿದ, ಸಂಕೋಚದಿಂದಲೇ ಒಳಗೆ ಬಂದು, ಮೇವು ಹಾಕುತ್ತ.... "ಯಾನಾ ?" ಎಂದು ಮನಸ್ಸಿಲ್ಲದೆ ಕೇಳಿದ.

ಉಡುಗುವದನ್ನು ನಿಲ್ಲಿಸಿ ಮೇಲೆ ಮುಖಮಾಡಿ "ಯಾನಿಲ್ಲ" ಎಂದು ಮೆಲ್ಲನೆ ನುಡಿದು, ಉಡುಗತೊಡಗಿದಳು, ತಾರಕ್ಕ ಮತ್ತೆ.

"ಕಣ್ಣ ಕೆಂಪಗ ಆಗೀದಾವಲ್ಲ....?" ಈಗ ಕಂಡದ್ದನ್ನೇ ಕೇಳಿದ ಭರಮ. ತಾರಕ್ಕ ಅಂಜುತ್ತಂಜುತ್ತ..."ಕೈಗಿ ಗುಳ್ಳಿ ಎದ್ದ ಒಡದಿದಾವು.... ಸೆಗಣ ಹತ್ತ್ಯಾನ ಉರಿತಿತ್ತು.. ಅದಕ...'' ಎಂದಳು.

ಭರಮ ಸಮೀಪಕ್ಕೆ ಬಂದು.... "ನೋಡೂಣು....?" ಎಂದ. ತಾರಕ್ಕ ತೋರಿಸಲಿಲ್ಲ. ಭರಮ ಮತ್ತೆ "ಯಾನಾಯ್ತು ?" ಎಂದು ಕೇಳಿದ.

"ಹೊಲ್ದಾಗ ಜೋಳಾ ಕೊಯ್ಯಾಗಾ....ಗುಳ್ಳಿ ಎದ್ದೂ....?" ಎಂದಳು. ಕಣ್ಣುಗಳಲ್ಲಿ ನೀರು ಹೊರಗೆ ಬರಬೇಕೆಂದು ಸಿದ್ಧವಾಗಿ ನಿಂತಿದ್ದುವು.

"ಅಪ್ಪಾ....ಇಲ್ಲಾಗಿದ್ದಾ....?"

ಭರಮನಿಗೆ, ಅಪ್ಪನಿದ್ದರೆ ಹೆಂಡತಿಗೆ ಅಷ್ಟು ತ್ರಾಸ ಕೊಡುವದಿಲ್ಲವೆಂದು ಗೊತ್ತಿದ್ದಿತು. ತಾಯಿ ಹೆಂಡತಿಗೆ ಕೊಡುವ ಕಷ್ಟ, ಬೈಯುವ ಬೈಗಳ ಕಂಡು ಕೇಳಿ ಕೊರಗುವನಾದರೂ ಅವನಿಗೆ ಏನೂ ಮಾಡಲು ಬರುವಂತಿರಲಿಲ್ಲ. ಅವ್ವನ ಆಜ್ಞೆಯಂತೆ ವರ್ತಿಸಬೇಕಾಗುತ್ತಿತ್ತು.

ಅಷ್ಟರಲ್ಲಿ ಪಡಸಾಲೆಯಿಂದ ಚಿಮ್ಮವ್ವ... "ಭರಮಾ ಅಲ್ಲ್ಯಾಕ್ಯನ ಮಾಡತಿ...?" ಎಂದು ಕೇಳಿದಳು. ಆಗಿನ ಅವಳ ಧ್ವನಿಯಲ್ಲಿಯ ಕಠೋರತೆಯನ್ನು ಕೇಳಿ ಇಬ್ಬರೂ ನಡುಗಿದರು. ಭರಮ ಒಣಗಿದ ಕಂಠದಿಂದ.... "ಯಾನ ಇಲ್ಲ; ದನೀಗಿ ಮೇವ ಹಾಕಿದ್ನಿ...." ಎಂದು ಹೇಳುತ್ತ ಪಡಸಾಲೆಗೆ ಬಂದ.

ಹೂವಣ್ಣ ಸಂಜೆಗೆ ಹೊಲಕ್ಕೆ ಹೋದನಂತರ ಮನೆಯಲ್ಲಿ ದೊಡ್ಡ ಕಲಹವಾಯಿತು. ಇವರು ಕೊಟ್ಟಿಗೆಯಲ್ಲಿ ಮಾತಾಡುತ್ತಿದ್ದುದನ್ನು ಮರೆಗೆ ನಿಂತು ಚಿಮ್ಮವ್ವ ಕೇಳಿದ್ದಳಂತೆ. ಮಗ ತನ್ನ ಹೆಂಡತಿಯ ಕೂಡ ಮಾತಾಡುವದೆಂದರೆ ಅವಳ ದೃಷ್ಟಿಯಲ್ಲಿ ಮಹಾಪ್ರಮಾದ. ಭರಮನಿಗೆ ಚೆನ್ನಾಗಿ ಛೀ ಹಾಕಿದಳು. ತಾರಕ್ಕನಿಗಂತೂ ಅಲ್ಲದ ಸಲ್ಲದ ಮಾತನಾಡಿದಳು. ಸಂಜೆಗೆ ತಾರಕ್ಕ ಊಟ ಮಾಡಲಿಲ್ಲ. ಮಾಡಲಿಕ್ಕೆ ಅವರತ್ತೆಯೂ ಹೇಳಲಿಲ್ಲ. ಅಕ್ಕ್ಯಾತಾಯಿ ಮಾತ್ರ ಒಮ್ಮೆ ಅವ್ವನಿಲ್ಲದ ವೇಳೆಯನ್ನು ಸಾಧಿಸಿ "ಉಣ್ಣುದುಲ್ಲಾ, ಅಕ್ಕಾ ?" ಎಂದು ಕೇಳಿದಳು.

ತಾರಕ್ಕ "ಹಸಿವಿಲ್ಲ!" ಎಂದು ಹೇಳಲು ಸುಮ್ಮನಾಗಿ ಹೋದಳು. ಒಂದು ತೊಟ್ಟು ಕಣ್ಣೀರು ಮಿಡಿದಳು ಮಾತ್ರ. ಇದರ ಹೊರತಾಗಿ ಹೆಚ್ಚಿಗೇನೂ ಮಾಡುವಂತಿರಲಿಲ್ಲ ಆಕೆ.

ಈ ಜಗಳ ನೆರೆಹೊರೆಯವರಿಂದ ತಾರಕ್ಕನ ತಾಯಿಗೂ ತಿಳಿಯಿತು. ಅವಳು ನಾಲ್ಕು ದಿನ ಮಗಳನ್ನು ಕಳಿಸಿಕೊಡಿರೆಂದು ಗಂಡನನ್ನು ಕರೆಯಲು ಕಳಿಸಿದಳು. "ಸುಗ್ಗೀ ದಿನಾ, ಮನ್ಯಾಗ ಬೇಕು...." ಎಂದು ಹೇಳಿದರು. ಕಳಿಸಿಕೊಡಲಿಲ್ಲ. ಎರಡು ಮೂರು ದಿನಗಳ ನಂತರ ರತ್ನವ್ವ ಹೊಲಕ್ಕೆ ಹೋಗುವ ಹಾದಿಯಲ್ಲಿ ಮಗಳನ್ನು ಕಂಡು, ಎಲ್ಲ ಸಮಾಚಾರವನ್ನು ಕೇಳಿದಳು. ತಾರಕ್ಕ ಸುತ್ತಲೂ ನೋಡಿ ಯಾರೂ ಇಲ್ಲದ್ದನ್ನು ಕಂಡು, ನಡೆದ ಸಂಗತಿಯನ್ನು ನಾಲ್ಕು ಮಾತುಗಳಲ್ಲಿ ಕಣ್ಣೀರು ತಂದು ಹೇಳಿದಳು. ಮಗಳ ಕಣ್ಣಲ್ಲಿ ನೀರು ಕಂಡು ರತ್ನವ್ವ ಗಳಗಳನೆ ಅತ್ತುಬಿಟ್ಟಳು. ರತ್ನವ್ವನಿಗೆ ಆ ದಿನ ಸಂಜೆಯವರೆಗೆ ಹೊತ್ತೇ ಹೋಗಲಿಲ್ಲ. "ಒಬ್ಬಾಕೇ ಮಗಳಾ, ಹತ್ತೆಂಟ ಕೂಂಗಿ ಅಡವಿ ಇದ್ದವರಾ, ಒಳಗಿನವರಾ, ಅಂತ ಖರ್ಚಮಾಡಿಕೊಟ್ಟರ ಹಿಂಗ್ಯಾಕ ಆಯ್ತು ನನ್ನ ಮಗಳಗಿ....?" ಎಂದು ಚಿಂತಿಸಿದಳು.

ರಾತ್ರಿ, ರತ್ನವ್ವ ಗಂಡನಿಗೆಲ್ಲ ಮಗಳ ಸ್ಥಿತಿಗತಿಯನ್ನು ವಿವರಿಸಿದಳು. ಕೇಳಿ ಮಲ್ಲನೂ ಮನದಲ್ಲಿ ಮರುಗಿದ. ಒಮ್ಮೆ ಮಗಳಿಗೆ ಕಷ್ಟಕೊಡದಂತೆ ತಂಗಿಗೆ ಹೇಳಬೇಕೆಂದು ಯೋಚಿಸಿದ. ಆದರೆ ಅವನ ವಿವೇಕ ಅವನಿಗೆ ಹಾಗೆ ಮಾಡಗೊಡಲಿಲ್ಲ. ತಾನು ಹೇಳುವುದರಿಂದ ಮತ್ತೆ ಮಗಳಿಗೆ ತ್ರಾಸವೇ ಹೆಚ್ಚಾದೀತೆಂದು ಭಾವಿಸಿದ. ಇನ್ನು ಕೆಲದಿನಗಳಲ್ಲಿ ಚಿಮ್ಮವ್ವನಿಗೇ ಬುದ್ಧಿ ಬಂದೀತೆಂದು ಕಲ್ಪಿಸಿದ. ಆದರೂ ಒಳಗೊಳಗೆ ತಂಗಿಯ ಮೇಲೆಯೂ ಸಿಟ್ಟಾಗದಿರಲಿಲ್ಲ.

ಈ ರೀತಿ ಕೆಲದಿನಗಳು ಕಳೆದುವು. ತಾರಕ್ಕ ಅತ್ತೆಯ ಮನೆಯಲ್ಲಿ ಕಷ್ಟ ಅನುಭವಿಸುತ್ತಿದ್ದಳು. ಇವರು ಇಲ್ಲಿ ಮನೆಯಲ್ಲಿ ಕೊರಗುತ್ತಿದ್ದರು.

ಒಂದು ವರ್ಷದ ನಂತರ ಬೇಸಿಗೆಯ ಬಿಡುವಿನಲ್ಲಿ ಅನಂತ ಮಾವನ ಮನೆಗೆ ಬಂದ. ಆಗ ತಾರಕ್ಕನೂ ತವರುಮನೆಗೆ ಬಂದಿದ್ದಳು. ಇಬ್ಬರಲ್ಲೂ ಮಾತುಕತೆಗಳಾದವು. ಅನಂತ ಹೆಚ್ಚಿಗೇನೂ ಮಾತಾಡಲಿಲ್ಲ. ಆಡಬೇಕಾದುದೇನೂ ಇರಲಿಲ್ಲ. ತಾರಕ್ಕನೇ ಅತ್ತೆಯ ಮನೆಯ ಸಮಾಚಾರವನ್ನೆಲ್ಲ ಹೇಳಿ ಹೃದಯವನ್ನು ಹಗುರಾಗಿಸಿದಳು. ಅನಂತ ಕೇಳಿ 'ಅಯ್ಯೋ!' ಅಂದ. ನಾಲ್ಕು ದಿನ ಇಬ್ಬರೂ ಕೂಡಿ ಕಳೆದರು. ಬೇಕಾದುದನ್ನು ಮಾಡಿಸಿಕೊಂಡು ತಿಂದರು. ತಾರಕ್ಕ ಅತ್ತೆಯ ಮನೆಗೆ ಹೋದಳು. ಹೋಗುವಾಗ ಬಹಳಷ್ಟು ಅತ್ತಳು.

ಆದರೆ ಅನಂತ ಮೊದಲಿನಂತೆ ಈ ಸಲ ಗಂಭೀರನಾಗಿ ಉಳಿಯಲಿಲ್ಲ. ಅವನು ತಡೆದುಕೊಂಡರೂ ಕೇಳದೆ ಎರಡು ಹನಿ ಕಣ್ಣೀರು ಉರುಳಿದುವು. ತಾರಕ್ಕನ ಸ್ಥಿತಿಯನ್ನು ನೆನೆದು ನೆನೆದು ಕಳವಳಗೊಂಡನು.

ಈ ಸಲ ಅವನು ಊರಿಗೆ ಹೋದ ಮೇಲೆಯೂ ಆಗಾಗ ತಾರಕ್ಕನ ನೆನಪಾಗುತ್ತಿದ್ದಿತು. ಎರಡು ಮೂರು ಸಲ ತನ್ನ ತಾಯಿಗೆ ತಾರಕ್ಕನ ಆತ್ತೆಯ ಕತೆಯನ್ನು ಹೇಳಿದ. ಆದರೂ ಅವನ ಮನಸ್ಸಿಗೆ ಹಗುರೆನಿಸಲಿಲ್ಲ. ಅಭ್ಯಾಸದಲ್ಲಿ ತೊಡಗಿದರೂ ತಾರಕ್ಕನ ಕರುಣಾಪೂರಿತ ಮಾತುಗಳು ಕಿವಿಯಲ್ಲಿ ಸುತ್ತು ತ್ತಿದ್ದವು. ಎಳೆಯ ಮನಸ್ಸಿನ ಮೇಲೆ ಅವಳ ಮೂರ್ತಿ ಅಚ್ಚಳಿಯದೆ ಮೂಡಿ ಬಿಟ್ಟಿದ್ದಿತು. ವರ್ಷದ ಮೇಲೆ ವರ್ಷಗಳು ಕಳೆದವು; ಮೂರು ವರ್ಷಗಳೂ ಉರುಳಿದುವು. ಅನಂತ ಆಗಾಗ ಚಂದೂರಿಗೆ ಬರುತ್ತಿದ್ದ. ಆಗ ತಾರಕ್ಕನೂ ತವರುಮನೆಗೆ ಬರುತ್ತಿದ್ದಳು. ಈಗೀಗ ಅನಂತನ ಸ್ವಭಾವದಲ್ಲಿ ಬಹಳ ಮಾರ್ಪಾಟಾಗಿದ್ದಿತು. ಮೊದಲಿನ ಹಟಮಾರಿತನವಿರಲಿಲ್ಲ. ತಾರಕ್ಕನ ಸ್ಥಿತಿ ಗತಿಯನ್ನು ಎಲ್ಲರಿಂದಲೂ ವಿಚಾರಿಸಿ ಕುತೂಹಲದಿಂದ ಕೇಳುವ; ಕೊರಗುವ. ಈಗ ಅವನು ಸ್ವಲ್ಪ ದೊಡ್ಡವನಾಗಿದ್ದಾನೆ. ಯಾರು ಹೇಗೆ, ಅವರ ಕೂಡ ಎಷ್ಟು ಮಾತಾಡಬೇಕು, ಏನು ಮಾತಾಡಬೇಕು, ಎಂಬುದು ಅವನಿಗೆ ಗೊತ್ತಾಗುತ್ತಿದೆ. ಅನ್ಯರ ಸುಖದುಃಖವನ್ನು ಅರಿತು, ಆದರಲ್ಲಿ ಪಾಲುಗಾರ ನಾಗುವ—ಶಕ್ಯವಿದ್ದರೆ ಅವರಿಗೆ ನೆರವಾಗುವ—ಹವ್ಯಾಸ ಶಿಕ್ಷಣದ ಪರಿಣಾಮ ದಿಂದ ಸ್ವಲ್ಪ ಸ್ವಲ್ಪ ಮನದಲ್ಲಿ ಮೊಳೆಯುತ್ತಿದೆ. ಒಂದು ಸಲ ಎಲ್ಲರೂ ಕೂಡಿ ಕುಳಿತಾಗ ತಾರಕ್ಕನಿಗೆ...."ನಿಮ್ಮತ್ತಿ ಎಂಥಾಕಿ ಇದಾಳ ನೋಡತ್ಯಾನೊಮ್ಮೆ!" ಎಂದ. ಎಲ್ಲರೂ ಸಮಾಧಾನ ಹೇಳಿ ಸುಮ್ಮನಿರಿಸುವವರೆಗೆ ಸಾಕಾಯಿತು. ಇದನ್ನು ಕಂಡು ತಾರಕ್ಕ ಮನದಲ್ಲಿಯೇ ಹಿಗ್ಗಿದಳು, ನನಗೂ ಕೇಳುವವರಿದ್ದಾ ರೆಂದು. ಈಗ ಅವನು ಮೊದಲಿನಂತೆ ಆಟದಲ್ಲಿ ಕಾಲಕಳೆಯುತ್ತಿರಲಿಲ್ಲ. ಚಂದೂರಿಗೆ ಬರುವಾಗ ಒಂದೆರಡು ಒಳ್ಳೆಯ ಪುಸ್ತಕ ತಕ್ಕೊಂಡು ಬರುವ. ತಾರಕ್ಕನಿಗೆ ಅವುಗಳೊಳಗಿನ ಕಥೆ ಓದಿ ಹೇಳುವ. ಒಮ್ಮೊಮ್ಮೆ ತಾನು ಓದಿದ ಸೀತೆ ಸಾವಿತ್ರಿಯರ ಕಥೆ ಹೇಳುವನು. ಅವರ ಕಷ್ಟವನ್ನು ಅನಂತನ ಬಾಯಿಂದ ಕೇಳಿ ತಾರಕ್ಕ ತನ್ನ ಕಷ್ಟವನ್ನು ಮರೆಯುವಳು. ಹೀಗೆ ಅವಳ ಮನಸ್ಸನ್ನು ಶಾಂತಗೊಳಿಸಲು ಯತ್ನಿಸುತ್ತ ನಡುನಡುವೆ ಪತಿಯ ಮನಸ್ಸನ್ನೂ ಒಲಿಸಿ

ಕೊಳ್ಳಲು ಸೂಚಿಸುವನು.

ಈ ಸಲ ದೀಪಾವಳಿಯ ಬಿಡುವು ಬಂದಿತು. ಅನಂತನ ಮನಸ್ಸು ಅತ್ತೆಯ ಮನೆಯತ್ತ ಹರಿಯಹತ್ತಿತು. ಅದರಂತೆ ರತ್ನವ್ವನೂ ಹೇಳಿಕಳಿಸಿದಳು. 'ಹಬ್ಬಕ್ಕೆ ಚಂದೂರಿಗೇ ಬಾ' ಎಂದು. ಇತ್ತಿತ್ತಲಾಗಿ ಹಬ್ಬ ಹುಣ್ಣಿವೆಗಳಿಗೆ ಅನಂತನನ್ನು ಚಂದೂರಿಗೆ ಕರೆಸಿಕೊಳ್ಳುವ ಹವಣಿಕೆಯು ರತ್ನವ್ವನಲ್ಲಿಯೂ ಬೆಳೆಯುತ್ತಲಿದ್ದಿತು. ಅದಕ್ಕೊಂದು ಕಾರಣವೂ ಇದ್ದಿತು. ಇದ್ದೊಬ್ಬ ಮಗಳನ್ನು ಊರಲ್ಲಿ ಕೊಟ್ಟಿದ್ದರು. ಅವಳು ಆಗಾಗ ಬಂದು, ತಮ್ಮ ಹತ್ತಿರ ಕೆಲ ದಿನ ನಿಂತು, ಅಲ್ಲಿ ಕೆಲ ದಿನ ನಿಂತು ಕಾಲಕಳೆಯಬಹುದು. ಅಳಿಯನೂ ಬರಬಹುದು. ಅವರನ್ನು ನೋಡಿ ತಾವೂ ಸುಖದಲ್ಲಿ ಕಾಲಕಳೆಯಲು ಬರುವದು ಎಂದೇನೋ ಮದುವೆಯಾದ ಮೊದಲಿನ ದಿನಗಳಲ್ಲಿ ಮಲ್ಲಪ್ಪ ರತ್ನವ್ವರಿಬ್ಬರೂ ಯೋಚಿಸಿದ್ದರು. ಆ ಯೋಚನೆಯು ದಿನಗಳೆದಂತೆ ಈಗ ಪೊಳ್ಳಾಗುತ್ತ ನಡೆದಿದ್ದಿತು. ಚಿಮ್ಮವ್ವ ಸೊಸೆಯನ್ನು ತವರುಮನೆಗೆ ಆಗಾಗ ಹೋಗಲು ಬಿಡುತ್ತಿರಲಿಲ್ಲ. ಯಾವ ಕೆಲಸಕ್ಕಾದರೂ ಸೊಸೆ ಹೊರಗೆ ಹೋದಾಗ ಸ್ವಲ್ಪ ತಡವಾದರೆ ಸಾಕು, ತವರುಮನೆಯತ್ತ ಹೋಗಿರಬಹುದೆಂದು ಸಂಶಯ ಕಟ್ಟಿ ಬಯ್ಯುವಳು. ವರ್ಷಾರು ತಿಂಗಳಲ್ಲಿ ಒಮ್ಮೆ ತಂದೆ ತಾಯಂದಿರು ಕರೆತಂದಾಗ ಮಾತ್ರ ಹತ್ತು ಹದಿನೈದು ದಿನಗಳು ತಾಯಿಯ ಮನೆಯಲ್ಲಿ ನಿಂತುಹೋದರೆ ತೀರಿತು. ಮತ್ತೊಮ್ಮೆ ನಡುವೆ ತಾರಕ್ಕ ತವರು ಮನೆಯತ್ತ ಹೊರಳಿ ನೋಡುವುದಕ್ಕೂ ಸ್ವತಂತ್ರಳಿರಲಿಲ್ಲ. ಅಂದಮೇಲೆ ಅಳಿಯ ಬಂದುಹೋಗುವ—ಅತ್ತೆ ಮಾವಂದಿರಿಗೆ ಸಂತೋಷಗೊಳಿಸುವ—ಮಾತಂತೂ ದೂರೇ ಉಳಿಯಿತು. ಹೀಗಾಗಿ ರತ್ನವ್ವನಿಗೆ ಮಗಳೂ ಅಳಿಯನೂ ಊರಲ್ಲಿ ಇದ್ದೂ ಇಲ್ಲದಂತಾಗಿದ್ದಿತು. ಇಷ್ಟೇ ಅಲ್ಲ, ಅವರು ತಮ್ಮ ಮನೆಗೆ ಬಾರದೆ ಇದ್ದರೂ ಕೂಡ, ಮನೆಯಲ್ಲಿಯಾದರೂ ಸುಖದಿಂದ ಇರಲಿ ಎಂದು ಹಾರಯಿಸುತ್ತಿದ್ದಳು, ಅದನ್ನು ಕಾಣುವುದೂ ಅವಳ ಹಣೆಬರಹದಲ್ಲಿ ಇಲ್ಲವೆನಿಸಹತ್ತಿತು, ತಾರಕ್ಕನ ಶೋಭನವಾದಂದಿನಿಂದ. ಈ ಎಲ್ಲ ಕಾರಣದಿಂದ ರತ್ನವ್ವನ ಮನಸ್ಸು ಅನಂತನೆಡೆಗೆ ಹೊರಳಿದ್ದಿತು. ಅವನನ್ನು ಆಗಾಗ ಕರಿಸಿ, ನಾಲ್ಕು ದಿನ ಇಟ್ಟುಕೊಂಡು, ನೋಡಿ ನಲಿಯಲು ಬಯಸುತ್ತಿದ್ದಳು. ಅವರಂತೆ ಅವನೂ ಆಗಾಗ ಬಂದು, ಒಂದೆರಡು ದಿನ ನಿಂತು ರತ್ನವ್ವನ ಮನಸ್ಸನ್ನರಳಿಸಿ ಊರಿಗೆ ಹೋಗುವ.

ಒಬ್ಬರು ತಮ್ಮ ಸುಖಕ್ಕಾಗಿ ಏನಾದರೂ ಮಾಡಲೆತ್ನಿಸಿದರೆ ಅದು ಇನ್ನೊಬ್ಬರ ಮೇಲೆ ಮತ್ತೊಂದು ಪರಿಣಾಮವನ್ನುಂಟುಮಾಡುವದು. ರತ್ನವ್ವನ ಹತ್ತಿರ ಅನಂತ ಬಂದು ನಿಲ್ಲುವುದೂ, ಅವನನ್ನು ರತ್ನವ್ವ ಲಾಲಿಸುವುದೂ, ಚಿಮ್ಮವ್ವನ ಮೇಲೆ ಬೇರೆ ಪರಿಣಾಮವನ್ನೇ ಮಾಡಿತು. 'ರತ್ನವ್ವನ ಮನಸ್ಸು ಅಣ್ಣನ ಮಗನ ಕಡೆಗೆ ಒಲಿಯುತ್ತಿದೆ, ಯಾವಾಗಾದರೂ ಅವಳು ತನ್ನ ತವರು ಮನೆಯವರಿಗೇ ಹೊಲಮನೆ ಮಾಡಲು ಯತ್ನಿಸಬಹುದು. ಅದಕ್ಕಾಗಿ ತನ್ನ ಅಣ್ಣನ ಮನಸ್ಸನ್ನು ಅತ್ತ ತಿರುಗಿಸಲು ಯತ್ನಿಸುತ್ತಿದ್ದಾಳೆ' ಎಂಬ ಕಲ್ಪನೆಯು ಅವಳಲ್ಲಿ ಬೆಳೆಯುತ್ತ ನಡೆಯಿತು. ಇದರ ಪರಿಣಾಮವಾಗಿ ತಾರಕ್ಕನಿಗೆ ದಿನದಿನಕ್ಕೆ ಅವಳು ಕೊಡುವ ಉಪದ್ರವ ಹೆಚ್ಚಾಗತೊಡಗಿತು.

ಅನಂತನಿಗೆ ಚಂದೂರಿನಿಂದ ಅತ್ತೆಯ ಕರೆ ಬಂದಿದ್ದಿತಾದರೂ ತಾಯಿ ಕಳಿಸಿಕೊಡಲಿಲ್ಲ. ಅವಳು "ಇಲ್ಲಿ ಹಬ್ಬ ಮಾಡಿಕೊಂಡು ಹೋಗು, ಆಮ್ಯಾಲಿ ನಾಲ್ಕು ದಿನಾ ನಿಂತ ಬರವಲ್ಲ ಯಾಕ? ಮನ್ಯಾಗ ನಾಭೂನ ಹುಟ್ಟಿದ ಹಬ್ಬೂ ಐತಿ" ಎಂದು ತಡೆದಳು.

ನಾಭೂ—ನಾಭಿರಾಜ—ಅನಂತನ ತಮ್ಮ. ಈ ಮೊದಲು ಅವನ ಎರಡು ಹುಟ್ಟು ಹಬ್ಬಗಳಾದರೂ ಅನಂತ ಊರಲ್ಲಿ ಇರಲೇ ಇಲ್ಲ. ಅವನ ಹುಟ್ಟಿದ ಹಬ್ಬ ಬರುವದು, ದೀವಳಿಗೆಯ ಬಿಡುವಿನಲ್ಲಿ. ಆಗ ಅನಂತ ಎಲ್ಲಿಗಾದರೂ ಪರವೂರಿಗೆ ಹೋಗಿಬಿಡುವ ಪ್ರಸಂಗ ಹೀಗಾಗುತ್ತಿದ್ದಿತು. ಆದುದರಿಂದ ತಾಯಿಯ ಅಭಿಪ್ರಾಯದಂತೆ ಅನಂತ ಊರಲ್ಲಿ ನಾಲ್ಕು ದಿನ ನಿಂತು, ಹಬ್ಬದ ದಿನಗಳನ್ನೆಲ್ಲ ತೀರಿಸಿಕೊಂಡೇ ಚಂದೂರಿಗೆ ಹೋದ.

ಅಲ್ಲಿ ರತ್ನವ್ವನ ಮೈಯಲ್ಲಿ ಸ್ವಲ್ಪ ಜಡ್ಡಾಗಿದ್ದಿತು. ಹಬ್ಬಕ್ಕೆ ಅನಂತನ ದಾರಿ ಕಾಯ್ದು ಕಾಯ್ದು ಬೇಸತ್ತಳು. ಕೊನೆಗೆ "ಅಂತೂ ಇನ್ನ್ಯಾಕ್ಯನ ಬರೂದುಲ್ಲಾ!" ಎಂದು ಮಗಳ ಮುಂದೆ ಉದ್ಗಾರ ತೆಗೆದಳು.

ತಾರಕ್ಕ ಕೇಳಿದಳು. "ನಾ ಬರತ್ಯಾನಂತ ಹೇಳಿ ಹಚ್ಚಿಕೊಟ್ಟಿಲ್ಲಾ?" ತಾನು ತವರುಮನೆಗೆ ಬರುವದು ತಿಳಿದಿದ್ದರೆ ಅನಂತ ಎಂದೂ ಬಾರದೆ ಇರನೆಂದೂ ತಾರಕ್ಕನ ಇದುವರೆಗಿನ ಅನುಭವ ಹೀಗೆ ನುಡಿಸಿತು. ಅವಳ ಅನುಭವ ಎಂದಾದರೂ ಸುಳ್ಳಾಗಬಹುದೇ? ಅನಂತ ಒಂದೆರಡು ದಿನಗಳಲ್ಲಿ ಬಂದೇಬಿಟ್ಟ. ಬರುವುದರಲ್ಲಿ ಅತ್ತೆ ಸ್ವಲ್ಪ ನರಳುತ್ತಿದ್ದುದರಿಂದ ಅವನ ಉತ್ಸಾಹ ಕುಗ್ಗಿತು.

ಒಂದೆರಡು ದಿನಗಳಲ್ಲಿ ಒಳ್ಳೆಯದಾದೀತೆಂದು ಭಾವಿಸಿದ. ಆದರೆ ಅನಂತ ಬಂದ ಮರುದಿನವೇ ರತ್ನವ್ವನಿಗೆ ಜ್ವರವೇರಿದುವು; ಅವು ನಾಲ್ಕು ದಿನವಾದರೂ ಇಳಿಯಲಿಲ್ಲ. ಎಲ್ಲರೂ ಗಾಬರಿಯಾದರು. ನೆರೆಯೂರಿನ ಡಾಕ್ಟರನ್ನು ತಂದು ತೋರಿಸಿದರು. ಅವರು ವಿಷಮಶೀತಜ್ವರವೆಂದು ಅಭಿಪ್ರಾಯಪಟ್ಟರು. ಸೌಮ್ಯ ಜ್ವರ ಇದೆ, ಹೆದರುವ ಕಾರಣವಿಲ್ಲವೆಂದು ಸೂಚಿಸಿದರು.

"ಅನಂತ ತಾರಕ್ಕ ಕೂಡಿ ಜಾಗರೂಕತೆಯಿಂದ ಆರೈಕೆ ಮಾಡತೊಡಗಿದರು. ಐನಾಪುರಕ್ಕೂ ಹೇಳಿಕಳಿಸಿದರು. ರಾಮಣ್ಣ ಒಂದು ದಿನ ಬಂದು ತಂಗಿಯ ಪ್ರಕೃತಿ ನೋಡಿಹೋದ. ಹೋಗುವಾಗ ಅನಂತನಿಗೆ "ರತ್ನಾ ಎದ್ದ ಕೂಡಕ ಹತ್ತಾನಾನ್ಸನೀ ಬಾ, ನಾಲ್ಕು ದಿನಾ ಸಾಲಿ ತಪ್ಪಿರೂ ತಪ್ಪ ವಲ್ತ್ಯಾಕ. ಮಲ್ಲಪ್ಪ ಒಬ್ಬ ಯಾನ ಮಾಡ್ಯಾ? ಹೊಲದ ಕಡೆ ನೋಡ್ಯಾನೋ ಮನೀ ಕಡೆ ನೋಡ್ಯಾನೋ!" ತಾರಕ್ಕನ ಕಡೆ ಹೊರಳಿ "ಊರಾಗ ಕೊಟ್ಟಿದಾರು, ಈಕಿ ಅತ್ತಿ ಮಾವ ನೋಡ್ಯಾರ, ಮಾಡ್ಯಾರ ಅಂದರ ಅವರ ಯಾನ ಇಲ್ಲ! ಹೊರಗಿನವರ ಬಂದ ನೋಡಿ ಹೋದಂಗ ಹೋಗ್ತಾರ. ಹೋಗುವಾಗ ಅವರ.... ನೀನರ ನಾಲ್ಕ ದಿನಾ ನಿಂತ. ವೇಳೇಕ ವೇಳೇಕ ಔಷಧ ಕೊಟ್ಟ, ಯಾನರ ಆಕಿ ಬೇಡಿದ ತಾರವ್ವನ ಕೈಯಿಂದ ಮಾಡಿಸಿ ಹಾಕಿ, ಛಲೂ ಉಸಾಬರಿ ಮಾಡಪ್ಪ...." ಎಂದು ಹೇಳಿ ಹೋಗಿದ್ದ.

ಹದಿನಾಲ್ಕನೆಯ ದಿನಕ್ಕೆ ರತ್ನವ್ವನ ಜ್ವರ ಇಳಿದವು. ಅನಂತನ ಆರೈಕೆಯ ಫಲವಾಗಿ ಮುಂದೆ ಐದಾರು ದಿನಗಳಲ್ಲಿ ರತ್ನವ್ವ ಹಾಸಿಗೆಯಲ್ಲಿ ಎದ್ದು ಕೂಡಹತ್ತಿದಳು. ಆದರೂ ಇನ್ನೂ ಅವಳ ಮೈಯಲ್ಲಿ ಅಶಕ್ತತೆ ತುಂಬ ಇತ್ತು. ಇನ್ನೇನು ಜ್ವರದ ಹೆದರಿಕೆ ಇರಲಿಲ್ಲ. ಮಲ್ಲ ಹೊಲಗೆಲಸವನ್ನೂ ದನಕರುಗಳ ಮೇವು ನೀರುಗಳನ್ನೂ ನೋಡಿಕೊಳ್ಳಬೇಕಾದುದರಿಂದ ಸಂಜೆ ಮುಂಜಾವುಗಳಲ್ಲಷ್ಟು ರತ್ನವ್ವನ ಹತ್ತಿರ ಬಂದು, ನೋಡಿಕೊಂಡು ಹೋಗುತ್ತಿದ್ದ. ಹಗಲೆಲ್ಲ ರತ್ನವ್ವನ ಹಾಸಿಗೆಯ ಹತ್ತರ ಕೂತಿರುವವರೆಂದರೆ ತಾರಕ್ಕ ಅನಂತರಿಬ್ಬರೇ. ಅನಂತ ಹೇಳಿದಂತೆ ತಾಯಿಗೆ ಆಗಾಗ ಕಿತ್ತಳೇ ಹಣ್ಣಿನ ರಸ ತೆಗೆದು ಕೊಡುವದೂ, ಚಹಾ ಮಾಡಿ ತಂದುಕೊಡುವದೂ ತಾರಕ್ಕನ ಕೆಲಸಗಳು. ಮನೆಯ ಅಡಿಗೆ ಅಂಬಲಿಗಳನ್ನಂತೂ ನೆರೆಮನೆಯ ಹೆಂಗಸರಾರಾದರೂ ಬಂದು ಮಾಡಿ ಹೋಗುತ್ತಿದ್ದರು. ಈಗೊಂದೆರಡು ದಿನಗಳಲ್ಲಿ ತಾಯಿಗೆ

ಒಳ್ಳೆಯದೆನಿಸಿದುದರಿಂದ ತಾರಕ್ಕನೇ ಅನಂತನ ಪೂರ್ತಿ ಬಿಸಿಯ ಅನ್ನ ಮಾಡು ತ್ತಿದ್ದಳು. ಉಳಿದ ಅಡಿಗೆಯನ್ನು ಇನ್ನೂ ಅವಳು ಮಾಡಬೇಕಾಗುತ್ತಿರಲಿಲ್ಲ. ಅದರಿಂದ ಅವಳಿಗೂ ಅಷ್ಟೇನೂ ಕೆಲಸವಿರುತ್ತಿರಲಿಲ್ಲ. ಆ ಮಾತು ಈ ಮಾತು ಆಡುತ್ತ ಹಾಸಿಗೆಯ ಹತ್ತಿರವೇ ಇರುತ್ತಿದ್ದಳು. ಒಂದು ದಿವಸ ರತ್ನವ್ವನ ಹಾಸಿಗೆಯ ಹತ್ತಿರ ಕುಳಿತಾಗ ತಾರಕ್ಕ ಹೇಳಿದಳು. "ಅಂತೂ ಇದ್ದಂತ ನಿನ್ನ ಉಸಾಬರಿ ವ್ಯಾಳೆ ವ್ಯಾಳೇಕ ಆಯ್ತವ್ವ, ಇಲ್ಲಾದರ....ಹಳ್ಳಿ ಊರಾಗಿನ ಮಂದಿ....ನಾವ, ಯಾನ ಗೊತ್ತ ನಮಗ ; ಅದ ಕಾಸೋದಾ ಎದೀಗಿ ಕಟ್ಟೋದಾ" ಎಂದು ಅನಂತನ ಕಡೆಗೆ ಕರುಣಪೂರಿತ ದೃಷ್ಟಿಯೊಂದನ್ನು ಬೀರಿದಳು.

"ಹುಟ್ಟಸಿದವಗ ಯಾನ ಕಣ್ಣಿಲ್ಲಾ ?" ಅನಂತನ ಕಡೆಗೆ ಕೃತಜ್ಞತೆ ಯಿಂದ ನೋಡಿ "ವರ್ಷಾ ಹಬ್ಬಕೆ ಬರಾವ, ಈ ಸಾರೆ ಹಬ್ಬ ಆಗಾನಾ ಬಂದ. ನಾ ಬ್ಯಾನಿ ಬೀಳೂ ವ್ಯಾಳೇಕ ಹೇಳಿಹಚಕೊಟ್ಟಂಗ....ನಮ್ಮಪ್ಪ !" ಎಂದಳು ರತ್ನಾ.

"ನಾ ಯಾನ ಮಾಡಿಲ್ಲವ್ವ! ತಾರಾನ ಮಾಡಾಕಿ....ಬರೀ....ನಾ ಹೇಳಾವ, ಡಾಕ್ತರ ಹೇಳಿದಾಂಗ....ಒಂದೀನಾರ....ಬೆಳತನಕ ಕಣ್ಣಿಗೆ ಕಣ್ಣ ಹಚ್ಚದ ಕೂತಳು ನನ್ನ ಕೈಲೆ ಆಗಲಿಲ್ಲವ್ವ!" ಎಂದು ಬಾಯಿಂದ ಆಡಿದನಾ ದರೂ ಅನಂತನ ಮುಖದಲ್ಲಿ ಸ್ವಲ್ಪ ಹೆಮ್ಮೆ ಒಡಮೂಡಿದ್ದಿತು.

"ಯಾನ ಬಿಡ; ನಡುವ ನೀನರ ಎಷ್ಟೊತ್ತ ಮಲಗಿದ್ದಿ....ಆ ದಿನಾ....?" ಎಂದು ತಾರಕ್ಕ ಹೇಳಿದಳು.

ರತ್ನವ್ವ ಇಬ್ಬರ ಮುಖದ ಕಡೆಗೂ ನಸು ಬೆರಗುದೃಷ್ಟಿಯಿಂದ ನೋಡು ತ್ತಿದ್ದಳು. ಅವಳು ಬೇನೆಯಲ್ಲಿರುವಾಗ ನಡೆದ ಇವೆಲ್ಲ ಸಂಗತಿಗಳು ಅವಳಿಗೆ ಗೊತ್ತಿರಲಿಲ್ಲ. ತನಗೆ ಎರಡು ಮೂರು ದಿನ ಸುದ್ದಿಯಿದ್ದಿಲ್ಲವೆಂಬುದನ್ನು ಈಗ ಅವಳಿಗೆ ಹೇಳಿದರೆ ಅಷ್ಟು ನಂಬುತ್ತಿರಲಿಲ್ಲ, ಅವಳು; ಹೀಗೆ ಕುಳಿತಿರು ವಷ್ಟರಲ್ಲಿ ಭರಮ ಅತ್ತೆಯನ್ನು ನೋಡಲಿಕ್ಕೆಂದು ಬಂದ. ಗಂಡ ಬಂದುದನ್ನು ನೋಡಿ, ತಾರಕ್ಕ ಚಟ್ಟನೆ ಎದ್ದು, ದೂರ ಸರಿದು ಲಜ್ಜೆಯಿಂದ ತಲೆ ಬಾಗಿಸಿ ಕೊಂಡು ನಿಂತಳು. ಆದರೂ ಅವಳ ದೃಷ್ಟಿಯಲ್ಲಿ "ಬರ್ರಿ!" ಎಂದು ಸ್ವಾಗತಿ

ಸುವ ಭಾವ ತುಂಬ ಇಡುಗಿತ್ತು. ಅಷ್ಟು ಬಳಕೆಯಿಲ್ಲದ ಅನಂತನನ್ನು ನೋಡಿಯೋ ಏನೋ ಭರಮನೂ ಸ್ವಲ್ಪ ದೂರವೇ ಕುಳಿತುಕೊಳ್ಳಹತ್ತಿದ. ಆಗ ರತ್ನವ್ವ "ದೂರ ಯಾಕ ಕೂಡತಿ ? ಇಲ್ಲೇ ಬಾ" ಎಂದು ಕರೆದಳು.

"ನಾಲ್ಕೆಂಟ ದಿನಾ ಇಕಡೆ....ಎಲ್ಲಿ ಹಾಯಲಿಲ್ಲಲಾ....ಭರಮಣ್ಣಾ ?" ಎಂದು ಅನಂತ ಕೇಳಿದ.

ಆ ಕಾಲಕ್ಕೆ ತಾರಕ್ಕನೂ ಭರಮನ ಕಡೆಗೆ ಕಣ್ಣೆತ್ತಿ ನೋಡಿದಳು. ಅವಳ ದೃಷ್ಟಿಯು ಅನಂತನ ಪ್ರಶ್ನೆಯನ್ನೇ ಕೇಳುತ್ತಿತ್ತು.

"ನಾಲ್ಕ ದಿನಾ....ಮಳಿಗ್ಯಾಗ ವಸ್ತೀನ ಇದ್ದಿನು...." ಎಂದು ಭರಮ ಹರಕು ಮುರಕು ಮಾತಿನಲ್ಲಿ ಕಾರಣವನ್ನು ಹೇಳಿ ಸುಮ್ಮನಾದ. ಈ ಕಾರಣ ಅಷ್ಟು ಸತ್ಯವಾಗಿರಲಿಲ್ಲ. ಅಳಿಯನಾಗಿ ಅತ್ತೆಯ ಮನೆಗೆ ಮೇಲಿಂದ ಮೇಲೆ ಹೋಗುವುದು ಅನುಚಿತ. ಅಲ್ಲದೆ ಅವರ ತಾಯಿಯೂ ಇನ್ನೂವರೆಗೆ ಹೋಗೆಂದು ಹೇಳಿರಲಿಲ್ಲ. ಇವೆರಡು ಪ್ರಬಲವಾದ ಕಾರಣಗಳಿದ್ದುವು. ಅವನು ಬಾರದಿದ್ದುದಕ್ಕೆ. ಅದಕ್ಕೇ ಅವನ ಮಾತು ಹರಕುಮುರುಕಾದುದು.

ಈ ಮಾತನ್ನು ಕೇಳಿ ರತ್ನವ್ವನ ಮುಖದಿಂದ ಒಂದು ನಿಟ್ಟುಸುರು ಹೋಯಿತು. ಆ ಉಸುರಿನ ಕೊನೆಯೊಡನೆ "ಅವರ ಅವ್ವ ಅಪ್ಪ ನೋಡಿ ಹೋಗತೀರಲ್ಲ ; ಅವ ಯಾತ್ಕ ಬಂದಾನು....?" ಎಂದು ಸಹಜವಾದ ಮಾತು ಹೊರಬಿದ್ದಿತು ಅವಳ ಬಾಯಿಂದ. ಒಂದು ದೃಷ್ಟಿಯಿಂದ ಅಳಿಯನನ್ನು ಸಮಾಧಾನಗೊಳಿಸಲೆಂದು, ಆಡಹೋದಳಾದರೂ ಆಗ ಅವಳ ಕಂಠವು ಅವಳಿಗೆ ಗೊತ್ತಿಲ್ಲದೆಯೇ ವ್ಯಂಗ್ಯವಾಗಿ ಪರಿಣಮಿಸಿತು.

ಭರಮ ಸ್ವಲ್ಪ ಹೊತ್ತು ಏನೂ ಮಾತಾಡದೆ ಕುಳಿತ. ಆ ಮೇಲೆ ಸಾವಕಾಶವಾಗಿ, "ಈಗ ಹ್ಯಾಂಗ ಐತಿ ಮೈಯಾಗ....?" ಎಂದು ಕೇಳಿ ತಿಳಿದುಕೊಂಡ. ಮತ್ತು ಕೊಂಚಕಾಲ ಸುಮ್ಮನಿದ್ದು.... "ನಾ ಹೋಗತ್ಯಾನು...." ಎಂದು ಎದ್ದು ನಡೆದ. ತಾಯಿಯ ಸೂಚನೆಯಂತೆ ತಾರಕ್ಕ ನಡುಮನೆಯವರೆಗೂ ಗಂಡನನ್ನು ಕಳಿಸಹೋದಳು. ಆದರೆ ಭರಮ ಹಿಂದಿರುಗಿ ನೋಡದೆ ಹಾಗೇ ಮುಂದೆ ಸಾಗಿದ. ತಾರಕ್ಕ ತಿರುಗಿ ಕೋಣೆಗೆ ಬಂದಳು.

ಆಗ ರತ್ನವ್ವ ಅನಂತನಿಗೆ.... "ಮುಗದ್ಯಾ ಹುಡುಗ....ಬಾಯಿ ಬಿಚ್ಚಿ ಮಾತಾಡಿ ಗೊತ್ತಿಲ್ಲ ಯಾರ ಗೂಡಾ, ನಿನ್ಹಂಗ. ಎಲ್ಲಿ ಹೋಗಿಲ್ಲಾ ಬಂದಿಲ್ಲಾ ಹೇಳಿದಷ್ಟ ಕೆಲಸಾ ಮಾಡಕೊಂಡ ಇರಾವ" ಎಂದು ಹೇಳುತ್ತಿದ್ದಳು.

"ಅವರ ಅವ್ವನ ಗೂಡಾ ಅಷ್ಟ ಮಾತಾಡ್ತಾ ಸಾಕಲಾ!" ಎಂದು ತಾರಕ್ಕ ಸ್ವಲ್ಪ ನಕ್ಕಳು! ಆ ನಗೆಯಲ್ಲಿ ಲಜ್ಜೆಯಿತ್ತು; ಅದಕ್ಕೂ ಹೆಚ್ಚು ತೀಕ್ಷ್ಣವಾದ ನೋವಿತ್ತು. ಸ್ವಲ್ಪ ಪರಿಹಾಸವೂ ಇತ್ತೇನೋ! ಹೆಚ್ಚಿಗೇನೂ ಮಾತಾಡದೆಯೇ ಆ ನಗುವಿನ ಮೂಲಕವೇ "ಹ್ಯಾಂತಿ ಅನ್ನೋದಃ....ಕಲ್ಪನಾ ಇಲ್ಲ ಪ್ರಾಣಿಗಿ!" ಎಂಬರ್ಥವನ್ನು ಸೂಚಿಸಿದಳು.

ಅವಳ ಈ ಭಾವನೆಯ ಎದುರಿಗೆ, ಅನಂತ ಅವಳ ಬಾಳುವೆಯನ್ನು ತಿದ್ದಬೇಕೆಂದು ಮಾಡುವ ಪ್ರಯತ್ನವೆಲ್ಲ ಸಫಲವಾಗುತ್ತಿರಲಿಲ್ಲ.

ಮುಂದೆ ಮೂರು ನಾಲ್ಕು ದಿನಗಳು ಕಳೆದನಂತರ ಅನಂತ ಊರಿಗೆ ಹೊರಡಲು ಸಿದ್ಧನಾಗಿ "ಹೋಗಿ ಬರ್ತ್ಯಾನು...." ಎಂದು ಅತ್ತಿಗೆ ಹೇಳಿದ.

ರತ್ನವ್ವ ಪ್ರೀತಿಯಿಂದ "ಹೋಗಿ ಬಾ, ಬಾಳಾ" ಎಂದಳು.

ಆಮೇಲೆ ತಾರಕ್ಕನ ಕಡೆಗೆ ನೋಡಿ ಅನಂತ ಹೇಳಿದ. "ಅಕ್ಕಾ ನಾ ಹೋಗತ್ಯಾನು, ನೀ ಇನ್ನ ಹತ್ತಿಪ್ಪತ್ತ ದಿನಾ ನಿಂತ....ಅತ್ತಿನೇಟ ಆಗಾನಾನ.... ಹೋಗು...." ಎಂದು ಅತ್ತೆಯ ಕಡೆಗೆ ಹೊರಳಿ "ಕರೀಕ ಬಂದ್ರೂ ಈಗ ಹಚ ಕುಡಬ್ಯಾಡರಿ ತಾರಾನಾ...." ಎಂದು ಹೇಳಿದ.

"ಈಗ ಯಾತಕ ಹಚ್ಚಕೊಡಲೀ....! ನನಗೆ ಇನ್ನs ಒಲೀ ಮುಂದ ಮಾಡೋದ ಆಗೂದುಲ್ಲ....ಸಾವಕಾಸ ಹೋದಾಳ ಒಂದ ತಿಂಗಳ ನಿಂತ...." ಎಂದು ಸುಮ್ಮನಾದಳು. "ಅಲ್ಲಿ ಭರಮಪ್ಪರ ಎಲ್ಲಿ ಹ್ಯಾಂತಿ ಬೇಕ ಅಂತ.... ಗೋಡಿಹುಡೇ ಏರಕ ಹತ್ತಿದಾ ಈಗ...." ಎಂದು ಮನದಲ್ಲಿಯೇ ಅಂದು ಕೊಂಡಳು ಮಾತ್ರ.

ಅನಂತ ನಡೆದ. ತಾರಕ್ಕ ತಲೆಬಾಗಿಲವರೆಗೆ ಕಳಿಸಲು ಬಂದಳು. ಅನಂತ ಹಿಂದಿರುಗಿ "ನಿಲ್ಲ ತಾರಾ, ಮಾಮಾ ಬಂದ ವ್ಯಾಲಿ, ಬಿಸಲ ಆಗ್ತೇತಿ ಅಂತ ಹೋದಿನಿ ಎಂತ....ಹೇಳು. ಅವ ಮಳಗಿಗಿ ಹೋಗೋಗ ನಾ ಹೋಗ್ತೇ ನಂತ ಹೇಳಿದ್ಯಾನು" ಎಂದು ಹೇಳಿದ.

ತಾರಕ್ಕ ಮಾತಾಡುವ ಸ್ಥಿತಿಯಲ್ಲಿರಲಿಲ್ಲ. ಆವಳ ಕಣ್ಣುಗಳು ನೀರಿನಿಂದ ತುಂಬಿ ತುಳುಕುತ್ತಿದ್ದುವು.

೮

ತಾರಕ್ಕನಿಗೆ ಹದಿನಾರು ವರ್ಷ ತುಂಬಿ ಈಗ ಹದಿನೇಳರ ಆರಂಭ. ವೈನೆರೆದು ನಾಲ್ಕು ವರ್ಷಗಳು ಕಳೆದುಹೋದುವು. ಚಿಕ್ಕಂದಿನಲ್ಲಿ ಸುಖದೊಳಗೆ ಬೆಳೆದುದರಿಂದ ಆಕೆಯು ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ ವೈನೆರೆದಿದ್ದಳು. ಈಗ ಅತ್ತೆಯ ಮನೆಯಲ್ಲಿ ಮೂರು ವರ್ಷಗಳಿಂದ ಕಷ್ಟದಲ್ಲಿ ಕಳೆದಿದ್ದರೂ ಅವಳ ಅಂಗಾಂಗಗಳಲ್ಲಿ ಸೌಂದರ್ಯವು ತುಂಬಿತುಳುಕುತ್ತಲಿದೆ. ಆದರೆ ಅವಳ ಮುಖದಲ್ಲಿ ಯಾವಾಗಲೂ ಮ್ಲಾನತೆಯು ಆವರಿಸಿರುವುದು. ಮನೆಯೊಳಗಿನ ನಗೆ ಆನಂದಗಳು ಅವಳ ಪಾಲಿಗೆ ಶೂನ್ಯವಾಗಿದ್ದುವು. ಅದೇಕೋ ಅವಳೂ ಅವುಗಳತ್ತ ಅಷ್ಟು ಗಮನಿಸುತ್ತಿರಲಿಲ್ಲ. ತನ್ನ ಕೆಲಸವೇನೋ ತಾನೇನೋ ಎಂದು ಇದ್ದುಬಿಡುತ್ತಿದ್ದಳು. ಕೆಲಸಕ್ಕೆ ಅಗತ್ಯವಿದ್ದಷ್ಟು ಅತ್ತೆ ಮಾವಂದಿರೊಡನೆ ಮಾತಾಡುವಳು. ಉಳಿದ ವೇಳೆಯಲ್ಲಿ ಗಂಭೀರವಾಗಿರುವಳು.

ಮತ್ತು ಒಂದು ಮಾತು—ಅದನ್ನಿಲ್ಲಿ ಹೇಳುವದು ಅವಶ್ಯ. ಭರಮು ತಾರಕ್ಕನಿಗೆ ಸ್ವಲ್ಪ ಸಣ್ಣವನಾಗುವನೆಂದು, ಚಿಮ್ಮಪ್ಪ ಮಗನಿಗೆ ಒಳ್ಳೆಯ ಆಹಾರ ಕೊಟ್ಟು, ಅವನನ್ನು ಚೆನ್ನಾಗಿಯೆ ಬೆಳೆಸಿದ್ದಳು. ಅವನೂ ಯಾವ ಚಿಂತೆಯೂ ಇಲ್ಲದೆ, ತಿಂದು ತಿರುಗಿ ಪುಷ್ಟವಾಗಿ ಬೆಳೆದಿದ್ದ. ಹಳ್ಳಿಯ ಹುಡುಗನ ಹರೆಯುವದು. ಜೋಳದ ಚೀಲಗಳನ್ನು ಗಾಡಿಯಿಂದ ಒಬ್ಬನೇ ಇಳಿಸಿ, ಮನೆಯ ಮೆಟ್ಟಲು ಹತ್ತಿ, ಮೇಲೆ ತಂದಿಡುತ್ತಿದ್ದ. ಇಷ್ಟು ಹೇಳಿದರೆ ಸಾಲದೆ ? ಅವನಿಗೆ ತುಂಬ ಪ್ರಾಯವಿದ್ದಿತೆಂದು ಬೇರೆ ಹೇಳಬೇಕೆ ? ವಯಸ್ಸಿಗೆ ತಕ್ಕಂತೆ ಅವನ ಮನಸ್ಸು ದಾಂಪತ್ಯ ಸುಖವನ್ನು ಬಯಸುತ್ತಿತ್ತು. ಆದುದರಿಂದ ತಾರಕ್ಕನ ಕಡೆಗೆ ಅವನು ಈಗ ಆಶೆಯ ದೃಷ್ಟಿಯನ್ನು ಬೀರುವ. ಏಕಾಂತದಲ್ಲಿ ಕೂಡಿ ಮಾತಾಡಲು ಹವಣಿಸುವ.

ಭರಮುನ ತಂದೆಗೂ ಈ ವಿಷಯ ಗೊತ್ತಿಲ್ಲದಿಲ್ಲ. ಆದುದರಿಂದಲೇ ಅವನು ಮೇಲಿಂದ ಮೇಲೆ ಹೆಂಡತಿಯ ಮುಂದೆ "ಸರಿ ಕ ದ ವ ರಿ ಗೆ ಲ್ಲ ಮೊಮ್ಮಕ್ಕಳ ಆದು!" ಎಂದು ಹೇಳುವ. ಆಗೆಲ್ಲ ಮುಖ ಮುದುರಿಸಿಕೊಂಡು ಚಿಮ್ಮವ್ವ ಅನ್ನುವಳು. "ನಿನಗ ಆಗಲಿಲ್ಲ ಅಂತ ಚಿಂತಿ ಮಾಡತಿ ಯಾನ ?" ಎಂದು. ಆಗ ಹೂವಣ್ಣ ಸುಮ್ಮನಾಗಿಬಿಡುವ. ಚಿಮ್ಮವ್ವನಿಗೆ ಮೊಮ್ಮಕ್ಕಳನ್ನು ಕಾಣುವ ಬಯಕೆ ಇರಲಿಲ್ಲವೆಂತಲ್ಲ; ಇತ್ತು. ಆದರೆ ಅವಳ ಅಂತರಾಳದಲ್ಲಿಯ "ಈಗ ತಾರೀ ಬಸರ ಆದರ, ಆಕಿ ಜನ್ಮ ದಂಡಗಿ ಹತ್ತಿತಂತ, ರತ್ನಾನ ಮೂಗ ಮ್ಯಾಲ ಆಯ್ತು. ಅಂಯ್ಯಾಡ್ಯಾನ ನಮಗ ಸಿಗೂ ಆಶಾ ಇಲ್ಲ, ಆ ಹೊಲಾಮನೀ" ಎಂಬ ಪ್ರಬಲವಾದ ಬಯಕೆಯೊಂದು ಅದನ್ನು ಒತ್ತಿಟ್ಟಿದ್ದಿತು. ಆದುದರಿಂದ ಅವಳು ಮಗ ಸೊಸೆಯರ ದಾಂಪತ್ಯಜೀವನದ ವಿಷಯಕ್ಕೆ ಮತ್ತಿಷ್ಟು ಜಾಗರೂಕಳಾಗಿರುತ್ತಿದ್ದಳು. ಅವರಿಬ್ಬರನ್ನು ದೂರ ದೂರವಿಡಲು ಪ್ರಯತ್ನಿಸುತ್ತಿದ್ದಳು. ರಾತ್ರಿ ಮಗನನ್ನು ಒಳಗೆ ಕೋಣೆಯಲ್ಲಿ ಮಲಗಿಸಿದರೆ ಸೊಸೆಯನ್ನು ಕರೆದುಕೊಂಡು, ತಾನು ಪಡಸಾಲೆಯಲ್ಲಿ ಮಲಗುತ್ತಿದ್ದಳು. ರಾತ್ರಿ ಒಂದೊಂದು ಸಾರೆ ಸೊಸೆ ಇರುವಳೋ ಇಲ್ಲೋ ಎಂದು ನೋಡುವವರೆಗೂ ಅವಳ ಮನಸ್ಸು ಸಿದ್ಧವಾಗಿತ್ತು.

ಹೂವಣ್ಣ ಚೌಗುಲೆಯವರಿಗೆ ಹೊಳೆ ಮುಳುಗುವ ಒಂದು ಚನ್ನಾದ ಮಳಿಗೆ ಇದ್ದಿತು. ಅದು ಊರ ಸಮೀಪದಲ್ಲಿಯೇ ಇರುವದು. ಚಳಿಗಾಲ ಬೇಸಿಗೆಯ ಕಾಲಗಳಲ್ಲಿ ದನಗಳನ್ನು ಅಲ್ಲಿಯೇ ಕಟ್ಟುತ್ತಿದ್ದರು. ಈಗೀಗ ಭರಮನಿಗೆ ಎತ್ತುಗಳ ಮೇಲೆ ಬಹಳ ಪ್ರೀತಿ. ಅವುಗಳನ್ನು ಮೇಯಿಸುವುದು ಸಿಂಗರಿಸುವುದು, ಮೊದಲಾದ ಕೆಲಸದಲ್ಲಿ ಅವನು ಅದೆಷ್ಟೋ ಕಾಲಕಳೆಯುವನು! ಒಕ್ಕಲತನದಲ್ಲಿಯೂ ತನ್ನ ಮನಸ್ಸನ್ನು ತೊಡಗಿಸುವನು. ಮನೆಯಲ್ಲಿ ಆಳೂ ಒಂದಿದೆ. ಅವನನ್ನು ಮುಂಜಾನೆ ಬೇಗನೆ ಎಬ್ಬಿಸಿ ಕೆಲಸಕ್ಕೆ ಕಳಿಸುವುದು ಭರಮುನ ಕರ್ತವ್ಯ. ಆದುದರಿಂದ ಈಗ ಒಂದು ತಿಂಗಳಿಂದ ಭರಮು ಮಳಿಗೆಯಲ್ಲಿಯೇ ಮಲಗುತ್ತಿದ್ದ, ದನಗಳೆಲ್ಲ ಮಳಿಗೆಯಲ್ಲಿಯೇ ಇರುತ್ತಿದ್ದುದರಿಂದ ಕೊಟ್ಟಿಗೆಯನ್ನು ಸ್ವಚ್ಛಮಾಡಿ, ಕುಳ್ಳು ತಟ್ಟಿಬರಲೆಂದು ತಾರಕ್ಕ ದಿನಾಲು ಮುಂಜಾನೆ ಮಳಿಗೆಗೆ ಹೋಗಬೇಕಾಗುತ್ತಿದ್ದಿತು.

ಅವರ ಮಳಿಗೆಯಲ್ಲಿ ಒಳ್ಳೆಯ ಪೇರಲಬನವೊಂದಿತ್ತು. ಪೇರಲಕಾಯಿಗಳೂ ತುಂಬ ಹತ್ತುತ್ತಿದ್ದುವು. ಚಂದೂರಿನಲ್ಲಿಯೇ ಅವರ ಪೇರಲಬನ ದೊಡ್ಡದು. ಅದರಂತೆ ಕಾಯಿಗಳೂ ಬಹಳ ಸಿಹಿಯಾದವು. ಕಾಯಿಗಳನ್ನು ವಾರಕ್ಕೊಮ್ಮೆ ಹರಿದು ಮಾಲಗಾರರಿಗೆ ಗುತ್ತಿಗೆಯಿಂದಲೇ ಕೊಡುತ್ತಿದ್ದರು. ಮನೆಯಲ್ಲಿ ಆಳು ಹೋಳುಗಳೂ ಕೂಡ ಬೇಕಾದಷ್ಟು ಕಾಯಿಗಳನ್ನು ತಿಂದು ತೇಗುತ್ತಿದ್ದರು. ಆದರೆ ಚಿಮ್ಮವ್ವ ತಾರಕ್ಕನಿಗೆ ಒಂದೂ ಕಾಯನ್ನು ತಿನ್ನಲು ಕೊಡುತ್ತಿರಲಿಲ್ಲ. ಆದರೂ ಅವುಗಳ ಸವಿಯನ್ನು ಮಾತ್ರ ತಾರಕ್ಕನ ಮುಂದೆ ವರ್ಣಿಸದೆ ಇರುತ್ತಿರಲಿಲ್ಲ. ತಾರಕ್ಕ ಕದ್ದಾದರೂ ತಿನ್ನಲಿ, ಅದನ್ನು ತಾನು ಹಿಡಿಯಬೇಕು. ಜಗಳ ತೆಗೆಯಬೇಕು. ಎಂಬುದೇ ಅವಳ ಒಳಗಿನ ಬಯಕೆ. ಅದನ್ನು ಪೂರ್ಣಗೊಳಿಸಲು ಅವಕಾಶ ಹುಡುಕುತ್ತಿದ್ದಳು. ಆದರೆ ತಾರಕ್ಕ ಇಂಥವುಗಳಿಗೆ ಎಂದೂ ಅವಕಾಶ ಕೊಡುವಂಥವಳಲ್ಲ. ಅವಳಿಗೆ ಪೇರಲ ಕಾಯಿ ತಿನ್ನುವಂತಾದರೆ ಹೊಳೆಯ ಹಾದಿಯಲ್ಲಿ ದೊರಕಿದಾಗ ತನ್ನ ತಾಯಿಗೆ ಹೇಳುವಳು. ರತ್ನವ್ವ ಮಾಲಗಾರರಿಂದ ಕೊಂಡು ತಂದು, ಮಗಳಿಗೆ ಹೊಲಕ್ಕೆ ಹೋಗುವ ದಾರಿಯಲ್ಲಿ ದೊರಕಿ ತಿನ್ನಲು ಕೊಡುವಳು. ಅವನ್ನಷ್ಟು ತಿಂದು ತಾರಕ್ಕ ಮಾನವ ಸಹಜವಾದ ಬಯಕೆಯನ್ನು ತೀರಿಸಿಕೊಳ್ಳುವಳು!

ಈ ಸಂಗತಿ ಆ ತಾಯಿಮಕ್ಕಳನ್ನುಳಿದು ಅನ್ಯರಿಗಾರಿಗೂ ಗೊತ್ತಿರಲಿಲ್ಲ. ಆದುದರಿಂದ ಭರಮು ತನ್ನ ಹೆಂಡತಿ ಪೇರಲಕಾಯಿಗಳನ್ನೇ ತಿಂದಿಲ್ಲ; ತಾಯಿ ತಿನ್ನಗೊಡುವದಿಲ್ಲ ಎಂದು ಮನದಲ್ಲಿಯೇ ಮರುಗುವ. ತಾಯಿಯ ಮೇಲೆ ಸಿಟ್ಟಾಗುವನೂ ಕೂಡ. ಆದರೆ ತಾಯಿಯ ಮುಂದೆ ಅವನ ಆಟ ನಡೆಯುತ್ತಿರಲಿಲ್ಲ. ತಾಯಿ ಇಲ್ಲದಾಗ—ಮುಂಜಾನೆ ತಾರಕ್ಕ ಮಳಿಗೆಗೆ ಬಂದಾಗ ತಾನು ಕೊಡಬೇಕಾದರೆ ಜೊತೆಯಲ್ಲಿ ತಂಗಿ ಅಕ್ಕಾತಾಯಿ ಬೇರೆ ಇರುವಳು. ಅವಳು ಅವ್ವನಿಗೆ ಹೋಗಿ ಹೇಳಿದರೆ....?

ಈ ವಾರವೂ ಪೇರಲಕಾಯಿಗಳನ್ನೆಲ್ಲ ಹರಿದರು. ಕಳೆದ ವಾರದಗಿಂತ ಸ್ವಲ್ಪ ಹೆಚ್ಚಾಗಿಯೇ ಕಾಯಿಗಳು ಹೊರಟವು. ಆದರೆ ಈ ವಾರ ಗುತ್ತಿಗೆಯಿಂದ ಕಾಯಿ ಕೊಳ್ಳುವವರೂ ಬರಲಿಲ್ಲ. ಮನೆಯಲ್ಲಿ ಎರಡು ದಿವಸ ಕಾಯಿಗಳು ಹಾಗೇ ಉಳಿದವು. ಕೊನೆಗೆ ಅವುಗಳನ್ನು ಊರಲ್ಲಿ ತಿರುಗಿ

ಜೋಳಕ್ಕೆ ಮಾರುವ ಪ್ರಸಂಗ ಅಕ್ಕಾತಾಯಿಗೆ ಬಂತು. ಅವಳಿಗೆ ಇದೇನು ಅಪರಿಚಿತ ಕೆಲಸವಲ್ಲ. ಹಿಂದೆ ಹಲವು ಸಲ ಅವಳು ಹೀಗೆ ತಿರುಗಿ ಮಾರಿದ್ದೂ ಉಂಟು. ಅದೇನೆ ಇರಲಿ; ಈ ಪ್ರಸಂಗವೊಂದು ಭರಮನಿಗೆ ಅನುಕೂಲ ವಾಯಿತೆಂದೇ ಹೇಳಬೇಕು. ಮುನ್ನಾದಿವಸವೇ ಭರಮ ಕಲ್ಪನೆಯ ಕುದುರೆ ಯನ್ನೇರಿ ಬಹೂದೂರ ಸಾಗಿದ. "ನಾಳೆ ತಂಗಿ....ಕಾಯೀ ಮಾರ್ಕ ಹೋಗು ತಾಳ....ಅವ್ವ ತನ್ನ ಹ್ಯಾಂತಿನಾ .... ಹ್ಯಾಗಾದರ .... ಕಳ್ಸೂದಲ್ಲ .... ಆಕಿ ಒಬ್ಬಾಕೆ ಹರಿವತ್ತ ಮಳಗಿಗಿ ಬರತಾಳು....ಆಗ ಯಾನಂತ ಮಾತಾಡಲಿ...! ಹ್ಯಾಂಗ ಮಾತಾಡಿಸಲಿ ?" ಎಂದು ಗುರಿನೆರೆಗಳನ್ನೆಲ್ಲ ನಿರೀಕ್ಷಿಸಿ ಬಂದು ದಾಯಿತು. ಮುಂಜಾನೆ ಬೇಗನೆ ಎದ್ದು, ಬನವೆಲ್ಲ ಹುಡುಕಿ....ಗಿಡದ ತುದಿಗೆ ಇರುವ ನಾಲ್ಕಾರು ಒಳ್ಳೆಯ ಪೇರಲಕಾಯಿಗಳನ್ನು ಹುಡುಕಿ ತಂದ, ತಾರಕ್ಕ ನಿಗೆ ಕೊಡಲೆಂದು. ಆಗ ಮತ್ತೆ "ಇವನ್ನ ಹ್ಯಾಗ ಕೊಡಬೇಕು....? ಕೊಟ್ಟರ ಆಕಿ ತಗೊಂಡಾಳೋ....?" ಎಂದು ಯೋಚಿಸಿದ. ಇಂಥ ವಿಷಯ ಗಳಲ್ಲಿ ಅವನು ಪ್ರಬುದ್ಧನಲ್ಲ. ತಾನೇ ಕೈಮುಟ್ಟ ಕೊಡುವ ಧೈರ್ಯವೂ ಸಾಲದವನಿಗೆ. ಕೊನೆಗೆ ಒಂದು ಯುಕ್ತಿ ಹುಡುಕಿದ. ಅದರಂತೆ ಕಸ ತುಂಬಲು ಉಪಯೋಗಿಸುವ ಬುಟ್ಟಿಯ ಬುಡದಲ್ಲಿ ಕಾಯಿಗಳನ್ನು ಬಚ್ಚಿಟ್ಟ. ಹೇಗಾದರೂ ಬುಟ್ಟಿ ತಕ್ಕೊಳ್ಳುವಾಗ ಅಲ್ಲಿಯ ಕಾಯಿಗಳನ್ನು ತಾನೇ ತಕ್ಕೊಳ್ಳುವಳಲ್ಲ, ಎಂದು ಬಗೆದ. ಅವಳು ಕಾಯಿಗಳನ್ನು ತಕ್ಕೊಂಡು ತಿನ್ನಲು ಆರಂಭಿಸಿದನಂತರ ಕಾಯಿ ಹ್ಯಾಗಿವೆಯೆಂದು ಮಾತಾಡಿಸಬೇಕೆಂದು, ಉಪಾಯವನ್ನು ನಿಯೋಜಿಸಿದ. ಅಷ್ಟು ಅವನ ಮನಸ್ಸು ಸಂಕೋಚ ವಾದುದು !

ಕಾಯಿಗಳನ್ನು ಬುಟ್ಟಿಯ ಬುಡದಲ್ಲಿ ಇಟ್ಟನೇನೋ ನಿಜ. ಅನಂತರ ಅವನಿಗೆ ಇನ್ನೊಂದು ಸಂಶಯ ಬಂದಿತು. ನಾನಿಲ್ಲಿ ಇದ್ದರೆ ಅವಳು ಹಣ್ಣು ಗಳನ್ನು ತಕ್ಕೊಳ್ಳಲಿಕ್ಕಿಲ್ಲ....ಇದಕ್ಕೇನುಪಾಯ ? ಇದೀಗ ಅವಳು ಬರುವ ಹೊತ್ತಾಗಿದೆ. ನಾನು ನೀರಿಗೆ ಹೋದರಾಯಿತು' ಎಂದುಕೊಂಡು, ಕೊಡ ತಕ್ಕೊಂಡು ಹೊಳಿಗೆ ಹೋದ. ಮನಸ್ಸು ವಿಚಾರದಲ್ಲಿ ಮಗ್ನವಾಗಿದ್ದಿತು. "ನಾ ಹೋಗೋದರೊಳಗ ಕಾಯಿ ತಗೊಂಡ ತಿನ್ನಲಾಕ ಹತ್ತಿರತಾಳು....ನಾ ಬಂದದ ನೋಡಿ ಅಂಜಿದರ 'ನಾ ಹೇಳಾವ...., ಅಂಜಬ್ಯಾಡ ನಾನ್ವ ನಿನಗ

ಇಟ್ಟಿದ್ಯಾನಂತ....ಆಗ ಎಷ್ಟು ಆಕಿ ಹಿಗ್ಗ್ಯಾಳು? ಅಂಯ್ದು ಯಾನ ಅನ್ನತಾಳೊ!" ಎಂಬ ವಿಚಾರದ ಗೊಂದಲದಲ್ಲಿಯೇ ಕೊಡ ತುಂಬಿಕೊಂಡು ತಿರುಗಿ ತಳದ ಸಮಿಪಕ್ಕೆ ಬಂದ. ನೋಡುತ್ತಾನೆ. ಇಂದು ಕೆಲಸಕ್ಕೆ ತನ್ನ ಹೆಂಡತಿ ಬಂದಿರಲಿಲ್ಲ. ತಾಯಿ ಬಂದಿದ್ದಳು! ನೋಡಿ ಭರಮ ನಿರಾಶೆಗೊಂಡ. ಅದಕ್ಕೂ ಹೆಚ್ಚು ನಡುಗಿದ! ಬುಟ್ಟಿಯ ಮರೆಯಲ್ಲಿಟ್ಟ ಕಾಯಿಗಳನ್ನು ಚಿಮ್ಮವ್ವ ಕಂಡಿದ್ದಳು. ಮಗನಿಗಿಂತ ತರ್ಕದಲ್ಲಿ ಅವಳೇನೂ ಕಡಿಮೆಯಾಗಿರಲಿಲ್ಲ. ಕೂಡಲೆ ಅವಳಿಗೆ ಮಗನ ತಂತ್ರ ಹೊಳೆಯಿತು. ಅವಳ ಕಣ್ಣುಗಳು ಕೆಂಪಗಾದವು.... "ಕೊಡ ತೊಗೊಂಡ ಹೊಳಿಗೆ ಹೋಗೇದಾ....ಬರಲಿ....ಅವಗ ಬುದ್ಧೀ ಕಲಸತ್ಯಾನ...., ಕಿವಿಗಡ್ಡೀ ಹಿಡಿದ...." ಎಂದುಕೊಂಡು ಅವನ ದಾರೀ ಕಾಯುತ್ತಲೇ ನಿಂತಿದ್ದಳು. ಭರಮ ದೂರದಲ್ಲಿ ಕಾಣಿಸುತ್ತಲೇ ಹುಬ್ಬು ಗಂಟಿಕ್ಕಿ "ಇಲ್ಲಿ ಕಾಯೀ ಯಾರ ಇಟ್ಟಿದಾರು....?" ಎಂದು ಸಿಟ್ಟಿನಿಂದಲೇ ಕೇಳಿದಳು.

"ಎಲ್ಲಿ ನಂಗ್ಯಾನ ಗೊತ್ತಿಲ್ಲ!" ಎಂದು ವಿಚಾರಿಸದೆಯೆ ಭರಮ ಹೇಳಿದ. ದನಿಯಲ್ಲಿ ನಡುಕವಿತ್ತು.

"ನಿಂಗ ಹ್ಯಾಂಗ ಗೊತ್ತು ಇದ್ದೋತು....? ಯಾನ್ಯಾನ ಮಾಡ್ತೀ ಮಾಡ....ಆ ಹುಚ್ಚಿ....ತಲಿ ಬೋಳಸತ್ಯಾನು...." ಎಂದು ಮೊದಲಾಗಿ ಬಾಯಿಗೆ ಬಂದದ್ದನ್ನೆಲ್ಲ ಆಡಿದಳು. ಭರಮ ತಿರುಗಿ ಒಂದೂ ಮಾತನಾಡಲಿಲ್ಲ. ಆದರೆ ಅವನು ಮನದಲ್ಲಿಯೇ...."ಅವ್ವನ ಕಡೇನ ತಪ್ಪ ಐತಿ....ನಾ ನನ್ನ ಹ್ಯಾಂತಿ ಗೂಡಾ....ಛಲೂ ಇದ್ದರ....ಇಕೇದ ಯಾನ ಹೋಗತೇತಿ? ಹಾಂಗಾರ ಮದ್ವಿ ಯಾಕ ಮಾಡಬೇಕು....?" ಅಂದುಕೊಂಡ. ಇಂದು ಅವನ ಹೃದಯದಲ್ಲಿ ಒಂದು ಅನಿರ್ವಚನೀಯ ಉದಾಶೀನತೆಯು ವ್ಯಾಪಿಸುತ್ತಿತ್ತು. ಸುಮ್ಮನೆ ನೆರಿಕೆಯ ಕಡ್ಡಿ ಮುರಿಯುತ್ತಾ ನಿಂತ. ಚಿಮ್ಮವ್ವನ ಮಾತಿನ ಸುರಿಮಳೆಯು ಹಾಗೇ ಸಾಗಿದ್ದಿತು. ಏಕೋ ಅವನಿಗೆ ಅವ್ವನ ಎದುರಿಗೆ ನಿಂತು ಮಾತು ಕೇಳುವದಾಗಲಿಲ್ಲ. ಏನೋ ಒಂದು ತರದ ತಾಪ; ಎಲ್ಲಿಯಾದರೂ ಕಣ್ಮರೆಯಾಗಬೇಕೆಂಬ ಬಯಕೆ. ಒಂದೊಂದೇ ಹೆಜ್ಜೆಗಳನ್ನು ಎತ್ತಿಡುತ್ತಾ ದನಗಳ ದೊಡ್ಡಿಯತ್ತ ಸಾಗಿದ....ದೊಡ್ಡಿಯ ಬಾಗಿಲಲ್ಲಿ ಭರಮ

ಕೊಂಚ ಹೊತ್ತು ನಿಂತುಕೊಂಡ....ತಾಯಿಯ ಮಾತುಗಳು ತಡೆಯಿಲ್ಲದೆ ಹಾಗೇ ಸಾಗಿದ್ದುವು....ಭರಮನಿಗೆ ಏನು ಮಾಡಬೇಕೆಂಬುದು ತಿಳಿಯದಾಯಿತು. ಮೆಲ್ಲಗೆ ಆಕಳ ಹತ್ತರ ಹೋದ, ಅವನಿಗೆ ಗೊತ್ತಾಗದ ಹಾಗೆಯೇ ಅವನ ಕೈಗಳು ಮೃದುವಾಗಿ ಆಕಳ ಮೈಮೇಲೆ ಆಡತೊಡಗಿದವು. ಹಾಗೇ ಅದರ ಕೊರಳಲ್ಲಿಯೂ ಆಡಿದವು. ಆಕಳು ಗೋಣು ತಿರುವಿ ಭರಮನ ಹೆಗಲಿನ ಮೇಲಿಟ್ಟಿತು. ಮುಖದ ಮೇಲೆ ಕೈಯಾಡಿಸಿದ. ಇದ್ದಂತೆಯೇ ಪ್ರೇಮ ಉಕ್ಕಿ ಬಂದು, ಮುದ್ದು ಕೊಡಬೇಕೆಂದೆನಿಸಿತೇನೋ! ಅವನು ಬಯಸಿದು ದನ್ನು ಅವನ ಕೈಯೇ ಮಾಡಿ ಸೂಚಿಸುತ್ತಿತ್ತೇನೋ! ಅದವನಿಗೆ ಹೊಳೆಯ ಲಿಲ್ಲ. ಇಂದು ಅವನಿಗೆ ಹಾಗೇಕೆ ಮಾಡಬೇಕೆನಿಸುತ್ತಿದೆ? ಅಪ್ಪನ ಮೇಲೆ ಸಿಟ್ಟೇಕೆ ಬರುತ್ತಿದೆ....? ತನ್ನ ಯಾವದೋ ಒಂದು ನೈಸರ್ಗಿಕ ಹಕ್ಕಿನಲ್ಲಿ ತಾಯಿ ಅಡ್ಡಬರುತ್ತಿದ್ದಾಳೇಕೆ?....ಇವಾವವೂ ಅವನಿಗೆ ತಿಳಿಯಲಿಲ್ಲ. ಕಾರಣ ತಿಳಿಯದ ಅವ್ಯಕ್ತ ಅಸ್ಪಷ್ಟ ನೋವೊಂದು ಅವನ ಹೃದಯವನ್ನು ಮಿಡಿಯು ತ್ತಿದ್ದಿತು. ಯಾವಾಗಲೋ ಆಕಳನ್ನು ಬಿಟ್ಟು ದೂರ ಸರಿದ. ಮೈಯಲ್ಲಿ ಒಂದು ತರದ ಕಸಿವಿಸಿ.

ಭರಮ ಮನಸ್ಸಿಲ್ಲದೆಯೇ ದೊಡ್ಡಿಯ ಒಂದು ಮೂಲೆಗೆ ಹೋದ. ಅದೇಕೊ....ಅಲ್ಲಿ ಇಟ್ಟ ಎಳೆಗರಿಕೆಯ ಮೇಲೆ ಉರುಳಬೇಕೆನಿಸಿತು, ಅವನಿಗೆ. ಉರುಳಿದ. ಹೊರಳಿದ. ಆಕಳು 'ಅಂಬಾ' ಎಂದು ಒದರಿತು. ಅದನ್ನು ಕೇಳಿ ಹೋರಿಯೊಂದು ಎದ್ದು, ಮೈಮುರಿದುಕೊಂಡು ಕಟ್ಟಿದ ಕಣ್ಣಿಯನ್ನು ಕಿತ್ತಹತ್ತಿತು. ಅದೇನೋ ಭರಮ ದನಗಳಿಗೆ ಬಾಯಿ ಮಾಡದೆ ಸುಮ್ಮನೆ ಒರಗಿದ್ದ. ಹೊರಗಿನಿಂದ ಚಿಮ್ಮವ್ವ ದನಗಳಿಗೆ ಬಾಯಿ ಮಾಡುತ್ತ ಒಳಗೆ ಬಂದು "ಯಾಕೋ ಹಿಂಗ್ಯಾಕ ದೆವ್ವ ಬಡದಂಗ ಕೂತಿ....? ದನಗೋಳಿಗಿ ಮೇವು ಹಾಕ....ಕಾಲೊಳಗಿಂದ ಹೊಡೀ....ದಿನಾ ಹೆಂಗಸರ್‍ಯ ಎಷ್ಟ ಮಾಡ ಬೇಕು....?" ಎಂದು ಕಠೋರವಾಗಿ ಹೇಳಿ, ಆಕಳ ಮುಂದೆ ಮುರುವು ಇಟ್ಟು, ಹಿಂಡಿಕೊಳ್ಳಲಿಕ್ಕೆ ಕುಳಿತಳು. ಭರಮ ಎದ್ದು, ಆಕಳಿಸಿದ, ಮೈ ಮುರಿದ. ದನಗಳ ಕಾಲೊಳಗಿನ ಕಸವನ್ನು ಹಿಂದೆ ಸರಿಸಿ ಹೊರಗೆ ಹೋದ. ಚಿಮ್ಮವ್ವ ಆಕಳನ್ನು ಹಿಂಡಿಕೊಂಡು...."ಭರಮಾ ಕುಡೀತಿದ್ದರ ಕುಡೀಯಪ್ಪ ಹಾಲ, ನಾ ಮನೀಗಿ ಹೋಗ್ತ್ಯಾನು. ಪೋರಿ ಯಾನ ಮಾಡಿಕೊಂಡ ಬಂದಳೊ

ಯಾನೋ....? ಎಲ್ಲಾ ನಿನ್ನ ಜನ್ಮಕ ನಾವs ಚಿಂತಿ ಮಾಡಬೇಕ....ಆಕೀಗೀ ನಿನಗ ಯಾವ ಕಾಳಜಿ ಐತಿ....? ನಾಳಿ ನಾವ ಸತ್ತ ಮ್ಯಾಲ ಹ್ಯಾಂಗ ಜನ್ಮಾ ಮಾಡತೀರೋ....ಯಾನೋ!" ಎಂದು ಪಟಗುಡಹತ್ತಿದಳು. ಭರಮು ಮನಸ್ಸಿಲ್ಲದೆ ಒಳಗೆ ಬಂದು, ಹಾಲು ಕುಡಿದ. ಅವನಿಗೆ ಹಾಲು ಅಂದು ಸೇರಲಿಲ್ಲ. ಹ್ಯಾಗೆ ಸೇರೀತು....?

ಚಿಮ್ಮವ್ವ ಮನೆಗೆ ಹೋದಮೇಲೆ ಭರಮು ಮೇವು ಮಾಡಲು ಹೋದ. ಮನದಲ್ಲಿ ಉದ್ವಿಗ್ನತೆ ತುಂಬಿದ್ದಿತು. ಪೇರಲ ಬನದೊಳಗಿನ ಗಿಳಿಗಳು ಆನಂದದಿಂದ ಹಾರಾಡುತ್ತಿದ್ದವು. ಸುಳಿಗಾಳಿಗೆ ಬೆಳೆಗಳು ತೂಗಾಡುತ್ತಿದ್ದವು. ಈ ಸೃಷ್ಟಿಸೌಂದರ್ಯವು ಅವನ ಮನಸ್ಸನ್ನು ಅರಳಿಸಲು ಯತ್ನಿಸಿತು. ಇಂದು ಅವನಿಗೆ ಅವುಗಳಲ್ಲೇನೋ ಒಂದು ಕೊರತೆ ಇದ್ದಂತೆ....ಅಪೂರ್ಣತೆಯಿದ್ದಂತೆ....ಭಾಸವಾಗಹತ್ತಿತು. ಮೇವಿನ ಹೊರೆ ಹೊತ್ತು ಮೇಲೆ ಬರಲಿಕ್ಕೆ ಹವಣಿಸಿದ. ಕಾಲಲ್ಲಿ ಕುಂಬಳಬಳ್ಳಿಯೊಂದು ತೊಡಕಿ ಅಡ್ಡಿ ಮಾಡಿತು. ಕೆರಳಿ ಕುಡಗೋಲಿನಿಂದ ಕೊಯ್ಯಬೇಕೆಂದು, ಕುಡಗೋಲು ಹಾಕಿದ. ಆದರೆ ಕೊಯ್ಯಲಾಗಲಿಲ್ಲ. ತಲೆಯ ಮೇಲಿನ ಹೊರೆಯನ್ನು ಇಳಿಸಿಟ್ಟು, ಬಳ್ಳಿಯ ತೊಡಕು ಬಿಡಿಸಿಕೊಂಡು, ದನಗಳ ದೊಡ್ಡಿಯ ಕಡೆಗೆ ಮೇವು ತಕ್ಕೊಂಡು ಬಂದ. ಹೊರೆ ಒಗೆದು ನಿರುತ್ಸಾಹದಿಂದ ಮನೆಯ ಕಡೆಯ ತಿರುಗಿದ. ನಾಲ್ಕೆಂಟು ಹೆಜ್ಜೆ ಹೋಗಿ ಮರಳಿ ಬಂದು, ಹೊರೆ ಬಿಚ್ಚಿ ದನಗಳಿಗೆ ಮೇವು ಹಾಕಿ...., ಹೊರಟ, ಸೂರ್ಯ ಸಾವಕಾಶವಾಗಿ ಮೇಲೇರುತ್ತಿದ್ದ. ಬಿಸಿಲು ಬಲಿಯುತ್ತಿದ್ದಿತು.

ಭರಮು ಮನೆಗೆ ಬಂದು ತಲುಪಿದ. ಮನೆಯಲ್ಲಿ ಚಿಮ್ಮವ್ವ ಬಾಯಿ ಮಾಡುತ್ತಿದ್ದಳು. ಏನು ನಡೆದಿದೆ ಎಂದು ಹೊರಗೆ ನಿಂತು ಕೇಳಹತ್ತಿದ. ಒಳಗೆ ಮಾತುಗಳು ನಡೆದಿದ್ದುವು.

"ಇಷ್ಟು ದೊಡ್ಡಾಕಿ ಆಗೀದಿ, ತಿಳಿಬಾರದ ನಿನಗ? ಬುದ್ಧಿ ಎಲ್ಲಿಟ್ಟೇದಿ? ಹೂಂ ಅಂತ ತಿನ್ನಾಕ ಹೇಳ್ರಿ, ಕೂತ ತಿಂತಾಳ ನಾಲ್ಕ ರೊಟ್ಟಿ! ಇನ್ನs ನಿನಗ ಎಷ್ಟಂತ ಹೇಳಬೇಕು? ಜರ ಘಳಿಗಿಗಿ ಹೇಳ್ತ ಕೂತರ ಹ್ಯಾಂಗ ಆಗೋದಾ? ಸ್ವತಾ ಬುದ್ಧಿ ಬೇಕ, ನಂದ ಮನೀ, ನಂದ ಪರಪಂಚಾ ಅನೂ ಧ್ಯಾನ ಬೇಕ."

"ಯಾನ ಆಯ್ತು ಬಿಡ ಈಗ" ಒಳಗಿನಿಂದ ಹೂವಣ್ಣ ಹೇಳಿದ.

"ಹೀಂಗ ಮಾಡೇ ಆಕೀನ ನೀವ ಏರಿಸಿ ಇಟ್ಟೇರಿ. ನನ್ನ ಸೊಸಿ ನನ್ನ ಸೊಸೀ ಅಂತ. ಅವ ಅನಕ ಜಡ್ಯಾಗ ಇಟಗೊಂಡಾನ ಹ್ಯಾಂತಿನಾ ಅಂದರ, ಅಂದವ್ಯಾಲ ಮನೀ ಹ್ಯಾಂಗ ನಡ್ಯೋದ? ಮನ್ಯಾಗಿನ ರೀತಿ ನಡಾವಳಿ ಎಲ್ಲಾ ಕಲಸಕಬ್ಯಾಡ? ಮುಸಲೇರ ಮನೀಹಂಗ ಆದೋತಲ್ಲ ನಮ್ಮ ಮನೀ ನಮ್ಮ ಹಿಂದ."

"ಹಿಂದ ಯಾನ ನೋಡ್ಕ ಬರತೇವ ಯಾನ ನಾವ? ಹ್ಯಾಂಗ ಯಾಕ ಮಾಡಕೋವಾರು. ನಾವು ಇರೂ ತನಕಾ ಮಾಡಿದರ ಆಯ್ತು !"

"ಆದರ ಬೇಕಲ್ಲ: ಈಗ ಪಂಡಿತ ಬಂದರ ಯಾನ ಹೇಳೋದಾ" ಚರೂಕ ರೊಟ್ಟಿ ತಗದ ಇಟ್ಟಿ ಇಕ್ಕಲಾಕ ಯಾನ ಬ್ಯಾನಿ ಬಂದೀತಿ ಇಕಿಗೆ?"

ಭರಮನಿಗೆ ಎಲ್ಲ ಸಂಗತಿಯ ಕಲ್ಪನೆ ಬಂದಿತು. 'ಅಪ್ಪ ಉಣಲಾಕ ಬಂದಿರಬೇಕು. ಹ್ಯಾಂತಿ ದೇವರಿಗೆ ರೊಟ್ಟಿ ತಗದ ಇಡದ ಇಕ್ಕಿದಾಳು. ಅದಕ್ಕ ಇಷ್ಟು ಬಾಯಿ' ಎಂದು ತಿಳಿದುಕೊಂಡ. ಮೆಲ್ಲಗೆ ಒಳಗೆ ಹೋದ. ಚಿಮ್ಮವ್ವ ಹಾಗೇ ಮಾತು ಮುಂದುವರಿಸಿದಳು. "ಇವನರ ಯಾನಾ? ಹ್ಯಾಂತೀನಾ ಎಂದ ಕಂಡೀದಾನೋ ಇಲ್ಲೋ. ಆಕಿ ಕೆಪ್ಪತೋಗಲಕ ಮಳ್ಳ ಆಗದಾನ, ಆದರ ನಾಳಿ ಅವಗs ತಿಳದೋತ. ನೆತ್ತಿಮ್ಯಾಲ ಮೆಣಸ ಅರೀಕ ಹತ್ತ್ಯಳಂದ್ರ! "

"ಯಾನಾಯ್ತು?" ವ್ಯಗ್ರನಾಗಿ ಕೇಳಿದ ಭರಮ.

"ಆಗ್ತೇತಿ ಯಾನ? ಮನೀ ರೀತಿ ರಿವಾಜ ಎಲ್ಲಾ ಹೋಯ್ತು ಹಾಳಾಗಿ. ಕುರುಬರ ಹಂಗ ಇರಾವರ ನೀವ.... ಬಸ್ತಿಗೆ ರೊಟ್ಟಿ ತಗದ ಇಡಕ ತಿಳೀಬಾರ್ದು ಇಕಿಗ?"

"ಒಂದು ದಿನಾ ತಪ್ಪಿದರ ಯಾನಾಯ್ತು? ಹಿಟ್ಟಕೊಟ್ಟರ ಬರುದುಲ್ಲಾ?"

ಭರಮ ಇಷ್ಟು ಕೇಳಿದುದೇ ಹೆಚ್ಚಾಯಿತು. ಚಿಮ್ಮವ್ವನಿಗೆ ಜಗಳ ತೆಗೆಯುವದು ಬೇಕಾಗಿಯೇ ಇದ್ದಿತು. ಮುಂಜಾನೆ ಪೇರಲಕಾಯಿಗಳನ್ನು ನೋಡಿದಾಗಿನಿಂದಲೂ ಅವಳು ಮನದಲ್ಲಿ ಕುದಿಯುತ್ತಿದ್ದಳು. ಇಂಥ ಕಾರಣ ಸಿಕ್ಕಮೇಲೆ ಏನು ಬೇಕು? ಮಗ ತಿರುಗಿ ವಾದಿಸುವಂತಾದನೇ? ಇದಕ್ಕೆ ಈಗಲೇ ತಡೆಹಾಕಲುಬೇಕೆಂದೂ ಅವಳ ಅಂತರಂಗ ಒಡನುಡಿಯಿತು. ಇವೆಲ್ಲ ಕಾರಣಗಳು ಜಗಳವಾಡಲು ಅವಳ ಮನಸ್ಸನ್ನು ಪ್ರೋತ್ಸಾಹಿಸಿದುವು. ಅನಂತರ ಭಯಂಕರವಾಗಿ ಜಗಳವಾಯಿತು. ಮನೆಯಲ್ಲಿ ಯಾರೂ ಊಟ

ಮಾಡಲಿಲ್ಲ. ತಾರಕ್ಕ ಊಟವಿಲ್ಲದೆ ಮಾವನೊಡನೆ ಹೊಲಕ್ಕೆ ಹೋದಳು. ಭರಮು ಬಂದ ದಾರಿಯಿಂದ ತಿರುಗಿ ಮಳಗಿಗೆ ಹೋದ. ಚಿಮ್ಮವ್ವ ಮುಸುಕು ಹಾಕಿ ಮಲಗಿಬಿಟ್ಟಳು!

ಅದೊಂದು ದಿವಸ ಹಾಗೆಯೇ ಕಳೆದುಹೋಯಿತು. ಸಂಜೆಗೆ ಒಬ್ಬೊಬ್ಬರನ್ನೇ ಎಬ್ಬಿಸಿ, ಊಟ ಮಾಡಿಸಬೇಕಾದರೆ ಅಕ್ಕಾತಾಯಿಗೆ ಸಾಕುಬೇಕಾಗಿ ಹೋಯಿತು, ಈ ಜನ್ಮ.

ಭರಮು ತಾರಕ್ಕನಿಗೆ ಕೊಡಲೆಂದು ಪೇರಲಕಾಯಿಗಳನ್ನು ತೆಗೆದಿಟ್ಟುದೂ ಅದಕ್ಕಾಗಿ ಮನೆಯಲ್ಲಿ ಜಗಳವಾದುದೂ, ಎಲ್ಲರೂ ಉಪವಾಸವಿದ್ದುದೂ ಎರಡು ಮೂರು ದಿನಗಳ ಮೇಲೆ ನೆರೆಹೊರೆಯವರಿಂದ ರತ್ನವ್ವನಿಗೆ ತಿಳಿಯಿತು. ಇದನ್ನೆಲ್ಲ ಕೇಳಿ ರತ್ನವ್ವನಿಗೆ ಸಿಟ್ಟು ಆನಂದಗಳು ಕೂಡಿಯೇ ಉಂಟಾದವು. ಏನೇ ಆಗಲಿ, ಜಗಳವಾಗಲಿ, ಉಪವಾಸ ಬೀಳಲಿ, ತಾರಕ್ಕನಿಗೆ ಪೇರಲಕಾಯಿ ಕೊಡಬೇಕೆಂದು ಅಳಿಯನ ಮನಸ್ಸಿನಲ್ಲಿ ಬಂದಿತ್ತಲ್ಲ! ಎಂಬುದೊಂದೇ ಅವಳ ಆನಂದಕ್ಕೆ ಕಾರಣವಾಗಿದ್ದಿತು. ಈಗ ಮಗಳ ಬಾಳಿನ ವಿಷಯದಲ್ಲಿ ಸ್ವಲ್ಪ ಸ್ವಲ್ಪ ಆಶೆ ತೋರಿತವಳಿಗೆ. ಅದೇ ಮಾರ್ಗದಲ್ಲಿ ಅವಳು ಮುಂದೆ ಹೋಗಿ "ಈಗ್ಯ ಅಳ್ಯಾನ ಮನಸ ಒಲಿಸಿಕೋಬೇಕು, ಅವ ಒಬ್ಬ ನನ್ನ ಮಗಳ ಕಡೆ ಆದ ಅಂದರ ಇವರ ಯಾನ ಜೀವ ತಿಂದರ, ಯಾನ ಆಗೋದಾ? ದೇವರ ನಮ್ಮಪ್ಪಾ ಧರ್ಮರಾಜಾ....ಅಷ್ಟು ಬುದ್ಧಿ ಕೊಡಪ್ಪ ಭರಮುಪ್ಪಗ. ನಿನಗ ಐದ ರೂಪಾಯ್ದ ಗಂಟಿ ತಂದ ಕಟ್ಟತ್ಯಾನು" ಎಂದು ದೇವರನ್ನು ಪ್ರಾರ್ಥಿಸಿದಳು. ಮರುದಿನ ಮನೆಯಲ್ಲಿ ಉಂಡಿ ಕರಜೀಕಾಯಿ ಮೊದಲಾದ ಸೀಪದಾರ್ಥಗಳನ್ನು ತಿನ್ನಲು ಮಾಡಿದಳು, ಅಳಿಯನನ್ನು ಕರೆಯಬೇಕೆಂದು. ಅದರಂತೆ ಅದೇ ದಿನ ಮಧ್ಯಾಹ್ನದಲ್ಲಿ ಭರಮು ಮಳಿಗೆಗೆ ಹೋಗುವಾಗ ದಾರಿಯಲ್ಲಿ ಕಾಯುತ್ತಾ ನಿಂತು . "ಭರಮಾ!" ಎಂದು ಕರೆದಳು.

ಭರಮುನಿಗೆ ಈ ಮಾತು ಕೇಳಿಸಿರಬೇಕು. ಆದರೂ ಹಾಗೆಯೇ ನಾಲ್ಕಾರು ಹೆಜ್ಜೆ ಮುಂದೆ ಹೋದ. ಅವನಿಗೆ ಹೀಗೆ ಅತ್ತೆಯು ಎಂದೂ ಕರೆದಿರಲಿಲ್ಲ. ಕರೆಯುವಷ್ಟು ಸಲಿಗೆಯಿಂದ ಇವನೂ ವರ್ತಿಸಿರಲಿಲ್ಲ. ಕರೆದಳೊ ಇಲ್ಲೋ ಎಂಬ ಶಂಕೆಯಿಂದ ಮುನ್ನಡೆದ. ಮೊದಲೇ ಅವನ ಸ್ವಭಾವ ಸಂಕೋಚ

ವೃತ್ತಿಯದು. ಈ ಸಂಕೋಚವೃತ್ತಿಯೇ ಅವನಿಗೆ ಘಾತುಕವಾಗಿ ಪರಿಣಮಿಸಿ ತಲ್ಲವೆ ? ಸ್ವಲ್ಪ ತಡೆದಳು ರತ್ನವ್ವ, ಅವಳ ಮನದ ಮೂಲೆಯಲ್ಲಿ ನಿರಾಶೆಯ ಝುಳುಕೊಂದು ಹಾಯ್ದು ಹೋಯಿತು. ಆದರೂ ಮತ್ತೊಮ್ಮೆ ಕರೆದಳು. ಈ ಸಲ ಭರಮ ಹಿಂತಿರುಗಿ ನೋಡಿದ. ರತ್ನವ್ವ ವಿನಯದಿಂದ ಪ್ರೇಮದಿಂದ ನಾಲ್ಕು ಹೆಜ್ಜೆ ಮುಂದೆ ಹೋಗಿ "ಮನೆತನಕಾ ಬಂದ ಹೋಗಪ್ಪ ! " ಎಂದು ಆದರದಿಂದ ಕರೆದಳು.

"ಈಗ್ಯಾನ ಕೆಲಸ ?....ಮತ್ತೊಮ್ಮಿ ಬಂದ್ಯಾನು".

"ಇಲ್ಲ ; ಈಗ ಬಾರಲಾ ! ಮತ್ತ್ಯಾವಾಗ ಬರಕ ಆಗತೇತಿ ? " ಎಂದು ರತ್ನವ್ವ ಆಗ್ರಹಮಾಡಿದಳು.

ಭರಮನ ಸಂಕೋಚವೃತ್ತಿ ಇಲ್ಲಿ ರತ್ನವ್ವನಿಗೆ ಗುಣವಾಗಿ ಪರಿಣಮಿಸಿತು. ಭರಮ ಅವಳ ಮನೆಯ ಕಡೆಗೆ ಹೊರಳಿದ, ರತ್ನವ್ವನ ಬೆನ್ನುಹತ್ತಿ. ಓಣಿ ಯೊಳಗಿನ ಮುದುಕಿಯೊಬ್ಬಳು "ಭಾಳ ದಿನಕ ಅತ್ತಿ ಮನಿ ಕಡೆ ಬಂದ ಭರಮ ? " ಎಂದು ಕೇಳಿದಳು.

ಅದಕ್ಕೆ ರತ್ನವ್ವನೇ "ಸುಮ್ಮ ಬಂದಾನ ಮಳಿಗಿಗಿ ಹೊಂಟಿದ್ದ, ನಾನ ಕರದಿನ....ನಾಲ್ಕ ಕರಜೀಕಾಯಿ ತಿಂದ ಹೋಗ್ಬಾ ಅಂತ...." ಎಂದು ಹೇಳಿ ಒಳಗೆ ಕರೆದುಕೊಂಡು ಹೋದಳು. ಕೂಡಲೆ ಮಣೆ ಹಾಕಿ ಕೂಡಿಸಿ, ತಾಟಿನಲ್ಲಿ ಉಂಡಿ ಕರಜೀಕಾಯಿಗಳನ್ನು ಹಾಕಿ ತಂದು ಮುಂದಿಟ್ಟಳು.

ಭರಮ "ಇಷ್ಯಾತಕ ? ಈಗ ಉಂಡಿದ್ಯಾನು ಹಸಿವಿಲ್ಲ" ಎಂದ.

"ಇರಲಿ ತಿನ್ನಲಾ ; ಇಷ್ಟ ಯಾನ ಭಾಳ ಯಾನ ? " ಎಂದಳು ರತ್ನವ್ವ. ಸ್ವಲ್ಪ ತಡೆದು "ಮನ್ಯಾಗ ಯಾನ ಮಾಡಿರೂ ನಿಮ್ನ ಬಿಟ್ಟ ತಿನ್ನೋದ ಆಗೂದುಲ್ಲಾ. ಜೀವ ಹರೀತೇತಿ. ಆದರ ಯಾನ ಮಾಡೋದಾ ? ನಿಮ್ಮವ್ವನ ಮನಸಿಗೇ ಬರೂದಿಲ್ಲ ! ಅದಕ್ಕ ನಾವ ಕರೀಕ ಅಂಜುತೇವು. ಇಂದ ಮನಸ ಕೇಳಲಿಲ್ಲ....ಕರದಿನು" ಎಂದು ಅವನ ಮನಸ್ಸಿನ ಒಲವನ್ನು ಕಂಡುಕೊಳ್ಳ ಲಿಕ್ಕೆಂದು ನುಡಿದಳು.

ಭರಮ ಸುಮ್ಮನೆ ತಿನ್ನುತ್ತಿದ್ದ. ಅವನು ಯಾವದೋ ಒಂದು ವಿಚಾರ ದಲ್ಲಿ ಇದ್ದಂತೆ ತೋರುತ್ತಿದ್ದಿತು. ಮುಂದೆ ಮತ್ತೆ ರತ್ನವ್ವನೇ ಹೇಳಹತ್ತಿದಳು.

"ನಿನ್ನ ಉಡ್ಯಾಗ ಹಾಕಿಬಿಟ್ಟಿದೇವಪ್ಪ ಮಗಳ್ನಾ! ನಿನ್ನ ಹೊರತಾಗಿ ಆಕಿಗಿ ಯಾರ ಇದಾರು? ಯಾನರ ಒಂದ ಮಾಡಿದರ ಮುಟ್ಟಿದರ ನೀನs ಸಂಬಾಳ ಸಗೋಕಬೇಕಲ್ಲ".

"ಸಂಭಾಳಸಲಾಕ ಯಾನ? ನನಗ್ಯಾನ ಬ್ಯಾಡ ಆಗಿದಾಳ ಆಕಿ?" ಲಜ್ಜೆಯಿಂದ ಸ್ವಲ್ಪ ಹೊತ್ತು ಮುಂದೆ ಏನು ಮಾತಾಡಬೇಕೆಂಬುದು ತಿಳಿಯ ದಾಯಿತವನಿಗೆ. ಕೊನೆಗೆ,—"ಆದರ ಮುದುಕಿ ಸಮಜೂತೀ ಬೇರೆ, ಇನ್ನs ತಿಳವಳಿಕಿನ ಬರವಲ್ತು ಅದಕ. ಮನ್ಯಾಗ ಎಲ್ಲರಿಗೂ ತ್ರಾಸ". ಬೇಸರದ ಸ್ವರದಲ್ಲಿ ಭರಮು ಹೇಳಿದ.

"ಇರಲೆಲ್ಲ; ಆಕೀನಾನೂ ಸಂಭಾಳಸಬೇಕ. ಹಡದ ಅವ್ವ ಇದಾಳು. ಆದರ ನೀವ ಇಬ್ಬರು ಒಂದಕ ಒಂದ ಛಲೂ ಇದ್ದರ, ಆಕಿ ಕಡಚಣಗಿ ನನ್ನ ಮಗಳ ಯಾನ ಉಸ್ಸ ಅನ್ನೂ ಹಂಗಿಲ್ಲ; ಕೇಳಿದಿ?" ಎಂದು ಒಳಗಿನಿಂದ ಮತ್ತೆರಡು ಉಂಡಿಗಳನ್ನು ತಂದು, ತಾಟಿನಲ್ಲಿ ಹಾಕುತ್ತ ರತ್ನವ್ವ ನುಡಿದಳು.

ಈಗ ಭರಮು ಸ್ವಲ್ಪ ಮನಬಿಚ್ಚಿ ಮಾತಾಡತೊಡಗಿದ. "ನನಗೂ ಇದೆಲ್ಲಾ ತಿಳಿತೇತಿ ಖರೇ....ಯಾನ ಮಾಡೋದಾ....? ಮನ್ಯಾಗ ನಮ್ಮಿಬ್ಬ ರನೂ....ಕತ್ತರ್ಯಾಗ ಹಿಡಿದಂಗ ಮಾಡಿದಳು....! ಮೊನ್ನಿಂದ ಕೇಳಿಲ್ಲಾ? ಎಲ್ಲೇವ ಕಾಸಡೇವ. ನಾಲ್ಕ ಪೇರಲಕಾಯಿ ಆದವು....ಅದಕ ಜಗಳಾ ತಗದರ. ಸಂಜೀತನಕಾ ಉಪಾಸಾ ವನವಾಸ...."

"ಇರಲಿ; ಎಲ್ಲಿ ತನಕಾ ನಸೀಬದಾಗ....ತ್ರಾಸ ಐತಿ....ಅಲ್ಲಿ ತನಕಾ ತಾಳಕೋಕಬ್ಯಾಡಾ?....ಆದರ ನೀ ಈಗ ದೊಡ್ಡಾಂವ ಆಗೀದಿ....ನಿನ್ನ ಸ್ವತಾ ತಿಳಿದ ನೋಡಿ ನಡೀ ಅಂದರ ಆಯ್ತು....ಆಗಿನ ಹಂಗ ಸಣ್ಣಾವ ಅಲ್ಲ. ಮುಂದೀ ಮಾತ ಕೇಳ್ಕ....ನಿಮ್ಮ ಅವ್ವನ ಮಾತ ಕೇಳ್ಕ ಯಾನ ಬ್ಯಾಡ ಅನೂಲ್ಲ ನಾವ. ಆದರ ನಿಮಗ ಗಂಡ ಹ್ಯಾಂತಿಗಿ ಹಾಕಿದ ರೇಸಿಮಿ ಗಂಟ ಜನ್ಮಾನ ಜನ್ಮ ಬಿಡೂ ಹಂತಾದಲ್ಲ....ಅಂಬೋದ ತಿಳಿದ ನಡೀಕ ಬ್ಯಾಡಾ?" ಬಹು ಮೃದು ವಾದ ನಯವಾದ ರೀತಿಯಲ್ಲಿ, ರತ್ನವ್ವ ಕೇಳಿದಳು. ಇವೆಲ್ಲ ಹಿಂದೆ ಅಳಿಯ ನಿಂದಾದ ತಪ್ಪುಗಳೆಂದು ಅವಳಿಗೆ ಗೊತ್ತು. ಅವುಗಳನ್ನು ಅವನ ನಿದರ್ಶನಕ್ಕೆ ತಂದುಕೊಡಬೇಕಾದರೆ....ಎಷ್ಟು ಸವಿನಯವಾಗಿ....ಹೊಟ್ಟೆಯಲ್ಲಿಯ ನೀರು

ತುಳುಕದಂತೆ ಹೇಳಬೇಕೆಂಬುದನ್ನು ಅವಳು ಬಲ್ಲಳು. ಇಲ್ಲವಾದರೆ ಇದೀಗ ಕೂಡಲಿರುವ ಮನಸ್ಸು ಒಡೆದು ಹೋದೀತಲ್ಲಾ ! ಎಂಬ ಹೆದರಿಕೆಯೂ ಅವಳ ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತು. ಅಂತೇ ಮತ್ತೂ ವಿನಯದಿಂದ "ನೀ ಒಂದು ಕಾಲಲಿ ಒದ್ದರೂ ಮತ್ತೊಂದು ಕಾಲ ಹಿಡಿದು ಬಾಳಕ ಬೇಕ ನನ್ನ ಮಗಳ....ಸಾಯುತನಕಾ ಯಾನ ಆಕಿಗಿ ನಿನಗಾ....ಬಿಟ್ಟದ ಐತಿ....? ಸಾಕಿದ ನಾಯಿ, ನಿನ್ನ ಬಿಟ್ಟ ಎಲ್ಲಿ ಹೋದ್ಹೋತ ಅದ...." ಎಂದು ಕಣ್ಣೀರನ್ನು ತಂದು ಅಂಗಲಾಚಿದಳು.

ಅತ್ತೆಯ ಈ ಮಾತುಗಳನ್ನು ಕೇಳಿ, ಭರಮನಿಗೆ ಬಹಳ ತಿಳಿವಳಿಕೆ ಬಂದಂತಾಯಿತು. ಅತ್ತೆ ತನ್ನನ್ನು ಎಷ್ಟು ಪ್ರೀತಿಸುವಳೆಂಬ ಅರಿವು ಇಂದು ಅವನಿಗೆ ಆಯಿತು. ಹಿಂದೆ ಭೀಮಪ್ಪನ ಮಾತು ಕೇಳಿ, ಕೆಡಿಸಿಕೊಂಡೆನೆಂದು, ಒಂದು ಕ್ಷಣವೆನಿಸದಿರಲಿಲ್ಲ, ಅವನಿಗೆ. ತನ್ನ ಗೆಳೆಯರು ಆಗಾಗ ಅತ್ತೆಯ ಮನೆಗೆ ಹೋಗಿ ಬರುವುದನ್ನೂ ಸುಖದಲ್ಲಿ ಇದ್ದುದನ್ನೂ ಆತ ಕಂಡಿದ್ದ. ತಾನೂ ಹಾಗಿರಬೇಕೆಂದು ಹಂಬಲಿಸುತ್ತಿದ್ದ. ಆದರೆ ತಾಯಿಯ ತೊಡಕೊಂದು ಅವನಿಗೆ ಬಿಚ್ಚದಂತಹ ಮಲುವಾಗಿದ್ದಿತು. ಬಿಚ್ಚಿಕೊಳ್ಳುವಷ್ಟು ಎದೆಗಾರಿಕೆಯು ಅವನಲ್ಲಿರಲಿಲ್ಲ. ಅದಕ್ಕಂತಲೇ ತೊಳಲುತ್ತ ಇಲ್ಲಿಯವರೆಗೆ ಆ ಜೇಡಬಲೆಯಲ್ಲಿಯೇ ಒದ್ದಾಡುತ್ತಿದ್ದ. ಭರಮ ತಿಂದು ನಡೆದ. ಕಳಿಸಿ ಕೊಡುವಾಗ ರತ್ನವ್ವ ಕಣ್ಣಲ್ಲಿಯ ನೀರು ಒರಸಿಕೊಳ್ಳುತ್ತ ಹೇಳಿದಳು. "ನಮಗರ ಯಾರು ಇದಾರು ?....ಆಕಿ ಒಬ್ಬಾಕೇ ಮಗಳ, ನೀನs ಮಗಾ ಇದ್ದಾಂಗ....ನಮಗ...." ಎಂದು. ಈ ಮಾತು ಭರಮನ ಮನದಲ್ಲಿ ಮಳಿಗೆಗೆ ಹೋಗುವವರೆಗೂ ಸುತ್ತುತ್ತಿದ್ದಿತು.

ಆ ದಿನ ಸಾಯಂಕಾಲದೊಳಗಾಗಿ ಚಿಮ್ಮವ್ವನಿಗೆ ಯಾರೋ ಬಂದು, ಭರಮ ಅತ್ತೆಯ ಮನೆಗೆ ಫಲಹಾರಕ್ಕೆ ಹೋಗಿದ್ದನೆಂದು ಹೇಳಿದರು. ಅದನ್ನು ಕೇಳಿ ಚಿಮ್ಮವ್ವನಿಗೆ ಮೊದಲು ಆಶ್ಚರ್ಯವಾಯಿತು. ನಿಜವೆನಿಸಲಿಲ್ಲ. ಮತ್ತೂ ಬೇರೆ ಬೇರೆ ರೀತಿಯಿಂದ ಪ್ರಶ್ನೆ ಮಾಡಿ, ಮಗ ಹೋದುದು ನಿಜವೆಂದು ಮನದಟ್ಟು ಮಾಡಿಕೊಂಡಳು. ಮನದಲ್ಲಿ ಮಿಡುಕಿದಳು. ಆದರೂ ಅದನ್ನು ಮೇಲೆ ತೋರಗೊಡದೆ "ಕುರೀ ಮೇದರ ಕುರುಬಗ ಲಾಭಲ್ಲs ! " ಎಂದು

ಹೇಳಿ, ಬಂದಾಕೆಯನ್ನು ಕಳಿಸಿದಳು. ಆದರೂ ಅವಳ ತಲೆಯಲ್ಲಿ "ಮಗಾ ಅಲ್ಲಿ ಹೋಗಿದ್ದ! ಹೀಂಗ ಎಷ್ಟ ಸಾರೆ ಹೋಗಿ ಬಂದಾನ ಯಾರಗಿ ಗೊತ್ತು ?.... ನನ್ನ ಬೆನ್ನಿಗಿ ಯಾನ ಕಣ್ಣ ಇದಾವು...." ಅದಕ ಮೊನ್ನಿ ನಂಗ ವಾದ ಹಾಕಿ ದಪ್ಪ! ನನ್ನ ಹುಡುಗ ಎಂದ ತಿರುಗಿ ಮಾತಾಡಾಂವ ಅಲ್ಲ....ಅತ್ತಿ ಮಾತ ಕೇಳಿ ಹೀಂಗ ಆದ...." ಎಂಬ ವಿಚಾರದ ಸುಂಟರಗಾಳಿ ಸುತ್ತದಿರಲಿಲ್ಲ ಇದಕ್ಕೆ ಉಪಾಯವನ್ನು ಸ್ವಲ್ಪ ಹೊತ್ತು ಯೋಚಿಸಿದಳು. ಕೊನೆಗೆ "ಬರೀ ಜಗಳಾಡಿದರ ಅಂಪ ಹಾದಿಗಿ ಬರೂದುಲ್ಲಾ!" ಎಂದು ಬಾಯಲ್ಲಿಯೇ ಪುಟಪುಟಿಸಿದಳು, ಆಕಳಿಕೆಯೊಡನೆ.

ಸಂಜೆ ಚಿಮ್ಮವ್ವ ಮಗನ್ನ ಊಟಕ್ಕೆ ಸಜ್ಜಿಗೆ ಮಾಡಿದಳು. ಭರಮ ಮಳಿಗೆಯಿಂದ ಬಂದೊಡನೆ....ಬಿಸಿನೀರು ಕೈಕಾಲಿಗೆ ಕೊಟ್ಟು ಊಟಕ್ಕೆ ಎಬ್ಬಿಸಿದಳು. ಮಗನು ಊಟಕ್ಕೆ ಕುಳಿತುಕೊಳ್ಳಲು, ಚಿಮ್ಮವ್ವ ಮುಂದೆ ಕುಳಿತು....ತುಪ್ಪ ಬಡಿಸುತ್ತ ಪ್ರೇಮ ತುಂಬಿದ ಸ್ವರದಿಂದ.... "ಬಾಳಾ....ಊರ ಜನಾ ಭಾಳ ಕೆಟ್ಟಾ....ನಾವ ನಮ್ಮ ಮನ್ಯಾಗ ಸುಖದಾಗ ಇದ್ದರ ನೋಡೋದು ಆಗುದುಲ್ಲ, ಮುಂದಿಗಿ!"

ಭರಮ ಹಸಿವಿಲ್ಲದೆ ಸಾವಕಾಶವಾಗಿ ಉಣ್ಣುತ್ತಿದ್ದ. ಚಿಮ್ಮವ್ವ ಮುಂದೆ ಹೇಳಲು ತೊಡಗಿದಳು.... "ನೀ ಒಬ್ಬs ಮಗಾ....ಪ್ಪ, ನಿನ್ನ ಮ್ಯಾಲ ನಾವ ನಾಲ್ಕು ಮಂದಿ ಕೈಯೂರಿ ಕೂತಿದ್ದೇವಪ್ಪ....ಯಾರ ಯಾನರ ಕೊಟ್ಟಾರ ಮಾಡ್ಯಾರ....ನೀ ಯಾನ ತಿನ್ನಬ್ಯಾಡ ಛ್ಞಾ....?"

ಭರಮ ಸಚಿಂತನಾಗಿ ಉಣ್ಣುತ್ತಿದ್ದ. ಈ ಮಾತನ್ನು ಅವ್ವ ಇಂದೇ ಏಕೆ ಹೇಳುವಳೆಂಬುದು ಅವನಿಗೆ ಹೊಳೆಯಿತು. ಆದರಿಂದ ಅವನು ಸ್ವಲ್ಪ ಹೆದರಿದ. ಅವ್ವನಿಗೆ ಎದುರು ವಾದಿಸುವಷ್ಟು—ತನ್ನ ಬಯಕೆಯನ್ನು ನ್ಯಾಯವಾಗಿ ಅವಳಿಗೆ ತಿಳಿಸುವಷ್ಟು ಅವನು ಸಮರ್ಥನಾಗಿರಲಿಲ್ಲ. ಚಿಮ್ಮವ್ವ ಮತ್ತೆ ಮಾತು ಮುಂದುವರಿಸಿದಳು: "ಯಾಕ ಸುಮ್ಮ ಆದಿ ? ದೆವ್ವಗಿವ್ವ ಬಡಿತ ಯಾನ ? ನಾ ಹೇಳಿದ ಯಾನ ತಿಳಿತೋ ಇಲ್ಲೋ....?" ಎಂದು ತಾಳಲಾರದೆ ಸ್ವಲ್ಪ ಸಿಟ್ಟಿಗೆ ಬಂದೇ ನುಡಿದಳು.

“ ತಿಳೀತಲ್ಲ ! ” ಭರಮ ಮೆಲ್ಲಗೆ ನುಡಿದ, ಬಿಗುವಿನಿಂದ.

ಚಿಮ್ಮವ್ವ ಮುಖದಿರುವಿ.... “ ತಿಳೀತ ; ಇಂದ ಯಾರಲ್ಲಿ ಹೋಗಿದ್ದಿ ಸೆ.... ತಿನಕಾ....? ಯಾನರ ಮಾಡಿ ನಿನ್ನ ನೆತ್ತಿಗಿ ಅಷ್ಟ ವರಿಸಿ ಬಿಡುತಾರು....ಅಂದರ ಹೋಗಿ ಬೀಳಕ್ಕೆ ಅವರ ಬಾಗಲಾಗ....ನಾಯಿ ಆಗಿ, ತಿಳಿದುಲ್ಲಾ....ಅವರ ಅವ್ವ ಮಗಳಾ ಎಂಥಾವರ ಇದಾರ....ಕೌಸಲೇರ....”

ಈ ಮಾತು ಭರಮನ ಮನಸ್ಸಿಗೆ ಸೇರಲಿಲ್ಲ. ಅವನ ಕಣ್ಣೆದುರಿಗೆ ಅತ್ತೆಯ ಪ್ರೇಮಪುತ್ತಳಿ ಬಂದು ನಿಂತಿರಬೇಕು. “ಸಾಕ ಯಾನರ ಒಂದ ಹೇಳತಿ....ಬಿಡ ನೀ, ಕಾಮುನಿ ಆದಾವರ ಕಣ್ಣಾಗಿ ಜಗಾ ಎಲ್ಲಾ ಹಳದೀನs ಕಾಣಸತೇತಿ....ಅಂತಾರಲ್ಲ....ಹಂಗ ನಿಂಗೊಂದ ಹುಚ್ಚ ಹಿಡದೇತಿ....” ಎಂದು ಮಾತಾಡುವಾಗೇನೋ ಭರಮ ಮಾತಾಡಿಬಿಟ್ಟ. ಹಿಂದಿನಿಂದ ಅವನಿಗೆ ಅನ್ನಿಸ ಹತ್ತಿತು. “ನಾ ಹಿಂಗ ಮಾತಾಡಬಾರದಲ್ಲ ; ಅವ್ವ ಜಗಳವಾಡುವಳೊ ?” ಎಂದು. ಅವನಿಗೆ ಅವ್ವನ ಸಂಗಡ ಜಗಳವೆಂದರೆ ಒಲ್ಲದ ವಿಷಯ. ಮೊನ್ನಿನ ಜಗಳದಲ್ಲಿ ಕಲಕಿದ ಮನಸ್ಸು ಇನ್ನೂ ಶಾಂತವಾಗಿರಲಿಲ್ಲ.” “ಈಗೊಂದ ಸಾರೆ ಜಗಳವಾಡದೆ ಬಿಟ್ಟರ, ಇನ್ನ ಎಂದೂ ಹೀಂಗ ಮಾತಾಡುದುಲ್ಲ....” ಎಂದು ಮನದಲ್ಲಿಯೇ ಅಂದುಕೊಂಡು, ನಾಲಗೆ ಕಚ್ಚಿಕೊಂಡ.

“ಅದ್ಯಪ್ಪ !” ಹಣೆ ಬಡಿದುಕೊಂಡು “ನನ್ನ ಹಣೇಬರಾ....ನೀಯಾನ ಮಾಡೀ ಇದ್ದಾಂವ ಒಬ್ಬs ಮಗಾ....ಹುಟ್ಟಾ ತಿರಗಿ ಮಾತಾಡಿದಂವ ಅಲ್ಲ ; ಇಂದs ಹೀಂಗ ಮಾತಾಡಕ ಹತ್ತೀದಿ....ಅಂದಮ್ಯಾಲ ಯಾನ ಹಾಕಿದರ ಯಾರಿಗಿ ಗೊತ್ತಪ್ಪ, ನಿನ್ನ ಹೊಟ್ಯಾಗ....!” ಗೋಣು ಹಾಕಿ.... “ಮದಿನ ದಾಗ ರಮಿಸಿ ಕರದ ಒಯ್ದಾ....” ಎಂದಳು ಚಿಮ್ಮವ್ವ, ಕಣ್ಣೀರು ಸುರಿಸುತ್ತ ಕರುಣರಸಪೂರಿತ ಸ್ವರದಿಂದ.

ಭರಮನು ಯಾವದಾದರೊಂದು ವಿಷಯವನ್ನು ಸಾಧಕಬಾಧಕ ಪ್ರಮಾಣಗಳಿಂದ ವಿಚಾರಿಸಿ ಒಂದು ನಿರ್ಣಯಕ್ಕೆ ಬರುವಷ್ಟು ಸಮರ್ಥನಲ್ಲ. ಸರಳಜೀವಿ. ಹುಟ್ಟಿದಂದಿನಿಂದ ಹಿರಿಯರನ್ನು ಅವಲಂಬಿಸಿ ಬದುಕುತ್ತ ಬಂದವ. ಆದುದರಿಂದ ತಾಯಿಯ ಈ ಮಾತಿನ ಪರಿಣಾಮ ಅವನ ಮೇಲೆ ತುಂಬ ಆಯಿತು. ಇದುವರೆಗೆ ಅತ್ತೆಯ ಬಗ್ಗೆ ಹುಟ್ಟಿದ ಸಹಾನುಭೂತಿ ಈಗ ತಾಯಿಯ ಬಗ್ಗೆ ಇಮ್ಮಡಿಸಿತು. ಅವನ ಬಾಳಿಗೆ ತಾಯಿ ಆಧಾರಸ್ತಂಭ.

ಅವಳ ಕರುಣಸ್ವರದಿಂದ ಅವನ ಹೃದಯ ತುಂಬಿ ಬಂದಿತು. ಆದರಲ್ಲಿ "ಅತ್ತಿ ಯಾವಾಗ ಕರೀದುಲ್ಲ....ಇಂದ್ಯಾಕ ಕರದ ತಿನ್ನಲಾಕ ಕೊಟ್ಟಳು....! ಹಬ್ಬ ಇಲ್ಲ! ಹುಣ್ಣಿವಿ ಇಲ್ಲ....ಈಗ್ಯಾಕ ಉಂಡೀ ಕರಜೀಕಾಯಿ ಮಾಡಿದಾಳು.... ಸಾಕ ಸಾಕ ಅಂದ್ರ ಕೇಳದ....ಮತ್ತ....ಉಂಡೀ ತಂದ ಹಾಕಿದಳಲ್ಲ....! ಇದರಾಗ ಅವ್ವ ಹೇಳಿದಾಂಗ ಯಾನರ ಹುಚ್ಚಮದ್ದ....ಮೆಚ್ಚಮದ್ದ.... ಇದ್ದೋತ್ರ" ಎಂದು ಅತ್ತೆಯ ಅಕ್ಕರೆಯ ಬಗ್ಗೆ ವಿಕಲ್ಪನೆಯ ತೆರೆಗಳೇಳ ತೊಡಗಿದುವು. ನವತಾರುಣ್ಯದಲ್ಲಿ ಸ್ವಾಭಾವಿಕವಾಗಿ ತಾರಕ್ಕನ ಕಡೆಗೆ ಹರಿಯು ತ್ತಿದ್ದ....ಒಲಿಯುತ್ತಿದ್ದ ಮನಸ್ಸಿನ ಮೂಲವನ್ನೆಲ್ಲ ಅತ್ತೆಯು ಮಾಡಿದ 'ಮೆಚ್ಚುಮದ್ದಿ'ನಲ್ಲಿಯೇ ಒಯ್ದು ಊರಹತ್ತಿತು ಅವನ ಬುದ್ಧಿ! ಆದುದರಿಂದ ಆತನು ತಾರಕ್ಕನನ್ನು ಪ್ರೀತಿಸಬಯಸುವ ಮನಸ್ಸನ್ನು ಮನಪೂರ್ವಕವಾಗಿಯೇ ತಡೆಯ ಹತ್ತಿದ!

## ೯

ಈಗ ನಾಲ್ಕು ತಿಂಗಳಿಂದ ಹೂವಣ್ಣ ಹಾಸಿಗೆ ಹಿಡಿದಿದ್ದಾನೆ. ನಾಲ್ಕು ದಿನ ಮೈಯಲ್ಲಿ ನೆಟ್ಟಗಿರುವದು. ನಾಲ್ಕು ದಿನ ಇಲ್ಲ. ಏನೋ ಸ್ವಲ್ಪ ಗುಸುಗುಸು ಕೆಮ್ಮು ಇದೆ. ಯಾವಾಗಾದರೂ ಸ್ವಲ್ಪ ಮೈಯೂ ಬೆಚ್ಚಗಾಗುವದು. ಕೈಕಾಲು ಹರಿಯುವುವು. ಅನ್ನ ರುಚಿ ಹತ್ತುವದಿಲ್ಲ. ಹೀಗಾಗಿ ಇತ್ತಿತ್ತಲಾಗ ಹೂವಣ್ಣ ಸೋತಿದ್ದ. ತಿರುಗಾಡುತ್ತ ಬಂದ ಇಬ್ಬರು ಮೂವರು ಗೊಲ್ಲರ ಹತ್ತಿರ ಔಷಧ ತಕ್ಕೊಂಡ. ಅರ್ಧ ಕ್ರಯಕ್ಕೆ ಔಷಧ ಕೊಟ್ಟು ಉಳಿದರ್ಧ ಬೆಲೆ ಗುಣ ಹೊಂದಿದ ಮೇಲೆ ಕೊಡುವಿರಂತೆ ಎಂದು ಹೇಳಿ ಹೋದ ಗೊಲ್ಲರು ತಿರುಗಿ ಕ್ರಯ ಬೇಡಲಿಕ್ಕೇ ಬಂದಿರಲಿಲ್ಲ, ಅವರನ್ನು ಕೇಳಬೇಕೆಂದರೆ. ದಿನದಿನಕ್ಕೆ ಸಣ್ಣಾಗುತ್ತ ನಡೆದ ತಾನು ಯಾವಾಗ್ಗೆ ನೆಟ್ಟಗಾಗಿ ಅಡವಿಯ ಕಡೆಗೆ ಹೋದೇ ನೆಂದು ಹಂಬಲಿಸುವನು. ಒಮ್ಮೊಮ್ಮೆ ಮನದಲ್ಲಿ 'ನಂದೆಲ್ಲಾ ಛಲೂ ಆಗೇತಿ ಮೊಮ್ಮಕ್ಕಳ ಮಾರಿ ಅಷ್ಟ ನೋಡಿದ್ದರ್ರ....ದೇವರ ಕಣ್ಣ ಮುಚ್ಚಾಕ ಯಾನ ಹರಕತ್ತ ಇಲ್ಲ....' ಎಂದೂ ವಿಚಾರಿಸುವನು. ಒಮ್ಮೊಮ್ಮೆ ಜನರ ಮುಂದೆ

ಆಡಿಯೂ ತೋರಿಸುವನು

ಮಗದುಮರ ರತ್ನವ್ವನಿಗೂ ಹೂವಣ್ಣನ ಈ ಬಯಕೆಯ ಸುದ್ದಿ ಹತ್ತಿದ್ದಿತು. ಆದುದರಿಂದಲೇ ಅವಳು ತನ್ನ ಗಂಡನ ಬೆನ್ನು ಹತ್ತಿದ್ದಳು. “ಒವ್ಮಿ ನೋಡಕ ಹೋದಾಗ....ಹೂವಪ್ಪನ ಮುಂದ ಮಾತ ತಗೀರಲ್ಲ.... ಹುಡಗಿ ನೆರೆದ ನಾಲ್ಕೈದು ವರ್ಷ ಆಯ್ತು....ದೀವಟಿಗಿ ಉರದಂಗ ಉರೀತ ನಿಯ್ವಾಳು....ಇನ್ನs ಸ್ಯಾವಗೀನ ಉಣಸಿಲ್ಲ....ನಿನ್ನ ಮನಸರ ಯಾನ ಅಂತೀತ್ಯೋ ಯಾನೋ....ಎಳ್ಳ ಅಷ್ಟರ ಚಿಂತಿ ಮಾಡತಿರ್ಯಾನ....? ನಿಮ್ಮ ತಂಗಿರೆ ಯಾನ? ನಿಮ್ಮ ಜಾತಕ್ಕಿನ ಅಲ್ಲ....! ಆಕಿಗಿ ಯಾನ ಗೊತ್ತ, ಪರಾದ ಪೋರಿಗೋಳ ಹ್ಯಾಂಗ ಇದ್ದಾವ ಅಂಬೋದ....ನೀನರ ಹೂವಣ್ಣನ ಮುಂದ ಮಾತ ತಗೀಯಲ್ಲಾ” ಎಂದು. ಮಲ್ಲನ ಮನಸ್ಸಿನಲ್ಲಿಯೂ ಮಗಳ ವಿಷಯಕ್ಕೆ ತುಂಬ ಚಿಂತೆಯಿತ್ತು. ಆದರೆ ಅವನು ಹೀಗೆ ಮಾತಾಡಿ ತೋರಿಸಲು ಹೆಂಗಸೇ ?

ಒಂದು ದಿನ ಹೂವಣ್ಣನನ್ನು ನೋಡಲು ಹೋದಾಗ ಸಮೀಪದಲ್ಲಿ ಚಿಮ್ಮವ್ವ ಇಲ್ಲದ್ದನ್ನು ನೋಡಿ “ಮೆಲ್ಲಗೆ ದಿನ ದಿನಕ ಸಣ್ಣs ಆಗ್ತ ನಡದಿ; ಮೊಮ್ಮಕ್ಕಳ ಅಷ್ಟ ಆಗಿರ ಕಣ್ಣ ಮುಂದ....ನೆಟ್ಟಗಾಗತಿತ್ತು....!” ಮಲ್ಲ ನುಡಿದ.

ಹೂವಣ್ಣ ಇದಕ್ಕೆ ಒಪ್ಪಿಗೆಯನ್ನು ಕೊಡುತ್ತ “ಮದವಿ ಆಗಿ ಆರ್‍ಯೋಳ ವರ್ಷ ಆಯ್ತು....ಸಂಗಾಟದವರೆಲ್ಲಾ....ಒಂದ್ಯಾಡ ಹಡದರು. ಆದರ ನಮ್ಮ ನಸೀಬ ಕೆಟ್ಟಾ” ಎಂದ.

“ನಸೀಬ ಯಾನ ಮಾಡ್ಯೋತು....ಮಕ್ಕಳ ಆಗಕ ಯಾನ ಒಲ್ಲಿ ಅಂತೀತಿ ಯಾನ ಅದ....ಆದರ”

ಈ ಮಾತಿನ ಭಾವವನ್ನರಿತು ಹೂವಣ್ಣನ ವಿಷಣ್ಣವಾದ ವದನದಲ್ಲಿ ನಗೆಯೊಂದು ಮೂಡಿತು. ಆ ನಗೆಯಲ್ಲಿ ಎಷ್ಟೊಂದು ದುಃಖವಿತ್ತೆಂಬುದು ಮಲ್ಲನೇ ಬಲ್ಲ. ಅದರ ಉಪಾಯ ಹೂವಣ್ಣನಿಗೆ ಗೊತ್ತಿಲ್ಲದಿಲ್ಲ. ಅಲ್ಲದೆ ಸೊಸೆಯ ಮೇಲೆ ಅವನ ಪ್ರೀತಿಯೂ ಇತ್ತು. ಆದರೆ ಅದಕ್ಕೆ ಹೆಂಡತಿಯು ಒಪ್ಪುವಂತಿಲ್ಲವಲ್ಲ ! ಅವಳನ್ನು ಒಪ್ಪಿಸುವದು ಸಾಧ್ಯವಿಲ್ಲ. ಹೀಗೆ ತಾನು

ಹಾಸಿಗೆ ಹಿಡಿದಾಗಂತೂ ಅವಳ ವಿರೋಧ ಹೋಗುವುದು ಒಳಿತಲ್ಲ............ ಅಯ್ಯೋ....!

"ತಾರಕ್ಕ ಬಸಿರು ಇದಾಳಂತ........ಕಿವಿಮ್ಯಾಲ ಬಿದ್ದ ಸತ್ತರೂ ಸಂತೋಷ ಆಗ್ತ್ರೇತಿ....ಆದರ....ಆಕಿ...."

ಹೂವಣ್ಣ ಇನ್ನೂ ಏನೇನೋ ಹೇಳುವವಗನಿದ್ದ. ಆದರೆ ಬಾಗಿಲ ಮರೆಯಲ್ಲಿ ನಿಂತ ಚಿಮ್ಮವ್ವ ಚಟ್ಟನೆ ಮುಂದೆ ಬಂದು "ನಮಗ್ಯಾನ ಹತ್ತ್ರೇತಿ, ಇವರಿಗ್ಯಾನ ಹತ್ತ್ರೇತಿ ನೋಡು; ಸುಟ್ಟ ಬರಲಿ! ನಮ್ಮ ಮನೀ ಮುರದ ಮೂಲಿಗಿ ಬಿತ್ತಂತ....ಹಗಲೀ ರಾತ್ರಿ ಕಣ್ಣಿಗೆ ಕಣ್ಣ ಹತ್ತವಲ್ತು ನನಗ.... ಇವರಿಗಿ...."

ಹೆಂಡತಿಯ ಮಾತುಗಳನ್ನು ಕೇಳಿ ಹೂವಣ್ಣ ಸುಮ್ಮನಾದ. ಅವನ ಮುಖ ಬಾಡಿತು. ಮಲ್ಲನ ಮುಖವೂ ಕಳೆಗುಂದಿತು. ಆದರೂ ಅವನೆಂದ "ಅದs ನಮಗೂ ಕಟೀಲಾಕ ಹತ್ತ್ರೇತಿ, ಮನೀ ಮುರದ ಮೂಲಿಗಿ ಬೀಳ ಬಾರದು. ಅಂತs ಮನ್ಯಾಗ ಮಕ್ಕಳಾ ಮೊಮ್ಮಕ್ಕಳಾ....ಆಗಲಿ ಅನ್ನಲಾಕ ಹತ್ತಿದೇವ...."

"ಹೊಂ! ಹುಡುಗರ ಆಗ್ತಾವ........ಅವನ್ನಾ ಯಾನ ಹಾದೀ ಮ್ಯಾಲಿಂದ ಹಿಡಿಕೊಂಡ ತರೋದ ಐತಿ....? ಈ ಹಾಸಿಗಿ ಹಿಡದಾವ್ನ ನೋಡರಿ ಮೊದಲ........ಬಣವಿಗಿ ಬೆಂಕಿ ಹತ್ತ್ಯೇತಿ....ಅದ ಬಿಟ್ಟದೀರಿ........ಬಿತ್ತ್ರಕ ಯಾವಾಗ ಹೋಗೂನು, ಅಂತ ಕೇಳಕ ಹತ್ತ್ರೇದ್ದೀರಿ...."

ಆಗ ಮಾತುಗಳು ಇಷ್ಟಕ್ಕೇ ಮುಗಿದುವು. ಆದರೆ ಆ ವಿಷಯ ಅಲ್ಲಿಗೇ ನಿಲ್ಲಲಿಲ್ಲ. ಮಧ್ಯಾಹ್ನ ಮಗನು ಊಟಕ್ಕೆ ಬಂದಾಗ ಚಿಮ್ಮವ್ವ "ಇಂದ ನಿಮ್ಮ ಮಾವ ತಾರೀ ಸಲುವಾಗಿ ಹೇಳ್ಲ ಬಂದಿದ್ದ...." ಎಂದಳು.

ಭರಮು ಆಶ್ಚರ್ಯದಿಂದ "ಆಕಿ ಸಲುವಾಗಿ ಯಾನಾ?" ಎಂದು ಕೇಳಿದ.

"ಪೋರಗಿ ಇನ್ನs ಹುಡಗೂರ ಆಗಲಿಲ್ಲ........"

ನಡುವೆಯೇ ಕುತೂಹಲದಿಂದ "ಯಾರ ಅನ್ನತೀರು....?" ಎಂದ ಭರಮು.

"ಮತ್ಯಾರ ಅನಾವ್ರ ?" ಸ್ವಲ್ಪ ತಡೆದು "ಆಂವ ಮಲಗಿದಾ.... ಅತರವ ಯಾನರ ಕಾಳಜಿ ಐತಿಯಾನ ಅವರಿಗಿ....? ಯಾನ ಇಲ್ಲ ; ಆಂವ ಮಲಗಿದಾಗಿಂದೂ....ತಮ್ಮದ್ವ ಮನೀ ಆಯ್ತಂತ....ಹಿಗ್ಗಿ ಇಷ್ಟ ಆಗಲ ಆಗೀ ದಾಳ....ನಿಮ್ಮತ್ತಿ....!" ಎಂದು ಕೈಮಾಡಿ ತೋರಿಸಿದಳು ಚಿಮ್ಮವ್ವ.

ಈ ಮಾತಿನಿಂದ ಭರಮು ಕುಗ್ಗಿದ. "ನಮ್ಮ ಅಪ್ಪಾ....ಮಲಗಿದರ.... ಅವರ‍್ಯಾಕ ಹಿಗ್ಗ್ಯಾರು ?" ಎಂದ.

"ನೀ ಇನ್ನs ಸಣ್ಣ ಹುಡುಗ....ನಿನಗ ಯಾನ ತಿಳಿತೇತಿ....ಅವರ ಬಲಿ ?....ಮುದುಕನಾಸೂ ತಮ್ಮ ಕಡೆ ಮಾಡಕೊಂಡಿದಾರ........ದಿನಾ ತಂಬಾಕ ಸೇದಕ ಬಂದಾಗ ಕೂತ. ಯಾನರ ಯಾನರ ಹೇಳಿ...."

"ಯಾತಕ ?" ಒಂದೂ ತಿಳಿಯದವನಂತೆ ಭರಮು ಕೇಳಿದ.

"ಎಲ್ಲಾ ನಿಂಗs ಗೊತ್ತಾಗತೇತಲ್ಲ....ನಾ ಯಾದ್ಕ ಹೇಳಲಿ....? ನೀ ಯಾನ ಇನ್ನs ಬೋಳೀಲೆ ಹಾಲ ಕುಡೀತಿ....?" ಸ್ವಲ್ಪ ತಡೆದು "ಆದರ ನಾ ಇಷ್ಟs ಹೇಳತ್ಯಾನು....ಅವನ ಮಾತ್s ಕೇಳಬ್ಯಾಡ ನೀ." ಚಿಮ್ಮವ್ವ ನಡೆದ ಸಂಗತಿಗೆ ಬೇರೆ ಸ್ವರೂಪವನ್ನು ಕೊಟ್ಟು ಮಗನಿಗೆ ಹೇಳಿದಳು.

"ಬೊಡ್ಡೀ ಹಿಡದ ಯಾನಾಯ್ತು ಆದ ಹೇಳಲ್ಲ....ಹಿಂಗ ಹೇಳಿರ ಯಾನ ತಿಳಿಬೇಕು....?" ಭರಮು ತಿಳಿಯದೆ ಕೆರಳಿ ಕೇಳಿದ.

"ಹಾಸಿಗಿಗಿ ಕಳಸು...." ಅಷ್ಟರಲ್ಲಿ ತಾರಕ್ಕ ಒಳಗೆ ಬಂದಳು. ಅದಕ್ಕಾಗಿ ಮಾತು ಬದಲಿಸುವ ದೆಸೆಯಿಂದ...."ಎಲ್ಲಾರು ನಮ್ಮ ಮ್ಯಾಲ ಹರೀ ಹಾಯುವರಪ್ಪ....! ನಿಮಗ್ಯಾನ....? ದೊಡ್ಡಾವ ಆದಿ....ಹ್ಯಾಂತಿ ಬಂದಳು, ಮುದಕೇದ ಯಾದಕ ಪರಿವೀ ಮಾಡೀ ?" ಎಂದಳು.

ಭರಮು ಉಂಡು ಹೊರಗೆ ಹೋದ. ತಾರಕ್ಕನಿಗೆ ಈ ಮಾತುಗಳ ಹೊಲಬು ತಿಳಿಯದೆ ಹೋಗಲಿಲ್ಲ. ಅವಳು ಹಿತ್ತಲಿಗೆ ಕಸ ಒಗೆಯಲು ಹೋದಾಗ ತಾಯಿಯನ್ನು ಕರೆದು "ಅವ್ವಾ, ಅಪ್ಪ ಮಾಮಾನಾ ನೋಡಕ ಮ್ಯಾಲಿಂದ ಮ್ಯಾಲಿ ಯಾದಕ ಬರತಾ....?" ಎಂದು ಸಿಟ್ಟು ಮಾಡಿದಳು.

ರತ್ನವ್ವ ಸುಮ್ಮನಿದ್ದಳು. ಪುನಃ ತಾರಕ್ಕ "ಬಂದ ಕೂತ....ನಾಲ್ಕ ಮಾತ ಯಾನರ ಮಾತಾಡಿ ಬರೂಹಂಗಿಲ್ಲ....ಯಾನರ ಒಂದ ತಕ್ಕೊಂಡ ಕೂಡತಾನು....ಈಗ ಯಾರಿಗಿ ಬೇಕಾಗೇತಿ ಸುಖಾ....? ಎಂದ ಮಕರದಾಗ

ಸಿಟ್ಟ ಮಾಡಿ ಹೋಗಿದಾರ ಅಂದ್ಯನಾ....ತಿಳಿದ್ಯಾನ....ನನ್ನ ಜನ್ಮದಾಗ ಸುಖಾನs ಇಲ್ಲ ಅನ್ನೋದ. ಸುಮ್ನ ನೀವ ಹೀಂಗ ನಡುವ ಇಲ್ಲದ ಮಾಡಕ ಹೋದರ....ಯಾನ ಆಗೋದಾ....? ಸಿಟವಿ ಬರದ ಬರೀ ಯಾನ ಸುಳ್ಳ ಆಗತೇತಿ....?" ಎಂದಳು.

ರತ್ನವ್ವನ ಮೇಲೆ ಸಿಡಲೆರಗಿದಂತಾಯಿತು. ತನ್ನ ಗಂಡ ಹೂವಣ್ಣನಿಗೆ ಹೇಳಿದರೆ ಏನಾದರೂ ಉಪಯೋಗವಾದೀತೆಂದು ತಿಳಿದಿದ್ದಳು. ಆದರ ಪರಿಣಾಮ ಮಗಳ ಬಾಯಿಂದ ಈ ಮಾತನ್ನು ಹೊರಡಿಸಿದುದನ್ನು ಕೇಳಿ ಹತಾಶಳಾದಳು. ಚಿಂತೆಯಲ್ಲಿ ಮುಳುಗಿದಳು. ಮನದಲ್ಲಿ "ಮಗಳಿಗಿ ಸುಖಾ ಆಗಲಿ ಅಂತ.... ಯಾನರ ಮಾಡಕ ಹೋದರ....ಹಿಂಗ್ಯಾಕ ತಿರಗಿ ಮೈಮ್ಯಾಲ ಬರತಿದ್ದಾ ದೋತು....? ದೈವದಾಗ ಯಾನರ ಐತಿ....? ದುಡ್ಡ ಇಟ್ಟ ಪಂಡಿತನಾರ ಕೇಳಿ ನೋಡಲ್ಯಾನಾ....?" ಎಂದು ವಿಚಾರಿಸಿದಳು. ಅದನ್ನು ಮಗಳ ಮುಂದೆ ಆಡಿ ತೋರಿಸಲಿಲ್ಲ.....ಮಾತ್ರ.

ಈ ವಿಚಾರ ರತ್ನವ್ವನಿಗೆ ಇದೇ ಮೊದಲನೆಯ ಸಲ ಬಂದಿತ್ತೆಂದೇನೂ ಅಲ್ಲ. ಈ ಮೊದಲು ಅವಳು ಹಲವು ಜನ ನೈಮಿತ್ತಿಕರ ಹತ್ತಿರ ಮಗಳ ವಿಷಯಕ್ಕೆ ಕೇಳಿದ್ದಳು. ಹಣ ವೆಚ್ಚಮಾಡಿದ್ದಳು, ಒಮ್ಮೊಮ್ಮೆ ಯಾರಾದರೂ ಮಂತ್ರದ ತಾಯಿತ ಮಾಡಿಕೊಡುವರು ಗಂಟುಬಿದ್ದರೆ ಅವರಿಗೂ ಏನಾದರೂ ಸ್ವಲ್ಪ ಕೊಟ್ಟು, ತಾಯಿತ ಮಾಡಿಸಿ ಮಗಳ ಕೊರಳಲ್ಲಿ ಕಟ್ಟುವಳು. ಅದನ್ನು ಚಿಮ್ಮವ್ವ ಕಂಡೊಡನೆ ಮಗನಿಗೆ ಹೇಳಿತೋರಿಸಿ, ಹರಿದು ಹಾಕಲು ಹೇಳುವಳು. ಹೀಗೆ ಒಂದೆರಡು ಸಲ ಆಗಲು ಮುಂದೆ ತಾರಕ್ಕ ತಾಯಿತ ಕಟ್ಟಿಕೊಳ್ಳುವುದನ್ನೇ ಬಿಟ್ಟುಬಿಟ್ಟಿದ್ದಳು. ಆ ತಾಯಿತಗಳಿಂದ ಹಿತವಾಗುವ ಬದಲು—ಅತ್ತೆಯ ಮನಸ್ಸು ಒಲಿಯುವ ಬದಲು—ಒಡೆಯುತ್ತಲೇ ಇದ್ದಿತೆಂಬುದು ತಾರಕ್ಕನಿಗೂ ತಿಳಿದಿದ್ದಿತು. ಆದರೂ ರತ್ನವ್ವ ಇಂಥ ಪ್ರಯತ್ನಗಳಲ್ಲಿ ಇನ್ನೂ ನಿರಾಶೆಯನ್ನು ಹೊಂದಿರಲಿಲ್ಲ. ಅವಳು ಎರಡು ಮೂರು ದಿನಗಳಲ್ಲಿ ನೆರೆಯೂರಿನ ಪಂಡಿತನ ಕಡೆಗೆ ಹೋಗಿ ಹೋಗಿ ಹೊತ್ತಿಗೆ ಕೇಳಿ ಬಂದಳು. ಅವನು 'ಹಿತ್ತಲಿನಲ್ಲಿ ಕರೆವ್ವ ಇರುವಳು. ಅವಳಿಗೆ ನಿಮ್ಮ ಹಿರಿಯರು ವರ್ಷಕ್ಕೆ ಸೀರಿ ಉಡಿಸಿ ಬಡ್ಯಾನ್ನ ಮಾಡುತ್ತಿದ್ದರು, ಐದ ಸೇರಿನ ಅನ್ನ. ಆಕಿ ನಿನ್ನ ಮಗಳಿಗಿ ಕಾಡಕ ಹತ್ತಿದಾಳು' ನೀನೂ ಅಮಾಸಿಗಿ

ತಾಯಿಗೆ ಕರೀ ಸೀರಿ ಉಡಿಸಿ ಉಡೀತುಂಬ, ಅಂದರ ನಿನ್ನ ಮಗಳಿಗಿ ಸುಖಾ ಆಗತೇತಿ' ಎಂದು ಹೇಳಿದನಂತೆ. ಆದರಂತೆ ರತ್ನವ್ವ ಅಮಾವಾಸ್ಯೆ ಸಮೀಪಕ್ಕೆ ಬರಲು ದೇವಿಗೆ ಮಾಡುವ ಸಿದ್ಧತೆ ಮಾಡಹತ್ತಿದಳು.

ಅದನ್ನು ಕಂಡು ಮಲ್ಲ "ಹೂವಣ್ಣ ಮಲಗೀದಾ, 'ಇವರಿಗ್ಯಾನ ದೇವರಿಗೆ ಮಾಡಕ ಹರ್ಷ ಆಗೀತಿ ನೋಡ' ಅಂತ ಅಂದಾಳ ಯಾನ ನೋಡ ಚಿಮ್ಮಾ !" ಸಹಜ ಅಂದ.

ರತ್ನವ್ವನ ದೃಷ್ಟಿಯಲ್ಲಿ ಮಗಳ ಹಿತದ ಹೊರತಾಗಿ ಬೇರೇನೂ ಇರಲಿಲ್ಲ. ಅಲ್ಲದೆ ಹಿಂದೆ ಹೇಳಿದ ನೈಮಿತ್ತಿಕರಲ್ಲಿ ಈ ಸಂಗತಿಯನ್ನು ಯಾರೂ ಹೇಳಿರಲಿಲ್ಲ. ಆದುದರಿಂದ ಅವಳು ದೇವಿಗೆ ಮಾಡುವದೆಂದೇ ನಿರ್ಧರಿಸಿದ್ದಳು. ಅಂತೇ ಅವಳು ಹೀಗೆ ಹೇಳಿದಳು. "ಆದರಾಗ ಯಾನ ಐತಿ? ಅಂವ್ಯಾನ ಇಂದ್ಯ ಮಲಗೀದಾ ನಾಲ್ಕಾರ ತಿಂಗಳಾಯ್ತು ಮಲಕೊಂಡ ಇದಾ ಅಲ್ಲ ! ಮನ್ಯಾಗ ಯಾನ ಉಣೋದಾ ತಿನೋದಾ ಬಿಟ್ಟದಾರ ಯಾನ ಅವರ? ಈಗಂತೂ ಹದನದಿನದಾಗ ಅಂವ ಕಟ್ಟಿಗಿ ಹಿಡದ ಹ್ಯಾಂಗ ತಿರಗಾಡಕ ಹತ್ತೀದಾ....ನಾವ ದ್ಯಾವರಿಗಿ ಮಾಡಿದರ ಯಾನ ಅಂತಾರು ?"

ಅಷ್ಟಕ್ಕೆ ಮಲ್ಲ ಸುಮ್ಮನಾದ. ಮನೆಯಲ್ಲಿ ದೇವಿಗೆ ಮಾಡುವದಿದೆ, ಎಂದು ತಾರಕ್ಕನನ್ನು ನಾಲ್ಕು ದಿನ ತವರುಮನೆಗೆ ಕರೆದುತಂದರು. ತಾರಕ್ಕ ತವರುಮನೆಗೆ ಬಂದೊಡನೆಯೇ ಐನಾಪುರದ ಅತ್ತೆಯನ್ನೂ ಅನಂತನನ್ನೂ ಕರೆಯಕಳುಹಿದಳು. ಆದರೆ ಅವರು ಯಾರೂ ಬರಲಿಲ್ಲ. 'ಮನೆ ಬಿಟ್ಟು ನಾಲ್ಕ ದಿನಾ ಬರಕ ಆಗೂದುಲ್ಲ. ಅಮಾಸ್ಸಿ ದಿನಾನ ಹರಿವತ್ತ ಬರತೇವಂತ' ಎಂದು ಹೇಳಿಕಳುಹಿಸಿದರು.

ಒಂದು ದಿವಸ ಮಧ್ಯಾಹ್ನ ಚಿಮ್ಮವ್ವ ಹೊಳೆಗೆ ನೀರಿಗೆ ಹೋದಾಗ ಚಾಂಗಲವ್ವ ಮುದುಕಿಯೂ ಬಂದಿದ್ದಳು. ಅವಳು ಏನಾದರೂ ಮಾತಾಡಸ ಬೇಕೆಂದು "ಯಾನ ಚಿಮ್ಮಾ ನಿನ್ನ ಕಡೆ ನೀರ" ಎಂದು ಕೇಳಿದಳು.

"ಆ ಮಾಯಿ ತವರಮನಿಗಿ ಹೋಗಿದಾಳ. ನಾ ತರಕ ಬ್ಯಾಡ? ಆಕಿಗಿ ಯಾನಾ. ಅಮಾತ ಮದಿವಿ ಮಾಡಿಕೊಂಡ ಗಾದಿಮ್ಯಾಲ ಬಂದ ಕೂತಳು. ನಾವ ಹೊಲಾಮನೀ ಗಳಸಬೇಕಾದ್ರ ದುಡದ ದುಡದ ನೆತ್ತಿ ಕೂದಲ ವುಚ್ಚೀದಾವ....ಇನ್ನೂ ದುಡೇದ ಬಿಡವಾಲ್ತು " ಎಂದಳು ಚಿಮ್ಮವ್ವ. ರತ್ನವ್ವನಲ್ಲಿ

ಮುದುಕಿ ಹೋಗಿ ಕೊಡುವಳು. ಹೇಳಲೆಂದು ಚಿಮ್ಮವ್ವನ ಮಾತಿನ ಉದ್ದಿಶ್ಯವಿತ್ತು.

ಚಾಂಗಲವ್ವ ಚಿಮ್ಮವ್ವನ ಮಾತಿಗೆ ಮರುಮಾತುಗೊಡದೆ ತಾನು ಮೊದಲೇ ಹೇಳಬೇಕೆಂದು ಯೋಚಿಸಿದ ವಿಷಯವನ್ನೇ ಎತ್ತಿದಳು. "ಯಾನ ಮಾಡುತಾರೋ ಯಾನೋ ತಾಯಿ! ನಮ್ಮ ಪುರಾಣದಾಗ ಯಾನ ಇಂಥಾ ದ್ಯಾವರಿಗಿ ಮಾಡಕ ಹೇಳೀತಿ? ಎಲ್ಲೀವ ಕರೆವ್ವ ಅಂಥ....ಎಲ್ಲಾ ಮಿಥ್ಯಾ ದೇವರ್‍ಯ ಆಕಿಗಿ ಮಾಡಿರೆ ಎಲ್ಲೀರ ಮಗಳ ವಗತನ ಹತ್ತಕ ಬಲ್ಲದು?"

ಚಿಮ್ಮವ್ವನಿಗೆ ಎಲ್ಲ ಸಂಗತಿ ಲಕ್ಷ್ಯದಲ್ಲಿ ಬಂತು; ಆದರೂ ಸ್ವಲ್ಪ ಸಮೀಪಕ್ಕೆ ಹೋಗಿ ಕುತೂಹಲದಿಂದ "ಯಾರ ವಗ್ತನಾ? ಯಾನ ಮಾಡ ಲಾಕ ಹತ್ತೀದಾರು?" ಎಂದು ಕೇಳಿದಳು.

"ಮುತ್ತ್ಯಾರದ" ನಿನ್ನ ಸೊಸೇದ್ಯ ಅಲ್ಲ. ತಲೆ! ಆಕಿ ವಗತನ ಹತ್ತಲಿ ಅಂತರ ದ್ಯಾವರಿಗಿ ಮಾಡಕ ಹತ್ತೀದಾರ ಈಗ ಮೊನ್ನಿ ಎಲ್ಲಿ ನಿನ್ನ ಬೀಗತಿ. ಯಾರಾನಾ ಕೇಳಕ ಹೋಗೀಳ ಅಂತ್ಯ ಎಂಥಾ ದ್ಯಾವರೋ ರಾತ್ರಿ ತಿನ್ನೋದಂತ ದೆವ್ವಗೋಳ ತಿಂದ್ಹಾಗ....ಎಷ್ಟ ಹಿಂಸಾ ಆಗತೀತ್ಯೋ ಹಗಲಿ ಹ್ವಾಸಾ ಮಾಡಿರ ಬರೂಲಾ?" ಎಂದು ಹೇಳುತ್ತ ಚಾಂಗಲವ್ವ ಮುನ್ನಡೆ ದಳು.

ಚಿಮ್ಮವ್ವ ಈ ಸಂಗತಿಯನ್ನು ಮನೆಯಲ್ಲಿ ಹೋಗಿ ಗಂಡನಿಗೆ ಹೇಳ ಬೇಕೆಂದು ವಿಚಾರಿಸಿದಳೊಮ್ಮೆ. ಮತ್ತೆ ಏನು ತಿಳಿದಳೋ ಏನೊ? "ಅವಗ ಹೇಳಕ ಅವನರ ಯಾನ ಮಾಡಾವ ಇದಾ ಕೇಳಿ?" ಎಂದುಕೊಂಡು ಸುಮ್ಮನಾದಳು.

ಅಮಾವಾಸ್ಯೆಯ ದಿನ ಮುಂಜಾವಿನಿಂದಲೂ ಅಡಿಗೆಯ ಸಿದ್ಧತೆ ನಡೆ ದಿದ್ದಿತು. ಆದೇ ದಿನ ತಂದು ನೀರು ಎಸರು ಇಟ್ಟರು. ರತ್ನವ್ವ ಪೇಟಿಗೆ ಓಡಾಡಿ ಮಸಾಲೆ, ದೇವರಿಗೆ ಉಡಿತುಂಬುವ ಸಾಮಾನುಗಳನ್ನು ತಂದಳು. ಐದು ಸೇರಿನ ಅಡಿಗೆ; ನೆರೆಮನೆಯ ಒಂದಿಬ್ಬರು ಹೆಂಗಸರೂ ಅಡಿಗೆಗೆ ಬಂದಿ ದ್ದರು. ಎಲ್ಲ ಮಡಿಯಲ್ಲಿ ಆಗಬೇಕು. ತಾರಕ್ಕ ಅತ್ತೆಯ ಮನೆಯಲ್ಲಿ ದುಡಿದು ದುಡಿದು ಬಂದವಳೆಂದು, ರತ್ನವ್ವ ಮಗಳಿಗೆ ಮಡಿ ಉಟ್ಟುಕೊಳ್ಳಲಿಕ್ಕೆ ಕೊಡಲಿಲ್ಲ. ಅವಳು ಮನೆಯಲ್ಲಿ ಅಡ್ಡಾಡಿ ಚಿಕ್ಕಪುಟ್ಟ ಕೆಲಸಗಳನ್ನು ಮಾಡು

ತ್ತಲೇ ಇದ್ದಳು. ಆದರಲ್ಲಿಯೂ ಆಗಾಗ ಬಾಗಿಲ ಕಡೆಗೆ ಹೋಗಿ, ಯಾರೋ ಬರುವ ದಾರಿಯನ್ನು ನಿರೀಕ್ಷಿಸುತ್ತಿದ್ದಳು. ಹೊತ್ತೇರಿದಂತೆ ಅವಳ ಮನಸ್ಸಿನಲ್ಲಿ ಆತುರತೆ ಹೆಚ್ಚಾಗುತ್ತಲಿತ್ತು. ಬಾಗಿಲ ಹೊರಗೆ ಏನು ಸಪ್ಪಳವಾದರೂ ಓಡಿಹೋಗಿ ನೋಡಿಬರುವಳು. ಕೆಲಹೊತ್ತಿನ ಮೇಲೆ ಒಂದು ಗಾಡಿ ಬಂದು ಬಾಗಿಲಲ್ಲಿ ನಿಂತಿತು. ತಾರಕ್ಕ ಧಾವಿಸಿ ಬಂಡಿಯ ಬಳಿಗೆ ಹೋದಳು. ಮಲ್ಲನೂ ಹೋದ, ಗಂಟು ಇಳಿಸಿಕೊಳ್ಳಲೆಂದು. ಗಾಡಿಯಲ್ಲಿ ಸುಂದರವ್ವ ಒಬ್ಬಳೇ ಇದ್ದುದನ್ನು ಕಂಡು ತಾರಕ್ಕ "ಅಂತೂ ಬರಲಿಲ್ಲ ?" ಎಂದು ನಿರಾಶೆಯಿಂದ ಕೇಳಿದಳು.

"ಅವನ ಪರೀಕ್ಷೆ ಬಂದೀತಿ ಅಂತ, ಅದಕ ಬರಲಿಲ್ಲ ತಾಯಿ ಅಂವ" ಗಾಡಿಯಿಂದ ಇಳಿಯುತ್ತ ಸುಂದರವ್ವ ಹೇಳಿದಳು.

ತಾರಕ್ಕನ ಮುಖ ಬಾಡಿತು. ಎರಡು ಜೀವ ಚಿಕ್ಕಂದಿನಲ್ಲಿ ಕೆಲವು ಕಾರಣಗಳಿಂದ ಒತ್ತಟ್ಟಿಗೆ ಕೂಡಿ, ಒಂದೇ ಬಣ್ಣ ತಳೆದು, ಆಮೇಲೆ ಪರಸ್ಪರ ಪ್ರಕೃತಿಮಾನ, ಸುತ್ತಲಿನ ಪರಿಸ್ಥಿತಿ ಮತ್ತು ಅನುಭವಗಳಂತೆ ಬೇರೆಬೇರೆ ದಾರಿಯಲ್ಲಿ ಬಹುದೂರ ಸಾಗಬಹುದು. ಒಂದು ನಿಟ್ಟಿಗೆ ಸಾಗಿದ ದಾರಿಕಾರ ಕಟ್ಟಡವಿಯನ್ನು ಸೇರಿದಾಗ ಹಿಂದೆ ಹೊರಳಿ ನೋಡಿ ತಾನು ಹಾಯ್ದು ಬಂದ ದಾರಿಯಲ್ಲಿಯ ಸುಖಸೌಂದರ್ಯಗಳನ್ನು ನೆನೆದುಕೊಂಡು, ಆಗೊದಗಿದ ಕಟು ಅನುಭವವನ್ನು ಸವಿಮಾಡಿ ಸೇವಿಸಲಿಕ್ಕೆ ಸಾಧನವು, ಪರಸ್ಪರ ವಿರುದ್ಧವಾದ ಜೀವನ ಪಥದಲ್ಲಿಯ ಎರಡು ಜೀವಿಗಳ ಕೂಡುವಿಕೆಯು ಇರುತ್ತದೆ. ತಾರಕ್ಕ ಹರೆಯದ ಜೀವನವನ್ನು ಹಳ್ಳಿಯ—ಒಂದೇ ಪಾತ್ರದಲ್ಲಿ ಹರಿಯುವ—ವಾತಾವರಣದಲ್ಲಿ ಅತ್ತೆಯ ಮನೆಯ ಕಟು ಅನುಭವದಲ್ಲಿ ಕಳೆಯುತ್ತಿದ್ದರೆ ಅನಂತನು ಪಟ್ಟಣದ ವೈವಿಧ್ಯಪೂರ್ಣವಾದ ಸವಿಗನಸಿನ ಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದಾನೆ. ಆದರಿಂದ ಅವರಿಬ್ಬರ ಆಚಾರವಿಚಾರಗಳಲ್ಲಿ ದಿನದಿನಕ್ಕೆ ಅವರಿಗೆ ಗೊತ್ತಿಲ್ಲದೆಯೇ ಅಂತರ ಬೆಳೆಯುತ್ತ ನಡೆದಿದ್ದರೂ ತುಂಬಿದ ಕೆರೆಯ ನೀರು ಹೊರಬರಲು ದಾರಿಯನ್ನು ಹುಡುಕುವಂತೆ ತುಂಬಿದ ಹೃದಯದಲ್ಲಿನ ಸುಖದುಃಖ ಹೊರಗೆ ಪ್ರವಹಿಸಲು ಹವಣಿಸುವದು. ಅದಕ್ಕೆ ಯೋಗ್ಯವಾದ ದಾರಿ ಬೇಕು, ಪಾತ್ರ ಬೇಕು. ಆ ಪಾತ್ರ ತಾರಕ್ಕನಿಗೆ ಅನಂತ. ಆದರಿಂದ ಅವಳು ಅನಂತನ ದಾರೀ ಕಾಯುತ್ತಿದ್ದಳು. ಅದೂ ಸಫಲವಾಗದಿದ್ದುದಕ್ಕೆ

ತಾರಕ್ಕನ ಹೃದಯ ಇನ್ನಿಷ್ಟು ತುಂಬಿಬಂದಿತು.

ಆ ದಿನ ಇಳಿಹೊತ್ತಿನಲ್ಲಿ ಮಲ್ಲ ಹೂವಣ್ಣನನ್ನು ಕಂಡು "ಇಂದ ಸಂಜೀ ಮಾಡಿ ದೇವರ ಪ್ರಸಾದ ಜರಾ ತಗೊಂಡಬರಕ ಬಾ" ಎಂದು ಹೇಳಿದ.

"ಇನ್ನೂ ಯಾನ ತಗೋಳುದುಲ್ಲಾ ಯಾನ ಇಲ್ಲಾ. ಯಾತ್ಕ ಸುಮ್ನ? ಬಂದ್ಹಾಂಗ ಐತೆಲ್ಲ! ಮನೀ ಯಾನ ಹೊರಗಿಂದ ಐತಿ? ಎಲ್ಲಾರು ಬರತಾರಲ್ಲ" ತಂಬಾಕು ಸೇದಿ ಚಿಲುಮೆ ಕೊಡುತ್ತ ಹೂವಣ್ಣ ಹೇಳಿದ.

"ಯಾನ ತಗೋದಿದ್ದರೂ ಅನ್ನಾಸಾರಾ ಅಷ್ಟ ಯಾಕ ಆಗವಲ್ತು, ತಗೊಂಡು ಬಂದೀಯಂತ....ಬಾಯಿಗಿ ರುಚೀನೂ ಬರತೇತಿ. ಮೆಲ್ಲಕ ಕರ ಕೊಂಡು ಓದ ಉಣಿಸಿ ಹಚಕೊಡತ್ಯಾನು....ಎಲ್ಲಿಗಿ ಹೋಗೋದ ಏತಿ?"

"ನೋಡುಣು....ಬಂದ್ಯಾನಂತ....ಎಲ್ಲಾರದು ಆಗಾನಾ ಸಾವಕಾಸ!" ಅದೇ ಕಾಲಕ್ಕೆ ಚಿಮ್ಮವ್ವ ಹೊರಗಿನಿಂದ ಬಂದು.... "ಎಲ್ಲಿ ಹೋಗೋದ ಇಲ್ಲ ಯಾಕ? ಮಸ್ತ ಗೌಡರ ಕರೀತಾರೆ....ಸಮಾಜನವರ ಕರೀತಾರ, ನಾವೇ ಇನ್ನ ಎಲ್ಲಿ ಹಚಕೊಟ್ಟಿಲ್ಲ....ಮೊನ್ನಿ ಗೌಡರ ಜಬ್ರಿ ಮಾಡಿರೂ....ಹೋಗುಲ್ಲ ಆಗಾನಾ....ತುಂಬಿ ಕಳಸಿರ ಮನೀಗಿ....ಆದರ ಅದೂ ನಾವ ತಿನ್ನಾಕ ಕೊಡ ಲಿಲ್ಲ" ಎಂದು ಸ್ವಲ್ಪ ಸಿಡುಕಿನ ಸ್ವರದಲ್ಲಿ ಹೇಳಿದಳು. ನಮಗೂ ಬಹು ಜನರ ಸಹಾನುಭೂತಿಯಿದೆ, ಎಂದು ಹೇಳುವುದೆ ಆ ಮಾತಿನ ಮುಖ್ಯ ಭಾವ ವಾಗಿತ್ತು.

ಅದನ್ನರಿತೇ ಮಲ್ಲ ನುಡಿದ "ಅದಕ್ಯಾನವ್ವ; ನಾಲ್ಕ ಮಂದಿಗಿ ಬೇಕಾದ ಮ್ಯಾಲಿ, ಎಲ್ಲಾರು ಕೊಡತ್ಯಾನ ಅನ್ನವರಲ್ಲ....ನಮ್ಮ ಮನ್ಯಾಗಿಂದೂ ತುಂಬೀ ಕಳಸತಿದ್ದೇವ, ಆದರ ದೇವರ ಬಡ್ಯಾನ....ಮನೀ ಹೊರಗ ಒಯ್ಯೋದ ಇಲ್ಲಂತs. ಅದಕ ಅಲ್ಲೇ ಕರದ ಒಯ್ದು ಉಣಸೋದ...." ಎಂದು ಹೇಳಿ, ಮನೆಮಂದಿಗೆಲ್ಲ ಊಟಕ್ಕೆ ಆಮಂತ್ರಣ ಕೊಟ್ಟು, ಮತ್ತೊಮ್ಮೆ ಹೂವಣ್ಣನಿಗೆ ಊಟಕ್ಕೆ ಬರಲಿಕ್ಕೆ ಸೂಚಿಸಿ ಹೊರಟು ಬಂದ.

ಮಲ್ಲ ಹೋದ ನಂತರ ಚಿಮ್ಮವ್ವ ಹೂವಣ್ಣನಿಗೆ "ಯಾರ ಮನೇಗಿರೆ ತಿನಕ ಕರ್ಯೋದ ತಡಾ....ಹೊರಟ ನಿಲ್ಲತೀ, ಮನ್ಯಾಗ ಕೂಳ ಕಾಣಲದಂಗೆ.... ಹೋಗಿ ತಿಂದ ಬಂದ ಮನ್ಯಾಗ ಹಾಸಿಗಿ ಹಿಡಿದರ ಯಾರ ಉಸಾಬರಿ ಮಾಡಾ

ವರಾ....? ಈ ಕಡೆ ಉಸಾಬರಿ ಮಾಡಕ ಗಟ್ಟಿ ಇದಾರಂತ ತಿಳಕೊಂಡದಿ ಹೋಂದ....? ನಾಲ್ಕು ತಿಂಗಳ ಆಯ್ತು ಉಸಾಬರಿ ಮಾಡಿಮಾಡಿ ನಮ್ಮ ನಡಾ ಹೋಗೇತಿ...." ಎಂದು ಸಿಟ್ಟುಮಾಡಿದಳು.

"ಮತ್ತ ನಾಲ್ಕು ದಿನಾ ಆಯ್ತು ಕಾಲ ಹರೀಕ ಹಯ್ಯಾದವು. ಕೆಮ್ಮು ಹತ್ತೀತಿ. ಇನ್ನsನೇಟ ಇರೂತನಕಾ....ತಿಂದ ಬರತ್ಯಾನಲ್ಲ! ನಾಳಿ ಯಾನ ತಿನಕ ಹೋಗಾವ ಇದ್ಯಾನು ? ನಿನ್ನ ತವರಮನೀ ಏತಿ. ಇಂದಿಲ್ಲ ನಾಳಿ ನೀ ಹೋದೀ, ತಿಂದೀ" ಹೂವಣ್ಣ ನರಳುತ್ತ ಕಣ್ಣಲ್ಲಿ ನೀರು ತಂದು ನುಡಿದ.

"ಹೂಂ! ತವರಮನೀ ಅಂತ; ಅದ ಹೋಗಿ ವೈರಿ ಮನಿ ಆಗಿ ಕೂತೇತಿ ನನಗ....ನಾ ಸತ್ತಮ್ಯಾಲಿ ಅವನ ಮಗಳಗಿ ಸುಖಾ ಆಗೋದಂತ, ಎಂದ ಅಂದೀದಾ ಅಂದs ನನ್ನ ತವರಮನಿ ಹಾಳಾಗಿಹೋಯ್ತು...." ಎಂದು ಚಿಮ್ಮವ್ವ ಚಿಟಕಿ ಮುರಿದು, ನೆಲ ತಿಕ್ಕಿ "ಎಂದ ಇವರ ಮನಿ ಬಾಗಿಲ ಇಕ್ಕಿತ ಅಂತ ನಾ ಕೇಳ್ಯಾನು....?" ಎಂದು ಶಾಪವಿತ್ತಳು.

ಹೊತ್ತು ಮುಳುಗಲಿಕ್ಕೆ ಅಡಿಗೆಯೆಲ್ಲ ಸಿದ್ಧವಾಯಿತು. ಮಲ್ಲ ಕರೆವ್ವ ನಿಗೆ ಕರೀಸೀರಿ ಉಡಿಸಿದ. ಉಡಿಯಕ್ಕಿ ಹಾಕಿದ. ಮುಂದೆ ಅರಿವೆ ಹಾಸಿ, ಅದರ ಮೇಲೆ ಅನ್ನ, ಹೋಳಿಗೆಗಳ ರಾಶಿ ಹಾಕಿದರು. ಲಿಂಬಿಯ ಕಾಯಿಗಳ ಹೋಳು ಎರಡೂ ಮಗ್ಗಲು ಇಟ್ಟರು. ಆಮೇಲೆ ಧೂಪ ಹಾಕಿ ಕಾಯಿ ಒಡೆ ದರು. ರತ್ನವ್ವ.... "ನಮ್ಮವ್ವಾ, ತಾಯೀ ಬಾಯೀ ಮಗಳ ಜನ್ಮ ದಂಡಿಗಿ ಹಚ್ಚವ್ವಾ....! ಯಾನರ ತಪ್ಪಿದ್ದರ ನೋಡಕೋ ಅವ್ವ!" ಎಂದು ಬಾಯಲ್ಲಿ ಪುಟಪುಟಸುತ್ತ ದೇವಿಗೆ ನಮಸ್ಕಾರ ಮಾಡಿದಳು. ಮಗಳನ್ನೂ ಕರೆದು ನಮಸ್ಕಾರ ಮಾಡಿಸಿದಳು. ಅಂಗಾರ ಹಚ್ಚಿಕೊಳ್ಳಲಿಕ್ಕೆ ಹೇಳಿದಳು. ಮಲ್ಲನೂ ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಅವನು ಮಾತ್ರ ಮನದಲ್ಲಿಯೇ "ಮುಂದಿನ ವರ್ಷದೊಳಗ ಗಂಡ ಮಗಾ ಆಗಲಿ ಮಗಳಿಗಿ....ನಿನಗ ಮತ್ತ ಸೀರಿ ಉಡಸತ್ಯಾನು—" ಎಂದು ಬೇಡಿಕೊಂಡ, ದೇವಿಯ ಹತ್ತರ. ಇಷ್ಟೊತ್ತಿಗೆ ತಾಸೆರಡು ತಾಸು ರಾತ್ರಿಯಾಯಿತು. ಮಲ್ಲ ಓಣಿಯೊಳಗಿನ ಜನರನ್ನು ಊಟಕ್ಕೆ ಕರೆಯಲು ತೆರಳಿದ.

ಗಂಡಸರೆಲ್ಲ ಊಟ ಮಾಡಿ ಹೋದ ಮೇಲೆ ಕೊನೆಗೆ ಮಲ್ಲ ಹೂವಣ್ಣ

ನನ್ನು ಕರೆದುಕೊಂಡು ಬಂದ. ಹೂವಣ್ಣ ಮಲ್ಲ ಇಬ್ಬರೂ ಕೂಡಿಯೇ ಊಟಕ್ಕೆ ಕುಳಿತರು. ಹೂವಣ್ಣ ಬಾಯಿಗೆ ರುಚಿ ಹತ್ತಿತೆಂದು, ಸ್ವಲ್ಪ ಹುಗ್ಗಿ ಹೋಳಿಗೆ ತಿಂದ. ತಿನ್ನುವಾಗ "ಸತ್ತರೂ ಸಾಯವಲ್ಲಿನ್ಯಾಕ....ಐದಾರ ತಿಂಗಳಾಯ್ತು.... ಬೆಲ್ಲಾನ ತಿನ್ನೂಲ ಆಗಿನ್ನ, ಇಂದ ಮಾತ್ರ ತಿಂದ್ನಿ!" ಎಂದ.

ಅದಕ್ಕೆ ರತ್ನವ್ವ "ಯಾನ ಆಗ್ತೇತಿ ತಗೋ, ದ್ಯಾವರ ಪರಸಾದ ಏತಿ ಆಕಿ ಮ್ಯಾಲ ಭಾರಹಾಕಿ....ಹೊಡೀ ಎಲ್ಲಾ....!" ಎಂದು ಬೆಂಬಲವಿತ್ತಳು. ಅದರಿಂದ ಹೂವಣ್ಣ ದಿನಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ಊಟ ಮಾಡಿದ.

ಅಂದು ರತ್ನವ್ವ ಸ್ವತಃ ಹೋಗಿ, ಚಿಮ್ಮವ್ವನಿಗೆ ಎಷ್ಟು ಆಗ್ರಹ ಮಾಡಿ, ಕೈಹಿಡಿದು ಕರೆದರೂ ಅವಳು ಊಟಕ್ಕೆ ಬರಲಿಲ್ಲ. "ಮನೀ ಮುಂದೆಲ್ಲ ಬರಕ ಯಾನ ಮದಿವೀ ಮುಂಜೀ ಏತಿ....? ಆಯ್ತಲ್ಲ! ಮಾವ ಸೊಸಿ ಇಬ್ಬರ ಬಂದೀದಾರ ಸಾಕ" ಎಂದು ಹೇಳಿದಳು. ಅದರಂತೆ ಭರಮನಿಗೂ ಹೊತ್ತಿರು ವಾಗಲೇ ಊಟಕ್ಕೆ ಹಾಕಿ ಮಳಿಗೆಗೆ ಕಳಿಸಿಬಿಟ್ಟಿದ್ದಳು. ಅವನೂ ಊಟಕ್ಕೆ ಹೋಗುವ ಆತುರ ತೋರಿಸಲಿಲ್ಲ.

ಮುಂದೆ ಒಂದು ತಿಂಗಳವರೆಗೆ ಹೂವಣ್ಣ ನರಳುತ್ತ ತಿರುಗಾಡುತ್ತಿದ್ದ. ಆಮೇಲೆ ಮುಂಗಾರು ಮಳೆಯ ತಂಗಾಳಿಗೆ ಮತ್ತೆ ಹಾಸಿಗೆ ಹಿಡಿದ. "ಬೀಗನ ಮನೀಗಿ ಹೋಗಿ....ಉಂಡ ಬಂದಾವ....ಕಸಾರಕಿ ಕರಕೊಂಡ್ರ ಬಂದಿ; ಹೋಗಬ್ಯಾಡಾ ಅಂದರ ಕೇಳಲಿಲ್ಲ, ನನ್ನ ಮಾತ" ಎಂದು ಚಿಮ್ಮವ್ವ ಹದಿ ನಾರು ಸಲ ಹಂಗಿಸಿದಳು. ಹೂವಣ್ಣನಿಗಷ್ಟೇ ಹಂಗಿಸಿ ಸುಮ್ಮನಿರಲಿಲ್ಲ ಚಿಮ್ಮವ್ವ ಸೊಸಿಗೂ ಆಗಾಗ "ಕರದ ಓದ ಯಾನ ಹಾಕಿರೇ ನಮ್ಮವ್ವ! ನಾಲ್ಕಾರ ದಿನಾ ಚಲೋ ಇದ್ದರ ನೋಡುದ ಆಗಲಿಲ್ಲ ನಿಮಗಾ....?" ಎಂದು ಕುತ್ಸಿತ ಟೀಕೆ ಮಾಡುತ್ತಿದ್ದಳು.

ಈ ಮಾತು ಕೇಳಿದಾಗಲೆಲ್ಲ ತಾರಕ್ಕ ಕಣ್ಣೀರು ಕರೆಯದಿರುತ್ತಿರಲಿಲ್ಲ. ಅವಳು ನೊಂದುಕೊಂಡು "ನಮ್ಮ ಮ್ಯಾಲ ಇಲ್ಲದ ಒಂದ ಅಪವಾದ ಬರತೇತಿ ತಾಯಿ! ದೇವರ್‍ರ, ಇದೊಂದ ಸಾರೆ ನಮ್ಮ ಮಾವನಾ ಇದರೊಳಗಿಂದ ಉಗುಳಿ ಒಗಿಯಪ್ಪ!" ಎಂದು ಹಗಲಿರುಳೂ ಮನದಲ್ಲಿಯೇ ದೇವರಲ್ಲಿ ಮೊರೆಯಿಡು ತ್ತಿದ್ದಳು. ಆದರೆ ಹೂವಣ್ಣ ಈ ಸಲ ಮಳೆಗಾಲದಲ್ಲಿ ಉಳಿಯುವ ಲಕ್ಷಣ ವಿದ್ದಿಲ್ಲ.

ಹೂವಣ್ಣನಿಗೆ ಬೇನೆ ಬಲಿಯುತ್ತ ನಡೆದಂತೆ ಚಿಮ್ಮವ್ವನ ಮನದಲ್ಲಿಯೂ ಸಂಶಯ ಬೆಳೆಯುತ್ತ ಹೋಯಿತು. ತನ್ನ ಗಂಡನಿಗೆ ಏನಾದರೂ ಮಾಡಿರುವರೆಂದೇ ಅವಳು ಭಾವಿಸುವಳು. "ಅಂವ ಒಬ್ಬ ಬೆಚ್ಚದ ಹಂಗ ಕೂತ ಇದಾನ ಅಂತ....ಎಲ್ಲಾ ನಂದ ನಡೀತೇತಿ....ನಾಳೀ ಅವನ್ಯಬಿದ್ದ ಹೋದ ಅಂದರ.... ನನ್ನ ಯಾರ ಕೇಳತಾರು ?" ಎಂಬ ವಿಚಾರ ಬಂದೊಡನೆಯೆ ಆ ಅನುಮಾನ ಮತ್ತಿಷ್ಟು ಬಲಗೊಳ್ಳುವುದು. ಹೀಗಾಗಿ ಅವಳೂ ಒಂದು ದಿನ ಪಂಡಿತನ ಹತ್ತಿರ ಕೇಳಿ ಬರಬೇಕೆಂದು ಹೋದಳು. ಪಂಡಿತ—ದೇವೇಂದ್ರ—ಆತನ ಹೆಸರು. ಇದೀಗ ಮಧ್ಯಾಹ್ನದ ನಿದ್ರೆಮಾಡಿ ಎದ್ದು ಕುಳಿತಿದ್ದ. ಚಿಮ್ಮವ್ವ ಬಾಗಿಲಲ್ಲಿ ಬಂದೊಡನೆಯೇ "ಬಾ ಚಿಮ್ಮವ್ವ ! ಬ್ಹಾಳ ದಿನಕ ಬಂದಿ ?" ನಸುನಗೆಯೊಡನೆ ಸ್ವಾಗತಿಸಿದ, ದೇವೇಂದ್ರ ಪಂಡಿತ.

ಚಿಮ್ಮವ್ವ ಒಳಗೆ ಬರುತ್ತ "ಪಂಡಿತರ ಕಡೆ ಯಾನರ ಕೆಲಸ ಇರಾನನ್ಯ ಬರೋದಲ್ಲ. ಇಲ್ಲದೀರ ಯಾತಕ ಬರೋದ....?" ಪಡಸಾಲೆಯಲ್ಲಿ ಬಂದು "ಜರಾ ಹೊತ್ತಿಗೆ ತಗೀರಿ !" ಎಂದು ಹೇಳಿದಳು.

ದೇವೇಂದ್ರ ಹೊತ್ತಿಗೆಯ ಗಂಟು ತಂದು, ಮುಂದಿಟ್ಟುಕೊಂಡು, ಏನೋ ಮಂತ್ರ ಬಾಯಲ್ಲಿ ಪುಟುಪುಟಿಸಹತ್ತಿದ. ಚಿಮ್ಮವ್ವ ಕೂತ ಸ್ಥಳದಿಂದ ಎದ್ದು ಮುಂದೆ ಹೋಗಿ, ಒಂದು ದುಡ್ಡು ಇಟ್ಟು, ನಮಸ್ಕಾರ ಮಾಡಿ, ಹಿಂದೆ ಸರಿದು ಸಮೀಪದಲ್ಲಿಯೇ ಕುಳಿತಳು. ಸ್ವಲ್ಪ ತಡೆದು, ಪಂಡಿತ ಹೊತ್ತಿಗೆಯ ಗಂಟು ಬಿಚ್ಚಿದ ಮೇಲೆ "ಛಲೂ ನೋಡಿ ಹೇಳ ನಮ್ಮಪ್ಪ ! ಕೈಜೋಡಸತ್ತ್ಯಾನು.... ನಮ್ಮಾವಗ ಮುಗದುಮರಲ್ಲಿ ಉಂಡ ಬಂದಾಗಿಂದು....ಬ್ಯಾನಿ ಹೆಚ್ಚ್ಯ ಆಗೇತಿ ಯಾರ ಯಾನ ಮಾಡಿದಾರ್‍ಯಾನ....ನೋಡಿ ಹೇಳರಿ !" ಚಿಮ್ಮವ್ವ ಸೂಚಿಸಿದಳು.

ದೇವೇಂದ್ರ ಎಲ್ಲ ಲಕ್ಷ್ಯಗೊಟ್ಟು ಕೇಳಿಕೊಂಡ. ನಾಲ್ಕಾರು ಸಲ ಕವಡಿ ಹಾರಿಸಿ ಒಗೆದ. ಏನೋ ಗುಣಗುಣಿಸಿ ಲೆಕ್ಕಮಾಡಿದ. ಕೊನೆಗೆ ಚಿಮ್ಮವ್ವನ ಕೈಯಲ್ಲಿ ಒಂದು ಕಡ್ಡಿಯನ್ನು ಕೊಟ್ಟು ಹೊತ್ತಿಗೆಯಲ್ಲಿ ಸೇರಿಸಲು ಹೇಳಿದ. ಅವಳು ಭಯಭಕ್ತಿಯಿಂದ ಕಡ್ಡಿ ಹಾಕಿದ ಪುಟವನ್ನು ತೆಗೆದು ನೋಡಿದ. ಸ್ವಲ್ಪ ಹೊತ್ತು ಕೂತು ವಿಚಾರಿಸಿ.... "ಒಬ್ಬಾಕಿ ಮುತ್ತೈದಿ

ಹೆಂಗಸ ಮಾಡಿದ ಐತಿ...." ಎಂದು ನುಡಿದ. ಚಿಮ್ಮವ್ವನ ಅನುಮಾನ ಸತ್ಯವಾಯಿತು. ಭಕ್ತಿಯಿಂದ ತಲೆದೂಗಿದಳು. ಪಂಡಿತನ ಮಾತಿಗೆ. ಆಮೇಲೆ ಮೆಲ್ಲಗೆ ಕೇಳಿದಳು. "ಅದಕ ಯಾನರ ಮಾಡಕ ಬರೂಹಂಗ ಇದ್ದರ ಹೇಳ್ರೆಲ್ಲ!"

ದೇವೇಂದ್ರ ತುಸು ಯೋಚಿಸಿ...."ಮಾಡಕ ಬರತೇತಿ: ಆದರ ಜರಾs ಖರ್ಚ ಬರತೇತಿ...." ಎಂದು ಹುಬ್ಬೇರಿಸಿ ನುಡಿದು, ಬಲೆಯನ್ನು ಬೀಸಿದ ಪಂಡಿತ.

"ಖರ್ಚಿಗಿ ಅಂಜಬ್ಯಾಡರಿ ನೀವ; ಯಾನ ಹತ್ತಿದ ಹತ್ತಲಿ! ನಾ ಕೊಡತ್ಯಾನ....ನೀವ ಕೊಡರಿ ಮಾಡಿ...." ಎಂದು ಕೇಳಿಕೊಂಡಳು.

"ಯಾನ ಮಾಡೋದಾ........? ಶಾಸ್ತ್ರಪ್ರಕಾರ ಶಾಂತಿಕ ಮಾಡತ್ಯಾನು....ಉಳದವರ ಹಂಗ....ಕರಿಸೀರಿ ಉಡಸು....ದೆವ್ವಿಗಿ ಮಾಡು, ಸರವತ್ತಿನ್ಯಾಗ ಮಂದಿಗಿ ತಿನಸು....ಅಂತ ನಾ ಯಾನ ಹೇಳಾಂವ ಅಲ್ಲ. ನೆಟ್ಟಗ ಪದ್ಮಾವತಿ ಪ್ರತಿಷ್ಠಾ ಮಾಡಿ ತಾಯಿತಾ ಮಾಡಿ ಕೊಡತ್ಯಾನ. ಓದ ಹೂವಣ್ಣನ ಬಲಕಿನ ರಟ್ಟ್ಯಾಗ ಕಟ್ಟ ಅಂದರ ಆಯ್ತು" ಎಂದು ಹೇಳಿದ.

ಚಿಮ್ಮವ್ವ ಮತ್ತೊಮ್ಮೆ ಕೈಮುಗಿದು "ಅಷ್ಟ ಮಾಡಿಕುಡ ನಮ್ಮಪ್ಪ! ಯಾನ ಒಂದ್ಯಾಡ ರೂಪಾಯಿ ಹತ್ತಿರು ತಗೊ!" ಬೇಡಿಕೊಂಡಳು.

"ಯಾನ ಕಾಳಜಿ ಮಾಡಬ್ಯಾಡ ನೀ....ನಾ ಎಲ್ಲಾ ಮಾಡಿಕೊಡತ್ಯಾನು....ಅವನ ಕೂದಲ ಎಳೀಗಿ ಧಕ್ಕಿ ಹತ್ತುಗುಡುದಲ್ಲ; ಪೂಜಿ ಸಾಮಾನು ತಂದ ಕೊಡು....ಇಲ್ಲಾದರ....ನನ್ನ ಕಡೇನ ಸವ್ವಾ ಎರಡ ರೂಪಾಯಿ ತಂದ ಕೊಡು....ನಾ ಎಲ್ಲಾ ತೀರಿಸಕೋಡತ್ಯಾನು...."

ರೂಪಾಯಿಗಳನ್ನು ತಂದುಕೊಡುವದಾಗಿ ಹೇಳಿ, ಚಿಮ್ಮವ್ವ ಎದ್ದು ನಡೆದಳು. ಒಳಗಿನಿಂದ ದೇವೇಂದ್ರ ಪಂಡಿತನ ಹೆಂಡತಿ "ಬಾರಾಕs ಚಿಮ್ಮಾ" ಎಂದು ಕರೆದಳು.

"ಹೋಗತ್ಯಾನಲ್ಲ...., ಸಂಜಿ ಆಗತೇತಿ...."

"ಆಗಲಿ ಬಾ, ಈಗ್ಯಾನ ಮನ್ಯಾಗ ಸೊಸೀ ಬಂದಾಳ....ಮಾಡತಾಳ"

ಎಂದು ಕೆಣಕುಸ್ವರದಲ್ಲಿ ಮರುದೇವಿ—ಪಂಡಿತನ ಹೆಂಡತಿಯ ಹೆಸರು—ನುಡಿದಳು.

ಚಿಮ್ಮವ್ವ ಒಳಗೆ ಹೋಗುತ್ತ "ಹೂಂ! ಮನ್ಯಾಗ ಸೊಸಿ ನೋಡ ಕೋತಾಳ! ಹೇಳಿ ಮಾಡಸದ ಹೊರತ....ಯಾನ ನಡಿದುಲ್ಲ....ಅವರಿಗಿ ಹೇಳೋದಕ್ಕಿಂತಾ ತಾವs ಮಾಡೋದ ಇನ್ನs ಛಲೂ....!" ಎಂದಳು.

"ಅದ್ಯಾಕ ತಗೋ! ಈಗಿನ ಪೋರಿಗೋಳ....ಎಂಥಾದ ಮಾಡತಾವ....ಆಜುಬಾಜು ಸೊಸಿದೇರನ್ನ....ನೋಡಿಲ್ಲ....ನೀ....? ನಿಮ್ಮಕ್ಕೇ ಒಂದ...."

"ಎಲ್ಲಾ ಒಂದ ನಮ್ಮ ನಸೀಬದಾಗ ಬೇಕಲ್ಲ...." ಎಂದು ಚಿಮ್ಮವ್ವ ನಡುವೆಯೇ ಮಾತು ಸೇರಿಸಿದಳು.

ಮರುದೇವಿ ಗಲ್ಲದ ಮೇಲೆ ಬೆರಳಿಟ್ಟು, ಬೆರಗುದನಿ ತೆಗೆದು...."ಹೂಂ! ಹುಚ್ಚವ್ವ! ಹಳೀಮಂದಿ ನೀವ....ನಿಮಗ ಯಾನ ತಿಳೀತೇತಿ? ನಸೀಬದಾಗ ಇಲ್ಲಂತ ಹೇಳತ ಕೂಡರಾವರ ಆಯ್ತು...." ಸ್ವಲ್ಪ ತಡೆದು...."ಹೋಂದ ಚಿಮ್ಮಾ....ನಿನ್ನ ಬೀಗತಿಗಿ ಯಾನ ಊರಾಗ ಪಂಡಿತರs ಇಲ್ಲ ಆಗಿರಯಾನ....? ಪರವೂರಿಗಿ ಹೋಗಿ ಕೇಳಿ ಬಂದ ದ್ಯಾವರಿಗಿ ಮಾಡಲಾಕ, ಅಂಥಾದ ಯಾನರ ಆಗೇತಿ....ನಿನ್ನ ಸೊಸಿಗೆ....?" ಎಂದು ಕೇಳಿದಳು.

ಚಿಮ್ಮವ್ವ ಏನೋ ಹೇಳಬೇಕೆಂದಿರುವಲ್ಲಿ ಮರುದೇವಿಯೇ ಮುಂದೆ.... "ಮಾಡೋದ ಮಾಡಿದಾರು, ಊರಾಗಿನ ಪಂಡಿತನಾರೇ....ಒಬ್ಬನ ಕರೀ ಬಾರದು ಉಣ್ಕ....?" ಕೈಮಾಡಿ "ನಾವೆಲ್ಲ ಹೋಗಕ ನಿಂತದ್ನೀವ ಬಿಡ ಸರವತ್ತಿ ನ್ಯಾಗ....? ನಮ್ಮ ಗನಸರ, ಹೊತ್ತ ತಾಯಿ ಹೊಟ್ಯಾಗ ಹೋದಮ್ಯಾಲ.... ಬಾಯಾಗ ನೀರ ಹಾಕೂಲ್ಲ...ಮೊದಲ.... ಅದರ ರೀತಿ....ಏತ್ಯಲ್ಲ?" ಎಂದಳು ಮರುದೇವಿ. ಮಗದುಮರು ಊಟಕ್ಕೆ ಕರೆಯದಿದ್ದುದಕ್ಕೆ ಈ ಎಲ್ಲ ಮಾತು ಗಳು, ಎಂಬ ಸಂಶಯು ಚಿಮ್ಮವ್ವನಿಗೆ ಬಾರದಂತೆ.

"ನಿಮಗ ಕರೀಲಿಲ್ಲಾ?" ಬಾಯ್ದೆರೆದು ತುಸು ನಿಂತು...."ನಾ ಯಾನ ಹೋಗಲಿಲ್ಲ ತಾಯಿ! ಮೂರ ಮೂರ ಸಾರೆ ಬಂದ ಹೋದರ ಕರೀಕ...." ಎಂದು ಚಿಮ್ಮವ್ವ ಆಢ್ಯತೆಯಿಂದ ಹೇಳಿದಳು.

"ಹೋಗಲಿಲ್ಲ ನೆಟ್ಟಗಾಯ್ತು ಎಳ; ಹೋದಾಂವ ಯಾನ ಸುಖಾ ಉಣಕ ಹತ್ತೀದಾ....?" ಎಂದಳು ಮರುದೇವಿ.

# ೧೦

ಇದೀಗ ಹೂವಣ್ಣನ ಅಂತ್ಯಕ್ರಿಯೆಯನ್ನು ತೀರಿಸಿ ಬಂದರು. ಮುಂಜಾನೆಯ ವೇಳೆಯಾದುದರಿಂದ ಸಾಕಷ್ಟು ಜನರು ಕೊನೆಯ ಸಂಸ್ಕಾರಕ್ಕೆ ಕೂಡಿದ್ದರು. ಭರಮು ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಅವನನ್ನು ಮಲ್ಲ ರಟ್ಟೆ ಹಿಡಿದು ಮೆಲ್ಲಗೆ ಮನೆಯೊಳಗೆ ಕರೆದು ತಂದ. ಹೂವಣ್ಣ ಮಲಗಿದ ಸ್ಥಳವನ್ನು ಸಾರಿಸಿ, ಅಲ್ಲಿ ತುಂಬಿಟ್ಟ ತಂಬಿಗೆಯಲ್ಲಿ ದಹನ ಕ್ರಿಯೆಗೆ ಹೋದವರೆಲ್ಲ ಕೈಯಲ್ಲಿ ತಂದ ಹರಳು ಕರಕಿಯನ್ನು ಹಾಕಿ, ತಮ್ಮ ತಮ್ಮ ಮನೆಗೆ ನಡೆದರು. ಪಡಸಾಲೆಯಲ್ಲಿ ಚಿಮ್ಮವ್ವ ಕುಳಿತಿದ್ದಳು. ಹತ್ತಿರದಲ್ಲಿಯೇ ಅವಳನ್ನು ಹಿಡಿದುಕೊಂಡು ರತ್ನವ್ವ ಕುಳಿತಿದ್ದಳು. ಮತ್ತೊಂದು ಮೂಲೆಯಲ್ಲಿ ತಾರಕ್ಕ ಕುಳಿತಿದ್ದಳು. ಅಕ್ಕಾತಾಯಿ ಹೆಣ್ಣುಮಗಳಾದುದರಿಂದ, ಅವಳಿಗೆ ಮೈಲಿಗೆ ಇಲ್ಲವೆಂದು ಒಳಮುಗ್ಗಲು ಕುಳಿತಿದ್ದಳು. ಒಂದಿಬ್ಬರು ನೆರೆಮನೆಯ ಹೆಂಗಸರು ಒಳಗೆ ಕೆಲಸ ಮಾಡುತ್ತಿದ್ದರು. ಅವರ ಮೇಲ್ವಿಚಾರಣೆಗೆಂದೇ....ಅಕ್ಕಾತಾಯಿ ಒಳಮುಗ್ಗಲು ಇದ್ದುದು.

ಭರಮು ಎದುರಿಗೆ ಬಂದೊಡನೆಯೆ ಚಿಮ್ಮವ್ವ ದೊಡ್ಡ ದನಿ ತೆಗೆದು, "ಸುಟ್ಟ ಬೂದಿ ಮಾಡಿ ಬಂದ್ಯಾನಪ್ಪ, ನಿಮ್ಮಪ್ಪನಾ....? ಅಯ್ಯೋ ನನ್ನ ಅರಸ....ನನ್ನ ಕುಂಕುಮ ಧೊರೀ....ನನ್ನ ಮಂಗಳಸೂತ್ರಾ....ನನ್ನ ಭಂಗಾರ.... ನನ್ನ ಸಡಗರಾ....ನನ್ನ ಸಿಂಗಾರಾ....ಎಲ್ಲಿ ಅಡಗಿದ್ಯೋ...." ನಡುವೆ ಉಸಿರು ತಕ್ಕೊಂಡು...."ಭಗವಂತಾ....ಇಂಥಾ.... ರೂಪಾ.... ತಂದಿಟ್ಟೆ ನನಗಾsss.... ಆ್ಹಾ! ಆ್ಹಾ!....ಅಯ್ಯೋ! ಅಯ್ಯೋ....ಹಯ್ಯೋ....ೞೞೞ........" ಎಂದು ಬೋರ್ಯಾಡಿ ಅಳಹತ್ತಿದಳು.

ರತ್ನವ್ವ ಅವಳನ್ನು ಅಪ್ಪಿಕೊಂಡು, "ಬಾಯಿಲೆ ಹೇಳಿನ್ನ, ಹೋದಲ್ಲ. ನಿನ್ನ ಅರಸ....ಇನ್ನೆಲ್ಲಿಂದ ಬಂದಾ....? ಇರೂ ತನಕಾ ನಿಂದs ಇತ್ತಲ್ಲ.... ಸಡಗರ...." ತನ್ನ ಕಣ್ಣೀರು ಒರಿಸಿಕೊಂಡು "ಅವನ ಗೂಡಾನ ಹೋಯ್ತು ನಿನ್ನ ಐಸಿರಿ....ಇನ್ನ ಹ್ಯಾಂಗ ಬಂದೋತು....? ಅತ್ತರೂ ಇಲ್ಲಾ, ಕರೆದರೂ ಇಲ್ಲಾ....ಬರಬಾರದ ಹಾದಿಗಿ ಹೋದ ಅಂವ...." ಎಂದು ಸಮಾಧಾನ ಹೇಳುತ್ತಿದ್ದಳು.

"ಅಯ್ಯೋ ಹೋದನ ನನ್ನರಸ! ಅರಸ....ಅಯ್ಯೋ....ಅಯ್ಯೋ...."

"ಹೋದಲ್ಲ; ಅಲ್ಲಿ ಬೇಕಾಗಿದ್ದ ಅಂವ........ಹೋದಾ........ಇಲ್ಲಿಯೂ ಬ್ಯಾಡಾ ಅಲ್ಲಿಯೂ ಬ್ಯಾಡಾ....ಆದ ಪಾಪಿಗೋಳನಾ ಯಾತಕ ಓದಾ.... ದ್ಯಾವರ....?" ಎಂದು ಒಳಗೆ ಬರುತ್ತ ಅಣ್ಣತಮ್ಮರ ಹೆಂಗಸೊಬ್ಬಳು ಶಾಂತಿ ವಚನ ಸಾರಿದರು.

ಅದಕ್ಕೆ ರತ್ನವ್ವ "ಹೋಂದವ್ವ! ನನ್ನ ಬೀಗ ಎಲ್ಲಾರಿಗ್ಯೂ ಬೇಕಾ ಗಿದ್ದವ್ವ? ದೇವರ ಇನ್ನೊಂದು ನಾಲ್ಕ ದಿನಾ ಇಡಲಿಲ್ಲ...." ಗೋಣು ತೂಗುತ್ತ "ನನ್ನ ಮಗಳ ಬಸರ ಆದ್ದ ಕೇಳೇರ ಸಾಯಿತ್ಯಾನ ಅಂತಿದ್ದ ತಾಯೀ...." ಎಂದು ಅಳಹತ್ತಿದಳು.

ಚಿಮ್ಮವ್ವ, ರತ್ನವ್ವನಿಗಿಂತ ಹೆಚ್ಚು ದನಿತೆಗೆದು ಅಳಹತ್ತಿದಳು.

ಅಲ್ಲೇ ದೂರದಲ್ಲಿ ಕಂಬಕ್ಕೆ ಆನಿಸಿ ನಿಂತ ಚಾಂಗಲವ್ವ "ಯಾನ ಹುಚ್ಚವ್ವ ನೀ ರತ್ನಾ, ಆಕೀನಾ ರಮಿಸೋದ ಬಿಟ್ಟ ನೀನ ಹೀಂಗ ಅಳಕ ಹತ್ತಿರ....ಹ್ಯಾಂಗ....?" ಚಿಮ್ಮವ್ವನನ್ನು ಉದ್ದೇಶಿಸಿ...."ಹೋದವರ ಸುಖ ದಾಗ ಹೋದರ ಅನ್ನೋದ....ಕಿವೀಲೆ ಒಂದ ಕೆಟ್ಟ ಕೇಳಲಿಲ್ಲಾ....ऽ ಒಂದ ಕೆಟ್ಟ ನೋಡಲಿಲ್ಲಾ....! ನೋಡಿಲ್ಲ? ಈಗ ಎಂಥಾವ ದಿವಸ ಬಂಯ್ದಾವ.... ಹೋದಾವರ ಪುಣ್ಯವಂತರ ಎಲ್ಲಾರು........ಯಾವಾಗಾದರೂ ಒಮ್ಮಿ ಹೋಗೋದಾ........ಒಬ್ಬರ ಮುಂದ, ಒಬ್ಬರ ಹಿಂದ. ಇಲ್ಲಿ ಯಾರ ಇರ್ಕ ಬಂದಿಲ್ಲ....ನಾವ ಇದೇವಲ್ಲ....ಕರ್ಮಿಷ್ಟಿಗೋಳ....ಇನ್ನ. ನೀ ಅತ್ತ ಅವನಾ ಪಾಪದಾಗ ಹಾಕಬ್ಯಾಡ, ಇನ್ನ ಮ್ಯಾಲ. ಕೇಳಿಲ್ಲಾ? ನೇಮಿನಾಥಸ್ವಾಮಿ ಹದಿನಾರ ವರ್ಷದಾಂವ ಇರತಾನs ದೀಕ್ಷಾ ತಗೊಂಡ ಹೋದ....ಅವನ ಹ್ಯಾಂತಿ ಯಾನ ಮಾಡಬೇಕು....? ನಿಮ್ಮದ. ಅರ್ಧಾ ಜನ್ಮರ ಆಗೇತಿ...." ಎಂದು ಸಾಂತ್ವನ ವಚನಗಳನ್ನಾಡಿದಳು.

ಅಲ್ಲೇ ಒತ್ತಟ್ಟಿಗೆ ಕುಳಿತು, ತಾರಕ್ಕ ಮುಳುಮುಳು ಅಳುತ್ತಿದ್ದಳು. ಇವರಂತೆ ಅವಳಿಗೆ ದನಿ ತೆಗೆದು ಅಳಲು ಬರುತ್ತಿರಲಿಲ್ಲವೇನೊ! ಅದಕ್ಕಾ ಗಿಯೇ ಅವಳ ಕಡೆಗೆ ಹೆಂಗಸರು ಹೋಗುವುದು ಕಡಮೆ. ಬಂದವರೆಲ್ಲ ಚಿಮ್ಮವ್ವನ ಹತ್ತಿರವೇ ಕುಳಿತು ಸಮಾಧಾನಪಡಿಸುವರು. ಪಂಡಿತರ

ದೇವೇಂದ್ರಪ್ಪನ ಹೆಂಡತಿಯೊಬ್ಬಾಕೆ ಮಾತ್ರ ತಾರಕ್ಕನ ಹತ್ತಿರ ಬಂದು, "ಆಗೋದೆಲ್ಲಾ ಛಲೋಕ ಆಗತೇತಿ ಏಳವ್ವ....ತಾರಾ...." ಎಂದು ಕೊಂಕು ನುಡಿ ಆಡಿದಳು.

ತಾರಕ್ಕ ಅದಕ್ಕೆ ಏನೂ ಹೇಳದೆ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಅದಕ್ಕೆ ಏನು ಹೇಳಬೇಕೆಂಬುದೂ ಅವಳಿಗೆ ತಿಳಿಯಲಿಲ್ಲ. ಅಷ್ಟು ಶೋಕದಲ್ಲಿ ಮುಳುಗಿಹೋಗಿದ್ದಳಾಕೆ. ಆದರೆ ಚಿಮ್ಮವ್ವ ಮಾತ್ರ ಆ ಮಾತಿನ ಅರ್ಥವನ್ನು ಗಮನಿಸಿ ಕೂಡಲೆ........"ಆಕೀ ಮನಸಿನ ತೆಕ್ಕಾ ಆಯ್ತುವ್ವಾಽಽ........ ಆರೋಸಿ ಇಟ್ಟರವ್ವ........ನನ್ನ ಅರಸನಾ........ನನ್ನ ಪಕ್ಕಾ ಕಿತ್ತಿದಂಗ ಆಯ್ತುವ್ವ....?" ಎಂದು ದನಿ ತೆಗೆದು ಅಳಹತ್ತಿದಳು. ರತ್ನವ್ವ ದಿಗಿಲುಗೊಂಡಳು. ಆದರೂ ಚಿಮ್ಮವ್ವನನ್ನು ಸಮಾಧಾನಗೊಳಿಸುತ್ತ ಕೊಂಚ ವಿಚಾರಿಸಿದಳು. ತಾರಕ್ಕ ಅಳದಿದ್ದಕ್ಕೆ ಚಿಮ್ಮವ್ವ ಹೀಗೆನ್ನುವಳೆಂದು ಭಾವಿಸಿದಳು. ಸ್ವಲ್ಪ ಕಾಲ ಕಳೆದನಂತರ ತಾರಕ್ಕನ ಸಮೀಪಕ್ಕೆ ಹೋಗಿ, ಅವಳ ಗದ್ದವನ್ನು ಹಿಡಿದು, ಒಳ್ಳೇದನಿ ತೆಗೆದು, "ಇನ್ನೆಲ್ಲಿ ನಿನ್ನ ಮಾವ ಬಂದಾನವ್ವ? ಇನ್ಯಾರ ನಿನ್ನಾ ತಾರಾ ಅಂತ....ಮಾಯೇಲೆ ಕರೀತಾರವ್ವ, ಅತ್ತೀಮನ್ಯಾಗ? ....ಇನ್ಯಾರಿಗೆ ಹಾಸಿಗಿ ಹಾಸಿ ಕೊಡತಿಯವ್ವ....ದಿನಾ!" ಎಂದು ಅಳುತ್ತ ಮಗಳಿಗೆ ಅಳುವ ಪಾಠ ಕಲಿಸತೊಡಗಿದಳು. ಆಗ ಬರು ಹೋಗುವ ಹೆಂಗಸರಲ್ಲಿ ಒಬ್ಬಿಬ್ಬರು ಅತ್ತ ಗಮನಕೊಟ್ಟರು.

ಮಧ್ಯಾಹ್ನವಾಯಿತು. ನೆರೆಹೊರೆಯವರು ಮೊಸರನ್ನ ತಂದು ಊಟಕ್ಕೆ ಎಬ್ಬಿಸಿದರು. ಆಗಿಷ್ಟು ರೋದನ ಹೆಚ್ಚಾಗಿ ನಡೆಯಿತು. ಕೈ ಹಿಡಿದು ಎಬ್ಬಿಸಲು, ಎಡೆಯ ಮೇಲೆ ಕುಳಿತಿದ್ದರು....ಆಮೇಲೆ ಬಿಸಿಲು ವೇಳೆಯಲ್ಲಿ ಬರು ಹೋಗುವ ಜನರಿಷ್ಟು ಕಡಮೆಯಾಗಲು, ರತ್ನವ್ವ ತಮ್ಮ ಮನೆಯ ಕಡೆಗೆ ನಡೆದಳು, ದನಕರಗಳ ಮೇವಿನ ವ್ಯವಸ್ಥೆ ನೋಡಬೇಕೆಂದು. ಹಾದಿಯಲ್ಲಿ ಪಂಡಿತರ ದೇವೇಂದ್ರನ ಹೆಂಡತಿ ದೊರಕಿದಳು. ಆಕೆಯೋ "ಈಗ ಮನೀಕಡೆ ನಡದಿ....?" ಎಂದು ರತ್ನವ್ವನಿಗೆ ಕೇಳಿದಳು

"ಹೋಂದ, ಹರಿವತ್ತಿಂದೂ ಅಲ್ಲೇ ಇದ್ದೈ....ಅವಂಗ ಮನೀಕಡೆ ಬರಕ ಬರೂದುಲ್ಲ; ನಾನ್ಯ ಜರಾ ಹೋಗಿ ದನೀಗಿ ನೀರ ಕುಡಸಕ ಹೇಳಿ, ಬರ್ತ್ರೈನ...." ಅತ್ತಿಂದ ಚಾಂಗಲವ್ವ ಬಂದು...."ಬೇಕಲ್ಲವ್ವ....ಮಾಡಕ,

ಸತ್ತಾವರ ಸತ್ತಹೋದರು....ಹಿಂದ ಇದ್ದಾವರ ಯಾನ ಅವರುಗೂಡಾ ಸಾಯೋದ ಏತಿ....? ಹ್ಯಾಂಗರ ಹಿಂದ ಜನ್ಮಾ ಮಾಡಕಬೇಕಲ್ಲ!" ಎಂದಳು.

"ಇನ್ನs ಹುಡುಗ ಹುರುಟ; ನಾಲ್ಕು ಒಪ್ಪತ್ತು ಹಾಸಿಗಿ ಮ್ಯಾಲ ಕೂತ ಇದ್ರೂ....ಒಂದ ಆಧಾರ ಇತ್ತು...." ಎಂದಳು ರತ್ನಾ.

"ಅದೆಲ್ಲಾ ಖರೇ....ಆದರ ಎಲ್ಲೀದ ತರತಿ....? ಮಾಡಿದ ಕರ್ಮ ಭೋಗಸಕ ಬ್ಯಾಡಾ....! ಒಳ್ಳೊಳ್ಳೆ ಸ್ವರ್ಗದಾಗಿನ ಇಂದ್ರ ಚಂದ್ರರಿಗಂದರ ಕರ್ಮ ಬಿಟ್ಟಿಲ್ಲ! ನಾವ ಯಾವ ಗಿಡದ ತೊಪ್ಪಲ?....ನಮ್ಮಾವ...."

ಚಾಂಗಲವ್ವನ ಮಾತನ್ನು ನಡುವೆಯೇ ತಡೆದು "ಹಿಂದ ಇದ್ದಾವರಿಗಿ ಯಾನ ಆಗುದುಲ್ಲ. ಹ್ಯಾಂಗಾದರೂ ನಡೀತೇತಿ....ಸತ್ತಾವರ ಬಾಯಾಗs ಮಣ್ಣ ಬಿತ್ತ....ಪಾಪ ಇಷ್ಟ ದಿನಾ ದುಡದ ದುಡದ ಮುಪ್ಪ ಆದ. ಇನ್ನsರ ನಾಲ್ಕು ದಿನಾ....ಕೂತ ತಿನ್ನಾವವ್ವ! ಅಷ್ಟುರಾಗ ದ್ಯಾವರ ಕಟ್ಟಿಕೊಂಡ ಹೋದಾ...." ಎಂದಳು ಮರುದೇವಿ.

"ಯಾನ ಮಾಡೋದೇತಿ, ದ್ಯಾವರ ಕರ್‍ಯಾನದ ಮುಂದ....?" ರತ್ನವ್ವನ ಕಣ್ಣೀರಿನೊಡನೆ ಬಂದ ಮಾತಿದು.

"ಎಂಥಾ ಹಾಲಿನಂಥಾ ಮನಸ್ಯಾ ನೋಡ.... ನಾಲ್ಕ ದಿನಾ ತಿರಗಾಡು ಹಾಂಗ ಆಗಾನಾ....ಮೇಲಾಕ ಕೈಯಾಗಿ ಬಡಗಿ ಹಿಡಕೊಂಡ....ಬಸ್ತಿಗಿ ಬರಾಂವ, ಪುರಾಣ ಕೇಳಕ....ಚಿಮ್ಮವ್ವಗ ರಂಡಿತನಾ ತರೂಪಾಲದ....ಆಕೀಗೇ ಸಾವ ಬಂದೀರ ಯಾನ ಕೆಟ್ಟ ಆಗತಿತ್ತು....? ಹಿಂದ ಈ ಜೋಜಾಟ ಎಲ್ಲಾ ಸೋಸು ಪಾಲದ...."

"ಯಾರ ಪಾಲದ ಯಾರಿಗಿ ಬರತೇತೆವ್ವ....!" ಎಂದು ನಿಟ್ಟುಸುರೊಂದು ಬಿಟ್ಟು ರತ್ನವ್ವ ಮನೆಯ ಕಡೆಗೆ ಹೋದಳು.

ದುಃಖದ ಅದೊಂದು ದಿನ ಕಳೆದುಹೋಯಿತು. ಮರುದಿನ ಯಥಾ ರೀತಿ ಬೂದಿ ಬೊಳಿಯುವದೂ ತೀರಿತು. ಎಷ್ಟೋ ದುಃಖ ಕಡಮೆಯಾಯಿತು. ಭರಮನ ಮನಸ್ಸು ಸ್ವಲ್ಪ ಸಮಾಧಾನ ತಾಳಿತು. ಚಿಮ್ಮವ್ವ ಕಣ್ಣೀರುಗರೆ ಯುತ್ತಲೇ ಅವಶ್ಯವಿದ್ದ ಕೆಲಸಗಳನ್ನು ಮಾಡಹತ್ತಿದಳು. ಎರಡು ಮೂರು ದಿನಗಳು ಕಳೆದ ಮೇಲೆ, ಮೇಲಿನ ಮಾತುಗಳಲ್ಲಿ ಕೆಲವು ಚಿಮ್ಮವ್ವನ

ಕಿವಿಗೆ ಹೋಗಿ ತಲುಪಿದುವು. ಅವಳು ಮಗನನ್ನ ಹತ್ತರ ಕರೆದು.... "ಭರಮಾ, ನಾ ಅನ್ನೋದ ಯಾನ ಸುಳ್ಳಲ್ಲ....ನೋಡು....ಅವರ ಮಾಡಿ ದಾರು....ನಿಮ್ಮತ್ತಿ ನನ್ನಾನೂ ಆಗಿಮಾಡಬೇಕ ಅಂತಿದ್ದಳಂತ...." ಎಂದು ಹೇಳಿದಳು.

"ಈಗ ಆದರ ನಾಲ್ಕ ದಿನಾ ಇಂಥಾ ಮಾತ ಬಿಡಲ್ಲ! ಇನ್ನ ಅವರ ಹೊರತ ನಮಗ ಯಾರ ಇದಾರು....?" ಬೇಸರದಿಂದ ಭರಮ ನುಡಿದ.

"ನನ್ನೊನ್ಯ ಯಾನ ಇಂಥಾ ಮಾತ? ನಿಮ್ಮತ್ತಿ ಧಡಧಡೀತ ಮಂದಿ ಮುಂದ ಹೇಳ್ಕ ಹತ್ತೀದಾಳು....ಅದೆಲ್ಲಾ ಬಿಟ್ಟ ಅವರದ್ಯ ಆಧಾರ ಅಂತೀ.... ಅವನಾ....ಕಟ್ಟಿಕೊಂಡ ಯಾನ ಸಾಯ್ತಿಯಾನ....?"

"ನನ್ನ ಕೊಂದ ಅವರ ಯಾನ ಮಾಡ್ತಾರ ಅವೂ....?....ಅವರಿಗಿರೆ.... ಯಾನ ಹಿಂದ ಹತ್ತೆಂಟ ಮಕ್ಕಳ ಅಳಕ ಹತ್ತೀದಾವು....?"

"ಇರೋಗ ಹೋಗ ನೀ, ಅವರನ ಕೂಡಿ; ಈಗ್ಯ ಯಾಕ ಹೋಗವಲ್ಲಿ ಬೇಕಾದರ ಮನೀಬಿಟ್ಟ! ನನಗ್ಯಾನ ಅವರಗೂಡಾ........ಆಗೂದುಲ್ಲ ನೋಡಪ್ಪ!" ಎಂದು ಸಿಟ್ಟಿನಿಂದ ಮಾತಾಡಿ, ಆಮೇಲೆ ದೊಡ್ಡದನಿ ತೆಗೆದು ಅಳುತ್ತ "ಇನ್ನ ನನಗ್ಯಾರ ಇದಾರಪ್ಪ!....ಎಲ್ಲಾರು ಕಾಲ ಕಸ ಮಾಡಾವರ್ಯ ಅಲ್ಲಾ....ಇನ್ನ. ನನ್ನ ಅರಸ....ಹೋದಾ....ಅಯ್ಯೋ....! ನನ್ನರಸ್ಯ ಅರಸsss ಅರಸನ್ನಾ ಇನ್ನೆಲ್ಲಿ ನೋಡ್ಯಾನ....? ಈ ಮನ್ಯಾಗಾ....ನಂದ್ಯಾನಾ....ನಡ್ಯೋದ ಏತೇ....? ಆಯ್ಯೋ! ಅವ್ವ!....ಅವ್ವ!....ಅವ್ವ! ಹವ್ವ....!....ಹಯ್ಯೋ.... ಹಯ್ಯೋಲ...."

ಹೊರಗೆ ಗೋದಿಯ ಧಾರಣೆಯನ್ನು ಕೇಳಲಿಕ್ಕೆ ಹೋದ ಮಲ್ಲ ಬಂದು ಚಿಮ್ಮವ್ವನನ್ನು ಜೆದರಿಸಿ "ಸಾಕ ಸುಮ್ಮ ಆಗ, ಯಾನ ಆಯ್ತು ಈಗ ನಿನ್ನ ಮನ್ಯಾಗ....? ನೀನ ಮಾಲಕತಿ ಇದೀ ಅಲ್ಲಾ....ಯಾರ ಅಲ್ಲ ಅಂದ್ರೂ? ಸುಮ್ಮನ ಕೂಡ್ರ ಇನ್ನ....ಎಲ್ಲಾ ನಿಂದ್ಯ ಐತಿ. ಮಗಾ ಇದಾ, ಕೈ ಬಾಯಿಗಿ ಬಂದ ಸೊಸೀ ಇದಾಳ....ಇವರನಾ ನೋಡಿ ಹೊತ್ತ ಹಾಕ ಇನ್ನ" ಹೀಗೆ ಸಮಾಧಾನ ಹೇಳಿದ.

ಭರಮ ಎದ್ದು ಹೊರಗೆ ಬರುತ್ತ "ಗೋದಿ ಕೇಳಿದಿ? ಯಾನ ಆಯ್ತು?" ಎಂದ.

" ಗೋದಿ ಕೇಳಿನು.... ಬಸಯ್ಯ ಮೂರ ಅಂತಾನು....ಬೆಲ್ಲಾ ಆಕಿ ಎಲ್ಲಾನು ..ಅವನಲ್ಲೇನ...ಒಂದ್ಸ ಮಾರಿಗಿ ತಗೊಂಡರ ಮತ್ತ ಚಿಟ್ಟ ನಿಟವೀ ಹೆಚ್ಚ ಮಾಡಿಕೊಟ್ಟಾನು..."

" ಹೋಂದ" ತಾಯಿಯ ಕಡೆಗೆ ಹೊರಳಿ.... " ಅವ್ವಾ, ಎಷ್ಟ ರೂಪಾಯ್ಪು ಗೋದಿ ತರಸೂನು...?....ಸಾಧಾರಣ ಜೈನರ ಮನೀ ಎಲ್ಲಾ ಆಗ ಬೇಕಲ್ಲ....ಣ್ಣ ?" ಎಂದು ಭರಮು ಚಿಮ್ಮವ್ವನಿಗೆ ತಡವರಿಸುತ್ತಲೆ ಕೇಳಿದ.

" ನನ್ನಾ ಯಾನ ಸುಡತಿ, ನಿನ್ನ ಮಾವ ಇದಾ ಅಲ್ಲ ? ಮಾಡಿದಾಂವ ಮಟ್ಟಿದಾಂವ, ಅವನಾ ಕೇಳಿ ಮಾಡಲ್ಲ !" ಎಂದು ಬಿಗುವಿನಿಂದ ಚಿಮ್ಮವ್ವ ನುಡಿದಳು.

ಈ ಮಾತು ಭರಮನ ಮನಸ್ಸಿನಲ್ಲಿ ನೋವನ್ನುಂಟುಮಾಡಿತು. ಮುಂದೆ ಅವನೇನೂ ಮಾತಾಡಲಿಲ್ಲ. ಮಲ್ಲನೇ " ಊರಾಗೀನ ಮಂದೀ ಬಂದಾವರಾ, ಹೋದಾವರಾ, ಅಂದರ ಒಂದ ಚೀಲ ಬೇಕಲ್ಲ? ಕುಟ್ಟಕ ಬೀಸಕ ಕೂಡಿ...." ಎಂದು ತನ್ನ ತಂಗಿಯನ್ನು ಕೇಳಿದ.

" ನಾ ನಿನ್ನಕ್ಕಿಂತ ಬ್ಹಾಳ ಶಾಣ್ಯಾಳ ಯಾನ....? ನಿನಗ ತಿಳಿದಂಗ ಮಾಡೋಗಲಾ !" ಎಂದು ಸ್ವಲ್ಪ ತಡೆದು " ಇಂಥಾದೆಲ್ಲ ನನ್ನ ಸುತ್ತ ಯಾಕ ಹಚ್ಚಿದ್ಯೋ ಪರಮೇಸೂರಾ, ಅವರನ್ನ ಕಟ್ಟಿಕೊಂಡು ಹೋಗಿ...." ಎಂದು ಹಾಡಿ ಹಾಡಿಕೊಂಡು ಆಳಹತ್ತಿದಳು.

ಹೂವಣ್ಣ ಸತ್ತ ಮೇಲೆ ಭರಮು ಪ್ರಪಂಚಕ್ಕೆ ಅನನುಭವಿಕನೆಂದು ಮಲ್ಲ ಇನ್ನೂ ತಂಗಿಯ ಮನೆಯಲ್ಲಿಯೇ ಇದ್ದ. ಬೀಗನ ಉತ್ತರ ಕ್ರಿಯೆಗಳನ್ನೆಲ್ಲ ತೀರಿಸಿ ತಮ್ಮ ಮನೆಗೆ ಹೋಗಬೇಕೆಂದು, ಅವನ ಯೋಚನೆ. ಆದರಲ್ಲೂ ಹೂವಣ್ಣ ಊರಲ್ಲಿ ಮೆರೆದ ಮನುಷ್ಯ. ಅವನ ಹೆಸರಿಗೆ ತಕ್ಕಂತೆ ಉತ್ತರಕ್ರಿಯೆ ಆಗಬೇಕು. ಅದಕ್ಕೇನು ಕೊರತೆಯಿಲ್ಲ. ಸಾಲ ತೆಗೆದು ಮಾಡಬೇಕಾಗಿದೆ, ಅನ್ನುವಂತೇನೂ ಇಲ್ಲ. ಮನೆಯಲ್ಲಿ ಸಾಕಷ್ಟು ಹಣ ಶಿಲ್ಲಕು ಇದೆ. ಅದನ್ನು ಚಿಮ್ಮವ್ವನ ಕೈಯಲ್ಲಿ ಕೊಟ್ಟು ಹೂವಣ್ಣ ಸತ್ತ. ಇರಲಿ ; ಸದ್ಯಕ್ಕೆ ಎಲ್ಲಿ ಯಾದರೂ ಸಾಮಾನುಗಳನ್ನು ಉದ್ದರಿ ತಂದು, ಕೆಲಸ ತೀರಿಸಬೇಕು ಹಿಂದಿ

ನಿಂದ ಅವಳೇ ಕೊಟ್ಟು ತೀರಿಸುವಳು, ಎಂದೂ ಅವನು ವಿಚಾರಿಸಿಟ್ಟಿದ್ದ. ಹಾಗೇ ಅಳಿಯನ ಗೂಡ ಮಾತಾಡಿಯೂ ಇದ್ದ.

ಈಗ ತಾರಕ್ಕನೇ ಮನೆಯ ಕೆಲಸವನ್ನೆಲ್ಲ ನೋಡಬೇಕಾಗುತ್ತಿದ್ದಿತು. ಅವಳಿಗೆ ಅಕ್ಕವ್ವ ನೆರವಾಗುತ್ತಿದ್ದಳು. ಚಿಮ್ಮವ್ವ ಮೊದಲಿನಂತೆ ಓಡಾಡಿ ಕೆಲಸ ಮಾಡುವಂತಿರಲಿಲ್ಲ. ಬಂದು ಹೋದವರೊಡನೆ ಒತ್ತಟ್ಟಿಗೆ ಕೂತು ಮಾತಾಡ ಬೇಕಾಗುತ್ತಿದ್ದಿತವಳಿಗೆ. ಆದುದರಿಂದ ಮನೆಯವರ ಹಾಗೂ ಮನೆಗೆ ಬಂದವರ ಊಟೋಪಚಾರದ ಹೊಣೆಗಾರಿಕೆ ಎಲ್ಲ ತಾರಕ್ಕನ ಮೇಲೆಯೇ ಇತ್ತು. ಅದನ್ನೆಲ್ಲ ಅವಳು ಆಸ್ಥೆಯಿಂದ ಮಾಡುತ್ತಿದ್ದಳು. ಈ ಎಲ್ಲ ಕೆಲಸವೆಲ್ಲ ಅವಳೇ ಮಾಡಿದರೂ ಒಂದು ಕೆಲಸ ಮಾತ್ರ ಇನ್ನೂ ಅವಳಿಗೆ ಒಪ್ಪಿಸಲ್ಪಡಲಿಲ್ಲ. ಭರಮು ಊಟಕ್ಕೆ ಬಂದಾಗ ಅಕ್ಕವ್ವ ಉಣಬಡಿಸುತ್ತಿದ್ದಳು. ಅವಳಿಲ್ಲದಾಗ ಚಿಮ್ಮವ್ವ ಬಂದು ಮಗನಿಗೆ ಊಟಕ್ಕೆ ಕೊಡುತ್ತಿದ್ದಳೇ ವಿನಹ ತಾರಕ್ಕನಿಗೆ ಆ ಕೆಲಸ ಬಿಟ್ಟು ಕೊಟ್ಟಿರಲಿಲ್ಲ. ಇದನ್ನರಿತುಕೊಂಡೋ ಏನೋ ತಾರಕ್ಕನೂ ಗಂಡನಿಗೆ ಬಡಿಸಲು ಹವಣಿಸುತ್ತಿರಲಿಲ್ಲ. ಆದರೆ ಭರಮು ಮಾತ್ರ ತಂಗಿ ಅಡುವ ಮನೆಯಲ್ಲಿ ಇಲ್ಲದ ಸಮಯವನ್ನೇ ಸಾಧಿಸಿ ಊಟಕ್ಕೆ ಬರುವ. ತಾಯಿ ಯಾರೊಡನೆಯಾದರೂ ಮಾತಾಡುತ್ತ ಕುಳಿತಿದ್ದರೆ "ಅವ್ವಾ ಉಣಕ ಕೊಡ ಬಾ..." ಎಂದು ವೇಲೋಪಚಾರಕ್ಕೆ ಕರೆದು ಊಟಕ್ಕೆ ಕುಳಿತೇಬಿಡುವ. ಆಗ ತಾರಕ್ಕನ ಕಡೆಗೆ ಒಂದು ದೃಷ್ಟಿಯನ್ನು ಬೀರುವ. ಆ ದೃಷ್ಟಿಯಲ್ಲಿ 'ಊಟಕ್ಕೆ ಕೊಡು' ಎಂದು ಬೇಡುವ ಭಾವ ಇರುತಿದ್ದಿತು. ಅದನ್ನರಿತು ತಾರಕ್ಕ ಏನು ಮಾಡಬೇಕೆಂದು ವಿಚಾರಿಸುವುದರೊಳಗಾಗಿಯೇ ಚಿಮ್ಮವ್ವ "ಜರಾ ನಿಂದರ ನಾ ಈಗ ಬಂದಿನು...." ಎಂದು ಆಜ್ಞೆ ಮಾಡುವಳು. ಒಮ್ಮೊಮ್ಮೆ ಅವಕಾಶ ವಿದ್ದಲ್ಲಿ ಹೊರಗೆ ಯಾವ ಕೆಲಸಕ್ಕಾದರೂ ಅವನನ್ನು ಕರೆದು ಏನಾದರೂ ಹೇಳುತ್ತಿದ್ದಳು. ಇಲ್ಲವಾದರೆ ಮಗಳನ್ನು ಕರೆದು, ಉಣಬಡಿಸಲು ಹೇಳುತ್ತಿದ್ದಳು. ಆಗ ಭರಮು ನಿರುಪಾಯನಾಗುತ್ತಿದ್ದ.

ಒಂದು ದಿನ ಮಲ್ಲ ಗೋದಿ ಆಳೆಯಿಸಿಟ್ಟು, ಮನೆಗೆ ಬರುತ್ತಿದ್ದ. ಹಾದಿಯಲ್ಲಿ ದೇವೇಂದ್ರ ಪಂಡಿತ ದೊರಕಿದ. ಮಲ್ಲನ ಮುಖವನ್ನೊಮ್ಮೆ ಪಂಡಿತ ನಿರೀಕ್ಷಿಸಿದ. ಅದನ್ನರಿತು ಮಲ್ಲ ಮಾತಾಡಿಸಬೇಕೆನ್ನುವಷ್ಟರಲ್ಲಿ ದೇವೇಂದ್ರನೇ

" ದಿನವ್ದ (ಉತ್ತರಕ್ರಿಯೆ) ತಯಾರಿ ನಡಸೀದಿ ಕಾಣಸ್ತೇತಿ?" ಎಂದು ಕೇಳಿದ.

" ಹೂಂ! ಮಾಡಕಬೇಕಲ್ಲ; ಇಂದ ಒಂಬತ್ತನೇ ದಿನಾ...ಒಂದೊಂದ್ಸ ಜೋಡಣೆ ಮಾಡುದರೊಳಗ ಸಮೀಪ ಬಂತಲ್ಲ..." ಎಂದ ಮಲ್ಲ.

" ಪೂಜಿ ಎಷ್ಟರದು ಮಾಡಸಬೇಕಂತ ಮಾಡಿದೀರಿ....? ದೊಡ್ಡ ಮನಸ್ಯಾ ತೀರಕೊಂಡಾನು....ಸಮೇದ ಶಿಖರದ ವಿಧಾನ ಮಾಡಿಸಿ....ಪಲ್ಲಕಿ ತಗೀರಲ್ಲಾ..." ಎಂದು ಸೂಚಿಸಿದ ದೇವೇಂದ್ರ ಪಂಡಿತ.

ಮಲ್ಲನ ಮನಸ್ಸಿನಲ್ಲಿ ಉತ್ತರಕ್ರಿಯೆಯನ್ನೇನೋ ಚೆನ್ನಾಗಿಯೇ ಮಾಡಬೇಕೆಂದಿದ್ದಿತಾದರೂ ಪಲ್ಲಕ್ಕಿ ಹೊರಡಿಸಿ, ದೊಡ್ಡ ಪೂಜಿ ಮಾಡಿಸುವಷ್ಟು ಅವನ ಯೋಜನೆ ದೊಡ್ಡದಾಗಿರಲಿಲ್ಲ. ಆದುದರಿಂದ ಆತ.... " ನಮ್ಮಂಥವರಿಗಾಗಿ ಯಾತಕು ಬೇಕು ಪಾಲಕಿ–ಗೀಲಕಿ....? ಗೌಡರಂಥವರ ಕೆಲಸ ಅದ. ಸಾದಾ ಪೂಜಿ ಮಾಡಿ ತೀರಿಸಿಬಿಡೂನು. ಹುಡುಗನೂ ಸಣ್ಣವ....ಎಲ್ಲಾ ಅಷ್ಟ ಖರ್ಚಿಗೇರಿ ಬ್ಯಾಡಾ....?" ಎಂದು ಅವನನ್ನೇ ಸಲಹೆಯನ್ನು ಕೇಳಿದ.

ದೇವೇಂದ್ರ ಹುಬ್ಬು ಏರಿಸಿ " ಹಾಂಗ ನಿನ್ನ ಮ್ಯಾಲಿಂದ ನೀ ಲೆಕ್ಕಾ ಹಾಕಬ್ಯಾಡ....ಅಂವ ಊರ ಚೌಗಲ್ಯಾ ಇದ್ದ. ಒಂದು ಅಡಕಿ ಮಾನ ಐತಿ ಅವಂಗ. ಅವನ ಕಡೆ ನೋಡಿ ಮಾಡಬೇಕು" ಎಂದು ಹೇಳಿದ.

ಈ ಮಾತು ಮಲ್ಲನ ಮನಸ್ಸನ್ನು ಅಲುಕಿಸಿತು. ಮನದಲ್ಲಿ 'ಪಲ್ಲಕ್ಕಿ ತಗದರ ಹ್ಯಾಂಗಾದೋತು....?' ಎಂದು ಯೋಚಿಸುತ್ತಲೇ " ನೀ ಅನೂದೆಲ್ಲಾ ಖರೆ....ಸೋಂಗಾ ಬೇಕಾದಷ್ಟು ದೊಡ್ಡದ ಹಾಕಕ ಬರತೇತಿ, ದುಡ್ಡ ಒಂದ ಇದ್ದರ, ಅದಕ ದುಡ್ಡ ಒಂದು ಬೇಕಲ್ಲ....ಬರೀ ಬಾಯಲೆ ಆಗೂ ಕೆಲಸಾ?" ಎಂದ.

" ಯಾನರ ಮಾಡೋದಲ್ಲ! ಇಂದೊಮ್ಮಿ ಆಯ್ತಂದರ....ಇನ್ನಾ್ಯನ ಮುಂದ ಹೂವಣ್ಣನದ ಆಗೋದೇತಿ? ಸಂಜಿಕಿ ಬಂದ ಚಿಮ್ಮವ್ವಗ ಒಂದ ಮಾತ ಹೇಳತ್ಯಾನ ಬೇಕಾದರ ನಾನೂ? ಈ ವಿಷಯದಲ್ಲಿ ಚಿಮ್ಮವ್ವನಿಗೆ ತಾನು ಹೇಳಿದರೆ ಅವಳು ಇಲ್ಲೆನ್ನಲಿಕ್ಕಿಲ್ಲವೆಂಬ ದೃಢನಿಶ್ಚಯದಿಂದಲೇ ದೇವೇಂದ್ರ ನುಡಿದ.

"ಬಾ, ಯಾರ ಬ್ಯಾಡಂತಾರು ?" ಎಂದು ಮಲ್ಲ ಮುನ್ನಡೆದ.

ದೇವೇಂದ್ರ ಪಂಡಿತ ಏನು ಹೇಳಿದನೇನೋ. ಚಿಮ್ಮವ್ವನ ಆಗ್ರಹದ ಮೇರೆಗೆ ಪಲ್ಲಕ್ಕಿ ತೆಗೆದು ದೊಡ್ಡ ಪೂಜೆಯನ್ನೇ ಮಾಡುವದೆಂದು ಗೊತ್ತಾಯಿತು. ಹದಿಮೂರನೆಯ ದಿವಸ ಪೂಜೆ ಪಲ್ಲಕ್ಕಿಯ ಕೆಲಸ ತೀರಿಸುವದು, ಆ ದಿವಸ ನಾಲ್ಕೈದು ಮಣದ ಅಡಿಗೆ ಮಾಡಿಸಿ, ಆಪ್ತೇಷ್ಟರಿಗೂ ಹೊತ್ತವರ ಹೆಗಲು ಇಳಿಸುವುದಕ್ಕೂ ಊಟ ಹಾಕತಕ್ಕದ್ದು. ಮರುದಿನ ಊರ ಜನಕ್ಕೆಲ್ಲ ಊಟ ಹಾಕುವದೆಂದು, ಪಂಡಿತನ ಸಲಹೆಯ ಪ್ರಕಾರ, ಕಾರ್ಯಕ್ರಮ ಎರಡು ದಿನ ಇಡಲಾಗಿತ್ತು. ಆ ಪ್ರಕಾರ ಈ ಹೊತ್ತು ಹೊತ್ತವರ ಹೆಗಲು ಇಳಿಸುವುದು, ಪಲ್ಲಕ್ಕಿಯ ಮುಂದೆ ಬಾರಿಸಲು ಪರವೂರಿನ ಮೇಳದವರೂ ಈಗಾಗಲೇ ಬಂದಿದ್ದರು. ಮನೆಯು ಆಪ್ತೇಷ್ಟರಿಂದ ತುಂಬಿತುಳುಕುತ್ತಿದ್ದಿತು. ಇಂದು ಹೂವಣ್ಣನಿಗೆ ನೈವೇದ್ಯಮಾಡಿದ ಹೊರತು ಚಿಮ್ಮವ್ವ ಬಾಯಲ್ಲಿ ನೀರು ಹಾಕುವಂತಿಲ್ಲ. ಏನೂ ತಿನ್ನುವಂತಿಲ್ಲ. ಆದುದರಿಂದಲೇ ಆಗಾಗ ಚಹಾ ಮಾಡಿ ಕೊಡುತ್ತಿದ್ದರು, ಅವಳಿಗೆ. ಚಿಮ್ಮವ್ವ ಒಳಗೆ ಚಹ ಕುಡಿಯುತ್ತ ಕುಳಿತಿದ್ದಳು. ಅದೇ ಕಾಲಕ್ಕೆ ಹೊರಗೆ ಐನಾಪುರದಿಂದ ಸುಂದರಾಬಾಯಿ ಬಂದಳು. ಹೂವಣ್ಣ ಸತ್ತುದು ಸುಂದರಾಬಾಯಿಗೆ ಈ ಮೊದಲೇ ಗೊತ್ತಾಗಿದ್ದಿತಾದರೂ ನುಡಿಸಲಿಕ್ಕೊಮ್ಮೆ ದಿವಸಕ್ಕೊಮ್ಮೆ ಹೀಗೆ ಎರಡು ಸಲ ಬರಬೇಕಾಗುವುದೆಂದು, ಹಾಗೆ ಮಾಡದೆ, ಉತ್ತರ ಕ್ರಿಯೆಗೇನೇ ಒಮ್ಮೆಲೇ ಬಂದುಬಿಟ್ಟಿದ್ದಳು. ಇವರ ಮನೆಗೆಯೇ ಬರಬೇಕಾದುದರಿಂದ ಮಲ್ಲನ ಮನೆಗೆ ಹೋಗದೆ ನೆಟ್ಟಗೆ ಇಲ್ಲಿಯೇ ಬಂದಿದ್ದಳು. ತಲೆಬಾಗಿಲಲ್ಲಿ ಸುಂದರಾಬಾಯಿ ಬಂದೊಡನೆಯೇ ಒಳಗೆ ಚಿಮ್ಮವ್ವನಿಗೆ ತಿಳಿಯಿತು, ಸುಂದರವ್ವ ಬಂದಳೆಂದು. ಕೂಡಲೇ ಲಗುಬಗೆಯಿಂದ ಚಹ ಕುಡಿದು, ತೀರಿಸಿ ಹೊರಗೆ ಬರುತ್ತ "ಈಗ ಬಂದ್ಯಾನವ್ವಾ....ನಿನ ಬೀಗಾನ....ನೋಡಕಾ....? ಅವ್ವಾಃ ಅವ್ವಾಲ್ಯಃ" ಎಂದು ಒದರಿ ಹಣೆಹಣೆ ಬಡಿದುಕೊಳುತ್ತ ಪಡಸಾಲೆಗೆ ಬಂದು ಕುಳಿತು "ಅಯ್ಯೋ ಹೋದವ್ವ ನನ್ನ ಅರಸಃ" ಎಂದು ಅಳಹತ್ತಿದಳು. ಸುಂದರವ್ವನೂ ಅಳುತ್ತ ಬಂದು ಹತ್ತರ ಕುಳಿತು "ಅಳಬ್ಯಾಡಃ ಇನ್ನ....ನಿಮ್ಮ ಎಲ್ಲಾರ ಕಣ್ಣ ಮುಂದ ಅಂವದ ಛಲೂ ಆಯ್ತು....ಮಗಾ ದೊಡ್ಡಾಂವ ಆದ....ಮದವಿ ಮಾಡಿದ....ಎಲ್ಲಾ ಆಯ್ತು. ಇರೂತನಕಾ ಉಸಾಬರಿನೂ ಛಲೂ ಮಾಡಿದಿರಿ, ಕಂಟಾಳಿಸಲಿಲ್ಲ, ಬಿಡಲಿಲ್ಲ.

ಕೈಲೆ ಆದಷ್ಟು ಔಷಧ ಉಪಚಾರ ಮಾಡಿದಿರಿ" ಎಂದು ಸಮಾಧಾನದ ನಾಲ್ಕು ಮಾತುಗಳನ್ನು ಹೇಳಿದಳು. ಮತ್ತು "ಎಂದ ಬೇಸ್ತಾರ ಹರಿವತ್ರs ಸತ್ತಾ ? ನಮಗ ಕಾಗದ ವೇಳೇಕ ಬರಲಿಲ್ಲ....ಮೊನ್ನಿ ಬಂತು....ಅಂದ್ಯಾನ....ದಿನಾನ ಬಂತಂತ...ಇಂದs ಬಂದಿನು...." ಎಂದು ತಾನು ಇಷ್ಟು ದಿನ ಬಾರದುದಕ್ಕೆ ಕಾರಣವನ್ನು ಸೂಚಿಸಿದಳು.

ಚಿಮ್ಮವ್ವ ತಲೆ ಹಿಡಿದುಕೊಂಡು ಕುಳಿತು "ಹೋಂದವ್ವ! ಯಾರ ಬಂದ ಯಾನ ಮಾಡೋದೇತಿ ? ಬುಧವಾರ ರಾತ್ರಿ ಅಂದರ ಮೇಲಧಾಪ ಹತ್ತಿತು. ಅವ್ವಾ ! ಅಯ್ಯೋ ! ಬೆಳ್ಳುಬೆಳತನ ಹೀಂಗsಕೂತೇವು....ದೀಪಾ.... ಕೈಯಾಗಿಂದ ಇಡಲಿಲ್ಲಾ...." ನಿಟ್ಟುಸುರು ಬಿಟ್ಟು.... "ಬೆಳಗ ಆಗಕ ಅಂದರ ಜರಾ ಸುದ್ದೀಮ್ಯಾಲ ಬಂದ ಯಾನೋ....ಕಣ್ಣ ತೆರದ ನೋಡಿದಾ....ಹವ್ವ ! ಅಯ್ಯೋ !....ತಾರಾ ಅಂತ ಸೊರ್ಸಿನಾ ಕರದ....ನಾವ ಅಂದೇವು. ಇನ್ನಾ್ಯನ ಆಗಲಾಕಿಲ್ಲ....ಅಂತ....ಆದರ ಹರಿವತ್ತ ಪಂಡಿತರ ದೇವೇಂದ್ರು...ನಮ್ಮ ಭೀಮಪ್ಪಾ....ಬಂದರೂ, ಅವರ ತಿಳಿದವರ್‍ಾ....ಹೇಳಿದ್ರು...ನಾಡಿ ಸಾಯಿಕ ಹತ್ತಿದಾವೂ....ದಾನಾ ಮಾಡ್ರಿ ಅಂತ..." ಬಿಕ್ಕಿಬಿಕ್ಕಿ ಅಳುತ್ತ "ಆಂಯ್ದ ಕಾಲಿಗೆ ಕೈ ಹಚ್ಚಿ ನೋಡತೇವರೆ....ಥಣ್ಣಗ ಆಗಿದ್ದೊ....ಆಗ ಘಾಬರೆ ಆಗಿ ಎದಿ ಎದೀ ಬಡಕೊಯ್ನ ಅವ್ವಾ ! ನನ್ನ ಅರಸ ಹೊಂಟತ್ತ ! ಹುಡುಗ ಇಷ್ಟ ಪಂಡಿತರನಾ ಭಟ್ಟರನಾ ಐಗೋಳನಾ ಎಲ್ಲಾ ಕರಿಸಿದ....ಹತ್ತ ರೂಪಾಯೀ ನಿಟನಿಟವಿ ಅಕ್ಕಿ ಬಂದಾವರಿಗಿ ದಾನಾ ಮಾಡಿದೇವು. ಹೊಲ್ಯಾ ಹುಬಚಿಗೂ ನಾಲ್ಕ ಮಣ ಜೋಳಾ ಹಾಕಿದೆವು" ದನಿತೆಗೆದು ಅಳಲು ಆರಂಭಿಸಿ "ಇಷ್ಟ ಮಾಡುಟಗೆ....ಇನs ಕಿವ್ಯಾಗ ನವೋಕಾರ ಮಂತ್ರಾ ಹೇಳತಾರ ಇಲ್ಲ ಅನಕ, ಜೀವ ಹೋಯ್ತುವ್ವಾ....ಅವ್ವಾ ಅಯ್ಯೋ" ಎಂದು ಚೀರಹತ್ತಿದಳು.

"ನಮ್ಮ ಮಾವ ಸತ್ತಾಗೂ ಮಸ್ತ ಇಪ್ಪತ್ತ ರೂಪಾಯ ದಾನಾ ಮಾಡಿರ ಏಳವ್ವ ! ಮತ್ತ ಎಂಥಾ ಕಲ್ಲಿನಂಥಾ ಬೋಗಾಣ್ಯಾಗ ಐದ ನಿಟವಿ ಗೋದಿ ಹಾಕಿ ಕೈಯಾಡಿಸಿ....ಮನೀ ಹೊಲ್ಯಾನ ಕರದ ಕೊಟ್ಟೆದ್ರು.... ಮಾಡಕ ಹೋದರ ಯಾನ ಒಂದs ಹತ್ತೇತಿ....? ಹಿರ್‍ಯಾ ಮನಸ್ಯಾ ಅಂತ. ಹತ್ತ ಬೆಳ್ಳಿ ಹೂವ ಮಾಡಿಸಿ ಇಟ್ಟೇರ, ಮಕ್ಕಳಾ ಮೊಮ್ಮಕ್ಕಳಾ ಎಲ್ಲಾ.... ಹಾರಿಸಿರ ಅವನ ಮ್ಯಾಲಿ....ಯಾನ ಐಸಿರಿ ಹರದ ಬಂತ ಅಂತೀ ?"

"ನಮ್ಮಾವಗೂ ಯಾನ ಕಡಮಿ ಮಾಡಲಿಲ್ಲs ತಾಯೀ, ಮಲ್ಲಪ್ಪ ಜಿಕಿ ಜಿಕಿ ಮಾಡಿದ ಖರೇ....ನಾ ಕೇಳಲಿಲ್ಲ ಎಲ್ಲಾ ಐಸಿರಿ ಮಾಡೇ ಬಿಟ್ನ್ಯಲ್ಲಿ.... ಹಿಂದ ನಾ ಒಬ್ಬಾಕಿ ಇದ್ನ್ಯಲ್ಲಿ....ಅಂವದ ಎಲ್ಲಾ ಆಯ್ತು. ನಂದ ಮಾಡವಾರ ಯಾಕ ಬಿಡವಾರು ಸಾಯಾನಾ?" ಎಂದು ಆಳಹತ್ತಿದಳು ಚಿಮ್ಮಮ್ಮ.

ಹೊರಗಿನಿಂದ ನೀರಿನ ಕೊಡ ಇಟ್ಟು ಭೀಮು ಒಳಗೆ ಬಂದು "ಸಾಕ ಸುಮ್ಮ ಆಗ ಇನ್ನ....ನೀ ಸತ್ತನ್ಯ್ಯಾಲಿ ಯಾನ ಹಿಂದ ನೋಡಕ ಬರತೀ? ಹಿಂದಿನ ಕಾಳಜಿ ಯಾತಕ ಮಾಡತಿ? ಹೂವಣ್ಣನದ ಮಾಡಿ ನೀನರ ಛಲೂ ಅನಸಕೊಂಡೇ ನಾಲ್ಕ ಮಂದಿ ಕ್ಯೆಯಿಂದ. ನಿನಗೆ ಮಾಡಿ ಅವರ ಛಲೂ ಅನ ಸಕೋಬೇಕಾದ್ರು ಮಾಡ್ಯಾರು. ಇಲ್ಲಾದರ ಬಿಟ್ಯಾರು....ಎಂದಿನ ಮಾತ ಅಂದs ಈಗ ಮುಂದ ಬಂದದ ಉಣ್ಣೋದ ಬಿಟ್ಟ ಇಲ್ಲದ ಒಂದ ತಕ್ಕೊಂಡ ಕೂತಿದಿ...." ಎಂದು ಸುಮ್ಮನಾಗಿಸಿದ.

ಚಿಮ್ಮಮ್ಮ ಸುಮ್ಮನಾಗಿ ಕಣ್ಣೀರು ಒರಸಿಕೊಳ್ಳುತ್ತ "ಸಂಗಾಟ ಯಾರ ಬಂದರು?" ಎಂದು ಸುಂದರಪ್ಪನಿಗೆ ಕೇಳಿದಳು.

"ಯಾರಿಲ್ಲ; ಹಿರೀ ಹುಡುಗನಾನs ಸಂಗಾಟ ತಗೊಂಡ ಬಂದ್ಯಾನ."

"ಅಂತೂ ಬಂದೀದಾ? ಎಲ್ಲಿ ಇದಾ ಕರೀ ಅಲ್ಲs ಹುಡುಗ ಹಸತಿದ್ದ ಆದೋತು ಯಾನsರ ಇಷ್ಟ ತಿನ್ನಲಿ" ಎಂದು ಹೇಳಿದಳು.

ಉತ್ತರಕ್ರಿಯೆಯ ವಿಧಿಗಳೆಲ್ಲ ಮುಗಿದುವು. ಆದರೆ ಒಂದು ಸಂಗತಿ ಯನ್ನು ಮಾತ್ರ ಹೇಳಬೇಕಾಗುವದು. ಊರ ಊಟದ ದಿನ ಭೀಮಪ್ಪ ಸಂಜೆಯವರೆಗೆ ಕೆಲಸ ಮಾಡಿ, ಉಣ್ಣದೆ ಮನೆಗೆ ಹೋದ. ಹೊತ್ತು ಮುಳುಗಿದನಂತರ ಯಾರೋ ಒಬ್ಬರು ಬಂದು, ಚಿಮ್ಮಮ್ಮನಿಗೆ ಹೇಳಿದರು, ಭೀಮಪ್ಪ ಊಟಮಾಡದೆ ಮನೆಗೆ ಹೋದನೆಂದು ಕೂಡಲೇ ಚಿಮ್ಮಮ್ಮ ಒಬ್ಬರ ಕಡೆಯಿಂದ ಕರೆಯಕಳುಹಿದಳು. ಭೀಮಪ್ಪ ಬರಲಿಲ್ಲ. ಕರೆಯಲಿಕ್ಕೆ ಹೋದ ಮನುಷ್ಯ ಬಂದು ಹೇಳದ. "ಮನ್ಯಾಗ ಮಂದೀ ಕಾರಭಾರ.... ನಮ್ಮಾದ ಅಲ್ಲಿ ಯಾನ ಕಿಮ್ಮತ್ತ...ಏತಿ....ಯಾನ....? ಅಣ್ಣ ತಮ್ಮರ ಎಲ್ಲಾ ಒತ್ತಟ್ಟಿಗಿ ಕೂತೀವ, ಹನ್ನ್ಯಾಡ ದಿನಾ ಸೂತಕಾ ಪಾಲಿಸಿದವರ....ಹುಡಗ ಅನ್ನಾಕ ಹತ್ತೀದಾ, 'ಕಾಕಾ ಈ ಪಂಕ್ತಿಗಿ ಉಣಲಾಕ ಏಳಲಿ' ಅಂತ. ಎಲ್ಲಾ ಬಿಟ್ಟ ಆ ಮಗದುಮರ ಮಲ್ಲ್ಯಾಲ್ಲಿ 'ಇನ್ನೊಂದ ಸಾರಿಗಿ ನೀರ ತಂದ

ಉಣಕ ಕೂಡಲಿ. ಅಂದರ ಮೋಕಳೀಕ ಆಗತೇತಿ." ಅಂತ ಎಬ್ಬಿಸಿ ಹಚ್ಚ ಕೊಟ್ಟ. 'ನಾವ್ಯಾನ ಅಲ್ಲೀ ಅವನ ಮನೀಗಿ ಬಂದಿದ್ದೇವ್ಯಾನ ಹಾಂಗ ಅನ್ನಾಕ'? ಅಂತ ಭೀಮಾ ಅನ್ನಾಕ ಹತ್ತೀದಾ ಬರವಲ್ಲ" ಎಂದು.

ಆದನ್ನು ಕೇಳಿ ಚಿಮ್ಮವ್ವ "ಮಲ್ಲಪ್ಪಗ ಯಾರಿಗಿ ಯಾನ ಅನಬೇಕ ತಿಳಿದುಲ್ಲ....ಇಂದ ಇಂವ ಯಾನರ ಅಂದ ಹೋದಾ ನಾಳಿ ನಾವಾ ದಿನಾ ಹರಿವತ್ತ ಎದ್ದ ಅಣ್ಣ ತಮ್ಮ ಮಾರಿ ನೋಡಬೇಕಾಗತೇತಿ" ಎಂದು ಸಮೀಪದಲ್ಲಿರುವ ಮಲ್ಲನ ಕಿವಿಗೆ ಬೀಳುವಂತೆ ಹೇಳಿ, ಸ್ವತಃ ತಾನೇ ಭೀಮಪ್ಪನ ಮನೆತನಕ ಹೋಗಿ, ಸಮಾಧಾನಪಡಿಸಿ, ಕರಕೊಂಡು ಬರಬೇಕೆಂದು ಹೋದಳು. ಆದರೂ ಅವನು ಬರಲಿಲ್ಲ. ಅದರಿಂದ ಅಲ್ಲಿಗೇ ಅಡಿಗೆ ತುಂಬಿ ಕಳಿಸಿದಳು.

ಉತ್ತರಕ್ರಿಯೆಗಳೆಲ್ಲ ತೀರಿದ ಮರುದಿನ ಮಧ್ಯಾಹ್ನದಲ್ಲಿ ಅನಂತ ಒಳ ಕೋಣೆಯಲ್ಲಿ ಮಲಗಿದ್ದ. ಮನದಲ್ಲಿ ಸುಮ್ಮನೆ ಏನಾದರೊಂದು ವಿಚಾರ ಮಾಲೆ ಮೂಡಿ ಮುನ್ನಡೆದಿದ್ದಿತು— 'ತಾರಕ್ಕ ಬರೀ ಹಗಲೀ ರಾತ್ರಿ ದುಡೀಬೇಕು; ಈ ಮನ್ಯಾಗ ಒಬ್ಬರ ತಿನ್ನ ಅನ್ನಾವರ ಇಲ್ಲಾ....ದಣದಿ ಅನ್ನಾವರ ಇಲ್ಲಾ, ಮೊನ್ನಿಂದ ನೋಡತ್ಯಾನು ಆಕಿ ಕೈಗಿ ಸವಡ ಇಲ್ಲ...' ಎಂಬ ವಿಚಾರದಲ್ಲಿ ಹಾಗೆಯೇ ನಿದ್ರೆ ಬಂದಿತು. ಆ ಅರನಿದ್ರೆಯಲ್ಲಿ ತಾರಕ್ಕನ ಮೂರ್ತಿ ಅನಂತರ ಮನೋನಯನದ ಎದುರಿಗೆ ಬಂದು ನಿಂತಿತು. ನಿರುತ್ಸಾಹಭರಿತವಾದ ಬಾಡಿದ ಮುಖ! ಸಣ್ಣಂದಿನಲ್ಲಿ ತಾನೂ ಅವಳೂ ಕೂಡಿ ಆಡುವಾಗ....ಎಷ್ಟು ಆನಂದದಿಂದ್ದೀತೀ ಮುಖ! ಅಂದಿನ ಅಂತರವನ್ನು ಕಂಡು ಮರುಗಿದ. ಅಷ್ಟರಲ್ಲಿ ಯಾರೋ ಕರೆದಂತಾಯಿತು. ಕಣ್ದೆರೆದ. ಎದುರಿಗೆ ಭರಮ ಬಂದು ನಿಂತು "ಯಾವಾಗ ಮಲಗೀದಿ ಏಳುದುಲ್ಲ ಯಾನ? ಯಾನರ ತಿನ್ನ ಏಳಲ್ಲಾ...ನಿದ್ದಿ ಆಗಿಲ್ಲ ಇನ್ನೂ...?" ಎಂದು ಕೇಳುತ್ತ ಹತ್ತಿರ ಕುಳಿತ.

"ಯಾನ ಎರಡ ದಿನಾ ನಿದ್ದೀನ ಇಲ್ಲ; ಮೊನ್ನಿ ರಾತ್ರಿ...ಪೂಜಿಪಲ್ಲಕ್ಕಿ ಅಂತ...ಮಲಕೋಲಾಕ ಜೆಳಗ....ಆಯ್ತು....ನಿನ್ನ ಮನ್ಯಾಗೆಲ್ಲಿ....ಸರವತ್ತಿನ ತನಕ ಊಟದ ಗದ್ದಲಾ...." ಸ್ವಲ್ಪ ತಡೆದು, ಕಣ್ಣರಳಿಸಿ, ಹುಬ್ಬೇರಿಸಿ ಇಳಿಸಿ ನುಡಿದ.... "ಯಾನ, ಎಲ್ಲಾ ಮಂದೀ ಸಾಮಾನ ಮುಟ್ಟಸೋದ ಆಯಿತು...?" ಎಂದು.

ಈಗ ಮೂರು ನಾಲ್ಕು ದಿನ ಒಂದೇ ಮನೆಯಲ್ಲಿ ಕೂಡಿ ಕಳೆದುದರಿಂದ ಅನಂತ ಭರಮರಲ್ಲಿ ಪರಿಚಯ ಬೆಳೆದಿದ್ದಿತು. ಅಲ್ಲದೆ ಭರಮನಲ್ಲಿ ಈಗ ಸ್ವಲ್ಪ ತಿಳಿವಳಿಕೆ ಹೆಚ್ಚಾಗಿದೆ. ಅದರ ಜೊತೆಗೆ ಹೊಣೆಗಾರಿಕೆಯೂ ಮೈಮೇಲೆ ಬಿದ್ದುದರಿಂದ ಯಾರನ್ನು ಹೇಗೆ ಆದರಿಸಬೇಕು, ಉಪಚರಿಸಬೇಕು ಎಂಬುದ ನೆಲ್ಲ ವಿಚಾರಿಸಿ ನಡೆಯುತ್ತಿದ್ದ.

"ಎಲ್ಲಾ ಆದಂಗ ಆಯ್ತು....ಇನ್ನ...ನಾಮಾ ಚಿಕ್ಕೋಡಿಂದ ಅರವಿ ಇಷ್ಟ ತಗೊಂಡ ಬಂದ ಅಂದರ....ಆಯ್ತು. ಬಂದವರಿಗಿಷ್ಟ ಆಯಾರ ಮಾಡಿ ಹಚಕೊಟರ....ತೀರಿತು...." ಎಂದು ಭರಮ ಹೇಳಿದ

ಇನ್ನ್ಯಾಕ್ಯನ ಆಯ್ತು ಅನ್ನೂ ಹಂಗಿಲ್ಲ....ಪ್ರಂಪಚನ ಕೊಳ್ಳಿಗಿ ಬಿತ್ತ ಅಂದ ಮ್ಯಾಲೆ ಇರೂದನ ಒಂದಿಲ್ಲ ಒಂದು...." ಅದೇನೋ ವಿಚಾರ ಬಂದು, ಅನಂತ ಮಾತನ್ನು ಒಮ್ಮೆಲೇ ಹೊರಳಿಸಿ.... "ಇನ್ನ ಚಿಮ್ಮವ್ವತ್ತಿ ನೋಡ ಕೋತಾಳ...." ಆದರೂ ಅಂದ.

ಅನಂತರ ಮಾತು ಮುಗಿಯುವುದರಲ್ಲಿಯೇ ಭರಮ ಬೇಸರದಿಂದ ಹೇಳಿದ. "ಯಾನ ನೋಡಕೊತಾಳು...? ಆಕಿ ನೋಡಕೋಳಕ್ಕಿ ಇದ್ದರ ಹಿಂಗ್ಯಾಕ ಆಗತ್ತಿತ್ತೂ ?"

"ಇರಲಿ; ಹಿರ್ಯಾಳ ಇದಾಳ. ಯಾನಾದರೂ ಆಕೀನಾ ಸಂಬಾಳಸ ಕೊಂಡ....ನೀವಿಬ್ಬರೂ–ಗಂಡಾ ಹ್ಯಾಂತಿ....ಯಾನ ಮಾಡಿದರೂ ಮಾಡೋದ." ಮೆಲ್ಲಗೆ ಒಂದು ಬುದ್ಧಿವಾದ ಹೇಳಿದ ಅನಂತ, ಭರಮನ ಮನದಾಳವನ್ನು ಕೆದಕಲು.

"ಅದ್ಯ ಏತಿ ಬಿರೀ...." ಎಂದು ಅನಂತನನ್ನು ಕರೆದುಕೊಂಡು ಮಧ್ಯಾಹ್ನದ ಫಲಹಾರಕ್ಕೆ ಹೋದ ಭರಮ.

ಈ ಮಾತಿನ ಮೇಲಿಂದ ಅನಂತನಿಗೆ ಭರಮನ ಮನಸ್ಥಿತಿ ಗೊತ್ತಾಯಿತು. ಈ ಮೊದಲೇ ತಾರಕ್ಕನ ಮನಸ್ಸಿನ ಪೂರ್ಣಪರಿಚಯ ಅವನಿಗಿದ್ದಿತು. ಒಳಗೊಳಗೇ ಭರಮ ಮನಸ್ಸು ತಾರಕ್ಕನ ಕಡೆಗೆ ಹರಿಯುತ್ತಿದೆ ; ತಾರಕ್ಕನ ಮನಸ್ಸು ಭರಮನ ಕಡೆಗೆ ಹರಿಯುತ್ತಿದೆ. ಮೊದಮೊದಲು ತಾರಕ್ಕ ಗಂಡನ ಒಲವನ್ನು ಅರಿತು ಬೆರೆಯಲು ಯತ್ನಿಸಿದಳು. ಆಗ ಭರಮ ಹಿಂದೆ ಸರಿದ-

ಈಗ ಭರಮು ಯತ್ನಿಸುತ್ತಿರಲು ನಿರಾಶೆಗೊಂಡ ತಾರೆ ಅದಕ್ಕೂ ದೂರ ಹಿಂದೋಡುವಳು. ಆದರೂ ಎರಡೂ ಹೃದಯಕಾಸಾರಗಳಲ್ಲಿ ನೀರು ತುಂಬಿ ತುಳುಕುತ್ತಿವೆ. ನಡುವೆ ಒಂದು ಒಡ್ಡು ಮಾತ್ರವಿದೆ. ಅದನ್ನು ಒಡೆದು ಕೊಡುವಷ್ಟು ಅಲ್ಲೋಲಕಲ್ಲೋಲ ಎರಡೂ ಕೆರೆಯ ನೀರಿನಲ್ಲಿ ಇಲ್ಲ. ಅದಿಲ್ಲ ದಿದ್ದರೂ ನಾವಿಬ್ಬರೂ ಎಂದಾದರೂ ಒಂದೇ ಎಂದು ಅರಿತು ಕೊಂಡರೂ ಸಾಕು. ಇಂದಿಲ್ಲ ನಾಳೆ ಬಿರುಗಾಳಿ ಬೀಸಿ, ಒಡ್ಡು ಒಡೆಯುವಂತಹ ತೆರೆಗಳು ಎದ್ದೇ ಏಳುವವು, ಒಂದುಗೂಡಿಸುವುವು, ಒಂದಾಗುವವು ಎಂಬ ವಿಚಾರ ಬರುತ್ತಲೇ ಅನಂತನ ವಿಶಾಲವಾದ ಹೃದಯದ ಯಾವದೋ ಒಂದು ಮೂಲೆ ಯಲ್ಲಿ ತೀರ ಸೂಕ್ಷ್ಮವಾದ ಆದರೂ ತೀಕ್ಷ್ಣವಾದ ಅಸಮಾಧಾನದ ಗೆರೆ ಯೊಂದು ಮೂಡಿತು.

ಅನಂತನೂ ಈಗ ದೊಡ್ಡವನಾಗಿದ್ದ. ಇಂಗ್ಲಿಷ್ ಐದನೆಯ ಇಯತ್ತೆ ಯಲ್ಲಿ ಓದುತ್ತಿದ್ದ. ಅವನಲ್ಲಿ ಈ ಪ್ರಕಾರ ವಿಚಾರ ಮಾಡುವ ಶಕ್ತಿ ದಿನದಿನಕ್ಕೆ ಬೆಳೆಯುತ್ತಲಿದ್ದಿತು. ಮೊನ್ನೆ ಭರಮನಗೂಡ ಮಾತಾಡಿದಾಗಿನಿಂದಲೂ ತಾರಕ್ಕನ ವಿಷಯ ಆಗಾಗ ಅವನ ಮನಸ್ಸನ್ನು ಕಲಕುತ್ತಿದ್ದಿತು. ಊರಿಗೆ ಹೋಗುವ ಮುಂಚಿತವಾಗಿಯೇ ಒಂದು ಸಂಜೆಯಲ್ಲಿ ಚಿನ್ನಮ್ಮವ್ವ ಬಸದಿಗೆ ಹೋಗಿ ದ್ದಳು. ಪಡಸಾಲೆಯಲ್ಲಿ ಸುಂದರವ್ವನ ಗೂಡ ಅಕ್ಕಾತಾಯಿ ಮಾತಾಡುತ್ತ ಕುಳಿತಿದ್ದಳು. ಭರಮು ಎಲ್ಲಿಯೋ ಹೊರಗೆ ಹೋಗಿದ್ದ. ತಾರಕ್ಕ ಒಬ್ಬಳೇ ಅಡುಗೆಯ ಮನೆಯಲ್ಲಿ, ಮುಂಜಾನೆ ತಿಂದುಳಿದ ಹಾಲು ಕಾಯಿಸುತ್ತಿದ್ದಳು. ಅನಂತ ನೀರು ಕುಡಿಯಲೆಂದು ಒಳಗೆ ಹೋಗಿ....“ ಯಾನ ತಾರಾ, ಭರಮುಗ ಕುಡಿಲಾಕ....ಹಾಲ ಕಾಸಕ....ಹತ್ತೀದಿ ಯಾನ....? ” ಸ್ವಲ್ಪ ಕೊಂಕುದನಿ ಯಿಂದ ನಸುನಗುತ ಕೇಳಿದ.

“ ಹ್ಞೂ ! ನಾ ಯಾತಕ್ಕ ಹಾಲು ಕಾಯಿಸಲಿ....? ಅವರಿಗಿ ಕಾಸಾವರಾ ಕುಡಸಾವರಾ ಬ್ಯಾರೇನ ಇದಾರಲ್ಲ; ಆ ಪದವಿ ನಂಗೆಲ್ಲಿ ಬಂದೋತು....? ” ಸಹಜ ದನಿಯಲ್ಲಿ ಸಾವಕಾಶ ನುಡಿದಳು ತಾರಕ್ಕ. ಮಾತು ಹೃದಯದಿಂದ ಹೊರಟಂತಿತ್ತು.

" ನಿನಗ ಇನ್ನೂ ಆ ಪದವಿ ಸಿಕ್ಕಿಲ್ಲ....ಅನ್ನು....! "

ತಾರಕ್ಕ ಸುಮ್ಮನಿದ್ದಳು.

" ಇಷ್ಟ ದಿವಸ ಸರ್ವೀಸ ಆಯ್ತು....ಎಂದ ಸಿಗೋದ ಇನ್ನ....? "

ಅನಂತನ ಮಾತಿನ ಭಾವ ಅರ್ಥವಾಗದ್ದಕ್ಕೆ...." ಅಂ ? " ಎಂದಳು ತಾರಕ್ಕ.

" ಇಷ್ಟ ದಿನಾ ಚಾಕರಿ ಹಾಕಿದಿ, ಸಿಗೂ ಆಶಾ ಏತಿಲ್ಲಾ ? "

" ಸಿಕ್ಕೋತಲ್ಲ; ಇಂದಿಲ್ಲ ನಾಳಿ...."

" ಹೀಗ . ಹೇಳು ; 'ನಾ ಯಾತಕ್ಕ ಕಾಸಲಿ ?' ಅಂತಾ ಯಾಕ ಅನ್ನತಿ ? ಹುಲೀ ಅಂಥಾ ಅವ್ವ ಇದಾಳು, ತಿನ್ನಸಾಕೀ ಉಣ್ಣಸಾಕೀ, ತಂಗಿ ಇದಾಳ ವ್ಯಾಲಿ....ತಡೀ ತಪ್ಪದೀ ನೋಡಾಕೀ.... ನಾ ಯಾತಕ ಬೇಕ ಅಂವಗ? ನಾ ಊಟಕ ಹಾಕಿದರ ಮಾಡಿದರ ಕಣ್ಣ ಹತ್ತ್ಯಾವಲ್ಲಾ, ನನ್ನೂ...."

"ಕಣ್ಣ ಬ್ಯಾರೆ ಹತ್ತತಾವ್ಯಾನ....? ಯಾರ ಹೇಳಿದರಿದನ್ನ ! ಒಳ್ಳೇ ಹಳ್ಳಿ ಸಮುಜೂತಿ ಏತೆಲ್ಲ ಇದು....ದಿನಾ ಹಟೀಲದಾಗ ಒಬ್ಬರ ಮುಂದೆ ಒಬ್ಬರ ಕೂತ ಬೇಕಾದ ತಿಂತಾರೂ.... ಆವರಿಗ್ಯಾನ ಆಗುದಲ್ಲ....ಮನಿಯೊಳಗ ಹ್ಯಾಂತಿ ಗಂಡಗ ಇಕ್ಕಿದರ....ಕಾಲಧೂಳಿ ಆಗತೇತಿ ಯಾನ " ತಾರಕ್ಕನ ಮನದ ಇಂಗಿತ ವನ್ನು ಹೊರಗೆಡವಲೆಂದು ಅನಂತ ಕೇಳಿದ.

" ನಿಮ್ಮ ಶಹರದಾಗ ಕಾಲಧೂಳಿ ಆಗಲಾಕಿಲ್ಲ. ನಮ್ಮ ಹಳ್ಳ್ಯಾಗ ಎಲ್ಲಾ ಆಗತಾವ ನೋಡು " ಸ್ವಲ್ಪ ತಡೆದು, " ಅದರಾಗ ನಮ್ಮ ಮನ್ಯಾಗ ಭಾಳ ಲಗೂ. ಯಾನ ಐತಿ ಯಾನೋ, ಈ ಮನೀ ಕಾಲಗುಣಾನs " ಅನಂತನ ಕಡೆಗೆ ನೋಡುತ್ತ ನುಡಿದಳು ತಾರಾ. ಒಲೆಯೊಳಗಿನ ಉರಿಯ ಬೆಳಕು ಬಿದ್ದು ಅವಳ ಮುಖ ಚಿಂತೆಯ ಚಿತೆಯಂತೆ ಕಂಡಿತು, ಅನಂತನಿಗೆ.

" ಈ ಮನೀ ಕಾಲಗುಣಾ ಅಲ್ಲ ; ನಿನ್ನ ಕಾಲಗುಣಾ " ನಗೆಯ ಗಾಳಿ ಹಾಕಿ ನುಡಿದ ಅನಂತ.

"ನಂದs ಮತ್ತ! ನಾ ಯಾನ ಮಂದೇದ ಅಂತ್ಯಾನು? ಬ್ಯಾಡಾದವರದ ಕಾಲಗುಣಾ ಕೈಗುಣಾ ಎಲ್ಲಾ ಕೆಟ್ಟs ಇರೋವಲ್ಲ! ಬೇಕಾದಕ್ಕಿ ಇದ್ದಿದ್ದರ ಇಂಥಾದ ಯಾಕ ಬಂದಿರೋತ ತನ್ನ ಪಾಲಿಗಿ?"

"ಯಾರಿಗಿ ಬ್ಯಾಡಾಗಿದಿ ನೀ?" ಎಳೆ ಸಿಕ್ಕವನಂತೆ ಕುತೂಹಲದಿಂದ ಬಾಯಿ ಬಿಟ್ಟ ಅನಂತ.

"ಎಲ್ಲಾರಿಗೂ."

"ಎಲ್ಲಾರಿಗೂ! ಭರಮುಗ?"

"ಅಂವಗ ಅಂತೂ ನಾ ಮೂಲದಾಗs ಬೇಕಾಗಿಲ್ಲ."

ಸ್ವಲ್ಪ ತಡೆದು ಹೊರಗಿನಿಂದ ಯಾರಾದರೂ ಬರುವರೇನೋ ಎಂದು ನಿರೀಕ್ಷಿಸಿದಳು. ಅವಳ ಭಾವವನ್ನರಿತು ಅನಂತ "ಯಾರಿಲ್ಲ" ಎಂದ.

ಆಮೇಲೆ ತಾರಕ್ಕ ಬಿಸಿಯುಸಿರೊಂದನ್ನು ಹೊರದೂಡಿ "ಅಂವಗs ಬೇಕಾಗಿದ್ದರ ಇಷ್ಟೆಲ್ಲ ಯಾಕ ಆಗತಿತ್ತು? ಇವರ‍್ಯಾಕ ನನ್ನಾ ತಿಪ್ಪೀ ಮ್ಯಾಲಿನ ಕಸದಹಂಗ ಮಾಡತಿದ್ದರು?" ಅಂದಳು.

"ಯಾರ ತಿಪ್ಪೀಮ್ಯಾಲಿನ ಕಸಾ ಮಾಡಿದಾರು? ನೀನs ಆಗಿದಿ?" ಭರಮನ ಮನಸ್ಥಿತಿ ತಿಳಿಸಬೇಕೆಂಬ ಮಾರ್ಗದಲ್ಲಿ ಮಾತು ಮುಂದೆ ಬಂತು, ಅನಂತನ ಬಾಯಿಂದ.

"ಹಾಂಗs ಅನ್ನು, ಯಾರ ಬ್ಯಾಡಂತಾರು?"

"ಹಾಂಗ ಅನ್ನಲಾಕ ಯಾನ?" ಸ್ವಲ್ಪ ಹೊತ್ತು ಸುಮ್ಮನಾದ ಅನಂತ ತಾರಕ್ಕನೂ ಸುಮ್ಮನಿದ್ದಳು. ಆದರೆ ಅನಂತನ ಮುಖದ ಕಡೆಗೆ ಮಾತು ನಡುವೆಯೆ ನಿಂತುದಕ್ಕಾಗಿ ನೋಡುತ್ತಿದ್ದಳು. "ನಿನಗ್ಯಾನ ಆಗೀತಿ ಈಗ?" ಎಂದ ಅನಂತ. ಮಾತು ವಿಚಾರದ ಕೊನೆಯುಂತಿತ್ತು.

"ನನಗ್ಯಾನ ಆಗೇತಿ? ಹೋಂದ; ಯಾನ ಆಗಿಲ್ಲ. ಎಲ್ಲಾ ನೆಟ್ಟಗ ಇದ್ಯಾನಲ್ಲ; ಯಾನ ಉರೀ ಬಂದಿಲ್ಲ. ಥಂಡೀ ಬಂದಿಲ್ಲ. ಹಾಸಿಗಿ ಹಾಕಿ ಯಾನ ಮಲಗಿಲ್ಲಾ. ಇಂದಾ ನಾಳಿ ಸಾಯ್ತ್ಯಾನ ಅನ್ನೂ ಹಾಗ್ಯಾನ ಇಲ್ಲಾ. ಎಲ್ಲಾರು ಉಣೂಹಂಗ ಉಣತ್ಯಾನು. ಕೆಲಸ ಮಾಡೂಹಂಗ ಮಾಡತ್ಯಾನು, ಅಲ್ಲಾ?"

ಅನಂತನ ಹೃದಯಕ್ಕೆ ಬರೆಕೊಟ್ಟಂತಾಯಿತೀಗ, ಈ ಮಾತಿನಿಂದ. ನಾನೇಕೆ ಹೀಗೆಂದೆನೊ ಎಂದು ಒಂದು ಕ್ಷಣ ಮರುಗಿದ. ಆ ಮರುಕದ ಸ್ವರದಲ್ಲಿಯೇ "ಈಗ ಯಾತಕ ಬೇಡಕೋತಿ ಅಂಥಾದ ? ಇಂದಿಲ್ಲ ನಾಳಿ ಸುಖಾ ಆದೋತ. ಗಂಡನ ಗೂಡ ಜನ್ಮಾ ಮಾಡ ನಾಲ್ಕೊಪ್ಪತ್ತ. ಮಕ್ಕಳ ಹುಟ್ಟಲಿ. ಅಂಯ್ದ ಸಾಯೂ ಅಂತ" ಕಿಂಚಿತ್ ಸಮಾಧಾನಗೊಳಿಸಲೆಂದು ನುಡಿದ ಅನಂತ.

ತಾರಕ್ಕ ಸುಮ್ಮನೆ ಕುಳಿತಿದ್ದಳು ಒಲೆಯಲ್ಲಿ ಬಹಳ ಹೊತ್ತಿನಿಂದ ಬೆಂಕಿಯು ದಣದಣ ಉರಿಯುತ್ತಿದ್ದಿತು. ತಾರಕ್ಕನ ಕೈಯು ಸುಮ್ಮನೆ ಕೂಡದೆ ಸ್ವಾಭಾವಿಕವಾಗಿ ಬೆಂಕಿಯನ್ನು ಒಲೆಯಲ್ಲಿ ನೂಕಿತು. ಮಾತಿನಲ್ಲಿ ಹಾಲು ಕಾಯ್ದ ಕಲ್ಪನೆ ಅವಳಿಗಿರಲಿಲ್ಲ. ಕಾವು ಹೆಚ್ಚಾಗಿ ಅದೊಮ್ಮೆಲೇ ಉಕ್ಕುಬಂತು. ಒಲೆಯ ಮೇಲಿನ ಪಾತ್ರೆಯನ್ನು ಕೆಳಗಿಳಿಸುತ್ತ, "ಮಕ್ಕಳ ಯಾರಿಗಿ ಬೇಕಾಗಿದಾವ ಸುಡಲಾಕ !" ತಾರಕ್ಕ ಅಂದಳು. ಅಷ್ಟರಲ್ಲಿ ಹೊರಗಿನಿಂದ ಅಕ್ಕಾತಾಯಿ "ಹಾಲ ಉಕ್ಕಿಸಿದಿ ಯಾನ ?" ಎಂದು ಕೇಳುತ್ತ ಒಳಗೆ ಬಂದಳು.

ಅನಂತ ಎದ್ದು ಹೊರಗೆ ಹೋಗುತ್ತ ತಾರಕ್ಕನಿಗಷ್ಟೇ ತಿಳಿಯುವಂತೆ "ಹೀಗಂದರ ಕೈ ಸುಟಗೊಂಡ ಎಲ್ಲಾನು ಕಳಕೊಂಡೀ !" ಎಂದು ಹೇಳಿ ಹೋದ.

ತಾರಕ್ಕ ಅನಂತನ ಕಡೆಗೆ ಹೊರಳಿ, ತನ್ನಲ್ಲಿ ಅವೇ ನುಡಿಗಳನು ಉಚ್ಚರಿಸಿದಳು.

## ೧೧

ಹೂವಣ್ಣನ ಉತ್ತರಕ್ರಿಯೆಗೆ ಬಂದ ಆಪ್ತರೆಲ್ಲ ಹೋದಮೇಲೆ ಮಲ್ಲ ಅಳಿಯನನ್ನು ಒತ್ತಟ್ಟಿಗೆ ಕರೆದು "ಎಲ್ಲಾ ಬಸಯ್ಯನ ಅಂಗಡ್ಯಾಗಿಂದ ಸಾಮಾನ ತಂದೀತಿ. ಅರಿವಿಗಿ ಆಗಲಿ, ಸುತ್ತ ಯಾದಕ ಆಗಲಿ, ರೂಪಾಯಿ

ಬೇಕಾದ್ರೂ ಅವನ ಹತ್ತ್ಯಾಕ ಇಸಗೊಂಡಿದ್ಯಾನು. ಎಲ್ಲಾ ಕೂಡಿ ಎರಡೂವರೀ ನೂರ ರೂಪಾಯಿ ಖರ್ಚ ಬಂದಂಗ ಆಯ್ತು. ಅಷ್ಟ ನಾಲ್ಕ ದಿನದಾಗ ನಿಮ್ಮವ್ವನ ಹತ್ತರ ಇಸಗೊಂಡ ಕೊಡು. ಭಾಳ ದಿನಾ ಇಟಗೊಂಡ ಕೂಡೋದ ಛಲೂ ಅಲ್ಲ. ನಾ ಇನ್ನ ನಮ್ಮ ಮನೀಗಿ ಹೋಗತ್ಯಾನು. ಹತ ಹದಿನೈದ ದಿನಾ ಆಯ್ತ ಹೊಲಕ ಹೋಗಿಲ್ಲ. ಯಾನ್ಯಾನ ಆಗೀತ್ಯೋ ಯಾನೋ ?" ಎಂದು ಹೇಳಿ ನಡೆದ.

ಭರಮು ಮಾವನನ್ನು ಕರೆದು "ಅವ್ವಾಗ ಹೇಳಿ, ನೀನs ಅಷ್ಟ ತೀರಿಸಿ ಹೋಗಲ್ಲ, ಮತ್ತ್ರ ಯಾಕ ಹಿಂದ ಇಡೋದ ? ಯಾವಾಗಾದರ ಬಸಯ್ಯಾಗ ಕೊಡಕಬ್ಯಾಡಾ ?" ಎಂದ.

"ಇನ್ನ ನಿಮ್ಮದ ನೀವ ನೋಡಕೋಬೇಕಪ್ಪಾ ! ನಿಮ್ಮ ಮನ್ಯಾಗ ತಾಳ ಇಲ್ಲ. ನಾವ ಆಪ್ತರ ಆಗತೇವ. ಹೆಚ್ಚಾಗಿ ಹೇಳ್ಕ ಬರೂದುಲ್ಲ. ಚಿಮ್ಮವ್ವನs ಯಾತಕ ಬರತಾರ ಅನ್ನೂತನಕಾ ನಾವ ಯಾತಕ ಬರೂನು ? ಆ ದಿನಾನ ಹೋಗಾವ ಇದ್ನಿ, ಖರೇ. ಛಲೂ ಅಲ್ಲ; ಎಲ್ಲಾ ಇಲ್ಲೇದ ಇಲ್ಲೇ ಬಿದ್ದೋತು. ಹೀಂಗ ಅಂದ ಮೋಜ ನೋಡಾವರ ಅಣ್ಣತಮ್ಮರಾ, ಅಂತ ನಾ ಹಿಡದಂಗ ಇಲ್ಲೀ ತನಕಾ ಎಲ್ಲಾ ದಂಡಿಗಿ ಹಚ್ಚಿನು. ಇನ್ನ ನಿಂದ ನೀ ನೋಡಕೋ" ಎಂದು ಸಮಾಧಾನದಿಂದಲೇ ಹೇಳಿ ಮಲ್ಲ ಹೋಗಿಬಿಟ್ಟ.

ಮರುದಿನವೇ ಬಸಯ್ಯನ ಆಳು ಭರಮುನ ಕಡೆಗೆ ರೂಪಾಯಿಗಾಗಿ ಬಂದ. ಭರಮು ಸ್ವತಃ ಅಂಗಡಿಗೆ ಹೋಗಿ "ನಾಳಿ ಯಾನರ ಮಾಡಿ ಕೊಡತ್ಯಾನು" ಎಂದು ಹೇಳಿ ಬಂದ. ಇಷ್ಟು ಹೇಳಿ ಬರಬೇಕಾದರೆ ಅವನಿಗೆ ಹೇಗೋ ಅನ್ನಿಸಿತು. ಅವನೆಂದೂ ಮನೆತನದ ಇಂಥ ಕೆಲಸಗಳಲ್ಲಿ ಮುಂದಾದವನಲ್ಲ. ಅದರ ಅನುಭವವೂ ಅವನಿಗಿರಲಿಲ್ಲ. ಅಂಗಡಿಯಿಂದ ಮರಳಿ ಬಂದವನೇ ನೇರವಾಗಿ ಭರಮು ತಾಯಿಯ ಹತ್ತರ ಹೋಗಿ, ಹಣದ ವ್ಯವಸ್ಥೆಯ ಬಗ್ಗೆ ವಿಚಾರಿಸಿದ. ಅದಕ್ಕೆ ಅವಳು "ಮನೀ ತುಂಬ ಬದಕ ಐತಿ ; ದನಾಕರಾ ಇದಾವ ; ಹ್ಯಾಂತೀ ಮೈಮ್ಯಾಲದಾಗೀನಿ ಇದಾವ ; ಬೇಕಾದ್ದ ಮಾಡಿ ತೀರಿಸಬೇಕು. ತನ್ನ ದಿನಕ್ಕ ಯಾನ ತಾಪತ್ರಿ ಆಗೂಹಂಗ ಅವ್ವಾನ ಬಾಳ್ವಿಮಾಡಿ ಹೋಗಿಲ್ಲ" ಎಂದಳು.

ಭರಮು ಅಷ್ಟಕ್ಕೆ ಸುಮ್ಮನಾದ. ಆದರೆ ಮನದಲ್ಲಿಯೇ ಅಂದುಕೊಂಡ, "ಅಪ್ಪ ತನ್ನ ದಿನಕ ಹಿಂದ ಜಡಾ ಹರೀಬಾರದಂತ್ಯ ನಿನ್ನ ಕೈಯಾಗ ಬೇಕಾದಷ್ಟ ದುಡ್ಡ ಕೊಟ್ಟ ಸತ್ತಾನ. ಅವ ಕುಡಲ್ಲ್ಯಾ" ಎಂದು. ಅಂಗಡಿಯ ಆಳು ಮತ್ತೊಮ್ಮೆ ಕೇಳಲಿಕ್ಕೆ ಬರಲು, ಭರಮು ಸ್ವಲ್ಪ ವಿಚಾರಿಸಿ, ಅವನನ್ನು ಹೊರಗೆ ಕರೆದೊಯ್ದು, ಏನೋ ಕಿವಿಮಾತು ಹೇಳಿ ಕೊನೆಗೆ "ಅವ್ವನ ಹತ್ತರ ಹೋಗಿ ಕೇಳ್ಕೋಗು" ಎಂದು ಕಳಿಸಿದ.

ಆಳು ಚಿಮ್ಮವ್ವನ ಹತ್ತರ ಹೋಗಿ ಕೇಳಿದ. ಆಗ ಚಿಮ್ಮವ್ವ "ನಾ ಯಾರಪ್ಪಾ ಈ ಮನ್ಯಾಗ? ಮಗಾ ಸೊಸೀ ಹಾಕಿದ ಒಂದ ತುತ್ತ ರೊಟ್ಟಿ ತಿಂದ ಬೀಳೂ ನಾಯೀ! ಅಂವ ಇರೂತನಕಾ ಮಾಡಿನಿ ಅಲ್ಲ! ಬೇಕಾದ್ದ ಹಾಕಿನಿ, ತಗದನಿ. ಈಗ್ಯಾನ ನಂದ ನಡೀತೇತಿ? ಸರಿಕದವ ಮಗಾ ಆಗಿದಾನ ಮಾಡೂಹಾಂಗ. ಅವನ ಬಿಟ್ಟ ನನ್ನ ಸುತ್ತ ಯಾಕಪ್ಪ?" ಎಂದು ಹೇಳಿದಳು. ಆಮೇಲೆ ಸ್ವಲ್ಪ ಹೊತ್ತು ಸುಮ್ಮನೆ ಕುಳಿತು, ಹಾಡಿ ಹಾಡಿ ಅಳುತ್ತ, "ಇಂಥಾ ದಿನಾ ಬರತಾವತ್ತ ನನಗ ಗೊತ್ತ ಇಲ್ಲ ಆಗಿತ್ತಪ್ಪಾ! ಯಾನೂ ನನ್ನ ಹತ್ತ್ಯಾಕ ಇರಬಾರದ ಅಂತಾರ್ಯ್ಯಾನಪ್ಪಾ! ಹೀಂಗ ಆದೋತಂತ್ಯ ಅವ ನಂಗ ಕೊಟ್ಟ ಹೋದಪ್ಪ! ಅಯ್ಯೋ ನನ್ನ ಆರಸ! ಆರಸ!" ಎಂದು ಅಳುತ್ತ ಕುಳಿತಳು. ಅಂಗಡಿಕಾರನ ಆಳು ಏನೂ ತಿಳಿಯದೆ ತಿರುಗಿ ಹೋದ.

ಎರಡು ದಿನದ ನಂತರ ಬಸಯ್ಯ ಮಲ್ಲ ಭರಮುರಿಬ್ಬರನ್ನೂ ಕರಿಸಿ, ಬಾಯಿ ಮಾಡಿ ಕೇಳಿದ. "ಒಯ್ಯೋಗ ಸಾಮಾನ ಒಯ್ದು, ಈಗ ತಾಯಿ ಮಕ್ಕಳಾ ಒಬ್ಬರ ಮ್ಯಾಲ ಒಬ್ಬರ ಹಾಕ್ತ ಹೋದರ ಮುಂದೇದ ಕುಡೋದ ಯಾನ ಬಿಡತೇತಿ?"

ಮಲ್ಲ ಅವನಿಗೆ ಸಮಾಧಾನದ ಮಾತುಗಳನ್ನು ಹೇಳಿ, ನಿಜವಾದ ಸಂಗತಿಯನ್ನು ಅರುಹಿದ. ಅಲ್ಲದೆ ಒಂದೆರಡು ದಿನಗಳಲ್ಲಿ ಏನಾದರೂ ವ್ಯವಸ್ಥೆ ಮಾಡಿಕೊಡಲಿಕ್ಕೆ ಹಚ್ಚುವೆನೆಂದೂ ಹೇಳಿಕೊಂಡು, ಭರಮುನಿಗೆ 'ಇನ್ನೊಮ್ಮೆ ತಾಯಿಯನ್ನು ಕೇಳು. ಇಲ್ಲವೆಂದರೆ ಏನಾದರೂ ಮಾಡಿ ತೀರಿಸಿಬಿಡೋಣ' ಎಂದು ಸೂಚಿಸಿ ಮನೆಗೆ ಬಂದ.

ಅದೇ ದಿನ ಮಧ್ಯಾಹ್ನದಲ್ಲಿ ಭರಮು ಮತ್ತೊಮ್ಮೆ ತಾಯಿಗೆ ಕೇಳಿದ. "ಅವ್ವಾ, ನಿನ್ನ ಹತ್ಯಾಕಿನ ರೂಪಾಯಿ ಈಗನಕ ಕೊಟ್ಟುಬಿಡು. ನಾಳಿ ಸುಗ್ಗಿ ಆದ ಮ್ಯಾಲಿ, ಹತ್ತೀನೂರಿ ಮತ್ತ ತಗೋ. ಎಲ್ಲಾ ನಿಂದs ಮನೀ ಏತಿ, ಮನ್ಯಾಗಿಂದ ನಾವ್ಯಾನ ಎಲ್ಲಿ ಒಯ್ಯುದುಲ್ಲ. ಹಿಂಗ್ಯಾಕ ಮಾಡತಿ ? ಮುಂದ್ಯಾಗ ನನ್ನ ಭಂಡಮಾಡಿ ಮಾರಿ ಒಡಿಸಿ ಇಡತಿ ! ನಿನಗರ ಇದ ಛಂದ ಕಾಣಸ್ತೇತ್ಯಾನ ನೋಡು ?" ಎಂದು ಅಂಗಲಾಚಿದ. ಧ್ವನಿಯಲ್ಲಿ ಕರುಣ ವಿದ್ದಿತು.

"ಇಲ್ಲ ; ನನ್ನ ಜೀವಕಾ ಭಾವಕಾ ಅಷ್ಟ ಇರಲಿ ; ನೀವ್ಯಾನ ಗಳಿಸಿ ಕೊಟ್ಟಿಲ್ಲ. ಹಿರೇರ ಗಳಿಸಿದ್ದs ಏತಿ. ಅಂವs ಕೊಟ್ಟ ಹೋಗಿದಾ. ನೀವ ಗಳಿಸಿ ಕೊಡೂ ಮಾರಿ ಮ್ಯಾಲs ಕಾಣಸ್ತೇತಿ. ಅವನ್ನ ನೀ ಕೇಳಬಾರದು, ನಾ ಕೊಡಬಾರದು" ಎಂದು ಚಿಮ್ಮವ್ವ ಸಮಾಧಾನದಿಂದಲೇ ಹೇಳಿದಳು. ಭರಮು ಸ್ವಲ್ಪ ಕೆರಳಿದ. ಕಣ್ಣು ತೆರೆದು "ಇಂಥಾ ವ್ಯಾಳೇಕ ಇಲ್ಲದ ಯಾನ ಮಾಡೋವ ಅವು ? ಒಂಟಿ ಕಾಲಮ್ಯಾಲ ನಿಂತ, ಮನ್ಯಾಗಿನ ದನಾ ಕರಾ ಮಾರಿ ಉದೋಳಸ ಅಂತಿ ಯಾನ ನನಗ ?" ಅಂದ. ಧ್ವನಿಯೂ ಸ್ವಲ್ಪ ಬಿರುಸಾಗಿದ್ದಿತು.

"ಅಂವ ಸತ್ತ ಮ್ಯಾಲಿ ನಾಲ್ಕs ದಿನದಾಗ ಹೀಂಗ ಕಣ್ಣ ಕಿಸಿಬ್ಯಾಡಪ್ಪ, ನನ್ನ ಮ್ಯಾಲ !" ಮುಂದೆ ಸರಿದು ಬಂದು ಸಿಟ್ಟಿನಿಂದ ನೆತ್ತಿನೆತ್ತಿ ಬಡಿದು ಕೊಂಡು "ಬಡ್ಯಾಂವ ಇದ್ದರ ಬಡೀ ನಾಕ ನನ್ನಾ ! ಬಡಿತೀ ? ಬಡಿ. ನಿನಗ ಯಾರ ಕಲಸ್ತಾರ ಎಲ್ಲಾ ನಂಗ ಗೊತ್ತ ಏತಿ. ಕಲಕೀ ಮಾತ ಕಲತ ಮನ್ಯಾಗ ಬಂದ ಹೀಂಗ ಕಣ್ಣ ತೆರೀತಿ, ಇದ ಛಲೂ ಅಲ್ಲಪ್ಪ ! ಹಡದ ಅವ್ವ ಅನ್ನೋದ ಜರಾ ಅರವ ಇರಬೇಕು. ಮನೀ ಕಾರಬಾರಕಿ ಕೈಯಾಗ ಬಂತ ಅಂತ ಹೀಂಗ ಮಾಡಬಾರದು" ಎಂದಳು.

"ಇಲ್ಲದ ಒಂದ ಬಡಬಡಿಸಬ್ಯಾಡ ; ಯಾರ ಯಾತಕ ಕಲಸತಾರ ನನಗ ? ಸುಮ್ಮನ ಒಂದ ಸಂಶಿ ಕಟ್ಟಿ ಮಾತಾಡಬ್ಯಾಡಾ."

"ಅದ ಯಾನ ಯಾಕ ಇರವಲ್ತು. ಪೋರಿ ಬೆಳವ ನಿಂತಾಳ, ಎದಿ ಉದ್ದ. ಆಕೀ ಮದಿವಿ ಆಗೋದ, ಆಕಿ ಗಂಡನ ಮನೀಗಿ ಹೋಗಾಕೆ, ಬರಾಕೀ ;

ನಾ ಎಲ್ಲಾ ನಿನಗ ಕೊಟ್ಟ ಬಟ್ಟಬರಗೈಲೆ ಕೂಡಲಿ ? " ಎಂದು ಚಿಮ್ಮವ್ವ ಕೇಳಿದಳು.

ಭರಮು ಅದಕ್ಕೆ ಏನೂ ಹೇಳಲಿಲ್ಲ. ಸ್ವಲ್ಪ ಹೊತ್ತು ಹಾಗೇ ನಿಂತ. ಮುಖ ವಿವರ್ಣವಾಗುತ್ತಲಿದ್ದಿತು. ಅನೇಕ ಬಣ್ಣಗಳನ್ನು ತಳೆಯುತ್ತ ಬಂದು, ಕೊನೆಗೆ ಕೆಂಪಾಯಿತು. ತುಟಿಗಳು ಮೆಲ್ಲನೆ ಅದುರಿದುವು. " ನಿನ್ನ ಮನೀ ನೀ ನೋಡಕೋ " ಎಂದು ಹೇಳಿ ಹೊರಗೆ ಹೋಗಿಬಿಟ್ಟ. ಚಿಮ್ಮವ್ವ ಅವನ ಕಡೆಗೆ ನೋಡಿ ಅಣಕದ ನಗೆಯೊಂದನ್ನು ಬೀರಿ ಸುಮ್ಮನಾದಳು. ಸ್ವಲ್ಪ ಹೊತ್ತಿನ ಮೇಲೆ ತಾರಕ್ಕ ಹೊರಗಿನಿಂದ ಬರಲು " ನಿನ್ನ ಗಂಡ ಜಗಳ್ಯಾಡಿ ಮನೀ ಬಿಟ್ಟ ಹೋದಾ " ಎಂದು ಹೇಳಿದಳು.

ತಾರಕ್ಕ ಸುಮ್ಮನಿದ್ದಳು. ಅವಳ ತುಟಿಯಲ್ಲಿ ಆಶೆಯೋ ನಿರಾಶೆಯೋ ಬೆರೆತ ಮುಗುಳು ನಗೆಯೊಂದು ಮೂಡಿತು. ಅದನ್ನು ನೋಡಿ ಚಿಮ್ಮವ್ವ " ನಿಮ್ಮದ ಎಲ್ಲಾ ಕುಸಲತ ಏತಿ. ಅದಕ್ಕ ಅಂವ ಅಷ್ಟ ಹಾರ್‍ಯಾಡತಾನ. ಕಲಿಸಿ ಯಾನ್ಯಾನ ಮಾಡತೀರಿ ಮಾಡರಿ ನಮ್ಮವ್ವ ! " ಚಿಟಿಕೆ ಮುರಿದು " ತಾಯಿಗಿ ಮಕ್ಕಳಿಗಿ ಇಗಡ ಮಾಡಿ ಇಟ್ಟರಿ ! " ಸಿಟ್ಟಿನಿಂದ ಅಂದಳು.

" ಯಾರ ಕಲಸತಾರು ? ಕಲಿಸಿದವರ ಹಾಳಾಗಿ ಹೋಗವಲ್ಲರ‍್ಯಾಕ " ಎಂದಳು ತಾರಕ್ಕ ತಾಳಲಾರದೆ. ಸ್ವಲ್ಪ ಸಿಟ್ಟಿನಿಂದ " ಯಾಕ ಉರೀತಿ ತಾಯಿ ಸುಮ್ಮನೆ ನಮ್ಮ ಹೆಸರಲೇ ? "

" ನಾ ಯಾಕ ಉರೀಲೆ ಹಡದವ್ವಾ, ನಿನ್ನ ಹೆಸರಲೆ ? ಎಲ್ಲಾರು ಮನ್ಯಾಗ ನನಗ್ಯ ಅನ್ನಾನವರ ಆದರವ್ವಾ ! ನಂದ ಯಾನ ಕೆಟ್ಟ ನಸೀಬ ಇದ್ಲೋತೂ ? " ಎಂದು ಒಂದು ತಾಸಿನ ವರೆಗೆ ದನಿ ತೆಗೆದು ಒಂದೇ ಸವನೆ ಅತ್ತಳು. ನೆರೆಮನೆಯ ನಾಲ್ಕು ಜನ ಹೆಣ್ಣುಮಕ್ಕಳೂ ಕೂಡಿದರು. ಅವರೊಳಗೊಬ್ಬಳು " ಅತ್ತಿಂದ ಇತ್ತಿಂದ ತಿರಗಾಡಿ ಬರಾಂವ ಹೂವಣ್ಣಾ, ಮದಿನದಾಗ ಚಹಾ ಮಾಡಂತ ಅನ್ನಾಪ ಮುಂದ ಕೂತ, ಮಾಡಸಕೊಂಡ ಕುಡ್ಯಾವ. ಚಾ ವೇಳೆ ಆಗಾನಾ ನೆನಪ ಆಗತೇತೀ, ಅಳತಾಳ ಚಿಮ್ಮಾ; ಯಾನ ಮಾಡ್ಡೋದಾ ? ದೇವರ ಕಟ್ಟಿಕೊಂಡ ಹೋದಾ " ಎಂದು ಕಣ್ಣೀರು ತಂದು ಅಂದಳು.

"ಮನೀ ಎಲ್ಲಾ ಭಣಭಣ ಮಾಡತೇತೆ....ಹೊತ್ತs ಹೋಗೂದುಲ್ಲ. ಎಷ್ಟ ಕೆಲಸ ಮಾಡಿದ್ರೂ ಮಾಡುಲ್ಲಾಂಗs" ಎಂದು ಹೇಳಿ ಸುಮ್ಮನಾದಳು ಚಿಮ್ಮವ್ವ.

ಹೆಂಗಸರೆಲ್ಲರೂ ಸಮಾಧಾನದ ನಾಲ್ಕು ಮಾತುಗಳನ್ನು ಹೇಳಿ ಎದ್ದು ಹೋದರು. ಬಾಗಿಲ ಹೊರಗೆ ಹೋದನಂತರ ತಮ್ಮ ತಮ್ಮಲ್ಲಿ ಮಾತಾಡುತ್ತ ನಡೆದರು.

"ಈಗ ಅವ್ವಾ ಮಗಾ ಯಾತಕ ವಾಸ್ಯಾಡುತ್ತಿದ್ದರು, ಅದಕ ಗಂಡನ ನೆನಪ ಮಾಡಿ ಅಳತಿದ್ದಾದಾಳ ತಗೋ!" ನೆರೆಮನೆಯವಳೊಬ್ಬಳು ತುಚ್ಛತೆ ಯಿಂದ ನುಡಿದಳು.

"ವಾಸ್ಯಾಡದ ಯಾನ ಮಾಡ್ಯಾನು? ಮಗನಾ ಸೊಸೀನಾ ಅಂದರ ಮುಳ್ಳುಮ್ಯಾಲs ಹಿಡದಂಗ ಮಾಡಿದಾಳು. ತಾನೂ ಅತ್ತೀ ಕೈಯಾಗ ನಂಡೋಸಿದಕ್ಕಿ ಇದಾಳ. ತಿಳಿಬಾರದು ಇಕಿಗಿ? ಮುದುಕಿ ಆದಳಲ್ಲ!" ಮತ್ತೊಬ್ಬಳು ಹೇಳಿದಳು.

ಇನ್ನೊಬ್ಬಳು ಮಾತು ಮುಂದುವರಿಸಿದಳು, "ಎಂಥಾ ಬಂಗಾರದಂಥಾ ಪೋರಿ! ಸೊರಗಿ ಕಡ್ಡಿ ಹಂಗ ಆಗೀತಿ, ಹಗಲಿ ರಾತ್ರಿ ದುಡದ ದುಡದ!"

ನಡುವೆಯೇ ಮತ್ತೊಬ್ಬ ಮುದುಕಿ ಮುಂದೆ ಬಂದು, "ಯಾನ ಹೇಳ್ತಿ ತಗೋ! ದುಡದರ ಯಾನ ಆಗ್ತೇತಿ? ನಮ್ಮ ಪೋರಿಗೋಳ ದುಡೀದುಲ್ಲಾ? ಗಂಡಾ ಹ್ಯಾಂತಿ ಚಲೋ ಇದ್ದರ ಎಷ್ಟ ದುಡದರೂ ಯಾನ ಆಗುಲ್ಲ. ಪೋರಿ ಗೋಳ ರಸರಸೀತ ಇರತಾವ" ತನ್ನ ಸೊಸೆಯಂದಿರ ಸ್ಥಿತಿಗತಿ ಹೇಳಿದಳು.

ಮೊದಲು ಮಾತಾಡಿದವಳೊಬ್ಬಳು ಆಶ್ಚರ್ಯದಿಂದ ಕೇಳಿದಳು, "ಪದೂ, ಇನ್ನs ಹಾಸಿಗಿಗಿ ಹಚಕೊಟ್ಟಿಲ್ಲ ಅಂತಲ್ಲ ಪೋರಿನಾ; ಮೊನ್ನಿ ನಮ್ಮ ಮನೀಗಿ ಬೀಸಲಾಕ ಬಂದಿತ್ತು. ಆಣೀ ಹಾಕಿ ಕೇಳಾನಾ ಹೇಳ್ತ್ಯೈ ಪೋರಿ. ಯಾನ ಹೊಯ್ಕು ಇದ್ದೋತ ತಾಯಿ ಚಿಮ್ಮಾಂದ?"

"ಹುಚ್ಚೀ, ಹಾಸಿಗಿ ತನಕಾ ಹೊಂಟೀ ನೀ! ಇನ್ನ ನಿಂತ ಮಾತಾಡು. ಸ್ವತಾ ಇಲ್ಲ ಗಂಡಾ ಹ್ಯಾಂತಿಗಿ. ಆಕ್ಯಾನ ಈ ಪೋರಿನಾ ನಂಡೋಸ ಕೋತಾಳ ಅಂತೀ ಯಾನ? ಯಾವಾಗಾದರ ಮತ್ತೊಂದ ಮಾಡಾಕಿ ಮಗಗಾ."

" ಪೋರಿ ಒಳಗಿಂದ ಐತಲ್ಲ? ತಮ್ಮನ ಮಗಳಾ ! "

" ಹೂಂ ! ಮತ್ತೊಂದ ಮಾಡತಾಳ ! ಮತ್ತೊಂದ ಯಾನ ಮಾಡತಾಳು? ಇಕಿ ಮಾರಿ ನೋಡ, ಅಣ್ಣನ ಮಗಳ ಮ್ಯಾಲಿ ಮಾಡೋದ! ಎಲ್ಲಿರ ಮೊರಾ ಬಡದ ಬೆಕ್ಕಿನಾ ಅಂಜಕೋಳಾಕಿ."

" ಆಕೆಲ್ಲಾ ಮಾಡ್ಯಾಳ ಖರೇ. ಅಂಜಾವರ ಒಂದ ಬೇಕಲ್ಲ! ಹೀಂಗ ಯಾರರ ಹೊಲಾ ಮನೀ ಕೊಟ್ಟರ ದಿನಾ ಒಬ್ಬರ ತಗೊಂಡಾರ ! "

" ಹೊಲಾ ಮನಿ ತೊಗೋತಾಳ ಹೊಲಾ ಮನೀ ಅದ್ಯಾನ ಹಾದೀ ಮ್ಯಾಲ ಬಿದ್ದೀತಿ ಯಾನ ? " ಸ್ವಲ್ಪ ತಡೆದು " ಅದೂ ಸಿಕ್ಕೋತಲ್ಲ, ಇಕ್ಕಿ ಸೊಸೀನಾ ಹಚ್ಚಕೊಂಡ ಹೊಂದಸಕೊಂಡ ನಡದರ. ಆದರ ಎಲ್ಲಿ ಹೋಗತೇತಿ ? ಅವರಿಗೇನ ಬ್ಯಾರೆ ಯಾರ ಇದಾರು ?

" ಎಲ್ಲಾ ಹುಡುಗನ ಮ್ಯಾಲಿ ಏತಿ ನೋಡ ! ಮೇಟಕಟ್ಟಿಗಿ ಒಂದ ಘುಟ್ಟ ಇದ್ದರ, ಎಲ್ಲಿ ಹಾರ್ಯಾಡಕ್ಕಿ ಚಿಮ್ಮಾ ? "

" ಗಟ್ಟಿ ಇದ್ದ ಯಾನ ಮಾಡೋದಾ? ಅವಂದ ಯಾನ ನಡೀಗುಡದೀರ ? ಅಂವರ ಒಣಾದ್ಯ ಎಷ್ಟ ದಿನಾ ಇದ್ದಾ ? ಸರಾದ ಹುಡುಗೂರವ್ವಾ ಈಗಿನೂ ! "

ಈ ಮಾತು ಹೆಂಗಸರಿಗೆ ಸೇರಲಿಲ್ಲ. ಅವರು ಬೇರೆ ಮಾತು ತೆಗೆದರು.

ಭರಮು ಸಿಟ್ಟಿನಿಂದ ಎರಡು ದಿನ ಹೊರಹೊರಗೇ ತಿರುಗಿದ. ಗೆಳೆಯರ ಮನೆಯಲ್ಲಿ ಅಲ್ಲಿ ಇಲ್ಲಿ ಉಂಡ. ಅವ್ವ ಕರೆಯಲು ಕಳಿಸಬಹುದೆಂದು ಬಗೆದ. ಅವನ ಕಲ್ಪನೆ ದಿನಗಳೆದಂತೆ ಸುಳ್ಳಾಯಿತು. ಚಿಮ್ಮವ್ವ ಮನದಲ್ಲಿ ಈಗಲೇ ಮಗನನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವ ಸಂಧಿಯೆಂದು ಬಗೆದಳು. ಅದಕ್ಕೆ ಅವಳು ಮನೆಯ ಆಳನ್ನು ಕರೆದು, " ಅಂವ ಎಷ್ಟ ದಿನಾ ಸಿಟ್ಟ ಮಾಡಿ ತಿರಗತಾ ತಿರಗಲಿ. ನೀ ಎಲ್ಲಾ ದನಾಕರೀನ ಉಸಾಬರಿ ನೋಡಕೊ " ಎಂದು ಹೇಳಿದ್ದಳು. ಈ ಸಂಗತಿಯೂ ಭರಮುನಿಗೂ ಆಳಿನಿಂದ ಮಳಿಗೆಯಲ್ಲಿ ಆಮೇಲೆ ತಿಳಿಯಿತು. ಇದನ್ನು ಕೇಳಿದೊಡನೆ ಇನ್ನು ತಾನು ಮನೆಯಲ್ಲಿ ಕಾಲಿಡಬಾರದೆಂದೇ ನಿಶ್ಚಯಿಸಿದ. ಅದೇ ನಿಶ್ಚಯದಲ್ಲಿ ಸಂಜೆ ಮಗದುಮರ ಮನೆಯ ಕಡೆಗೆ ಹೋದ. ಮಲ್ಲ ಮನೆಯಲ್ಲಿ ಇರಲಿಲ್ಲ. ರತ್ನವ್ವ ಕೊಟ್ಟಿಗೆಯಲ್ಲಿ ಎಮ್ಮೆಯನ್ನು ಹಿಂಡಿಕೊಳ್ಳುತ್ತಿದ್ದಳು. ಹೋಗಿ ದವನಿಯ ಕಟ್ಟೆಗೆಯ ಮೇಲೆ

ಕುಳಿತ ಭರಮು. ಹಸಿದಿದ್ದನೇನೋ! ಮುಖ ಬಾಡಿದ್ದಿತು. ಬಗಲಲ್ಲಿ ಪಟಕೆ ಹಿಡಿದಿದ್ದ. ತಲೆಕೂದಲು ಜೆಳೆದಿದ್ದವು. ಒಣಗಿದ್ದವಪ್ಪ, ರತ್ನವ್ವ ಹೇಳಿದಳು. "ನೀವ ಮನ್ಯಾಗ ಅವ್ವಾ ಮಗಾ ಛಲೂ ಇದ್ದಾಗ್ಯ ನಮ್ಮ ಮನೀಗಿ ಬಂದರ ಸರಿ ಬರೂದುಲ್ಲ ನಿಮ್ಮ ಅಪ್ಪಗ. ಇಂಥಾದರಾಗ ಯಾತಕ ಬಂದಿ ? ನಮ್ಮ ಮನಿಗಿ ಬರಬ್ಯಾಡ, ಸುಮ್ಮನ ನಿಮ್ಮ ಅವ್ವ ನಮ್ಮ ಹೆಸರಲೆ ವಾಲಗಾ ಹಾಕ ತಾಳು."

"ಆಕಿ ಯಾನ ಯಾಕ ಮಾಡುವಳ್ಳು. ನಾ ನನ್ನ ಹ್ಯಾಂತಿನಾ ಕರಕೊಂಡ ಬರತ್ಯಾನು. ಇರಲಾಕ ನೀವ ನಮಗ ಜಾಗಾ ಕೊಡಾವರೋ ಇಲ್ಲೋ ? " ನಿರ್ಧಾರದ ಸ್ವರದಲ್ಲಿ ಕೇಳಿದ ಭರಮು.

ರತ್ನವ್ವ ಕೊಂಚ ಕಾಲ ಸುಮ್ಮನಾದಳು. ಏನೋ ವಿಚಾರಿಸಿದಳು. ಮನದಲ್ಲಿ 'ಎಷ್ಟ ಆದರೂ ತಾಯಿ ಮಕ್ಕಳಾ ಒಂದ್ಯ' ಎಂದುಕೊಂಡಳು. ಆಮೇಲೆ ಸ್ವಲ್ಪ ನಿಧಾನಿಸಿ ನುಡಿದಳು, "ಬಳ್ಳಿಕಾಯಿ ಬಳ್ಳಿಗ್ಯಾನ ಭಾರಲ್ಲ; ಯಾವಾಗಾದರೂ ಅವ ಅಲ್ಲೇ ಇರೋವ; ಇರೋದ್ಯ ಛಂದ ! ನೀ ಹರೀತ್ಯಾನ ಅಂದರ ಹರೀಕಬಲ್ಲದು ಆದ ? ಸಿಟ್ಟನ್ಯಾಗ ಆಕಿಯೊಂದ ನಾಲ್ಕ ಅನ್ನಾಕಿ, ನೀವೊಂದ ನಾಲ್ಕ ಅನ್ನಾನ. ಮನೀ ಇದ್ದಲ್ಲಿ ನಡಿಯೋದ ಅಲ್ಲ. ಇದ್ದರ ಆಕೀ ಹತ್ತ್ಯಾಕ ಇರವಲ್ಲೂ ನೀನ ಯಾನರ ಮಾಡಿ, ಅವಷ್ಟ ರೂಪಾಯಿ ತೀರ ಸೋಗ. ಹೋರಿ ಮಾರ ಬೇಕಾದ್ರು, ಈಗ್ಯಾನ ಹೊಲದ ಕೆಲಸ ಇಲ್ಲ. ಸುಗ್ಗ್ಯಾಗ ನಾಲ್ಕ ದಿನಾ ನಮ್ಮವು ಒಯ್ಯಾಕೆ ಅಂತ. ಅದ್ಯ ಹತ್ತಿ ಮಾರಿ ಮತ್ತ ಲಗಮವ್ವನ ಜಾತ್ರಿ ಸುತ್ತ ತಗೊಂಡರ ಬರೋದುಲ್ಲಾ ? ನಮ್ಗ್ಯಾನ ಇದಕಿಂತ ಹೆಚ್ಚಾಗಿ ಹೇಳ್ಳ ಬರುದಲ್ಲ" ಎಂದು ತನ್ನ ತಿಳಿವಳಿಕೆಯ ನಾಲ್ಕು ಮಾತುಗಳನ್ನು ಹೇಳಿದಳು.

ಈ ಮಾತುಗಳು ಭರಮುನ ಮನಸ್ಸಿಗೆ ಬರಲಿಲ್ಲ. ಸಿಟ್ಟಿನಿಂದಲೇ ಎದ್ದು ಹೊರಟ. ಏನೂ ಮಾತಾಡಲಿಲ್ಲ. ರತ್ನವ್ವನೇ ಮತ್ತೆ "ಭರಮಾ, ಈ ಒಂದಿಷ್ಟ ಹಾಲ ಆದರೂ ಕುಡದ ಹೋಗು ! ಮನ್ಯಾಗ ಜಗಳಾಡಿ ಹೊರಗ ಅಲ್ಲಿ ಇಲ್ಲಿ ತಿನ್ನಂತ ತಿರಗತೀ, ನಮಗ ಕರದ ಉಣಿಸಿಕ ಬರುದುಲ್ಲವ್ವಾ. ನೆಟ್ಟಗ ಇದ್ದಾಗ ಇನ್ನ್ಯ ಒಂದ ದಿನಾ ಕರದ ಉಣಿಸಿದರ ನಡೆದೋತ" ಎಂದಳು. ಆದರೆ ಭರಮು ಮಾತಾಡಲಿಲ್ಲ. ತಿರುಗಿಯೂ ನೋಡಲಿಲ್ಲ ಹಾಗೆಯೇ ಹೋದ.

" ಇವರದ ಹೀಂಗs ತಾಯಿ ! ಅತ್ತ ಹುಲೀ ಇತ್ತ ಕೆರೀ ; ನಡವ ನಾವ ಯಾನ ಮಾಡಬೇಕವ್ವ ! " ಎಂದುಕೊಂಡಳು ರತ್ನವ್ವ.

ದೀಪ ಹಚ್ಚುವ ಹೊತ್ತಿಗೆ ತಾರಕ್ಕ ತಂಬಿಗೆ ತಕ್ಕೊಂಡು ಹೋದುದನ್ನು ಕಂಡು ರತ್ನವ್ವನೂ ಹೋದಳು. ಸುತ್ತಲೂ ನೋಡಿ ಯಾರೂ ಇಲ್ಲೆಂದು ಅರಿತುಕೊಂಡ ಮೇಲೆ " ಈಗ ನಿನ್ನ ಗಂಡ ಬಂದಿದ್ದ, ನಮ್ಮ ಮನಿಗೀ " ಎಂದಳು.

" ಯಾಕ ? "

" ನಿನ್ನ ಕರಕೊಂಡ ಬ್ಯಾರೇ ಇರತ್ಯಾನು. ನಿಮ್ಮ ಮನ್ಯಾಗ ಇಟ ಗೋಳರೀ ಅಂತ...."

" ಯಾನ ಹೇಳಿದಿ ? " ಆತುರದಿಂದ ಕೇಳಿದಳು ತಾರಕ್ಕ. ಅವಳ ಮುಖದಲ್ಲಿ ಸಂತಸದ ಚಿಹ್ನೆಯೊಂದು ಮೂಡಿತು. ಆದೇ ವ್ಯಾಪಿಸುತ್ತಿರುವ ನಸುಗತ್ತಲೆಯಲ್ಲಿ ರತ್ನವ್ವನಿಗೆ ಅದು ಕಾಣಿಸಲಿಲ್ಲವೇನೋ ! ಅವಳೆಂದಳು, " ಹುಚ್ಚವ್ವ ! ಎಷ್ಟಾದರ ಅವರ ಅಪ್ಪ ಮಕ್ಕಳಿಗಿ ಬಿಟ್ಟಿದ್ದ ಏತಿ....? ನಾಳಿ ನಾವs ಕಡೀಕಿನವರ ಕೆಟ್ಟ ಆಗಾವರಲ್ಲ ! ಮನ್ಯಾಗ ಹೋಗಿ ಇರೋಗ ಅಂತ ಹೇಳಿನ."

ತಾರಕ್ಕ ಸುಮ್ಮನಾದಳು. ಅವಳ ಮುಖವಿಳಿಯಿತು. ರತ್ನವ್ವ ಮುಂದೆ ಹೇಳತೊಡಗಿದಳು. " ಸಿನಗ ಎಲ್ಲ್ಯರ ಗಂಟುಬಿದ್ದ ಕೇಳ್ಯಾನ ಮತ್ತ ! ಹೂಂ ಅಂದೀ ; ಹಾಂಗ್ಯಾನಾದರ ಮಾಡಿದಿ ಅಂದರ ನನ್ನಿಂದ ಬಂತ ಅಂದೀ ನೋಡ ! "

" ಅಂವ್ಯಾದಕ ನನಗೆ ಕೇಳ್ಕ ಹೋದಾ ಬಿಡ ! "

" ಇಲ್ಲ ; ಅಂವ ಕೇಳತಾ. ಈಗ ಸದ್ಯಕ್ಕರ ಅವನ ತಲ್ಯಾಗ ಹುಳಾ ಬಿದ್ದಾಂಗ ಆಗಿದಾವ. ನಾಲ್ಕದಿನಾ ಸಿಟ್ಟಿನಾಗ ಇದಾ. ಇದs ಬುದ್ಧಿ ಕಡೀ ತನಕಾ ಉಳೀತೇತಿ ಅಂತ ಹೇಳ್ಕ ಬರೂದುಲ್ಲ ನೀ ಎಲ್ಲ್ಯಾರ ಬರತ್ಯಾನಂತ ಮನೀಬಿಟ್ಟ ಅವನ ಬೆನ್ನ ಹತ್ತೀsss ! ಮುಂದ ನಿನ್ನ ವಗತನ ಹತ್ತಲಾಕಿಲ್ಲ, ದಂಡಿಗಿ, ಹಾಂಗ್ಯಾನಾದರ ಮಾಡೀ ! ನನ್ನ ಕುತಗಿ ಕೊಯ್ಕಂಡ ರಕ್ತಾ ಕುಡ ದಂಗ ಆದೋತ ! " ಎಂದು ರತ್ನವ್ವ ತನ್ನಾಣೆ ಹಾಕಿ ಒತ್ತಿ ಒತ್ತಿ ಹೇಳಿದಳು. ಅವಳ ಲಕ್ಷ್ಯವೆಲ್ಲ ಮಗಳ ಮುಂದಿನ ಬಾಳುವೆಯ ಕಡೆಗೇ ಇತ್ತು.

ಅತ್ಯಂತ ಇಕ್ಕಟ್ಟಿನ ಸಂದರ್ಭದಲ್ಲಿ ಮಾನವನಿಗೆ ಯಾವುದನ್ನು ಅನುಸರಿಸಬೇಕೆಂಬುದು ತಿಳಿಯದಿದ್ದಾಗ, ಅವನ ಮನಸ್ಸು ಸ್ವಾಭಾವಿಕವಾಗಿ ಯಾವದಾದರೊಂದು ಪಕ್ಷವನ್ನು ಹಿಡಿಯುವುದು. ಅದರಲ್ಲೂ ತನಗೆ ಸದ್ಯಕ್ಕೆ ಯಾವುದು ಅಗತ್ಯವೋ ಹಿತವೋ ಅದರೆಡೆಗೇ ಹೆಚ್ಚಿಗೆ ಹರಿಯುವದು. ಆಗ ಅದಕ್ಕೆ ಸಾಧಕ ಬಾಧಕ ವಿಚಾರವಿರುವುದಿಲ್ಲ. ತಾನೆಣಿಸಿದಂತೆಯೇ ಮುಂದಿನದೆಲ್ಲ ಆಗುವದೆಂದು ಭಾವಿಸುವದು. ಅದರಿಂದ ನಿನ್ನೆ ಸಂಜೆಗೆ ಅಪ್ಪ ಎಷ್ಟು ಆಣೆ ಹಾಕಿ ಹೇಳಿದ್ದರೂ ತಾರೆಯ ಮನಸ್ಸು ಭರಮನ ಕಡೆಗೇ ಒಲಿಯುತ್ತಿದ್ದಿತು. " ಅಂವ ನನ್ನಾ ಬಂದ ಕೇಳ್ಯಾ....? ಕೇಳಿದರ ಯಾನ ಹೇಳಲಿ ? ಇಲ್ಲ ಅನ್ನಲೀ ? ಇಲ್ಲವ್ವ ! ನನ್ನ ಕೈಲೆ ಆಗದ ! ಮೊನ್ನಿನ ಜಗಳಾ ನೋಡಿದರ ಅವ್ವಾನ ಇನ್ನ ಮನ್ಯಾಗ ಇರೂದಲ್ಲ. ನಾ ಯಾಕ ಇಲ್ಲ ಅಂದ ಕೆಟ್ಟ ಆಗಲಿ ? ಗಂಡ ಇದ್ದಲ್ಲಿ ಹ್ಯಾಂತಿ ಇರಕಬ್ಯಾಡಾ ? ಅವನಾ ಕೂಡಕೊಂಡ ಮ್ಯಾಲಿ, ಓದ ಹೋಳೀ ಕೂಡಸಲಿ. ಇಲ್ಲದಿರ ತೇಲಿಸಲಿ ಅವನಾನs ಹಿಡಕೊಂಡ ಹೋಗೋದ ಗಟ್ಟಿ ! " ಎಂದು ಅವಳು ಯೋಚಿಸುತ್ತಿದ್ದಳು.

ಅದರಂತೆ ಇಂದು ಮುಂಜಾನೆ ತಾರಕ್ಕ ಮಳಿಗೆಗೆ ಕೆಲಸಕ್ಕೆ ಹೋಗುವಾಗ ಹಾದಿಯಲ್ಲಿ ಹಿಂದಿನಿಂದ ಯಾರೋ " ಏ....! " ಎಂದು ಕೂಗಿದಂತಾಯಿತು. ತಾರಕ್ಕ ಹಿಂದೆ ಹೊರಳಿ ನೋಡಿದಳು. ಭರಮ ಲಗುಬಗೆಯಿಂದ ಬರುತ್ತಿದ್ದಾನೆ. ಕಂಡು ಅವಳ ಮುಖ ಅಗಲವಾಯಿತು. ಆದರೆ ಅವನು ಇನ್ನೂ ಏನನ್ನುವನೋ ನೋಡಬೇಕೆಂದು ಸುಮ್ಮನೆ ನಿಂತಳು ಅವಳ ಹೃದಯದಲ್ಲಿ ಒಂದು ಹೊಸ ನಡುಕ ಹುಟ್ಟಿತು. ಈ ರೀತಿ ಗಂಡನೊಡನೆ ಅವಳೆಂದೂ ಮಾತಾಡಿರಲಿಲ್ಲ. ಅದರಲ್ಲೂ ಇದೊಂದು ವಿಶೇಷ ಪ್ರಸಂಗ.

ಭರಮ ಸಮೀಪಕ್ಕೆ ಬಂದ. ಹೇಗೆ ಹೇಗೆ ಮಾತಾಡಲು ಆರಂಭಿಸುವದೆಂಬುದನ್ನು ಅವನು ಮೊದಲೇ ಯೋಚಿಸಿಟ್ಟಿದ್ದ. ವಿಷಯುವನ್ನು ಹೇಗೆ ಹೆಂಡತಿಯ ಮುಂದಿಟ್ಟು, ಅವಳನ್ನು ಒಪ್ಪಿಸಬೇಕೆಂಬುದನ್ನು ಸುಸಂಗತವಾಗಿ ಹೊಂದಿಸಿ ಇಟ್ಟಿದ್ದ. ಆದರೆ ಪ್ರತ್ಯಕ್ಷ ಮಾತಾಡುವ ಪ್ರಸಂಗ ಬಂದಾಗ ಅದೆಲ್ಲ ಹೋಯಿತು. ಏನು ಹೇಳುವುದು ತಿಳಿಯದೆ " ಎಲ್ಲಿ ಹೊರಟದಿ....?" ಎಂದು ಕೇಳಿದ. ಬಾಯಂಗಳದಲ್ಲಿ ನಾದ ಸ್ಪಷ್ಟ ಹೊರಡಲಿಲ್ಲ. ಮುಖ ವಿವರ್ಣವಾಯಿತು.

"ಮತ್ತೆಲ್ಲಿ ಹೋಗಲಿ ? ಮಳೆಗಿಗಿ ಕುಳ್ಳ ಬಡೀಕ ಹೋಗತ್ಯಾನು."

"ನಾ ಹೋದ ಮ್ಯಾಲಿ ಅವ್ವ ಯಾನ ಅಂತೀಳು ?"

"ಯಾನ ಅಂತಾಳು ಎಷ್ಟ ದಿನಾ ಹೋಗ್ತಾ ಹೋಗಲಿ ಇಂದಿಲ್ಲ ನಾಳಿ ಬರತಾ" ಎಂದು ನುಡಿದಳೇನೋ ತಾರಾ. ಆದರೆ ಮರುಕ್ಷಣದಲ್ಲಿ ಅವಳ ಎದೆ ಹಾರಿತು. 'ಹೀಂಗ ಚಾಡಿ ಹೇಳಬೇಕ ನಾ ?' ಎಂದು ತನ್ನಲ್ಲಿಯೇ ಕೇಳಿಕೊಂಡಳು.

"ಹೀಂಗಾ ?" ಕಣ್ಣು ಕೆಂಪಗ ಮಾಡಿ ಕೇಳಿದ ಭರಮು.

ತಾರಕ್ಕನಿಗೆ ಸ್ವಲ್ಪ ಸಮಾಧಾನವಾಯಿತು. ತನ್ನ ನಂಬಿಗೆ ವಿಪರೀತವಾಗದೆಂದು ಭಾವಿಸಿದಳು. ಆದರೂ "ನೀವ್ಯಾರ ಹೀಂಗ್ಯಾಕ ಮಾಡತೀರಿ ? ಕಾರಣೆಲ್ಲದ ನಮ್ಮ ಅವ್ವಗಾ ಅಪ್ಪಗಾ ಬಯ್ಸಿ ಇಡತೀರಿ" ನಿಜಸ್ಥಿತಿಯನ್ನು ತಿಳಿಸಹೋದಳು ತಾರಕ್ಕ.

"ಹೂಂ ? ಯಾರ್ಯಾರ ಬೈಸಿಕೊಳ್ಳೋದ ಏತಿ ಅವರ ಬಯುಸಕೋಕ್ಕ ಬೇಕಲ್ಲ ! ಒಮ್ಮೆ ತಲೀ ತೆರೀದ ಹೊರತ ಬಗಿಹರೀದುಲ್ಲ. ನೀ ಆಕೀ ಬೈಗಳಗಿ ಅಂಜತಿ ಯಾನಾ ?"

"ಅತ್ತೇ ಇದಾಳ, ಅಂಜಕಬ್ಯಾಡಾ ?"

"ಅಂಜೋದೆಲ್ಲ ಎಲ್ಲೀ ತನಕಾ ? ಕುತಗಿಗಿ ಬರೂತನಕ....ಅದಕೂ ಮ್ಯಾಲ ಬಂದರ...." ಭರಮುನ ಕಣ್ಣುಗಳಿಂದ ಎರಡು ದೊಡ್ಡ ಹನಿಗಳುರುಳಿದುವು. ದನಿ ಸರಿಪಡಿಸಿಕೊಂಡು "ನಾ ಒಂದ ಮಾತ ಹೇಳತ್ಯಾನ. ಕೇಳತಿ ಯಾನಾ....?" ಎಂದು ಕೇಳಿದ.

ಏನು ಮಾಡಬೇಕಾಗುತ್ತದೆಂಬುದು ಅವಳಿಗೆ ಗೊತ್ತಿದ್ದಿತು. ಆದರೂ ಅವಳು "ಮಾಡೂ ಅಂಥಾದ ಇದ್ದರ ಮಾಡತ್ಯಾನು" ಎಂದಳು. ಏನು ತಿಳಿದಳೋ ಏನೋ, ಮತ್ತೆ ಕೂಡಲೆ ಒದ್ದೆಯಾದ ಕಣ್ಣುಗಳನ್ನು ಒರಿಸಿಕೊಂಡು "ನೀವ ಕಡೀತನಕಾ ಗಟ್ಟಿ ಹಿಡ್ಯಾವರ ಇದ್ದರ" ಎಂದು ತನ್ನ ಹೆದರಿಕೆಯನ್ನು ಮುಂದಿಟ್ಟಳು.

"ನಾ ಹೇಳೋದರ ಮೊದಲ ಕೇಳಕೋ. ಅದ್ಯಾನ ಹುಡುಗಾಟಕಿ ಮಾಡೋದ ಏತಿ ?" ಎಂದು ಸ್ವಲ್ಪ ಮುಂದೆ ಬಂದು, ದನಿ ಇಳಿಸಿ "ಮೊನ್ನಿ ಜಗಳ ಆದಾಗ ನೀ ಇಲ್ಲ ಆಗಿದ್ದಿ. ರೂಪಾಯಿ ಕೊಡುದಿಲ್ಲ ಅಂತಾಳ ಆಕೀ

ಈಗ. ನನಗಽ ಕೊಡ ಅಂದರ ನಾ ಎಲ್ಲೀವ ಕೊಡಲಿ ? ವೊನ್ನಿ ಬಸಯ್ಯ ಕರದ ಓದ ಫಡಾ ಫಡಾ ಬೈದ ನಾಲ್ಕ ಮಂದ್ಯಾಗ. ನನ್ನ ಅಬ್ರೂ ಕಳದ. ಇಕ್ಕಿ ರೂಪಾಯ ಇಟಕೊಂಡ ಯಾನ ಮಾಡತಾಳು ? ನನಕಿಂತ ರೂಪಾಯ್ನಽ ಹೆಚ್ಚಾದು ಅಲ್ಲ ಇಕೀಗಿ ? ಆಗಲೆಲ್ಲ ; ಅವಽ ಆಕೀನಾ ನೋಡಲಿ ! ನಾ ಅಂತೂ ಮನ್ಯಾಗ ಬರೂದುಲ್ಲ. ಆಕಿಗಿ ಬ್ಯಾಡಾದ ಮ್ಯಾಲ ಅಲ್ಲಿ ಯಾದಕ ಬರೋದ ? ಮಂದಿ ಅಂದರ ಆಕಿಗಿ ಬ್ಯಾಡ. ತನ್ನ ಮನೀ ಹೊಲಾ ತಾ ನೋಡಕೋಲಿ ! " ಸ್ವಲ್ಪ ಮತ್ತೆ ಮುಂದೆ ಬಂದು ರಹಸ್ಯ ಹೊರಗೆಡಹುವಂತೆ " ನೀನೂ ಮನೀ ಬಿಟ್ಟ ಬಾ ; ನಾ ನೀ ಕೂಡಿ ಬ್ಯಾರೇ ಇರೂನು ! " ಭರಮನ ದನಿ ಸ್ವಲ್ಪ ನಡುಗಿತು. ಅದನ್ನು ಸ್ಥಿರಪಡಿಸಿಕೊಂಡು ಮತ್ತೆ ನುಡಿದ. " ಯಾನ ಮಾಡತಾಳ ನೋಡೂನು ಆಕಿ ? ಹಗಲೀ ರಾತ್ರಿ ಗಾಣದ ಎತ್ತಿನಂಗ ಎಷ್ಟ ದುಡೇದ ಹೀಂಗ ! "

" ಅದೆಲ್ಲಾ ಹೋಂದ. ಆದರ ಇರೋದೆಲ್ಲಿ....? "

" ಒಂದ ತಿಂಗಳ ನಮ್ಮ ಭೀಮಶಿಕಾಕಾನ ಮನ್ಯಾಗ ಇರೂನು. ಮುಂದ ಬೆಳೀ ಬಂದ ಮ್ಯಾಲಿ, ಮಳಗ್ಯಾಗ ಕೊಂಪಿ ಕಟ್ಟಕೊಂಡ ಇರಕ ಬರತ್ತೈತಿ. ಮುಂದಿಂದ ಮುಂದ ನೋಡಕ ಬಂದೋತ. "

" ಇಲ್ಯಾಂಗ ಬ್ಯಾರೆ ಇರೂಗೊಟ್ಟ್ಯಾಳ ಅತ್ತಿ ! ಎಲ್ಲಾ್ಯದರೂ ಇನ್ನಽ ಪರವೂರಗಿ ಕಣ್ಣ ಮರೀ ಆಗಿ ಹೋದರ ಒಂದ."

ಈ ವಿಚಾರ ಭರಮನಿಗೆ ಸೇರಲಿಲ್ಲ. ಅವನಿಗೆ ಮನೆ ಹೊಲ ಬಿಟ್ಟು ಹೀಗೆ ಎಲ್ಲಿಯಾದರೂ ಹೋಗಿರುವುದು ಬೇಕಾಗಿರಲಿಲ್ಲ. ಅವ್ವನಿಗೂ ತನಗೂ ಹೊಂದದು, ಮನೆಯಲ್ಲಿ ತಾನು ಬಯಸಿದ ಸುಖ ಸಿಕ್ಕದು, ಬೇರೆ ನಿಲ್ಲಬೇಕು, ಸುಖ ಸಿಕ್ಕುವುದು, ಹೊಲದ ಬೆಳೆ ತಾನೇ ತಕ್ಕೊಳ್ಳಬೇಕು, ಬಸಯ್ಯನ ಹಣ ತೀರಿಸಬೇಕು. ಹೀಗೇನೋ ಒಂದು ಅಸ್ಪಷ್ಟ ವಿಚಾರದಿಂದ ಅವನು ಹೊರ ಬಿದ್ದಿದ್ದ. ಆ ವಿಚಾರವನ್ನು ಮತ್ತೆ ಹೆಚ್ಚಿಗೆ ವಿಚಾರಿಸಿರಲಿಲ್ಲ.

" ಅದ್ಯಾನ ಬ್ಯಾಡ ; ಇಲ್ಲೇ ಇರೂನು ; ನೀ ಬರತಿನೋ ಇಲ್ಲೊ ? " ನಿಷ್ಠುರವಾಗಿ ಕೇಳಿದ ಭರಮು.

" ಬರತ್ಯಾನು " ನಿರುಪಾಯಳಾಗಿ ನುಡಿದಳು ತಾರಕ್ಕ.

" ಹಂಗಾದರ ಇಂದಽ ಸಂಜಿಕಿ ಬಾ, ಭೀಮಶಿಕಾಕಾನ ಮನಿಗಿ."

" ಹೂಂ."

ಸ್ವಲ್ಪ ಹೊತ್ತು ಭರಮು ಸುಮ್ಮನೆ ನಿಂತು ವಿಚಾರಿಸಿದ. ಧೇನಿಸಿದ. ಕೊನೆಗೆ " ಬರೋಗ ನಿನ್ನ ಉಟಗೋಳು ಸೀರಿ, ನನ್ನ ಧೋತರಾ ತಾ."

" ನೋಡತ್ಯಾನು. " ಎಂದಳು ತಾರಕ್ಕ, ಅನುಮಾನಿಸುತ್ತ, ಅವಳ ಕಾಲ ಹೆಬ್ಬೆರಳು ನೆಲವನ್ನು ತೀಡುತ್ತಲಿತ್ತು.

" ಇಲ್ಲ ; ಅವರ ಎಲ್ಲಿರ ಹೊರಗ ಹೋದಾಗ ತಗದಿಟ್ಟ ತಗೊಂಡ ಬಾsಲಾ....! ನಾಳಿ ಉಟಕೋಕ ಬ್ಯಾಡ್ಯಾನ ? "

ಏನೋ ವಿಚಾರಿಸುತ್ತ ಒಪ್ಪಿಗೆಯ ಗೋಣು ಹಾಕಿದಳು, ತಾರಾ.

## ೧೨

ಮೇಲಿನ ಸಂಗತಿಯು ಜರುಗಿ ಹನ್ನೊಂದು ತಿಂಗಳುಗಳಾಗಿ ಹೋದವು. ಈ ಹನ್ನೊಂದು ತಿಂಗಳಲ್ಲಿ ಅಂತಹ ಬದಲಾವಣೆಯಾಗಿರದಿದ್ದರೂ ತಾರಕ್ಕನ ಜೀವನ ಇನ್ನೂ ಒಂದು ಕೆಳಮೆಟ್ಟಲಿಗಿಳಿದಿದೆ. ದಿನಾ ಬೆಳಗಾದರೆ ಚಿಮ್ಮವ್ವ ಅತ್ತೆಯ '' ಗಂಡಗ ಕಲಸಿ ಮನೀ ಒಡದ ಎರಡ ಮಾಡಿ ಇಡಬೇಕ ಅಂತಿದ್ದಿ ನಮ್ಮವ್ವ ! " ಎಂಬ ನಿಂದೆಯ ಮಾತನ್ನು ಕೇಳುವಂತಾಯಿತು. ತಂದೆ ತಾಯಿಗಳಿಂದಲೂ ತಾರಕ್ಕ ' ಛಿ ' ಅನ್ನಿಸಿಕೊಳ್ಳಬೇಕಾಯಿತು. ಒಂದು ದಿನ ಬೇಸತ್ತು ಹೊಳೆಗೆ ಅರಿವೆ ತೊಳೆಯಲಿಕ್ಕೆಂದು ಹೋಗಿದ್ದಳು. ಆಗ ರಣರಣ ಬಿಸಿಲು ; ಹೊಳೆಯಲ್ಲಿ ಯಾರೂ ಇರಲಿಲ್ಲ. ಹೊಳೆ ತುಂಬಿ ಹರಿಯುತ್ತಿದ್ದಿತು. ಅದೊಂದು ತಾಯ ಮಡಲಿನಂತೆ ಸುಖಾಸ್ಪದವೆನಿಸಿತು. ಕೂಸು ತಾಯನ್ನು ಅಪ್ಪುವಂತೆ ಅಪ್ಪಲೋ ಎಂದು ಬಗೆದಳರಕ್ಷಣ ತಾರಕ್ಕ. ಹಾಗೇ ಭಾರವಾದ ಹೃದಯದಿಂದ ಹೊಳೆಯಲ್ಲಿ ಇಳಿದಳು. ಒಂದೊಂದೇ ಅರಿವೆಗಳನ್ನು ತೋಯಿಸಿ ಕಲ್ಲಿನ ಮೇಲಿಡಹತ್ತಿದಳು. ಮನದಲ್ಲಿ ಬೇಗೆ ಹಾಗೇ ಪಸರಿಸುತ್ತಿದ್ದಿತು. ಯಾರಿಗೂ ಬೇಡವೆನಿಸಿ ಬದುಕುವದರಲ್ಲಿ ಏನರ್ಥ ? ಎಂಬ ವಿಚಾರ ಅದಕ್ಕೆ ಸವುದೆಯನ್ನು ಒದಗಿಸಿ ಬೆಳೆಸುತ್ತಿದ್ದಿತು. ಈ ಉರಿಯನ್ನು ಆರಿಸಲು ಕೃಷ್ಣೆಯ

ನೀರೇ ಗತಿ ಎಂದುಕೊಂಡಳು ತಾರಕ್ಕ. ಇದೇ ಭಾವನೆಯಲ್ಲಿ ಏನೆಸಗುತ್ತಿದ್ದಳೊ ತಾರಕ್ಕ ! ಅಷ್ಟರಲ್ಲಿ ಕೊನೆಯ ಗಳಿಗೆಯಲ್ಲಿ ದೈವ ಕರೆತಂದಂತೆ ಅವಳ ಗೆಳತಿ ಸುಮತಿ ನೀರಿಗೆ ಬಂದಳು.

ಸುಮತಿ ಈಗ ದೊಡ್ಡವಳಾಗಿರುವಳು. ಅವಳಿಗೊಂದು ಗಂಡು ಮಗುವೂ ಆಗಿದೆ. ಮೊನ್ನೆಯೇ ಅವಳು ತವರುಮನೆಗೆ ಬಂದಿದ್ದಳು. ಚಿಕ್ಕಂದಿನಿಂದಲೂ ಈ ಇಬ್ಬರು ಗೆಳತಿಯರಲ್ಲಿ ಅದೆಷ್ಟೋ ಗುಟ್ಟಿನ ಮಾತುಗಳು ನಡೆಯುತ್ತಿದ್ದುವು. ಅವುಗಳಲ್ಲಿ ಒಂದೂ ಗುಪ್ತವಾಗಿ ಉಳಿಯುತ್ತಿದ್ದಿಲ್ಲ. ಗೆಳತಿಯನ್ನು ಕಂಡೊಡನೆಯೇ ತಾರಕ್ಕನ ಕಣ್ಣುಗಳಲ್ಲಿ ನೀರಾಡಿದುವು. ಅದನ್ನು ಕಂಡು ಸುಮತಿಯ ಕಣ್ಣುಗಳೂ ಹನಿಗೂಡಿದುವು. ಕೊಂಚಕಾಲ ಇಬ್ಬರಿಗೂ ಏನು ಮಾತಾಡಬೇಕೆಂಬುದು ತಿಳಿಯಲಿಲ್ಲ. ಸುಮ್ಮನೆ ಒಬ್ಬರನ್ನೊಬ್ಬರು ನೋಡುತ್ತ ನಿಂತರು. ಕೊನೆಗೆ ಸುಮತಿ ಒಂದು ಬಿಸಿಯುಸಿರನ್ನು ಹೊರದೂಡಿ, "ಮೂರನಾಲ್ಕು ದಿನಾ ಆಯ್ತು, ನಿನಗೆ ಗಂಟಬೀಳಬೇಕು ಅನ್ನತಿನ್ನು" ಎನ್ನುತ್ತ ಕಣ್ಣೀರು ತೊಡೆದುಕೊಂಡಳು.

"ಅವ್ವಾ ಹೇಳಿದಾಗಿಂದೂ ನಂದೂ ಮನಸ ಹರೀತೇತಿ. ಆದರ ಯಾನ ಮಾಡಲಿ ? ನಾ ಯಾನ ನಿನ್ನ ಹಂಗ ಸೊತಂತ್ರ ಇದ್ಯಾನು ?" ಎಂದು ಕೆಳಗೆ ನೋಡಿದಳು ತಾರಾ. ಕಂಬನಿಯನ್ನು ಕೂಡಿಕೊಂಡು ಕೃಷ್ಣೆ ತುಂಬಿ ಹರಿಯುತ್ತಿದ್ದಳು.

ಸುಮತಿ ತಲೆಯ ಮೇಲಿನ ಕೊಡವನ್ನು ಇಳಿಸಿಟ್ಟು, ತಾರಕ್ಕನು ಒಗೆಯುತ್ತಿರುವ ಅರಿವೆಗಳಲ್ಲಿ ಕೆಲವನ್ನು ಒಗೆಯಲು ತಕ್ಕೊಂಡಳು. ತಾರಕ್ಕ "ನಾ ಒಗೀತ್ಯಾನ ಬಿಡಲ್ಲ; ಮೊನ್ನೇನೇ ಅತ್ತೀ ಮನೀ ಮಾಡಿ ಬಂದಿದಿ ನೀನೂ !" ಅಂದಳು.

"ಬಂದರ ಯಾನ ಆಯ್ತು ಬಿಡ ತಾಯಿ! ಮಾತಾಡತ ಇಬ್ಬರೂ ಒಗಿನು ; ಹ್ಯಾಂಗಾದರೂ ಇಬ್ಬರೂ ಕೂಡೇ ಹೋಗೋದ. ಹುಡುಗನ ನಾನು ಈಗ ಮಲಗಿಸಿ ಬಂದಿದ್ಯಾನು. ನಿಂತರ ಯಾನ ವ್ಯೆ ಬೆಳಿತೀತಿ ?" ಎಂದಳು ಸುಮತಿ.

ತಾರಕ್ಕ ಚಿಕ್ಕದೊಂದು ಅರಿವೆ ಸೆಳೆಯುತ್ತ "ನಿಮ್ಮತ್ತಿ ಹ್ಯಾಂಗ ಇದಾಳು ?" ಎಂದು ಕೇಳಿದಳು.

" ಛಲೂ ಇದಾಳ ತಾಯಿ. ಅತ್ತೀ ಮನೀ ಅಂದಮ್ಯಾಲ ಹಾಂಗ ಇರೋದs ಅಲ್ಲಾ ! ಆದರೆ ನಿನ್ನಂಗ ಇಲ್ಲವ್ವ ! ನಿಮ್ಮತ್ತಿ ಅಂದರ ಜಗದ ಹೊರತೇ ಆಗಿದಾಳು ! " ಸ್ವಲ್ಪ ನಿಂತು " ಅಂವರ ಹೆಂಗ ಇದಾನು ನಿನ್ನ ಗೂಡಾ ? "

" ಅಂವೂ ಆಕಿ ಹೊಟ್ಟೀಂದ ಹುಟ್ಟಿದಾಂವಲ್ಲ ! " ಎಂದಿಷ್ಟೇ ಹೇಳಿ ಸೀರೆ ಹಿಂಡಹತ್ತಿದಳು, ತಾರಕ್ಕ. ಸುಮತಿ ಸ್ವಲ್ಪ ಹೊತ್ತು ಏನೂ ಮಾತಾಡಲಿಲ್ಲ. ಅರಿವೆಗಳನ್ನು ಒಂದೊಂದೇ ಒಗೆದುಕೊಡುತ್ತಿದ್ದಳು. ತಾರಕ್ಕ ಹಿಂಡಿ ಕಲ್ಲ ಮೇಲೆ ಇಡುತ್ತಿದ್ದಳು.

"ನಡುವ ಯಾಾನ ಬ್ಯಾರೆ ನಿಲ್ಲಕ ನಿಂತಿದ್ದಂತ ಅಲ್ಲ ? "

"ಹೋಂದ ; ಹಾಂಗ ಸೋಂಗಾ ಮಾಡೇ ನನ್ನಾ ಹಾಳಮಾಡಿ ಇಟ್ಟವ್ವ ! ಅವನ ಮಾತ ಕೇಳ್ಕ ಹೋಗಿ ಅತ್ತ ಅವ್ವಾ ಅಪ್ಪಗೂ ಕೆಟ್ಟಲಾದಿನು. ಇತ್ತ ನನ್ನ ಕಾಲಮ್ಯಾಲಿನೂ ಕಲ್ಲ ಛಲ್ಲಕೊಯ್ನು. ಮತ್ತ ಆವರ ಅವ್ವಾ ಮಗಾ ಒಂದs. ಆಕಿ ದುಡ್ಡ ಕೊಟ್ಟ, ಇಂವ ತಗೊಂಡ ! "

"ಹಾಂಗ ಯಾಾನ ! ಒಮ್ಮಿ ಮನ್ಯಾಗಿಂದ ಹೊರಬಿದ್ದೀರೀ ಅದ ಬಿದ್ದೀರಿ. ಬ್ಯಾರೆ ಇದ್ದ್ವರ ಒಂದ ದಂಡಿಗಿ ಹಚ್ಗೋೀದ ? "

"ಇದ ಇತ್ತಲ್ಲ, ನನ್ನ ಹಣೀಬರದಾಗ, ಗಳಿಗಿಗಿ ಒಮ್ಮಿ ಮೂಗಿನ್ಯಾಗ ಕಟ್ಟಿಗಿ ಏರಿಸಿಕೊಳ್ಳೋದ ! ಹಾಂಗs ಎಲ್ಲಿ ಹೋಗಗೊಡತೇತಿ ಅದ, ಒಡಕ ನಸೀಬಾ ! "

ತಾರಕ್ಕನ ಮುಖದ ಕಡೆಗೆ ನೋಡಿ, "ಬಂದಾವಲ್ಲ ; ಇಂದಿಲ್ಲ ನಾಳೆ ಛಲೂ ದಿನಾ. ದೇವರಿಗೆ ಯಾನ ಕಣ್ಣ ಕಾಣೂದುಲ್ಲಾ ? " ಎಂದಳು ಸುಮತಿ, ಸಮಾಧಾನಪಡಿಸಲು.

"ಯಾಾನ ಬರತೇತೆವ್ವ ! ಇನ್ನ ಬರೋದ ಒಂದs ಉಳದೇತಿ".

"ಹಾಂಗ ಅನಬ್ಯಾಡs ತಾರಾ ! " ಎಂದು ಸುಮತಿ ಕಣ್ಣೀರು ಒರಿಸಿದಳು, ಅರಿವೆಯ ಗಂಟನ್ನು ಹೊರಿಸ ಹೋಗಿ.

ಈ ಮಾತುಗಳಲ್ಲಿ ಎಂಥ ಭಾವ ಇತ್ತೆಂಬುದು ಅವರಿಬ್ಬರ ಅಂತ ರಾತ್ಮಗಳೇ ಬಲ್ಲುವು. ಇತ್ತೀಚೆಗೆ ತಾರಕ್ಕನ ಸ್ಥಿತಿಯು ಬಹಳ ಕೆಡಕಿನ

ದಾಗಿತ್ತು. ಚಿಮ್ಮವ್ವ ಈಗೀಗ ಮಗನ ಹೋಲಿಕೆ ನೋಡಿ ನಡೆಯುತ್ತಿದ್ದಳು. ಅಲ್ಲದೆ ಆಗಾಗ ಸಮಯವರಿತು ತಾರಕ್ಕನ ವಿರುದ್ಧ ದೂರು ಹೇಳದೆ ಇರುತ್ತಿರಲಿಲ್ಲ, ಅವನಿಗೆ. ಈಗೆರಡು ದಿನಗಳ ಹಿಂದೆ ಒಂದು ಮೂರು ಸಂಜೆಯಲ್ಲಿ ಚಿಮ್ಮವ್ವ ಒಂದು ದೊಡ್ಡ ಕೊಡವನ್ನು ಕೊಟ್ಟು, ತಾರಕ್ಕನನ್ನು ನೀರಿಗೆ ಕಳಿಸಿದಳು. ಕೂಡಲೆ ಕೊಟ್ಟಿಗೆಯಲ್ಲಿದ್ದ ಮಗನನ್ನು ಕರೆದು "ನೋಡಿದೀ ? ಇಲ್ಲದ ಸಲ್ಲದ ವೇಳೇದಾಗ ಹೀಂಗ ಕೊಡಾ ತಗೊಂಡ ಹೋಗ್ತಾಳ. ಈಗ ಆ ಕಡೀ ಮನೀ ಸಾತ್ಯಾ ಹೋದಾ ; ಅದಕ್ಕs ಹೋದಳ ಕಾಣಸ್ತೇತಿ!" ಎಂದು ಹೇಳಿದಳು.

ಭರಮು ಕಣ್ಣು ಕೆರಳಿಸಿದ. ಮುಖ ಕೆಂಪಾಯಿತು. ತಾಯಿಯ ಮಾತು ಕೇಳಿ ಮೈಮೇಲೆ ಸಿಡಿಲೆರಗಿದಂತಾಯಿತು. ತಲೆ ದಿಮ್ಮೆಂದಿತು. ಯಾರೋ ಕೋಣೆಯಲ್ಲಿ ಹಾಕಿ ಕೈಕಾಲು ಕಟ್ಟಿ ಗುದ್ದುತ್ತಿರುವಂತಾಯಿತು ಅವನಿಗೆ. ತನ್ನಿಂದತಾನೇ ಅವನ ಕೈಗಳು ಗಟ್ಟಿಯಾದ ಮುಟ್ಟಿಗೆಗಳಾದುವು. ಎದೆ ದಡದಡ ಸದ್ದು ಮಾಡುತ್ತಿದ್ದಿತು. ಕೆಳಗೆ ಬೀಳುವ ಹಾಗಾಯಿತು. ಹಾಗೇ ಕಂಬಕ್ಕೊರಗಿ ನಿಂತ. ಮೈಯೆಲ್ಲ ಜುಮ್ಮೆಂದು ಬೆವತಿತು. ಗಂಟಲು ಒಣಗಿತು. ಮೂಗಿನಿಂದ ಬಿಸಿಯುಸಿರು ಹೊರಚಿಮ್ಮುತ್ತಿತ್ತು. ಕಚ್ಚಿದ ತುಟಿ ಬಿಗಿಯುತ್ತಿತ್ತು. ಹೃದಯ, 'ಇದು ನಿಜವೇ ? ಇದು ನಿಜವೇ ?' ಎಂದು ಕೇಳುತ್ತಿತ್ತು. ಆಗ ಚಿಮ್ಮವ್ವ "ಸುಳ್ಳಲ್ಲೋ ; ಹೋಗಿ ನೋಡಬೇಕಾದರ, ಹೊಳೀ ತನಕಾ" ಎಂದು ಮಾತು ಮುಂದುವರಿಸಿದಳು. ಸ್ವರ ಮಾತ್ರ ನಡುಗದಿರಲಿಲ್ಲ. ಭರಮುನೂ ಹೊರಟ. ನಾಲ್ಕು ಹೆಜ್ಜೆ ಹೋಗುವಲ್ಲಿ ಕೈಕಾಲುಗಳೊಳಗಿನ ಶಕ್ತಿ ಉಡುಗಿ ಹೋದಂತಾಯಿತು. ಕಣ್ಣಿಗೆ ಕತ್ತಲೆಕವಿಯಿತೊಮ್ಮೆಲೆ. ಪಟ್ಟನೆ ನೆಲಕ್ಕೆ ಕುಳಿತ. ಕೂಡಲೆ ಎದ್ದ. ಹೇಗೋ ಗಾಳಿಯ ಓಟಕ್ಕೆ ಸಿಕ್ಕ ನಿರ್ಜೀವ ರವದೆಯಂತೆ ಸಾಗಹತ್ತಿದ ಮುಂದೆ. ಹೊಳೆಯ ಸಮೀಪಕ್ಕೆ ಹೋದ. ಕಂಟಿಯ ಮರೆಯಲ್ಲಿ ಅವಿತು ನೋಡಿದ. ನೆಗೆಯದಿದ್ದುದಕ್ಕೆ ತಾರಕ್ಕ ಸತ್ಯಪ್ಪನ ಕಡೆಯಿಂದ ಕೊಡ ಹೊರಿಸಿಕೊಂಡಳು. ಈ ಸಂಗತಿಯಿಷ್ಟೇ ಸಾಕಾಯಿತವನಿಗೆ, ಮನಸ್ಸು ಮಲಿನಗೊಳ್ಳಲು. ಈಗೆರಡು ದಿನ ಮನೆಯಲ್ಲಿ ಇದೇ ವಿಷಯದ ಕದನ. ತಾರಕ್ಕ ಕೂಳು ಸಹಿತ ಕಂಡಿರಲಿಲ್ಲ. ಜೀವನಕ್ಕೆ ಬೇಸತ್ತೇ ಇಂಥ ಬಿಸಿಲಿನಲ್ಲಿ ಹೊಳೆಗೆ ಕೂಡ ಬಂದಿದ್ದಳಾಕೆ.

ಇಬ್ಬರೂ ಹೊಳೆಯ ದಿನ್ನೆಯನ್ನೇರಿ ನಡೆದರು. ನೀನರs ಸುಖದಾಗ ಇದೀಯಲ್ಲಾ, ಸುಮಾ ?" ಎಂದಳು ತಾರಾ. ಅನ್ಯರು ಸುಖದಲ್ಲಿ ಇದ್ದುದ ನ್ನಾದರೂ ಕೇಳಿ ಸಂತೋಷಪಡಬೇಕೆಂದು ಬಯಸಿದಳೇನೊ!

ಸುಮತಿಗೆ ಸುಖವಾಗಿರುವೆನೆಂದು ಹೇಳಬೇಕೆನಿಸಿತು. ಆದರೆ ಅದೇಕೊ ಅವಳಿಗೆ ಹಾಗೆ ಹೇಳಲಿಕ್ಕಾಗಲಿಲ್ಲ. "ಅತ್ತೀ ಮನ್ಯಾಗ ಸುಖಾ ದುಃಖಾ ಎಲ್ಲಾ ಅಷ್ಟs ; ಅಂದಮ್ಯಾಲಿ ಹ್ಯಾಂಗಾದರೂ ಜನ್ಮಾ ಮಾಡಿ, ಅವ್ವ ಅಪ್ಪನ ಹೆಸರ ಮಾಡಕಬ್ಯಾಡಾ ?" ಎಂದಳು.

"ಬೇಕಲ್ಲ !" ಎಂದಳು ತಾರಾ, ಮನಸ್ಸೊಪ್ಪದೆ. "ಹ್ಯಾಂಗಾದರ ಹುಡುಗ ಆದಾ, ನಿನ್ನ ಜನ್ಮ ದಂಡಿಗಿ ಹತ್ತಿದಂಗ ಆಯ್ತು ! ಹ್ಯಾಂಗ ಇದಾನ, ರಾವಸಾಬ ?" ಎಂದು ಕೇಳಿದಳು.

"ಛಲೂ ಇದಾನ ತಾಯಿ ! ಈಗ ಇತ್ತ ಬರೋಗs ನಾಕ ದಿನಾ ನೆಗಡಿ ಆಗಿತ್ತು. 'ಹುಡುಗನ ತಗೊಂಡ ಎಲ್ಲಿ ಹೋಗತೀ, ಬ್ಯಾಡ' ಅಂತ ಅವರ ಅನ್ನತೀರು. ಆದರ ಅಪ್ಪಾ, ಜಾತ್ರಿಗಿ ಕರೀಕ ಬಂದಿದಾ. ಎರಡ ಸಾರೆ ತಿರಗಿಸಿದ್ದಿನೂ ಈಗ ತಿರಗಸೋದ ಬ್ಯಾಡಂತ ಬಂದಿನು" ಎಂದು ತನ್ನ ಹುಡುಗನ ಸ್ಥಿತಿಯನ್ನು ಹೇಳಿದಳು, ಸುಮತಿ.

ತಾರಕ್ಕನಿಗೆ ಈ ಸಂಗತಿಗಳೆಲ್ಲ ಹೊಸವು. ಬೆರಗಿನಿಂದ ಅವಳ ಮುಖ ವನ್ನೆಲ್ಲ ನೋಡುತ್ತ ಕೇಳುತ್ತಿದ್ದಳು. ಸುಮತಿ ಮುಂದೆ ಹೇಳಹತ್ತಿದಳು: "ನಾಕಾದಿನಾ ಜಾತ್ರಿ ಮಾಡಿ ಬರತ್ಯಾನಂತ ಹೇಳಿ ಬಂದಿದ್ಯಾನು. ಸುಡಲಿ, ಜಾತ್ರಿಮುಂದ ಹಾಕಿರು. ಜಾತ್ರಿ ಆದ ಮರದಿನಾನs ಹೋಗಾಕಿ".

'ನಮ್ಮ, ಅಪ್ಪಾನೂ ನಾಳೆ ಬಂದಾ ಕರೀಕ ಉಗಾದಿಗೀ. ನಾಕ ದಿನಾ ಈ ಶಕರ್ಯಾಗಿಂದ ಹೋಗತ್ಯಾನೊಮ್ಮಿ !"

"ಆಗs ನಮ್ಮನೀಗಿ ಬಾ ; ಹುಡುಗನ ನೋಡಿ ಬರಾಕೇ ಅಂತ" ಅಷ್ಟರಲ್ಲಿ ಸುಮತಿಯ ಮನೆಗೆ ಹೋಗುವ ದಾರಿ ಬೇರೆಯಾಯಿತು. "ತಿರಗಿ ಯಾವಾಗ ಹೋಗಾಕಿ ಗಂಡನ ಮನೀಗೆ ?" ಎಂದು ಸ್ವಾಭಾವಿಕವಾಗಿ ಕೇಳಿದಳು, ಸುಮಾ.

ತಾರಕ್ಕ ಸ್ವಲ್ಪ ತಡೆದು "ಯಾತಕಾ ?" ಎಂದು ಕೇಳಿದಳು. ಸುಮತಿ

ಮನೆಗೆ ಹೋಗಿ ತಲಪುವವರೆಗೂ ಗೆಳತಿಯ "ಯಾತಕಾ ?" ಎಂಬ ಪ್ರಶ್ನೆಗೆ ಉತ್ತರ ಹುಡುಕಿದಳು. ಮುಂದೆ ಮಗನಿಗೆ ಮುದ್ದು ಕೊಡುವುದರಲ್ಲಿ ಆ ಒಗಟನ್ನು ಬಿಡಿಸುವದನ್ನೇ ಮರೆತುಬಿಟ್ಟಳೇನೋ !

ತಾರಕ್ಕನ ಪ್ರಶ್ನೆ ಸಮರ್ಪಕವಾಗಿದ್ದಿತು. ಅದು ಕೇವಲ ಹಾಸ್ಯಕ್ಕಾಗಿ ಆಡಿದುದಾಗಿರಲಿಲ್ಲ. ಕರುಳು ಕುದಿಗೊಂಡು ಬಂದುದಾಗಿತ್ತು. ಅದಕ್ಕಾಗಿ ಜಾತ್ರೆಗೆ ಅನಂತ ಹಾಗೂ ನಾಭಿರಾಜ ಬಂದುದರಿಂದ ಅವಳಿಗೊಂದು ಜೀವನದಲ್ಲಿ ಸಂತಸದ ಸೆಲೆಯೊಡೆದಂತಾಯಿತು. ಅನಂತ ಈಗ ಮೊದಲಿನಂತೆ ಚಿಕ್ಕವನಲ್ಲ; ಹಾಯ್‌ಸ್ಕೂಲಿನಲ್ಲಿ ಕಲಿಯುತ್ತಿದ್ದಾನೆ. ಈಗ ಆತ ತೆಳುವಾದ ನಯವಾದ ಧೋತರ ಉಡುವನು. ಮೇಲೆ ಶುಭ್ರವಾದ ಶರಟು ತೊಟ್ಟು ಕೊಳ್ಳುವನು. ತಲೆಕೂದಲುಗಳನ್ನು ಚೆನ್ನಾಗಿ ಬಾಚಿಕೊಂಡು ಬೈತಲೆ ತೆಗೆದು ಕೊಳ್ಳುವನು. ಕೊರಳೊಳಗೊಂದು ಬಂಗಾರದ ಚಿಕ್ಕ ಲಾಟ್ಟು. ಒಟ್ಟಿನ ಮೇಲೆ ಹೊಸ ಕಾಲದ ತರುಣನೆಂದರೆ ಹೆಚ್ಚಿಗೆ ಹೇಳಲಿಕ್ಕೆ ಬೇಡ, ಅವನ ವಿಷಯಕ್ಕೆ. ತಾರಕ್ಕ ಒಮ್ಮೆ ಅವನನ್ನು ಕುತೂಹಲದಿಂದ ಕಂಡಳು. ಮತ್ತೆ ಆಗಾಗ ನೋಡಬೇಕೆಂಬ ಕುತೂಹಲ ಅವಳಿಗೆ ಅದೇಕೊ ! ಒಂದು ದಿನ ಮಧ್ಯಾಹ್ನದಲ್ಲಿ ಸಹಜ ಮಾತಾಡುತ್ತ ಕುಳಿತಾಗ "ಅತ್ತೀ, ಈಗ್ಯಾಕ ಜಾತ್ರಿ ?" ಎಂದು ಅನಂತ ಕೇಳಿದ. ಆತನಿಗೆ ಎಲ್ಲವನ್ನೂ ಕೇಳಿ ತಿಳಿದು ಕೊಳ್ಳುವ ಬಯಕೆ ಬಹಳ.

"ಊರಾಗ ಯಾಕೋ ತಿಂಗಳಾಯ್ತು ದನಗೋಳs ಸಾಯ್ತಿದ್ವು. ಅದಕs ಎಲ್ಲಾರು ಕೂಡಿ ಲಗಮವ್ವನ ಜಾತ್ರೀ ಮಾಡಬೇಕೆಂತ ಮಾತೋಕ ಹತ್ತಿದಾರು."

"ದನಾ ಸತ್ತರೆ ಜಾತ್ರಿ ಯಾಕ ?" ಅನಂತ ಸ್ವಲ್ಪ ತುಂಟು ನಗೆಯನ್ನು ತಂದು ನುಡಿದ.

"ಊರ ಥಣ್ಣಗ ಇರಲಿ ಅಂತ. ಬ್ಯಾನಿ ಬ್ಯಾಡ ಬ್ಯಾಸರಕಿ ಬ್ಯಾಡ, ಎಲ್ಲಾ ಲಗಮವ್ವ ತಾಯೀ ಉಡ್ಯಾಗ ಬದಕಾವರಪ್ಪ ನಾವ........" ಎಂದಳು ರತ್ನಾ.

"ಹಃ ! ಹಃ ! ಹಃ !" ಅನಂತ ಗಹಗಹಿಸಿ ನಕ್ಕು "ದನಗಳ ರೋಗಕ್ಕೆ ಲಗಮವ್ವ ಯಾನ ಮಾಡ್ತಾಳು ? ಹುಚ್ಚ ಕಲ್ಪನೆ ಏತಿ ಹಳ್ಳೀ ಮಂದೀದ !

ತಾರಕ್ಕ ಅನಂತನನ್ನು ನಡುವೆಯೇ ತಡೆದು " ಹುಚ್ಚ ಕಲ್ಪನಾ ಹ್ಯಾಂಗ ? ಮೊನ್ನಿ ಗೌಡರ ಆಕಳಿಗೀ ಬ್ಯಾನಿ ಬಂತು. ಲಗಮವ್ವನ ಅಂಗಾರ ಹಚ್ಚ್ಯಾನಾ ಬದಕಿತಲ್ಲ ! ಕರೀ ಕಟ್ಟ್ಯಲಕೀತ ಮೊದಲ ಅವರ ಮನ್ಯಾಗs ಹತ್ತ ದನಾ ಸತ್ತೂ ಅಲ್ಲಾ ? " ಅವನ ಮುಖದ ಕಡೆಗೆ ನೋಡುತ್ತ ಕೇಳಿದಳು.

" ಹುಚ್ಚ ತಿಳವಳಿಕಿ ನಿಮ್ಮದು."

ಅನಂತನನ್ನು ಮುಂದೆ ಮಾತಾಡಗೊಡದೆ, ರತ್ನವ್ವ ಗಲ್ಲಗಲ್ಲ ಬಡಿದು ಕೊಂಡು " ಹಾಂಗ ಅನಬಾರದಪ್ಪ ಅನಂತಾ. ದೇವಿ ಭಾಳ ಖಡಿತರ ; ನೋಡದಿ ? ನನ್ನ ಮೈ ಮ್ಯಾಲ ಹ್ಯಾಂಗ ಮುಳ್ಳ ಏಳತಾವ ? "

ಯಾನರ ಒಂದ ಮಾಡತೀರಿ ಆಯ್ತು ! ಇನ್ವs ಮೂರನೂರ ರೂಪಾಯ ಔಷಧಕ ಖರ್ಚು ಮಾಡಿದ್ದರ ಒಂದ ದನಾ ಸಾಯ್ತಿರಲಿಲ್ಲ" ಎಂದು ತನ್ನ ವಿಚಾರ ಹೇಳಿದ ಅನಂತ.

" ಯಾನ ಆಗತೇತಿ ಅಗಸುದ್ದೀಲೆ ? ಗೌಡರ ಮಸ್ತ ದನಗೋಳಿಗಿ ಅಗಸುದ್ದಿ ಕೊಟ್ಟರ. ಆದರ ಯಾನ ಆಗಲಿಲ್ಲ. ದವನಿಗಿ ದವನೇ ನಿಕಾಲ ಆಗಿ ಹೋಯ್ತು. ಯಾವಾಗ ಕಡೀಕ ಲಗಮವ್ವನ ಭಂಡಾರ ಹಚ್ಚಿ ಮಳಿಗ್ಯಾಗ ಓದ ಕಟ್ಟ್ಯಾನಾ, ಅದ ಒಂದರ ಆಕಳ ಬದಕಿತ. ಒಬ್ಬರ ಮನ್ಯಾಗ ಒಂದ ದನೀಗಿ ಬ್ಯಾನಿ ಬಂತದ್ರ ಆಯ್ತು, ಸಾಯೇವs ಅದಕs ನಾವ ಗಡಬಡೀಲೆ ದನಾ ತಗೊಂಡ ಮಳಿಗ್ಯಾಗ ಬಂದ ನಿಂತೇವಲ್ಲ " ಎಂದು ನಡೆದ ಸಂಗತಿಯನ್ನು ಹೇಳಿದಳು ರತ್ನಾ.

ಆದರೂ ಅನಂತ ನಗುತ್ತ " ಯಾನ ನಿಮ್ಮ ಭಂಡಾರಾ ! ಯಾನ ನಿಮ್ಮ ಲಗಮವ್ವ ! ಎಲ್ಲೀರ ಸಾಂಸರ್ಗಿಕ ರೋಗ ಇದ್ದೋತು. ದನಾ ಬ್ಯಾರೆ ಕಡೆ ಒಯ್ದು ಕಟ್ಟಿದರ ಬದಕತಿದ್ದಾವು. ಭಂಡಾರ ಹಚ್ಚಿದರ ಸಾಯುದಿಲ್ಲ ಅಂತs !"

" ಹಳ್ಳೀ ಮಂದೀ, ಹಾಂಗ ಅಲ್ಲಾ ಅನಂತ ; ನಿಮ್ಮ ಹಂಗ ಯಾನ ಅವರ ಕಲತವರ ಇದಾರ, ಅಗಸುದ್ದೀ ಉಪಚಾರಾ ಮಾಡಾಕ ? ತಮ್ಮ ಮನಸಿಗಿ ತಿಳಿದದ ಯಾನರ ಒಂದ ಮಾಡತಾರ ಆಯ್ತು " ಎಂದಳು ತಾರಕ್ಕ. "ಅವನ ಮಾತಿಗೆ ಒಪ್ಪಿಗೆ ಕೊಡುತ್ತ".

" ತಮ್ಮ ಮನಸಿಗಿ ಬಂದಾಗ ಜಾತ್ರಿ ಮಾಡಕೋತ ಹೋದರ ಈ ಬಾನಿ

ಇರೋದs. ಇವರ ಲಗಮುವ್ವಗ ನೀರ ಹಾಕಲಿ, ಹುಗ್ಗೀ ಹಾಕಲಿ" ಅನಂತ ತನ್ನ ವಿಚಾರಸರಣಿಯಲ್ಲಿಯೇ ಮಾತನ್ನು ಮುಂದುವರಿಸಿದ. ತಾರಕ್ಕ ಅವನ ಮಾತನ್ನು ತಡೆದು "ದನಗಳ ಬ್ಯಾನಿಗಿ ಯಾನ ಮಾಡೋದ ಅನಂತಾ! ಸುಮ್ಮ ನಾಕ ದಿನಾ ಜಾತ್ರಿ ಮಾಡೀ ಆಟಾ ನೋಡಿ, ಮೋಜಮಾಡಿ ಹೋಗೋದಾ, ಲಗಮುವ್ವನ ದಯಾ ಏತಂತ" ಎಂದಳು ತಾರಕ್ಕ. ಅವಳಿಗೊಂದು ಹೆದರಿಕೆ, ಅನಂತ ಹೀಗೆಲ್ಲ ದೇವಿಗೆ ಮಾತಾಡುತ್ತಿರುವದರಿಂದ ಅವನಿಗೆ ಏನಾದರೂ ಆದರೆ ಎಂದು.

ರತ್ನವ್ವನಂತೂ ಆ ವಿಷಯದ ಮಾತುಗಳನ್ನೇ ಬಿಟ್ಟಳು.

"ಆಕಿ ದಯಾ ಯಾದಕ ಬೇಕು? ಯಾನ ಆಗತೇತಿ ಆಗಲಿ ನನಗ"

ಅನಂತನ ಈ ಮಾತನ್ನು ತಡೆಯಲೆಂದೇ ತಾರಕ್ಕ "ಅವ್ವಾ, ಊರಾಗ ಎಂದು ಹೋಗೋದಾ?" ಎಂದು ವಿಷಯ ಬದಲಿಸುವುದಕ್ಕೆ ಅವ್ವನನ್ನು ಕೇಳಿದಳು.

"ಜಾತ್ರಿ ದಿವಸ ಅಷ್ಟ. ಮನೀಗಿ ಹೋಗೂನು. ಮಳಗಾಲ ಬರೂ ತನಕಾ ಮಳಿಗ್ಯಾಗs ಇರೋದಂತs ಪತ್ರೆ ಎಲ್ಲಾ ಹಾಕೀ ಭಾಂಡಿ ಕೊಂಡೀ ಎಲ್ಲಾ ತಗೊಂಡ ಬಂದಿದೇವ ಇಲ್ಲಿ" ಎಂದಳು.

"ಮನ್ಯಾಗರ ಯಾನೇತಿ? ಬ್ಯಾಸಿಗ್ಯಾಗ ಇಲ್ಲೇ ಆರಾಮ ಅಲ್ಲಾ ಮಳ ಗ್ಯಾಗ? ಊರರ ಎಲ್ಲಿ ದೂರ ಐತಿ? ಬೇಕಾದ ಸಾಮಾನ, ಹೋಗಿ ತರಕ ಬರತೈತಿ. ಹಿಂಗ ಹೊರಗ ಹವಾನೂ ಚಲೋ" ಎಂದು ಅನಂತ ಅತ್ತೆಯ ಮಾತಿಗೆ ಅನುಮೋದನವನ್ನಿತ್ತ.

ಅನಂತನ ಮಾತುಕತೆಗಳತ್ತ ತಾರಕ್ಕನ ಮನಸ್ಸು ಹರಿಯುತ್ತಿದ್ದಿತು. ಅವನ ಮಾತುಗಳು ಅವಳಿಗೆ ಇಂಪಾಗಿ ಕೇಳಿಸುವುವು. ಅವನು ನಿಲ್ಲುವ ಕೂಡುವ ರೀತಿಗಳು ಅವಳಿಗೆ ಬಹಳ ಮೋಹಕವೆನಿಸುವುವು. ಅನಂತ ಅತ್ತೆಯ ಮನೆಗೆ ಬಂದಾಗಿನಿಂದ ದಿನಾಲು ನದಿಗೆ ಸ್ನಾನಕ್ಕೆ ಹೋಗುವ. ಒಂದೆರಡು ಸಲ ಅವರತ್ತೆ "ಅಂತೂ ಹೊಳೀಗ ಜಳಕಕ ಹೋಗಬ್ಯಾಡ ನಿನಗ ತಣ್ಣೀರ ತಡಿಕಿಲ್ಲ. ಇಲ್ಲೇ ಕಾಸಿ ಕೊಡತ್ಯಾನ, ಮಾಡು" ಎಂದು ಹೇಳಿದಳು. ಆದರೆ ಅನಂತ ಅವಳ ಮಾತನ್ನು ಕೇಳದೆ ನದಿಗೇನೇ ಸ್ನಾನಕ್ಕೆ ಹೋಗುವನು. ಅವನು ಜಳಕಕ್ಕೆ ಹೋದಾಗಲೇ ತಾರಕ್ಕನೂ ಅರಿವೆ

ಒಗೆಯಲು ಹೋಗುವಳು. ಅವನು ಸ್ನಾನಮಾಡಿ ಮೇಲೆ ಬರಲು, ಅವನು ಕಳೆದ ದೋತರವನ್ನು ಒಗೆದುಕೊಂಡು ಗಳಿಗೆ ಮಾಡಿ ಮನೆಗೆ ತರುವಳು. ಅನಂತ ಕೈಬೀಸುತ್ತ ಹಾಗೇ ಮನೆಗೆ ಬರುತ್ತಿದ್ದ, ತಾರಕ್ಕ ಅನಂತನ ದೋತರವನ್ನು ತಿದ್ದಿ ತೀಡಿ ಒಣಗಹಾಕುವಳು. ಅವನ ದೋತರಕ್ಕೆ ಸ್ವಲ್ಪ ಹೊಲಸು ತಗಲಿದರೂ ಅವಳಿಗೆ ಚಿಂತೆ. ಅವನ ಅರಿವೆ ಪುಸ್ತಕಗಳನ್ನು ಓರಣದಿಂದಿಡುವದರಲ್ಲಿ ಅವಳದೆಷ್ಟೋ ಕಾಲ ಕಳೆಯುತ್ತಿದ್ದಿತೀಗ. ಏನಾದರೂ ವಿಷಯ ತೆಗೆದು ಅವನು ಮೇಲಿಂದ ಮೇಲೆ ಮಾತಾಡುವಂತೆ ಮಾಡುತ್ತಿದ್ದಳು. ಇವೆಲ್ಲ ಕೆಲಸಗಳು ಅವಳಿಗೆ ಅದೇಕೊ ಆನಂದವನ್ನುಂಟುಮಾಡುತ್ತಿದ್ದುವು.

ಈಗೊಂದು ತಿಂಗಳಿಂದ ಊರ ಸಮೀಪದ ಮಳಿಗೆಯಲ್ಲಿಯೇ ಮುಗದುಮರು ಇರುತ್ತಿದ್ದರು. ಅಲ್ಲಿಯೇ ತಾವಿರಲಿಕ್ಕೊಂದು ಹತ್ತೆಂಟು ತಗಡುಗಳನ್ನು ಹಾಕಿ ಜೋಪಡಿ ಕಟ್ಟಿದ್ದರು. ದಂಟುಗಳಿಂದ ದನಗಳಿಗೂ ಕೊಟ್ಟಿಗೆ ಮಾಡಿದ್ದರು. ಅದರಿಂದ ಈಗ ಅವರಿಗೆ ಊರಲ್ಲಿ ಹೋಗುವ ಆವಶ್ಯಕತೆ ಕಡಮೆ. ಆದರೂ ಬರುವ ಶುಕ್ರವಾರ ಒಂದಿನ ಜಾತ್ರೆಗಾಗಿ ಮನೆಗೆ ಹೋಗಬೇಕೆಂದು ನಿಶ್ಚಯಿಸಿದ್ದರು. ಮಲ್ಲ ಈಗೆರಡು ದಿನಗಳಿಂದ ಕೇವಲ ಜಾತ್ರೆಯ ಗೊಂದಲದಲ್ಲಿಯೇ ತೊಡಗಿದ್ದ. ಲಗಮವ್ವನ ಜಾತ್ರೆಯಲ್ಲಿ ಮುಗದುಮರದೊಂದು ಮುಖ್ಯ ಅಂಗ. ಸಮಾರಾಧನೆಯ ಅಡಿಗೆ ಮಾಡಿ ಲಗಮವ್ವನಿಗೆ—ಲಗಮವ್ವ ಮೈಯಲ್ಲಿ ಬರುವಂಥವನಿಗೆ—ಉಣಬಡಿಸಿ ಅನಂತರ ಜನರಿಗೆ ಊಟಕ್ಕೆ ಹಾಕುವ ಹೊಣೆಯಲ್ಲ ಇವರ ಮೇಲೆಯೇ. ಆದುದರಿಂದ ಅಡಿಗೆಯ ಪಾತ್ರೆ, ಕಾಳುಕಡಿಗಳ ವ್ಯವಸ್ಥೆಗಾಗಿ ಮಲ್ಲ ಮನೆಕೆಲಸವನ್ನೆಲ್ಲ ಬಿಟ್ಟು ನಾಲ್ಕಾರು ದಿನ ಹೆಣಗಾಡಬೇಕಾಗುತ್ತಿದ್ದಿತು. ಇದು ಪೂರ್ವದಿಂದಲೂ ನಡೆದು ಬಂದ ಪರಿಪಾಠ.

ಅನಂತನಿಗೆ ಊರಲ್ಲಿ ಪರಿಚಯವಿಲ್ಲ. ಆದುದರಿಂದ ಯಾವಾಗಲೂ ಮಳಿಗೆಯಲ್ಲಿಯೇ ಇರುತ್ತಿದ್ದ. ಅತ್ತೆ ಮಾಡಿದ ಸವಿ ಸವಿ ತಿನಸುಗಳನ್ನು ಹೊಡೆಯುತ್ತ ಯಾವಾಗಲೂ ಏನಾದರೂ ಓದುತ್ತ ಹರಟೆ ಹೊಡೆಯುತ್ತ ಕಾಲಕಳೆಯುವನು. ತಾರಕ್ಕನಿಗೂ ಮನೆಗೆಲಸ ಕಡಮೆ, ಅತ್ತೆಯ ಮನೆಯಲ್ಲಿ ದುಡಿದು ಬೇಸತ್ತು ಬಂದವಳೆಂದು, ಅನಂತನ ಕೂಡ ಹರಟೆ ಹೊಡೆಯಲು ಅವಳೊಬ್ಬಳು ಯಾವಾಗಲೂ ಸಿದ್ಧಳೇ. ಅವರಿಬ್ಬರ ನಡುವೆ ನಾಭಿರಾಜನೊಬ್ಬ.

ಮಧ್ಯಾಹ್ನ ತಗಡಿನ ಜೋಪಡಿಯಲ್ಲಿ ಉಷ್ಣತೆಯಾಗುವದೆಂದು, ಅಲ್ಲೇ ಸಮೀಪ ದಲ್ಲಿರುವ ಮಾವಿನ ಗಿಡದ ನೆರಳಿನಲ್ಲಿ ಅನಂತನು ಕೂಡುವದಕ್ಕೆಂದು ಕಂಬಳಿ ಹಾಸಿಕೊಡುವಳು, ತಾರಕ್ಕ. ಅನಂತ ಅಲ್ಲಿ ಕುಳಿತು ಓದುವ; ನಿದ್ರೆ ಬಂದರೆ ಎದೆಯ ಮೇಲೆ ಪುಸ್ತಕ ಇಟ್ಟುಕೊಂಡು ಹಾಗೆಯೇ ಮಲಗುವ. ಹೀಗೆ ಮಲಗಿರುವಾಗ ಒಂದು ದಿನ ತಾರಕ್ಕ ಕೆಳಗೆ ಮಳಿಗೆಯಲ್ಲಿ ಹೋಗುವಾಗ ಅನಂತನನ್ನು ಕಂಡಳು. ಅವಳಿಗೆ ಆ ರೂಪ ಎಂದಿಲ್ಲದಷ್ಟು ಮೋಹಕವೆನಿಸಿರ ಬೇಕು. ಹರವಾದ ಹಣೆ ಬಾಗಿದ ಹುಬ್ಬು, ಇದೀಗ ಮೊಕಮಿಾಸೆ ಒಡೆಯು ತ್ತಿರುವ ಮುದ್ದುಮೊಗ, ಸುಳಿಗಾಳಿಗೆ ಅಸ್ತವ್ಯಸ್ತವಾಗಿ ಹಣೆಯ ಮೇಲೆಯೂ ನಾಲ್ಕಾರು ಎಳೆಗಳು ಹಾರಾಡುತ್ತಿರುವ ತುಂಬಿಗುರುಳು. ಒಂದೊಂದನ್ನೇ ನಿರೀಕ್ಷಿಸುತ್ತ ನಿಂತಳು ತಾರಕ್ಕ. ದಿಗಿಲುಗೊಂಡು ನೋಡಿದಷ್ಟೂ ಅವುಗಳಲ್ಲಿ ಅವಳಿಗೆ ಸೌಂದರ್ಯ ಹೆಚ್ಚಾಗಿಯೇ ತೋರುತ್ತಿದ್ದಿತು. ಅದೆಷ್ಟು ಹೊತ್ತು ಹಾಗ ನೋಡುತ್ತ ನಿಂತಿದ್ದಳೊ? ಬಿಸಿಲಿನ ಪರಿವೆಯೂ ಅವಳಿಗಿರಲಿಲ್ಲ. ಅನಂತ ಒಮ್ಮೆಲೇ ಎಚ್ಚತ್ತು ಕಣ್ದೆರದ. ಎದುರಿಗೆ ಬಿಸಿಲಿನಲ್ಲಿ ತಾರಕ್ಕ ನಿಂತಿದ್ದಾಳೆ.

"ಅದ್ಯಾಕ ತಾರಾ ಬಿಸಲಾಗ ನಿಂತಿ ?" ಎಂದು ಕೇಳಿದ ಅನಂತ.

ತಾರಕ್ಕ ಬೆದರಿ "ಅವ್ವಾ ಬರಾಕಿ ಇದಾಳ ಯಾನೊ !" ಎಂದು ತಡವರಿ ಸುತ್ತ ನುಡಿದು ನಡೆದಳು. ಅನಂತನಿಗೆ ಅವಳ ಭಾವ ಹೊಳೆಯಿತೇನೊ ! ಮುಗುಳುನಗೆಯೊಂದು ಮೂಡಿ ಮುಳುಗಿತು, ಅವನ ತುಟಿಯಲ್ಲಿ. ಮತ್ತೆ ಕಣ್ಣು ಮುಚ್ಚಿದ.

ರತ್ನವ್ವನ ಕೈ ದೊಡ್ಡದು. ಊಟಕ್ಕೆ ಕುಳಿತಾಗ ಅನಂತನು ಸಾಕು ಸಾಕು ಅನ್ನುವಷ್ಟರಲ್ಲಿ ಬಡಿಸಿಯೇ ತೀರುವಳು. ಹಳ್ಳಿಯ ಹೆಂಗಸು, ಹಳ್ಳಿಯ ಹುಡುಗರ ಊಟವೆಂಬಂತೆ ಬಡಿಸಿ ಒತ್ತಾಟ್ಟಿಗಾಗುವಳು. ಇದು ಅನಂತನಿಗೆ ಸಂಕಟ. ಅತ್ತೆ ಒಮ್ಮೆ ಬಡಿಸಿದ್ದನ್ನು ಈತ ಎರಡೂ ಹೊತ್ತು ಉಂಡರೂ ತೀರದು. ತನಗೆ ಬೇಕಾದಷ್ಟು ಉಣ್ಣುವ; ಆಮೇಲೆ ಮಾವ ಉಂಡು ಏಳುವ ವರೆಗೆ ಹಾಗೆಯೇ ಸ್ವಲ್ಪ ಸ್ವಲ್ಪ ತಿನ್ನುತ್ತ ಕೂಡುವನು. ಮಲ್ಲ ಉಂಡು ಹೊರಗೆ ಹೋಗುತ್ತಲೇ ಇವನ ಊಟದ ಗತಿಯನ್ನು ಕಂಡ ರತ್ನವ್ವ "ಸಾಕ ಬಿಡ ನಮ್ಮಪ್ಪ ಯಾನ ಉಣತಿ ? ಇಷ್ಟ ದೊಡ್ಡಾಂವ ಆದೀ, ಇನ್ನ ಸಣ್ಣ ಹುಡು

ಗೂರ ಹಾಂಗ ಮಿಚೀ ಮಿಚೀ ಅಂತ ತಿನತ ಕೂಡತಿ" ಎಂದು ಅಕ್ಕರೆಯಿಂದಲೇ ಅನ್ನುವಳು.

ಅತ್ತೆ ಇಷ್ಟು ಅನ್ನುವದೇ ತಡ, ಅನಂತ ನೀರು ಕುಡಿದು ಏಳುವ ಸಿದ್ಧತೆಯಲ್ಲಿರುವನು. ಅಷ್ಟರಲ್ಲಿ ಮಲ್ಲ ಕೈತೊಳೆದುಕೊಂಡು, ತಂಬಿಗೆ ಇಡಲು ಒಳಗೆ ಬಂದು "ತಲೀಗಿ ಹಾಕಿ ಕಟ್ಟರಿ ಅದನ್ನ. ಆಗಲಾಗ ಬಿಟ್ಟದ ಯಾರ ತಿನ್ನಾವರಾ ? ಸಣ್ಣ ಕೂಸಗೋಳಹಂಗ. ಇನ್ನ ನಾಭೂ ಬಿಡೂದುಲ್ಲ ಅಲ್ಲಾ ! ಇಲ್ಲಾ್ಯನ ನಿನ್ನ ಹ್ಯಾಂತಿ ಇದಾಳು, ನಿನ್ನ ಎಂಜಲಾ ತಿನ್ನಲಾಕ. ಸುಮ್ನ ತಿನ್ನ. ಇಲ್ಲದಿರ ಕಿವಿಗಡ್ಡಿ ಕಿತ್ತೇ ನಿನ್ನ ಕೈಯಾಗ ಕೊಟ್ಟಾ್ಯನು" ಎಂದು ಹಾಸ್ಯಮಾಡಿ ಹೊರಗೆ ಹೋಗಲಿರುವ. ಅಷ್ಟರಲ್ಲಿ "ಹೂಂ ! ಹೊರಗರ ಕೈತೊಳಕೋ ಹೋಗ. ನಾನ್ವರ ತಾರಾರ ಆದತಾಟ ತಗೋತೇವು" ಎಂದು ರತ್ನವ್ವ ಹೇಳುವಳು.

ಅನಂತ ಚಿಕ್ಕಂದಿನಿಂದಲೂ ಬಂದು ಹೋಗಿ ಅತ್ತೆಮಾವಂದಿರೊಡನೆ ಸಲಿಗೆಯಿಂದ ಬೆಳೆದವ. ಇದೇನು ಅವನಿಗೆ ಸಂಕೋಚಪಡುವ ಸಂಗತಿಯೆನಿಸದು. ಮೆಲ್ಲನೆ ಎದ್ದು ನಗುತ್ತ ಕೈತೊಳೆದುಕೊಳ್ಳಲು ಹೊರಗೆ ಹೋಗುವ. ಅವನು ಎದ್ದೊಡನೆಯೆ ತಾರಕ್ಕ ಅದೇ ಮಣೆಯ ಮೇಲೆ ಕೂಡುತ್ತ "ಹೂಂ ! ಇನ್ನ ತಿನಬೇಕಲ್ಲ, ಇವನ ಎಂಜಲಾ ! ಬಿಟ್ಟ ಹೋಗತಾನ ದಿನಾ ಹರಿವತ್ತ" ಎಂದು ಹುಸಿ ಮುನಿಸಿನಿಂದ ಅನ್ನುವಳು ಆದರೆ ಅವಳು ಹಾಗೆ ಕೂಡುವ ರೀತಿಯಲ್ಲಿ ತಾಯಿ ಆ ತಾಟನ್ನು ತಾನು ತಕೊಂಡಾಳೆಂಬ ಆತುರತೆಯು ಇಲ್ಲದೆ ಇರುತ್ತಿರಲಿಲ್ಲ. ಆಗ ಮಲ್ಲ ರುಮಾಲು ಸುತ್ತಿಕೊಳ್ಳುತ್ತಾ "ಇಕಿಗಿ ಭಾಳ ತುಪ್ಪಾ ಹಾಕಿದ ತಾಟ ಸಿಕ್ಕಿತ ಹೋಂದ ? ಲಗೂಮಾಡಿ ಕೂತಿದಾಳ ! ಸಣ್ಣಾಗ ಇರತಾ, ಯಾರಾರ ನೀರ ಕುಡದ ಪೇಲೆದಾಗ ನೀರ ಕುಡೀಬೇಕಾದ್ರ ತೊಳದ ಕುಡೀತಿದ್ದಳಲ್ಲ, ನಮ್ಮವ್ವ ! ಈಗೆಲ್ಲಾ ಅದೆಲ್ಲಿ ಹೋಯ್ತ್ಯೀ ?" ಎಂದು ಅನ್ನುವನು.

ಸಂಜೆ ಅನಂತ ಹಾಸಿಗೆಯ ಮೇಲೆ ಕುಳಿತು ಗರತಿಯ ಹಾಡುಗಳ ಪುಸ್ತಕ ಓದುತ್ತಿದ್ದಾನೆ. ತಾರಕ್ಕ ಅಲ್ಲಿಯೇ ಹಾಸಿಗೆಯ ಮೇಲೆ ಅಡ್ಡಾಗಿ, ಕಿವಿಗೊಟ್ಟು ಕೇಳುತ್ತಿದ್ದಾಳೆ. ಅಲ್ಲಿಯೇ ಸಮೀಪದಲ್ಲಿ ಒಲೆಯ ಮುಂದೆ

ಹಾಲು ಕಾಯಿಸುತ್ತ ಕುಳಿತ ರತ್ನವ್ವ ಯಾರೊಡನೆಯೋ ಜಾತ್ರೆಯ ಬಗ್ಗೆ ಮಾತಾಡುತ್ತಿರುವಳು. ಈ ಮಾತುಗಳು ತಾರಕ್ಕನಿಗೆ ಏಕಾಗ್ರತೆಯಿಂದ ಹಾಡು ಕೇಳಲು ಅಡ್ಡಿ ಮಾಡಿದುವೇನೊ! "ಸಾಕ ಬಿಡರಿ ತಾಯಿ! ನಿಮ್ಮ ಮಾತ, ಸಂಜೀತನಕಾ ಎಲ್ಲಿ ಹೋಗಿರತೀರ್‍ಯೋ ಯಾನೋ? ಈಗs ಬಂದೇತಿ. ಜರಾ ಹಾಡ ಕೇಳಬೇಕಂದರ" ಎಂದು ಸ್ವಲ್ಪ ಬೇಸರದ ದನಿಯಲ್ಲಿ ಅಂದಳು ತಾರಾ. ಮಗಳು ಇಷ್ಟು ಅಂದದ್ದೇ ತಡ; ರತ್ನವ್ವ ಮಾತು ನಿಲ್ಲಿಸಿದಳು. ಮಮತೆಯ ಮಗಳ ಮನವನ್ನು ಎಳ್ಳಷ್ಟೂ ನೋಯಿಸುವುದು ಅವಳಿಗೆ ಇಷ್ಟವಿರಲಿಲ್ಲ.

"ಹೂಂ! ಕೇಳವ್ವ. ಆಕೇದ ಹಾಡಿನ ಕಡೆ ಭಾಳ ಛಂದ. ಸರಸಾ ಬಾ ಹೋಗ" ಎಂದು ಆ ನೆರೆಮನೆಯವಳನ್ನು ಕರಕೊಂಡು ಹೊರಗೆ ಹೋದಳು. ತಾರಕ್ಕ ತನ್ನ ಹಾಡು ಕೇಳುತ್ತಿರುವಳೆಂದೊಡನೆ ಅನಂತನಿಗೆ ಒಳಗೊಳಗೇ ಆನಂದವಾಗುತ್ತಿದ್ದಿತು. ಅವನು ಮತ್ತಿಷ್ಟು ಚೆನ್ನಾಗಿ ಸ್ವರ ತೆಗೆದು ಹಾಡ ಹತ್ತಿದ. ನಿದ್ದೆ ಬರುವವರೆಗೂ ತಾರಕ್ಕ ಕೇಳುತ್ತಿದ್ದಳು. ಅವಳಿಗೆ ನಿದ್ದೆ ಯಾವಾಗ ಬಂದಿತೊ, ಇಲ್ಲೋ!

ಮರುದಿನ ತಾರಕ್ಕ ಹಾಸಿಗೆಯಿಂದ ಏಳುವಷ್ಟರಲ್ಲಿ ರತ್ನವ್ವ ಹೊರಗಿನಿಂದ ಬಂದು "ನಾ ಮುಡಚಟ್ಟ ಆದಿನ ತಾಯಿ! ಈಗ ಆಸತ್ತ ಬ್ಯಾಸತ್ತ ತವರಮನೀಗಿ ಬಂದರ ಇಲ್ಲ್ಯ್ಯಾ ಉಪದ್ರs ನಿನಗ, ಸುಟ್ಟಬರಲಿ! ಇನ್ನೊಂದ ನಾಲ್ಕೆಂಟ ದಿನಾ ಮುಂದ ಹೋಗಬಾರದಿತ್ತ? ಹೋದ ಸಾರೆ ಹುಣ್ಣಿವಿ ಆದ ನಾಲ್ಕು ದಿನಕ ಆಗಿನ್ನ. ಈ ಸಾರೆ ಅಂದರ ಇನ್ನs ಹುಣ್ಣಿವಿ ಮೂರ ದಿನಾ ಇರತಾನs ಆಗಿ ಕೂತಿನಿ!" ಎಂದಳು.

ತಾರಕ್ಕ ಸುಮ್ಮನೆ ಹಾಸಿಗೆಯಲ್ಲಿ ಉರುಳಾಡುತ್ತಿದ್ದಳು. ರತ್ನವ್ವ ಮುಂದೆ. ಹೇಳಲಾರಂಭಿಸಿದಳು. "ಇನ್ನ ಹಿಂಗ ಅನಮಾನ ಮಾಡಿರ ಬಗೀ ಹರೀದುಲ್ಲ. ಏಳ, ಕೆಲಸ ಭಾಳ ಐತಿ. ನಾಳಿ ಕಾಲಾಗs ಜಾತ್ರಿ ಬಂದೇತಿ" ಇನ್ನೇನು ಬಿಟ್ಟ ಕರ್ಮವಿಲ್ಲೆಂದು ಒಟಗುಡುತ್ತ ತಾರಕ್ಕ ಏಳ ಹತ್ತಿದಳು. "ನಾ ನಿಂಗ ನೆರವ ಆಗ್ತ್ಯಾನ ಏಳ ತಾರಾ. ನೀ ಯಾಕ ಅಷ್ಟ ಚಿಂತಿ ಮಾಡತಿ?" ಎಂದು ಅನಂತ ನಗುತ್ತ ಆಶ್ವಾಸನವಿತ್ತ.

"ನೀ ಯಾನ ಮಾಡಾಂವಾ ? ನಿನಗ ಯಾನ ಅಡಗಿ ಮಾಡಕ ಬರ ತೇತಿ ? ಅದನಾ ಕಲಸತಾರ ನಿಮ್ಮ ಸಾಲ್ಯಾಗಾ ?" ಎಂದು ಹೊರಗೆ ನಿಂತ ರತ್ನವ್ವ ಕೇಳಿದಳು.

ಅನಂತ ಸುಮ್ಮನೆ ನಕ್ಕುಬಿಟ್ಟ. ಅವನು ತಾರಕ್ಕನಿಗೆ ನೆರವಾಗುವೆ ನೆಂದೇನೋ ಹೇಳಿದ. ಅದು ಅವನು ಅವಳಿಗೆ ತೋರಿಸುವ ಸಹಾನುಭೂತಿಯ ಸಂಭ್ರಮದಲ್ಲಿ ಹೊರಬಿದ್ದ ಮಾತು. ಆಗ ನೆರವಾಗುವದೆಂದರೆ ಏನು ಮಾಡುವ ದೆಂಬುದನ್ನು ಅವನು ವಿಚಾರಿಸಿರಲಿಲ್ಲ. ಈಗ ವಿಚಾರದಲ್ಲಿ ಬಿದ್ದ. ಅದನ್ನರಿತು ತಾರಕ್ಕ "ನಾ ರೊಟ್ಟಿ ಮಾಡತ್ಯಾನು. ನೀ ಮುಂದ ಕೂತ ಉರಿ ಹಚ್ಚು ಒಲಿಗಿ: ಅಂದರ ನನಗ ಸಾಕು. ಅದರs ಬಂದೋತ ಇಲ್ಲ ನಿನಗ ?" ಎಂದು ನಗೆಯ ಮೇಲೆ ಹಾಯಿಸಿ ನುಡಿದಳು.

"ಹೊ ! ಉರೀ ಹಚ್ಚೋದ ಯಾನ. ಸಣ್ಣ ಕೂಸಗೋಳ ಹಚ್ಚಾಕಿಸಿ ವಲ್ಲ !" ಎಂದು ಹೆಮ್ಮೆಯಿಂದ ನಕ್ಕು ನುಡಿದ ಅನಂತ.

ಆ ದಿನ ಅಡಿಗೆಯಾಗಲಿಕ್ಕೆ ಸ್ವಲ್ಪ ವೇಳೆಯೇ ಆಯಿತು ಆದರೂ ಮಲ್ಲನಿಗೆ ವೇಳೆಗೆ ಊಟಕ್ಕೆ ಬರುವದಾಗಲಿಲ್ಲ. ಜಾತ್ರೆಯ ಜೋಡಣೆಯಲ್ಲಿ ತೊಡಗಿದ್ದ. ಅದರಿಂದ ಅನಂತನಿಗೆ ತಾನು ಬರುವ ದಾರಿ ಕಾಯದೆ ಊಟ ತೀರಿಸೆಂದು, ಭರಮುನ ಕಡೆಯಿಂದಲೇ ಹೇಳಿಕಳಿಸಿದ. ಎಷ್ಟಾದರೂ ಮಾವ ಅಳಿಯಂದಿರಿಗೆ ಬಿಡುವದೇ ? ಭರಮು ಹೇಳಲಿಕ್ಕೆ ಮಳಿಗೆಗೆ ಬಂದ. ಆದರೆ ಅವನು ಮನೆಯಲ್ಲಿ ಬರುವಂತಿರಲಿಲ್ಲ. ದೂರ ಕೊಟ್ಟಿಗೆಯ ಬಾಗಿಲಲ್ಲೇ ನಿಂತು. ಮನಸ್ಸಿಲ್ಲದೆ ಹೇಳಿ ತಿರುಗಿದ. ಅನಂತ ಒಳಗಿನಿಂದ ಬಂದು "ಬಾ ಅಲ್ಲಾ ಭರಮಾ !" ಎಂದು ಕರೆದ.

"ಕೆಲಸೇತಿ, ಹೋಗತ್ಯಾನು" ಎಂದು ಹೇಳಿದವನೇ ಹೋಗಿಬಿಟ್ಟ, ಭರಮು. ಅನಂತನಿಗೆ ಈಗೊಂದು ಕಾರಣ ಸಿಕ್ಕಂತಾಯಿತು, ತಾರಕ್ಕನನ್ನು ಗೇಲಿ ಮಾಡಲಿಕ್ಕೆ. "ಯಾನ ನಿನ್ನ ಗಂಡಾ, ಹೆಡಗಿ ಅಂಥಾ ಸಟಕೆ ಯಾನ ಸುತ್ತಿ ದಾನ ! ಗಡ್ಡಾ ಯಾನ ಬೆಳಸಿದಾನ ! ಧೋತರಾ ಯಾನ ಉಟ್ಟದಾ ಹುಚ್ಚ ರಂಗ !" ಎಂದು ನಗೆಯಾಡಿದ. ತಾರಕ್ಕನಿಗೆ ಭರಮು ಈಗೇಕೆ ಬಂದು ಹೋದನೋ ಎಂದು ಅನ್ನಿಸಿರಬೇಕು. ಏನಾದರೂ ಸಂಸ್ಕಾರ ಒಂದಿದೆಯಲ್ಲ ! ಆದುದರಿಂದ "ಹೂಂ ! ಇರಲಿ ಅನಂತಾ, ಅವರ್ಯಾನ ನಿನ್ನ ಹಂಗ ಸಾಲೀ ಕಲತವ

ರಲ್ಲಾ ! ” ಎಂದಳು. ಸ್ವಲ್ಪ ತಡೆದು “ಹ್ಯಾಂಗ್ಯಾರ ಇರಲಿ ನಮ್ಮಾವರ” ಎಂದು ಮೆಲ್ಲಗೆ ನುಡಿದಳು.

“ಇದಾನಲ್ಲ ! ಎಲ್ಲಿ ಹೋಗತಾ ? ಹನಮದ್ಯಾವರ ಅಂಥಾಂವ, ನಿನ್ನ ಗಂಡಾ” ತಾರಕ್ಕನ ಮನ ನೊಂದೀತೆಂದು ಮಂಗನ ಉಪಮೆ ಕೊಡಲಿಲ್ಲ, ಅನಂತ ಇಷ್ಟೇ.

“ಇರಲಿ, ಬಾ ಇನ್ನು ಉಣಕ ! ಕೇಳಿ ಯಾರರ್‍ಯ ನಕ್ಕಾರ ! ”

“ನಕ್ಕಾವರ ಹಲ್ಲ ಕಾಣಸತಾವು” ಎಂದು ಅನಂತ ಊಟಕ್ಕೆ ಎದ್ದ. ಒಳಗೆ ತಾರಕ್ಕ ತಾಟು ಮಾಡಿದ್ದಳು. ಕೈಕಾಲು ತೊಳೆದು ಮಣೆಯಮೇಲೆ ಹೋಗಿ ಕುಳಿತುಕೊಳ್ಳುತ್ತ “ಗಂಡಗ ತೋಡಿದಂಗ ತೋಡೀ ಮತ್ತ ಕಾಯಿಪಲ್ಲೆ ಎಲ್ಲ ! ” ಎಂದ ಹಾಸ್ಯಸ್ವರದಿಂದ ಅನಂತ.

ತಾರಕ್ಕ ಬೇಕಂತಲೇ ಸ್ವಲ್ಪ ಹೆಚ್ಚಾಗಿಯೇ ಕಾಯಿಪಲ್ಲೆ ಇಕ್ಕಿದಳು. “ನಂದ್ಯಾನ ಹೋಗೋದ ಏತಿ ? ಬಿಟ್ಟ ಏಳತ್ಯಾನ. ನೀ ತಿನ್ನಾಕಿ ಇದ್ದರ ಇರಲಿ ಅ್ಲ ? ” ಎಂದು ಅನಂತ ತಾರಕ್ಕನ ಮುಖದ ಕಡೆಗೆ ನೋಡಿದ. ಅವಳೂ ಅವನ ಮುಖದ ಕಡೆಗೆ ನೋಡಿದಳು. ಇಬ್ಬರ ದೃಷ್ಟಿಗಳೂ ಒಂದಾದುವು. ಇಬ್ಬರ ಮುಖದಲ್ಲಿಯೂ ಮುಗುಳುನಗೆಯರಳಿತು. ನಿಸರ್ಗ ನಲ್ತೋಟದಲ್ಲಿಯ ಮಲ್ಲಿಗೆಯ ಮುಗುಳದು ! ಇಬ್ಬರ ಮೈಯೂ ಜುಮ್ಮೆಂದಿತು. ಈ ಅನುಭವ ಇಬ್ಬರಿಗೂ ಹೊಸದು. ತಾರಕ್ಕ ರೊಟ್ಟಿ ಬಡಿಸಿ ಮುಂದಿನ ಕೆಲಸದಲ್ಲಿ ತೊಡಗಿದಳು. ಆದರೆ ಅನಂತನಿಗೆ ಇಂದು ಊಟದ ಮೇಲೆ ಚಿತ್ತವಿರಲಿಲ್ಲ. ಒಮ್ಮೆ ಜೋಪಡಿಯೆಲ್ಲ ಗರ್ರನೆ ತಿರುಗಿದಂತಾಯಿತವನಿಗೆ. ಎದುರಿಗೆ ಇದ್ದ ತಾರಕ್ಕ ಮೆಲ್ಲನೆ ಮೇಲೇರಿ ಜಂತೆಯವರೆಗೆ ಹೋಗಿ ಬಂದಂತೆ ಕಾಣಿಸಿತು. ಬಟ್ಟಲದೊಳಗಿನ ಮೊಸರೆಲ್ಲ ತೀರಿಹೋಗಿದ್ದರೂ ತಾರಕ್ಕ ಬಡಿಸಲು ಹೋದರೆ “ಬೇಡ” ಎಂದ, ಅನಂತ. ತಾರಕ್ಕ “ಯಾತರ ಗೂಡಾ ತಿನ್ನತಿ ? ” ಎಂದು ಕೇಳಲು ಎಚ್ಚತ್ತು “ಹಾಕು ! ” ಎಂದ. ಹೇಗೋ ಊಟ ಮುಗಿಸಿ ಎದ್ದ. ತಾರಕ್ಕ ಹೇಗೋ ಬಡಿಸಿದಳು. ಊಟ ಮುಗಿಯುವಷ್ಟರಲ್ಲಿ ಇಬ್ಬರ ದೃಷ್ಟಿಗಳೂ ಎರಡು ಮೂರು ಸಲ ಒಂದಾಗಿ, ಪರಸ್ಪರ ಹೃದಯದಲ್ಲಿ ಹೊಕ್ಕು ಏನನ್ನೋ ಅರಸುತ್ತಿದ್ದುವು.

ಆದೇ ದಿನ ಮಧ್ಯಾಹ್ನ ತಾರಕ್ಕ ಬೀಸುತ್ತ,

"ಯಾರ ಮಗಳವ್ವ ನೀ ಎರಳೆನೋಟದ ಗೊಂಬಿ!
ಸುರುಳಿಗೂದಲಿನ ಸುಲಿಹಲ್ಲ, ನನ ಮಗಳೆ
ಸುಗುಣಿ ನೀನಾರ ಮಗಳವ್ವ!"

ಎಂದು ಹಾಡುತ್ತಿದ್ದಳು. ಅನಂತ ಕೇಳಿ ಬರೆದುಕೊಂಡು ಸಂಜೆಗೆ ತಾರಕ್ಕನಿಗೆ ಮುಗುಳುನಗೆಯೊಡನೆ ಎಲ್ಲರಿರುವಾಗ ಓದಿ ತೋರಿಸಿದ. ತಾರಕ್ಕ ಲಜ್ಜೆಯಿಂದ ತಲೆಬಾಗಿಸಿದಳು. ಅವಳ ಮುಖ ಆರಕ್ತವಾಯಿತು. ಮನದಲ್ಲಿಯೇ ಅನಂತನ ಜಾಣತನಕ್ಕೆ ಹಿಗ್ಗಿದಳು, ಮೆಚ್ಚಿದಳು.

ಇಂದು ಮಗದುಮರು ಮನೆಗೆ ಬಂದಿದ್ದಾರೆ ಮನೆಯಲ್ಲಿ ಜಾತ್ರೆಯ ಗಲಾಟೆ. ಹಿಂದಿನ ಜಾತ್ರೆಗಳ ಮಾತುಗಳು. ಆರು ವರ್ಷಗಳ ಹಿಂದೆ ಜಾತ್ರೆ ಆದಾಗ ಹಾಗಾಯಿತು, ಹೀಗಾಯಿತು ಆಗ. "ಈಗ ತಾರಕ್ಕನ ಮದಿವಿ ಆಗಿತ್ತು. ಆಗ ಇನ್ನs ಭರಮಣ್ಣ ಸಣ್ಣಾವ ಇದ್ದ. ಮ್ಯಾಲಿಂದ ಮ್ಯಾಲ ಮನೀಗಿ ಬರತಿದ್ದ. ಆಗ ಇಕೀನೂ ಸಣ್ಣಾಕೇ ಇದ್ದಳ ಅ್ನ! ಒಮ್ಮೊಮ್ಮಿ ಭರಮೂ ಮಾಮಾ ಅನ್ನಾಕಿ ಗಂಡಗ. ಆಗ ಅಂತೂ ಇದ್ದರ ಯಾನ ನಗತಿದ್ದ ಅಂತೀ! ತಾರಾನ ಫಜೀತೀನs ಮಾಡಿ ಇಡತಿದ್ದ!" ಎಂದಳು ಒಬ್ಬಳು.

"ಅಂವ ಇಲ್ಲಾಗಿದ್ದ ಛಲೂ ಆಯ್ತು!" ಬಿಂಕದಿಂದ ಅನ್ನುವಳು ತಾರಾ.

"ಇಕೀಗಿ ಮಳ್ಳ ಅನಲಾಕ ಅವನರ ಯಾನ ಶಾಣ್ಯಾ ಬಿಡ" ತಾರಕ್ಕನ ಕಡೆಗೆ ಓರೆನೋಟದಿಂದ ನೋಡುತ್ತ "ಇಬ್ಬರೂ ಜೋಡೀನs ಅಲ್ಲ" ಎಂದ ಅನಂತ ನಗುತ್ತ.

"ಬಿಡಪ್ಪ! ನಿಮದ್ಯಾನ ಜೋಡಿ ಏತಿ? ಎಲ್ಲೀದ ಒಂದ ಮೊಂಡ ಮೂಗಿನ ಪೋರಿನಾ ಮಾಡಕೊಂಡಿದೀ" ಹೆಂಗಸರ ಕಡೆಗೆ ಹೊರಳಿ "ಮತ್ತ ಚಲುವ ನಮಗ ಹೆಸರ ಇಡತಾ" ಎಂದು ನಗುತ್ತ ತಾರಕ್ಕ "ಛಲೂ ಹ್ಯಾಂತಿ ಇದ್ದರ ಯಾನ ಮಾಡತಿದ್ರ್ಯೋ?" ಎಂದು ತನಗೆ ಹಿಂದೆ ಒಮ್ಮೆ ಹಂಗಿಸಿದ ಸೇಡು ತಕ್ಕೊಂಡಳು.

"ನೀ ಛಲೂ ಇದೀ, ನಿನ್ನ ಗಂಡ ಯಾನ ಮಾಡೀದಾ?" ಎಂದು ನಕ್ಕು

ಮತ್ತೊಬ್ಬ ಇಳಿವಯಸ್ಸಿನ ಹೆಂಗಸು ಕೇಳಿದಳು. ಈ ಮಾತಿನಿಂದ ತಾರಕ್ಕನ ಮುಖ ಬಾಡಿತು. ಅನಂತನು ನಗಿಸಲು ಯತ್ನಿಸತೊಡಗಿದ. ಅನಂತನೆಂದರೆ ಓಣಿಯೊಳಗಿನವರೆಲ್ಲರಿಗೂ ಅಚ್ಚುಮೆಚ್ಚು. ಹೆಣ್ಣುಮಕ್ಕಳಿಗಂತೂ ತೀರಿತು. ಅವರ ಕೆಲಸ ನಡೆದಾಗ ಓದುವದು, ಯಾವುದಾದರೂ ಸುದ್ದಿ ಹೇಳುವದು, ಕೇಳುವದು, ನಗುವದು, ಒಮ್ಮೊಮ್ಮೆ ಹೆಂಗಸರಿಂದ ಹಾಡಿಸಿಕೊಳ್ಳುವದು ಮಾಡುತ್ತಿದ್ದ. ಇಂದು ಜಾತ್ರೆ. ಮಧ್ಯಾಹ್ನ ಮನೆಯಲ್ಲಿ ಕೆಲಸವಿಲ್ಲ. ಎಲ್ಲರೂ ಮಗದುಮರ ಪಡಸಾಲೆಯಲ್ಲಿ ಕೂಡಿ ಹರಟೆಯಲ್ಲಿ ಕಾಲಕಳೆಯು ತ್ತಿದ್ದರು. ಗಂಡಸರಾರೂ ಇರಲಿಲ್ಲ. ಅಂದು ಆ ಹೆಂಗಳೆಯರಲ್ಲಿ ಅನಂತನೊಬ್ಬ ಉತ್ತರಕುಮಾರ.

ಸಂಜೆಗೆ ಎಲ್ಲರೂ ಗುಡಿಗೆ ಹೊರಟರು. ಗುಡಿಯು ಊರು ಬಿಟ್ಟು ಒಂದು ಮೈಲಿನ ಮೇಲೆ, ನದಿಯ ತೀರದ ಗಿಡಗಳ ಗುಂಪಿನಲ್ಲಿ. ಆಗ ತಾರಕ್ಕನ ಸಡಗರ ಹೇಳಲಾಸಲ್ಲ. ಇಂದಿನ ಅವಳ ಒನಪು ಒಯ್ಯಾರಗಳನ್ನು ಕಂಡವರ್ರು ಮೊದಲಿನ ತಾರಕ್ಕ ಇವಳು ಅಹುದೋ ಅಲ್ಲವೋ ಎಂದು ಶಂಕಿಸುವಷ್ಟು ಇತ್ತು. ಅನಂತ ಇಂಗ್ಲೀಷ ಶಾಲೆಯಲ್ಲಿ ಕಲಿಯುತ್ತಿದ್ದಾನೆ, ಎಂದರೆ ಬೇರೆ ಹೇಳಬೇಕಿಲ್ಲ. ಅವನ ಹೊಸ ಉಡಿಗೆತೊಡಿಗೆಗಳನ್ನು ಹಳ್ಳಿಯ ಜನರೆಲ್ಲ ನೋಡುವವರೇ. ಎಲ್ಲರೂ ಗುಡಿಗೆ ಹೋದರು. ಗುಡಿಯ ಮುಂದೆ ಈಗಾಗಲೇ ಜನ ನೆರಿದಿದೆ. ಕುರುಬರು ಡೊಳ್ಳು ಬಡಿಯುತ್ತಿದ್ದಾರೆ. ಇನ್ನೊಂದು ಸ್ವಲ್ಪ ಹೊತ್ತಿನಲ್ಲಿ ಮಾದಿಗರ ಮರೆಪ್ಪನ ಮೈಯಲ್ಲಿ ದೇವಿ ಬರತಕ್ಕವಳು. ಅದನ್ನೆಲ್ಲ ಕಾಣಬೇಕಾದರೆ ಗುಡಿಯ ಮುಂದಿನ ಕಟ್ಟೆಯ ಮೇಲೆ ನಿಲ್ಲಬೇಕು. ಅಲ್ಲಿ ನಿಲ್ಲಬೇಕಾದರೆ ಅನಂತನ ಕಾಲೊಳಗಿನ ಹೊಸ ಚಪ್ಪಲಿಗಳು ಅಡ್ಡಿ ಮಾಡಿದವು.

ಇದನ್ನರಿತು ತಾರಕ್ಕ "ಅನಂತಾ, ಇಲ್ಲಿ ಕಳಿ, ನಾನೋಡತ್ಯಾನ ಅವನ್ನ ನೀ ಮುಂದ ಹೋಗು" ಎಂದಳು.

ಅನಂತ ಕೇಳಿದ "ನೀ ಹ್ಯಾಂಗ ನೋಡತೀ ?"

"ನಾ ಮಸ್ತಸಾರೆ ನೋಡಿದ್ಯಾನ. ನೀನss ಎಂದ ಬಂದಿಲ್ಲ. ನೋಡ".

ಅನಂತ ಚಪ್ಪಲಿ ಕಳೆದು ಗುಡಿಯ ಕಟ್ಟೆಯ ಮೇಲೆ ಹೋಗಿ ನಿಂತ. ಆದರೂ ಹೊರಹೊರಳಿ ತಾರಕ್ಕನ ಕಡೆಗೆ ನೋಡುತ್ತಿದ್ದ. ಇಷ್ಟರಲ್ಲಿ ರತ್ನವ್ವ

ಬಂದಳು. ಅವಳು ನಾಭಿರಾಜನನ್ನು ಎತ್ತಿಕೊಂಡು ಬರಬೇಕಾದುದರಿಂದ ಹಿಂದೆ ಇದ್ದಳು. ರತ್ನವ್ವ ಬಂದು, ತಾರಕ್ಕ ಹಿಂದೆ ನಿಂತ ಕಾರಣವನ್ನು ಊಹಿಸಿದಳು. ಕೂಡಲೆ ದೂರ ಕುಳಿತ ಹೊಲೆಯರವನಿಗೆ ಕರೆದು, ಅವುಗಳನ್ನು ನೋಡಲು ಹೇಳಿ, ಮಗಳನ್ನು ಕರೆದುಕೊಂಡು ಮುಂದೆ ಹೋದಳು. ಅಷ್ಟರಲ್ಲಿ ಮರೆಪ್ಪನ ಮೈಯಲ್ಲಿ ದೇವಿ ತುಂಬಿದಳು. ಜಡೆಯನ್ನು ಹಾರಿಸುತ್ತ ಕುಣಿಯುತ್ತ ತೂಗುತ್ತ ಓಡಿ ಬಂದ. ಹಿಂದೆ ನಾಲ್ಕಾರು ಜನ ಮಾದಿಗರು ಇದ್ದರು. ಕುರುಬರ ಡೊಳ್ಳು ಅಷ್ಟಕ್ಕೆ ನಿಂತಿತು. ಭಯಭಕ್ತಿಯಿಂದ ಮಗ್ಗಲಿಗೆ ಸರಿದು ನಿಂತರು. ಊರ ಹಿರಿಯರೆಲ್ಲ ಕೈಜೋಡಿಸಿಕೊಂಡು ನಿಂತರು. ಮಗದುಮರ ಮಲ್ಲ ಹಾಗೂ ಇನ್ನುಳಿದ ಅವರ ಬಂಧುಬಳಗದವರೂ ಗುಡಿಯೊಳಗೆ ಹೋಗಿ ದೇವಿಯ ಮುಂದಿನ ನೈವೇದ್ಯ ತಕ್ಕೊಂಡು ಬಂದರು. ಮರೆಪ್ಪ ಕೂಗು ಹೊಡೆದು ಜಿಗಿದು ಕುಳಿತ. ಕೈಯೊಡ್ಡಿದ. ಅದರಲ್ಲಿ ಅಂಬಲಿ ಹುಗ್ಗಿ ಹಾಕಿದರು ಕುಡಿದ. ಸ್ವಲ್ಪ ಕೆಳಗೆ ಬಿತ್ತು. ಮುಖವೆಲ್ಲ ಮುಸುರೆ ಆಯಿತು. ಮಗಿಯಿಂದ ನೀರು ತಂದು ಹಾಕಿದರು. ಕುಡಿದ. ಸಂಗಡಿಗರು ಮುಖ ತೊಳೆದರು. ಅವನು ತೊಳೆಯಗೊಡದೆ ಕೂಗತೊಡಗಿದ. ಉಳಿದ ಮಾದಿಗರು ಗಡಬಡಿಯಿಂದ ಕಂಬಳಿಯೊಂದನ್ನು ತಂದು ಮೇಲೆ ಹಾಕಿದರು. ಆಮೇಲೆ ದೇವಿ ನುಡಿಯ ತೊಡಗಿದಳು.

"ಹಾ! ಹಾ! ಹಾ! ಹಾ! ನನ್ನ ನೆನಪ ಇಲ್ಲರ್ಯೋ....ನಿಮಗ....ಊಂ.... ಆಂ....? ಯಾನ ಮಾಡೀರಿ....ನೀವ....ಗುಡೀ ಸುಣ್ಣ ಕಾಣಲಿಲ್ಲ....ಮೂರ ವರ್ಷದಾಗ...." ಜನಜಂಗುಳಿಯೆಲ್ಲ ಭಯಭಕ್ತಿಯಿಂದ ಗಲ್ಲಗಲ್ಲ ಬಡಿದುಕೊಂಡರು. "ದವನಿಗೀ ದವನೀನ ಹುರದ ತಗದಿನೂ....ಇನ್ನs ಸುದ್ದೀವ್ಯಾಲ ಬರವಲ್ಲಾ ....ಇನ್ನs ಹಲ್ಲ ಮುರದಿಲ್ಲ ಯಾವ ಅವನು ?" ಗೌಡ ಭಯ ಭಕ್ತಿಯಿಂದ ನಮಸ್ಕಾರ ಮಾಡಿ—"ನನ್ನ ಕಡಿಂದ ಯಾನ ತಪ್ಪ ಆಗೇತಿ ಹೇಳು....ನಾ ತಿದ್ದಕೋತ್ಯಾನು" ಎಂದು ಬೇಡಿಕೊಂಡ. ಅಷ್ಟರಲ್ಲಿ ದೇವಿ ಕೂಗು ಹೊಡೆದು ಹೇಳಹತ್ತಿದಳು.

"ಹಿಂಗಾರೀ ಹೋಲಾ ಬೀಜಾ ಕಾಣಲಾಕಿಲ್ಲರ್ಯೋ....ಹೋಳೀಲೇ ಊರಕ ಊರ ಹೋದಾವರ್‍ಯೋ....ಒಂದ ಸೂಲಿಗಿ ಘಾಳಿ ಹಾಯಿತೇತಿ.... ಯೂರ ಕಾರುಣ್ಣಿ ಹೋಳಿಗಿ ಉಂಡಾರು....ಯಾರೂ ಇಲ್ಲ...."

“ ನೀನs ಉಳಸಾಕೆಲ್ಲ....” ಎಂದು ಜನ ಒಂದೇ ದನಿಯಿಂದ ಒದರಿ ಕೈಮುಗಿಯಿತು.

“ ಹೆಣ ಸುಡಕ ದಾದ ಇಲ್ಲರ್ರ್ಯೋ....ಒಂದು ಸರಣದಾಗ ಮೂರ ಹೆಣರ್ರ್ಯೋ....ಹಃ! ಹಃ! ಹಃ! ಮಳೀಲೆ ಕಾಲ ಕೊಳತ್ಯಾವರ್ರ್ಯೋ....ಹುಃ! ಹುಃ! ಹುಃ! ”

ಎಂದು ಭವಿಷ್ಯ ನುಡಿದು ಕೆಳಗೆ ಬಿದ್ದ ಕೂಡಲೆ ಡೊಳ್ಳುಗಳು ಮೊಳಗ ತೊಡಗಿದವು. ಕೊಂಬು ಊದಿತು. ಜೊತೆಯ ಮಾದಿಗರು ಅವನನ್ನು ಕಂಬಳಿ ಯಲ್ಲಿ ಸುತ್ತಿಕೊಂಡು ಹೊತ್ತು ಒಯ್ದರು. ಜನ ಊಟಕ್ಕೆ ಎದ್ದಿತು. ಪಲ್ಲಕ್ಕಿ ಗುಡಿಯ ಸುತ್ತು ತಿರುಗತೊಡಗಿತು. ಜನರು ದೇವಿಯ ದರ್ಶನ ತಕ್ಕೊಂಡು, ಕಾಯಿ ಒಡೆಯಿಸಿಕೊಂಡು ಮನೆಯ ಹಾದಿ ಹಿಡಿದರು. ಬುದ್ಧಿವಾದಿಯಾದ ಅನಂತನೂ ಇದೆಲ್ಲ ಪ್ರಕಾರವನ್ನು ನೋಡಿ ದೇವಿಗೆ ಕೈ ಮುಗಿಯದಿರಲಿಲ್ಲ.

ರಾತ್ರಿ, ಊರಲ್ಲಿ ಕೌಜಲಿಗೆಯ ಪಾರಿಜಾತ ಆಟ ಹಿಟ್ಟು ಚೆಲ್ಲಿದಂತೆ ಬೆಳದಿಂಗಳು ಬಿದ್ದಿದೆ. ಆಟ ನೋಡಲಿಕ್ಕೆ ಹೋಗುವವರೆಗೆ ಮಲಕೊಳ್ಳೋದ ಇಲ್ಲ. ಹೊರಗೆ ಬೆಳದಿಂಗಳಲ್ಲಿ ಮಾತುಕತೆಯಾಡುತ್ತ ಕೂಡುವದೆಂದು ಅನಂತನ ಹೇಳಿಕೆ. ಅವನ ಮಾತು ಹುಸಿ ಹೋಗುತ್ತಿರಲಿಲ್ಲ. ಅದೇಕೋ ಅವನಿಗೂ ಈಗೀಗ ಇಂಥ ಹರಟೆಯಲ್ಲಿ ಆನಂದವೆನಿಸುತ್ತಿತ್ತು. ಊಟ ಮಾಡಿ ಅಂಗಳಕ್ಕೆ ಹೋಗುತ್ತ ಅನಂತ ಹೇಳಿದ: “ ಇನs ಡೊಳ್ಳ ಬಡಿಲಾಕ ಹತ್ಯಾರಲ್ಲ, ಯಾನ ದೊಡ್ಡಾವರಪ್ಪ! ”

“ ಇನ್ನs ಯಾನ ನೋಡಿದೀನೀ? ಈಗ ಪಲ್ಲಕ್ಕಿ ಊರಾಗ ಬಂತು. ಆಟದ ವ್ಯಾಳೇ ತನಕಾ ಬಡ್ಯಾವರs ಅವರ ” ಒಳಗಿನಿಂದ ಹೇಳಿದಳು ತಾರಕ್ಕ.

“ ಹೀಂಗ ಬಡದರ ಸತ್ತಾರಲ್ಲ ಮಕ್ಕಳ! ”

“ ಹೂಂ! ಸಾಯತಾರ ನಿನ್ನ ಹಂಗ ಯಾನ ಚಾಕುಡದ ಮಂದಿ ಯಾನ ಅವರ? ನೆಲದಾಗಿನ ದುಡ್ಡ ಜಿಗದ ಬೀಳೂ ತನಕಾ ಡೊಳ್ಳ ಬಡ್ಯಾವರ ಅಂದರ ಅವರ ಹುಗ್ಗಿ ಕರಗೋದ ಕೇಳಿಲ್ಲಾ? ‘ ಡೊಳ್ಳ, ಡೊಳ್ಳ ಹೊಟ್ಟ್ಯಾಶ ವರ ಬರಬ್ಯಾಡರ್ರ್ಯೋ ಗುಂಬ ಗುಂಬ ಗಂಗಾಳ ತರಬ್ಯಾಡರ್ರ್ಯೋ ’ ಅಂತ ಮಂದಿ ಹೇಳತಾರ. ಅವರ ಹಂಗ ತಿಂತಾರಂತ ಹೀಂಗ ಹಗಲೀ ರಾತ್ರಿ ಡೊಳ್ಳ ಬಡೀತಾರ.”

" ತೆನೀ ತಿಂದ ಎತ್ತs ತ್ಯಾವರಾ ಏರೋದ. ನಿನ್ನ ಹಂಗ ಅರ್ಥಾ ರೊಟ್ಟೀ ತಿಂದಾರ್ಯಾನ."

ರತ್ನವ್ವನ ಮಾತನ್ನು ನಡುವೆಯೇ ತಡೆದು, " ತಿನ್ನವಾರ ಏಳ ಸೂ—ಮಕ್ಕಳ ! ದುಡ್ಡ ಜಿಗಸೋದ ಅಂದರ ಯಾನ ? " ಎಂದು ಸಿಂತು ಕೇಳಿದ ಅನಂತ, ಕುತೂಹಲದಿಂದ.

ತಾರಕ್ಕ ನಗುತ್ತ " ನಿಂಗ ಗೊತ್ತಿಲ್ಲ ಇನ್ನs ! ನೆಲದೊಳಗ ದುಡ್ಡು ಕೂಡುವಷ್ಟು ತೆಗ್ಗ ತೆಗಿತಾರೂ. ಮತ್ತ ಅದರಾಗ ದುಡ್ಡು ಇಟ್ಟು ಸುತ್ತ ನಿಂತ ಡೊಳ್ಳ ಬಡಿದರs ಆ ದುಡ್ಡ ಜಿಗದ ಮ್ಯಾಲ ಬೀಳಬೇಕs ತೆಗ್ಗಿನಾಗಿಂದ. ಅಂದರ ಲಗಮವ್ವನ ಹರಕೆ ಮುಟ್ಟತೇತಿ " ತಾನು ತಿಳಿದವಳೆಂಬ ಹೆಮ್ಮೆಯಿಂದ ಹೇಳಿದಳು.

" ಯಾನ ಹುಚ್ಚ ತಿಳಿವಳಿಕ್ಯೋ ! " ಎಂದು ಅದೇಕೋ ಮನದಲ್ಲಿಯೇ ಅಂದುಕೊಂಡು ಅನಂತ ಹೊರಗೆ ಹೋದ.

ಹಿರಿಯರೆಲ್ಲ ಒಳಗೆ ಕೆಲಸದಲ್ಲಿ ತೊಡಗಿದ್ದಾರೆ. ಹುಡುಗರೆಲ್ಲ ಬೆಳದಿಂಗಳಲ್ಲಿ ಅಂಗಳದಲ್ಲಿ ಕುಳಿತು, ಹಾಡು ಹೇಳುವುದು, ಕತೆ ಹೇಳುವುದು, ಒಗಟ ಹಾಕುವುದು, ಒಡೆಯುವುದು. ಗೆಲ್ಲುವುದು, ನಗುವುದು, ಸೋತರೂ ನಗುವುದು ನಡೆಸಿದ್ದಾರೆ. ಹಳ್ಳಿಯ ಹುಡುಗರ ಒಗಟುಗಳಲ್ಲಿ ತಾರಕ್ಕ ಬಹು ಗಟ್ಟಿ. ಅನಂತ ಇದರಲ್ಲಿ ಯಾವಾಗಲೂ ಸೋಲುವುದೇ. ಅನಂತ ತಾರಕ್ಕನನ್ನು ಸೋಲಿಸಬೇಕೆಂದು ಒಳಗೆ ಮಲಗಿದ ತನ್ನ ತಮ್ಮನ ಹತ್ತಿರ ಕೇಳಿಕೊಂಡು ಬಂದು ಅವನ ಪುಸ್ತಕದೊಳಗಿನ ಈ ಒಗಟವನ್ನು ಹಾಕಿದ.

" ಕಾಡಿನ ನಡುವೆ, ಕಲ್ಲಿನ ನಾಡು ; ಕಲ್ಲಿನ ಒಳಗೆ, ಬೆಳ್ಳಿಯ ಕೋಟೆ ; ಕೋಟೆಯ ಒಳಗೆ, ನೀರಿದೆ ನೋಡು ; ಹರಿಯದ ನೀರು, ನಿರ್ಮಲ ನೀರು ; ಬಲ್ಲೆಯೊ ಪೋರ, ಈ ಎಳನೀರ ? "

ತಾರಕ್ಕ ತಿಳಿಯದ ಮಾತುಗಳ ಅರ್ಥವನ್ನು ಕೇಳಿಕೊಂಡು ಒಗಟನ್ನು ಎರಡೆರಡು ಸಲ ಹೇಳಿಸಿಕೊಂಡು ಕೊನೆಗೆ ಹೇಳಿದಳು. ಅನಂತ ಈ ಸಲವೂ ಸೋತ. ಆಮೇಲೆ ಸೋತವರಿಗೊಂದು ಗುದ್ದು ಎಂದು ಗೊತ್ತಾಯಿತು. ತಾರಕ್ಕ ಸ್ವಲ್ಪ ಧೇನಿಸಿ,—

" ಕೆಂಪು ಕುದುರೆಯ ಮೇಲೆ ಕರಿಯ ಜಾನ
ಒಬ್ಬ ರಾಜಾ ಇಳೀತಾ, ಒಬ್ಬ ರಾಜಾ ಕೂಡತಾ....

ಯಾರ ಹೇಳು ? " ಎಂದು ತಾರಕ್ಕ ಕೇಳಿದಳು. ಉಳಿದ ಹುಡುಗಿಯರ ಕಡೆಗೆ ನೋಡಿ ನಸುನಕ್ಕು ಕಣ್ಣು ಹೊಡೆದು " ಹ್ಯಾಳಬ್ಯಾಡಿರೇ " ಎಂದಳು. ಅನಂತನಿಗೆ ಹೇಳಲಿಕ್ಕಾಗಲಿಲ್ಲ. ಸೋತ. ತಾರಕ್ಕ ಗುದ್ದು ಕೊಡಬೇಕಾದಾಗ ಅನಂತ ಒಂದು ಕತೆ ಹೇಳಿದ. ಅದರ ನಾಯಕ ನಾಯಿಕೆಯರು ತಾರಕ್ಕ ಮತ್ತು ಭರಮ. ಅದಕ್ಕೆ ಪ್ರತಿಯಾಗಿ ಕತೆ ಹೇಳಿಂದ ಅನಂತ. ಈ ಸಲ ತಾರೆಗೆ ಸೋಲು. ಅನಂತ ಚಿವುಟಿದ. ತಾರಕ್ಕ ಮುಖದ ಕಡೆಗೆ ನೋಡಿ ನಕ್ಕಳು. ಈ ಎರಡು ವರ್ಷಗಳಿಂದ ತಾರಕ್ಕನಲ್ಲಿ ನೆಲೆಯೂರಿದ ಸಪ್ಪೆತನವನ್ನು ನಾಲ್ಕೈದು ದಿನಗಳಲ್ಲಿಯೇ ಕಳೆದುಬಿಟ್ಟಿದ್ದ, ಅನಂತ.

ಆಟಕ್ಕೆ ಆರಂಭವಾಯಿತು. ಮಲ್ಲನ ಹೇಳಿಕೆಯಂತೆ ಅನಂತನಿಗಾಗಿ ಚಾವಡಿಯ ಕಟ್ಟೆಯಮೇಲೆ ಗೌಡಕುಲಕರ್ಣಿಯರ ಹತ್ತರ ಜಾಗ ಕಾಯ್ದಿಡಲಾಗಿತ್ತು. ಅನಂತ ಅಲ್ಲಿ ಹೋಗಿ ಕುಳಿತ. ತಾರಕ್ಕ ಹೆಂಗಸರ ಗುಂಪಿನಲ್ಲಿ ಕುಳಿತಿದ್ದಳು. ಭರಮನೂ ಆಟ ನೋಡಲಿಕ್ಕೆ ಬಂದಿದ್ದ. ಅವನಿಗೆ ಇಂಥ ಬಯಲಾಟಗಳಲ್ಲಿ ಅಭಿರುಚಿ ಹೆಚ್ಚು. ಆಟದ ಮಂಟಪದ ಸಮೀಪದಲ್ಲಿಯೇ ಮುಂದಿನ ಮಗ್ಗಲು ಜನರಲ್ಲಿ ಕುಳಿತಿದ್ದಾನೆ, ಆತ. ಆಟ ಆರಂಭವಾಯಿತು. ಮುಂದೆ ಸಾಗಿತು. ಬಯಲಾಟದಲ್ಲಿ ಒಂದು ಪಾತ್ರ ಹೋಗಿ ಮತ್ತೊಂದು ಪಾತ್ರ ಬರುವಾಗ ಪ್ರೇಕ್ಷಕರಿಗೆ ಕಾಣದಂತೆ ಶಾಲು ಹಿಡಿಯುವ ಪರಿಪಾಠ ವಿರುವುದು. ಅದರಂತೆ ಶಾಲು ಹಿಡಿಯಲು ಬೇಕಾಗಿದ್ದಿತು. ಆಟದಲ್ಲಿ ದೂತಿಯ ಕೆಲಸ ಮಾಡುವವನೊಬ್ಬ ಒಂದು ಶಾಲು ತಂದು ಪ್ರೇಕ್ಷಕರಲ್ಲಿಯ ಇಬ್ಬರನ್ನು ಹಿಡಿಯಲು ಕರೆದ. ಮುಂದೆ ಕುಳಿತವರಲ್ಲಿ ಇಬ್ಬರು ಮೂವರು ಎದ್ದರು, ಹುರುಪಿನಿಂದ ಶಾಲು ಹಿಡಿಯಲಿಕ್ಕೆ. ಅವರಲ್ಲಿ ಭರಮನೊಬ್ಬ. ಪಾತ್ರಗಳನ್ನು ಎಲ್ಲರಿಗಿಂತ ಮೊದಲು ನೋಡಬೇಕೆಂಬ ಆತುರವೇ ಅವರನ್ನೆಬ್ಬಿಸಿತ್ತೇನೊ ! ಆಟದಲ್ಲಿ ಹುಡುಗೆಯೊಬ್ಬಳಿರುವಳೆಂದ ಮೇಲೆ ಹಳ್ಳಿಯ ತರುಣರಿಗೊಂದು ಹುಚ್ಚು ಹಂಬಲ ; ಈ ಹಂಬಲವೇ ಭರಮನನ್ನು ಎಬ್ಬಿಸಿತ್ತು. ಅಂತೂ ಭರಮ ಎದ್ದು ಶಾಲು ಹಿಡಿದ. ಒಳಗೆ ಆಟದವಳೊಬ್ಬಳು ಬಂದು ಹಾಡುತ್ತಿದ್ದಳು. ಭರಮ ಒಳಗೇ ನೋಡುತ್ತಿದ್ದ. ಕೆಳಗೆ ಕುಳಿತ ತರುಣರಲ್ಲೊಬ್ಬ " ಎಂದ ಹೆಂಗಸರ ಮಾರಿ ಕಂಡೀದಿ ಇಲ್ಲೋ ಪ್ರಾಣಿ ! " ಎಂದು ನಗೆಯಾಡಿದ.

ಸುತ್ತಲಿನ ಜನ ಘೊಳ್ಳೆಂದು ನಕ್ಕಿತು. ಆಗ ಅದೇಕೊ ಅನಂತನ ದೃಷ್ಟಿಯು ತಾರಕ್ಕನ ಕಡೆಗೆ ಹರಿಯಿತು. ಮುಖದಲ್ಲಿ ಮುಗುಳುನಗೆ ಮೂಡಿತು. ಅದಕ್ಕೆ ಪ್ರತಿಯಾಗಿ ತಾರಕ್ಕನ ಮುಖವೂ ಅರಳಿತು. ಅದರಲ್ಲಿ ತೀಕ್ಷ್ಣ ವೇದನೆಯೂ ಅಸಹ್ಯತೆಯೂ ತುಂಬಿತ್ತು. ಆಟ ಸಾಗಿತ್ತು. ಅದರಲ್ಲಿ ಮೇಲಿಂದ ಮೇಲೆ ಶೃಂಗಾರಿಕ ಪ್ರಸಂಗಗಳು ಬಂದಾಗ ಅದೇಕೋ ಅನಂತ ತಾರಕ್ಕನ ಮುಖದ ಕಡೆಗೆ ನೋಡುವ. ಅವಳೂ ಇವನನ್ನು ನೋಡುವಳು. ದೃಷ್ಟಿಗಳು ಒಂದಾಗು ವವು; ಮುಖವರಳುವವು. ಆ ಜನಜಾತ್ರೆಯಲ್ಲಿ ಹೀಗೆ ಎರಡು ಜೀವಿಗಳ ಆತ್ಮಗಳು ಒಂದರಲ್ಲೊಂದು ಬೆರೆಯುತ್ತಿದ್ದುವು; ಒಂದೇ ತಾಳದಲ್ಲಿ ಹೆಜ್ಜೆ ಯಿಕ್ಕುತ್ತಿದ್ದವು. ಮನಸ್ಸೂ ಏಕತಾನದಲ್ಲಿ ಮಿಡಿಯುತ್ತಿದ್ದಿತೇನೋ! ಇವನು ಅವಳನ್ನು ನೋಡಬಯಸಿದ ಕ್ಷಣವೇ ಅವಳೂ ಇವನನ್ನು ನೋಡಬಯಸುತ್ತಿದ್ದ ಳೇನೋ! ಇಬ್ಬರೂ ಒಂದೇ ಸವನೆ ಪರಸ್ಪರ ನಿರೀಕ್ಷಿಸುತ್ತಿರಬೇಕೋ, ಅವರ ಅಂತರಾತ್ಮನೇ ಬಲ್ಲ. ಮೇಲಿಂದ ಮೇಲೆ ದೃಷ್ಟಿಗಳು ಒಂದಾಗುವವು. ಮುಗುಳು ನಗೆ ಮಿಂಚಿತೋ, ಬೇರೆಯಾಗುವವು. ಹೀಗೆ ಬೆಳಗು ಮುಂಜಾನೆ ಪಾರಿಜಾತ ದಲ್ಲಿಯ ಕೃಷ್ಣಸತ್ಯಭಾಮೆಯರ ಒಗ್ಗೂಟದೊಡನೆಯೇ ಇವರ ಮನಸ್ಸು ಗಳೂ ಒಂದಾಗಿ ಮನೆಯ ಕಡೆಗೆ ಮರಳಿದರು.

ಎರಡು ತಾಸು ಹೊತ್ತೇರಿತ್ತು. ಅನಂತ ರಾತ್ರಿ ಆಟ ನೋಡಿ ಬಂದುದ ರಿಂದ ಇನ್ನೂ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಾನೆ. ತಾರಕ್ಕ ರತ್ನವ್ವರಿಬ್ಬರೂ ಈಗಾಗಲೇ ಎದ್ದು ಒಳಗೆ ಸಾಮಾನುಗಳನ್ನು ಕಟ್ಟುತ್ತಿದ್ದಾರೆ ಮಳಿಗೆಗೆ ಹೋಗ ಲಿಕ್ಕೆ. ಅಷ್ಟರಲ್ಲಿ ನೆರೆಮನೆಯ ಹೆಂಗಸೊಬ್ಬಳು...." ರತ್ನಾ " ಎಂದು ಕರೆಯುತ್ತ ಒಳಗೆ ಬಂದಳು.

" ಯಾಕ್ವ ? ಬಾ ಅಲ್ಲ ; ಹರಿವತ್ತ್ಯ ಬಂದಿ....? " ಎಂದು ಕೇಳುತ್ತ ಹೊರಗೆ ಬಂದಳು ರತ್ನಾ.

" ಯಾಕ ಇಲ್ಲ ; ಸುಮ್ಮ ಬಂದೀನಿ ಇತ್ತ ಹಿತ್ತಲ ಕಡೆ ಹೋಗಿನಿ.... ಹೋಗ್ತ ಹೋಗ್ತ...." ಎಂದು ಕೂಡುತ್ತ " ತಾರಾ ಎಂದ ಹೋಗಾಕಿ ? " ಎಂದು ಕೇಳಿದಳು.

" ನಿನ್ನೇನೆ ಜಾತ್ರಿ ಆಗೇತಿ, ಹೋದಾಳಲ್ಲ ಇನ್ನೊಂದ ನಾಲ್ಕ ದಿನಾ ನಿಂತ. ಈಗ ಅಲ್ಲಿರ ಯಾನ ಗಡಿಬಡಿ ಏತಿ....? " ಎಂದಳು ನಿರುತ್ಸಾಹದಿಂದ.

" ನಿನ್ನಿ ನೀನೂ ಹೋಗಿದ್ದಿ ಜಾತ್ರಿಗಿ....? "

" ಹೂಂ ! ಹೋಗಿದ್ದೇವಲ್ಲ....ನೂರ ವರ್ಷದಾಗ ಒಮ್ಮಿ ನಾಡಲಾಕ ಹತ್ತಿದಾರ ಜಾತ್ರಿ....ನಮಗ ಯಾನ ದ್ಯಾರ ಶುಕ್ರಾರ....ಹೋಗಕ ಆಗತೇತಿ ? ಜಾತ್ರ್ಯಾಗ ಹೋಗದ ಯಾತಕ ನಿಲ್ಲೂನ ತಾಯಿ ? ನೀ ಯಾಕ ಬರಲಿಲ್ಲs ? "

" ಸೊಸಿದೇರ ಮೊಮ್ಮಕ್ಕಳಾ ಎಲ್ಲಾರೂ ಹೋಗಿರು....ದನಗಳ ಮೆವ್ವ ನೀರ ಅಂತ....ಮನ್ಯಾಗ ಬೇಕಲ್ಲ....ಅದಕs ಬರಲಿಲ್ಲ." ಸ್ವಲ್ಪ ತಡೆದು " ಹೋಂದs ರತ್ನಾ....ಈ ವರ್ಷ ಬ್ಯಾನಿ ಭಾಳ ಅಂತ್ಯಲs ? " ಎಂದು ಕೇಳಿದಳು.

" ಹೋಂದ. ನಿನ್ನಿ ಲಗಮವ್ವs ಹೇಳಿದಳು....ಒಂದs ಸರಣದಾಗ ನಾಲ್ಕ ನಾಲ್ಕ ಹೆಣಾ ಹಾಕಿ ಸುಟ್ಟಾರಂತ....ಕರ್ಮ ಹೆಚ್ಚಾಗಿಗಾನಾ....ಒಮ್ಮಿ ಹೀಂಗಾ ಆಗೋದುಲ್ಲ....? "

" ಹೋಂದ ತಾಯಿ ! ಯಾನ ಹುಚ್ಚ ಇದ್ದಾದಾಳ ಚಿಮ್ನಾ....? "

" ಯಾನ ಅವರ ಮಾತ ತಗೀಬ್ಯಾಡ ತಾಯಿ, ನಮ ಮನ್ಯಾಗ ಅವರೊಂದ ಅನ್ನಾನ ನಾವೊಂದ ಅನ್ನೋದಾ ; ನಡುವಿನವರ ಹೇಳೋದೊಂದಾ. ಹೀಂಗಾಗಿ ಇರೋದೊಂದಾ ಆಗೋದೊಂದಾ ಆಗತೇತೀ. ಯಾನ ಆಯ್ತು ? " ಕೊನೆಗೆ ಮನ ನಿಲ್ಲದೆ ಕೇಳಿದಳು ರತ್ನಾ.

" ಯಾನ ಅಲ್ಲs ; ಪೋರಿ ಜಾತ್ರಿಗೆ ಹೋದರ, ಹೀಂಗ ಅನಬೇಕು ? ತಾ ಒಂದ ಹೋಗೋದ ಇಲ್ಲ ; ಖೋಡಿ ಹೋಗತ್ಯಾನಂತ ಅಕ್ಕಾತಾಯಿ ಬಾಯಿ ತೆರದ, ತೆರದ ಹಲ್ಲ ನುಚ್ಚನಾಡಕೋತ ಹೋಗಗೊಡಲಿಲ್ಲ."

" ಅದಕs ನಿನ್ನಿ ಎಲ್ಲಿ ಅಕ್ಕಾ ಕಾಣಸಲಿಲ್ಲ ? " ಎಂದಳು ತಾರಾ ಹೊರಗೆ ಬಂದು.

" ಆಕಿ ಬಂದರs ಕಾಣಸ್ಯಾಳು. ಮನ್ಯಾಗs ಕೂತಿತ್ತ ಪೋರಿ ಹರಿವ ತ್ರಿಂದೂ " ಸ್ವಲ್ಪ ಅನುಮಾನಿಸಿ " ನೀನs ಹೋದದಕಾ ಯಾನ್ಯಾನ ಅಂತಾಳ ಕೇಳು."

"ಯಾನ ? " ಎಂದು ಕೇಳಿದಳು ರತ್ನಾ.

“ ‘ ಮಾವ ಸತ್ತ ಇನ್ನ ಒಂದ ವರ್ಷ ಆಗಿಲ್ಲಾ. ಈಗs ಸೆಟಗೊಂಡ ಜಾತ್ರೀ, ಆಟಾ ನೋಡಕ ಹೋಗಬೇಕೂ ಇಕ್ಕಿ ? ’ ಅಂದಳು. ಆದಕಾ ನಾ ಹೇಳ್ನಿ ‘ ತಾಯಿ ಈಗ ಸರಾದ ಪೋರಿಗೋಳ ಮನ್ಯಾಗ ಹ್ಯಾಂಗ ಕೂತಾವು ? ಹೋಗಾವರಲ್ಲ ! ’ ಅಂತ ” ಎಂದು ಚಿನ್ನಪ್ಪನಿಗೆ ತಾನು ಹೇಳಿದ ಬುದ್ಧಿವಾದವನ್ನೂ ಬೆರಸಿ ಹೇಳ ಹತ್ತಿದಳು.

“ ಹ್ಯಾಂಗ ನಡೆದರೂ ಆಕಿ ಹೆಸರs ಇಡತಾಳ. ಬ್ಯಾಡಾದ ಬೆಲ್ಲ ಕಹೀನ ಅನ್ನೋದಲ್ಲಾ. ಹಾಂಗಾಗೇತಿ ; ಜಾತ್ರಿಗಿ ಯಾಕ ಹೋದೀ ಅಂದರ, ಇವರ ಯಾನ ಮನ್ಯಾಗ ಉಣೋದಾ ತಿನ್ನೋದಾ ಬಿಟ್ಟದಾರು ? ” ಎಂದು ರತ್ನವ್ವ ಕೇಳಿದಳು.

“ ಅವ್ವಾಬಾಯಿ ನೋಡಿದಿ ಯಾನ ? ಅಕ್ಕಾತಾಯಿನಾ ಕರೀಕ ಹೋಗ ಅಂತಿದ್ದಿ ! ನನಗೂ ಬೈಸಿ ಇಡತಿದ್ದಿ ನೋಡು ! ” ಎಂದು ತಾರಕ್ಕ ಅಂದಳು.

ಅನಂತ ಎದ್ದು ಕುಳಿತ, ಈ ಮಾತುಗಳಿಂದ. “ ಯಾನ ಅನುತಿದ್ದಳು ? ಇನ್ನs ಎಷ್ಟ ದಿನಾ ಹೀಂಗs ಹೋಗದ ಇರೋದಂತ ? ” ಎಂದು ಬಂದ ಆ ಮುದುಕಿಗೆ ಕೇಳಿದ, ಕೆರಳಿದ ಸ್ವರ ಎತ್ತಿ ಆಗ.

“ ಅದೆಲ್ಲಾ ನಾವ ಯಾತಕ ಅನ್ಲಾಕ ಹೋಗೂನು ? ನೀವ ಇದೀರಿ, ಅವರ ಇದಾರ ! ” ಎಂದು ಮುದುಕಿ ಮೆಲ್ಲನೆ ಏಳಲಾರಂಭಿಸಿದಳು.

ಅನಂತನಿಗೆ ಇಂಥ ಚಾಡಿಖೋರತನ ಸೇರದು. ತಾರಕ್ಕನು ಇಂದಿನವರೆಗೆ ಅನುಭವಿಸುತ್ತಿದ್ದ ಕಷ್ಟನಷ್ಟಗಳಿಗೆಲ್ಲ ಈ ಚಾಡಿಖೋರರೂ ಎಷ್ಟೋ ಕಾರಣರಾಗಿದ್ದಾರೆಂಬುದು ಅವನಿಗೆ ಗೊತ್ತು. ಆದಕ್ಕಾಗಿಯೇ ಅವನು “ ಇದ ಹೇಳೋದಕಷ್ಟ, ಯಾನ ನೀವ ? ಹೀಂಗ ಹೇಳಿ ಎಷ್ಟು ಜಗಳಾ ಹಚ್ಚೀದೀರಿ ? ” ಎಂದು ಹುಬ್ಬುಗಂಟಿಕ್ಕಿ ಕೇಳಿದ.

“ ನಾವ್ಯಾತಕ ಜಗಳಾ ಹಚ್ಚೂನಪ್ಪಾ ! ” ಎಂದು ಒಟಗುಡುತ್ತ ಮುದುಕಿ ಎದ್ದು ಹೋದಳು.

“ ಹಾಂಗ್ಯಾಕ ಅಂಜಕೋತೀನೋ ಅನಂತಾ, ಮನೀಗಿ ಬಂದಾವರ್ನ ? ” ಎಂದು ಕೇಳಿದಳು, ರತ್ನಾ.

ಅದಕ್ಕೆ ತಾರಕ್ಕನೇ “ ಇವರಿಗ್ಯಾಕ ಸಂಚೇತಿ ಬಿದ್ದೀತಿ ? ಸುಮ್ಮನ

ಹಲ್ಲಾಗ ನಾಲಗಿ ಹಾಕೊಂಡ ಕೂಡಕ ಬರೂದುಲ್ಲಾ ? ಸುಳ್ಳ ಒಂದ ಸೊಟ್ಟ ಒಂದ, ಅಲ್ಲೇದ ಇಲ್ಲೀ, ಇಲ್ಲೇದ ಅಲ್ಲೀ ಓದ ಹೇಳಕೋತ ಕೂಡತಾರು ! " ಎಂದು ಉತ್ತರ ಕೊಟ್ಟಳು.

ಅದೇ ದಿನ ಮಧ್ಯಾಹ್ನ ಮಳಿಗೆಗೆ ಹೋದರು. ದನಕರುಗಳೆಲ್ಲ ಅಲ್ಲಿಯೇ ಇದ್ದುವು. ಜಾತ್ರೆಯ ನಿಮಿತ್ತ ಎರಡು ದಿನ ಊರಲ್ಲಿ ಬಂದಿದ್ದರವರು. ಮಳಿಗೆಯಲ್ಲಿ ಹೋದ ಮೇಲೆ ಒಂದು ದಿನ ಮಧ್ಯಾಹ್ನ ಅನಂತ ತಾರಕ್ಕ ಮಾವಿನಗಿಡದ ನೆರಳಿನಲ್ಲಿ ಕುಳಿತಿದ್ದಾರೆ. ಸಮೀಪದಲ್ಲಿ ನಾಭಿರಾಜನೂ ಇದ್ದಾನೆ. ಅನಂತ 'ಆನಂದಕಂದ'ರ ಕಥೆಯೊಂದನ್ನು ಓದಿ ಹೇಳುತ್ತಿದ್ದಾನೆ. ತಾರಕ್ಕನಿಗೆ ತಿಳಿಯಬೇಕೆಂದು 'ಜಾಡರ ಜಾನಪ್ಪ' ಎಂಬ ಕಥೆಯನ್ನು ಆಯ್ದಿದ್ದಾನೆ. ಓದಓದುತ್ತ ಅನಂತ ನಡುವೆ ನಗುವನು. ಅಲ್ಲಿ ತಾರಕ್ಕ " ತಿಳೀಲಿಲ್ಲ. ತಿರಗಿ ಓದು " ಅನ್ನುವಳು. ಇವರು ನಕ್ಕಾಗ ನಾಭಿಯೂ ನಗುವನು.

ಕಥೆಯಲ್ಲಿ ನಡುವೆ ಹಾಡೊಂದು ಬರುವದು. ಅನಂತ ಅದನ್ನು ಅನ್ನುವದಕ್ಕಾಗಿ ಸ್ವಲ್ಪ ತಡೆದು ದನಿ ಸರಿ ಪಡಿಸಿಕೊಂಡು ಆಮೇಲೆ :

ನಗ ನಗತ ನಡದಿಯಲ್ಲೆ ನಾರಿ....।
ಮಿಂಚಿನ ಗೊನೀ ತೂರೀ....॥ ನಗ ನಗ್ವತ ॥ ೧ ॥
ಕಣ್ಣ ನೋಟ ಕಾಮನ ಬಿಲ್ಲಾ....
ಕೆನ್ನಿ ಎರಡು ಕನಡೀ ಹಳ್ಳಾ....॥
ತುದಿ ಜರದ ಕುಬರ ನಾ—ಜೂ—ಕಾ....।
ಎದಿ ಮ್ಯಾಗಿನ ಸೆರಗಿನ ಝೋಕಾ....॥
ಎದಿಗಿರದ್ಹಾಂಗಾದಿತು ಬಾ ಕಾ ।
ಉರವ್ಷಸಿ ರಂಬ ಮೇನ—ಕಾ....॥
ಇಲ್ಲ ಯಾರ ನಿನ್ನ ಸರಿ ತೂ—ಕಾ....।
ಮಾತಾಡ ನಿಂತು ಜರಾ....ಸೋ—ಕಾ....
ಮೋಹ್ವದ್ಃ ಗಣಿಯೋ....ಮಾಯ್ವದ ಮಣಿಯೋ.... ॥ ೨ ॥
ನಗ ನಗತ ನಡದಿಯೆಲ್ಲೆ ನಾರೀ........
ಇಳೀ ಬಿಸಿಲ ಯಾಳೇದೊಳಗ್ವ.... ।
ಹೊಳಿ ನೀರಿಗಿ ನೀ ಹೊಂಟಾಗ....॥

ಅಂದೊಮ್ಮಿ ಮೊದಲ ನೋಡೀ.... |
ನನ್ನ ಕಣ್ಣು ಮನಸೂ ಕೂಡೀ.... ||
ನಿನ ಕಡಿಗೇ ಬಂದೂ ಓಡೀ.... |
ಮಾಡೀಯs ಮಾಟಾ ನೋಡೀ.... ||
ಕಣ್ಣು ಮನಸಿಗೆ ಹಾಕಿದಿ ಬೇಡೀ ||
ಎಂಥಾಕೇ ನೀ ಕಿಡಗೇಡಿ.... |
ಕಡಿಗಣ್ಣಿs ಬಾ-ಣಾ- | ಹೊಡಿವ್ಹೊದ್ಯ ಪ್ರಾಣಾ || ೩ ||
ನಗ ನಗತs ನಡದಿಯಲ್ಲೆ ನಾರಿ........

ಎಂದು ಕೈಮಾಡಿ ಹಾಡಹತ್ತಿದ. ತಾರಕ್ಕ ಮೊದಲಿಗಿಂತ ಮುಂದೆ ಸರಿದು ಅನಂತನ ಹತ್ತಿರದಲ್ಲಿ ಕುಳಿತಿದ್ದಾಳೆ. ನಾಭಿಗೇನೂ ತಿಳಿಯದು. ಇವರಿಬ್ಬರೂ ದೊಡ್ಡವರು. ತನಗಿಂತ ತಿಳಿದವರು. ಅವರ ಮುಖ ನೋಡುತ್ತ ನಕ್ಕಾಗ ನಗುತ್ತ ಕುಳಿತಿದ್ದಾನೆ.

ಅನಂತ ಇಂಪಾಗಿ ಹಾಡುತ್ತಿದ್ದಾನೆ. ಹಾಡುವಾಗ ಕೈ ಮುಂದೆ ಮಾಡುವನಾತ. ಹಾಡಿನ ನಾದಿನಲ್ಲಿ ಇವನ ಕೈಯು ತಾರಕ್ಕನ ಕೈಮೇಲೆ ಬೀಳುವುದು. ಅವನಿಗೆ ಅತ್ತ ಲಕ್ಷ್ಯವಿಲ್ಲ. ಹಾಡು ರಸಭರಿತವಾದದು. ಪರಸ್ಪರರಿಗೆ ತಿಳಿಯದಂತೆ ಇಬ್ಬರ ಕೈಬೆರಳುಗಳೂ ಕೂಡಿ ಹೆಣೆಯುವವು, ಆಡುವವು, ತೊಡಕುವವು, ಬಿಡುವವು. ಒಂದು ಕೈಯು ಇನ್ನೊಂದರ ಬೆರಳ ಮಡಚಿ ಮುರಿದು ಸಪ್ಪಳ ಮಾಡುವುದು. ಮತ್ತೊಂದು ಮತ್ತೊಂದರ ಬೆರಳು ತೀಡುವದು ಹಾಡಿನ ಒಂದು ಒಳ್ಳೆಯ ಸನ್ನಿವೇಶ ಬಂತು. ಅನಂತ ತಾರಕ್ಕ ನನ್ನು ನೋಡಿದ. ಅವಳೂ ಅವನನ್ನು ನೋಡಿದಳು. ಕಣ್ಣು ಕಿರಣಗಳು ಒಂದುಗೂಡಿ ಇಬ್ಬರೂ ನಡುಗಿದರು. ಇಬ್ಬರ ಮೈಯಲ್ಲಿಯ ಶಕ್ತಿ ಉಡುಗಿ ದಂತಾಯಿತು. ನಾಭಿರಾಜನ ಲಕ್ಷ್ಯ ಇತ್ತ ಇಲ್ಲ. ಇದ್ದರೂ ಅವನಿಗೆ ತಿಳಿಯುವಂತಿಲ್ಲ. ಅವನು ಇತ್ತ ನೋಡುತ್ತಿರಲಿಲ್ಲ. ತಾರಕ್ಕ ಮುಂದೆ ಮುಖ ಮಾಡಿ, ಅಂಗೈ ಮೇಲೆ ಗಲ್ಲ ಊರಿ ಕೇಳುತ್ತಿದ್ದಾಳೆ. ಅನಂತ ಹಾಡಲಾರದೆ ಹಾಡುತ್ತಿದ್ದಾನೆ. ದನಿಯು ಒಣಗಿದೆ. ತಾರಕ್ಕ ಕೇಳಲಾರದೆ ಕೇಳುತ್ತಿ ದ್ದಾಳೆ.

ಅನಂತ ತನ್ನ ಕೈ ತಾರಕ್ಕನ ಭುಜದ ಮೇಲೆ ಇರಿಸಿದ. ತಾರಕ್ಕ ಮತ್ತೆ ಮುಂದೆ ಬಾಗಿದಳು. ಅವನ ಕೈ ತಾರಕ್ಕನ ಬೆನ್ನಮೇಲಾಡಿತು. ಹಾಗೇ ಕುರುಳಿನ ಮೇಲೂ ಆಡಿತು. "ನಾಭೂ, ಅತ್ತಿ ಯಾನ ಮಾಡ ತಾಳು ನೋಡು ಒಳಗ ?" ಎಂದಳು ತಾರಕ್ಕ, ನಾಭಿರಾಜನನ್ನು ಕಳಿಸಿ ಕೊಡಲಿಕ್ಕೆಂದು.

ನಾಭಿರಾಜ ಇನ್ನು ಏಳುವವನಿದ್ದ. ಅಷ್ಟರಲ್ಲಿ 'ತಾರಾ, ಇಲ್ಲಿ ಬಾ ; ಇದ ನೋಡ, ಉಂಡೀ ಪಾಕ ಹಾಕಿದ್ಯಾನು ; ಯಾಕೋ ಉಂಡೀ ಆಗವಲ್ಲು. ಕುದಿ ಬಿರಸ ಆಯ್ತ್ಯಾನೋ....?" ಎಂದು ಕೇಳಿದಳು, ಗುಡಿಸಲಿನೊಳಗಿಂದ ರತ್ನವ್ವ. ತಾರಕ್ಕ ಮನಸ್ಸಿಲ್ಲದೆ ಎದ್ದಳು. ಅನಂತನ ಕೈಯೊಳಗಿನ ಪುಸ್ತಕ ಜಾರಿ ಬಿದ್ದಿತು. ಮತ್ತೆ ಇಬ್ಬರ ನೋಟಗಳು ಒಂದಾದುವು. ಇಬ್ಬರ ಕಣ್ಣೊಳಗೂ ಮರುಕ ಇಡುಗಿತ್ತು. ತಾರಕ್ಕನ ಕಾಲುಗಳು ಕಂಪಿಸುತ್ತಿದ್ದುವು. ಮೆಲ್ಲನೆ ನಡೆದಳು. ಅನಂತ ಅಲ್ಲೇ ಹಾಸಿಗೆಯ ಮೇಲೆ ಉರುಳಿದ.

ಅಂದಿನ ಸೂರ್ಯ ಪಡುವಣ ಬಾನಂಚಿನಲ್ಲಿಳಿದ. ಮೆಲ್ಲಮೆಲ್ಲನೆ ಜಗ ವನ್ನೆಲ್ಲ ಕತ್ತಲೆ ಆವರಿಸಿತು. ನಿತ್ಯದಂತೆ ಊಟ ಉಡಿಗೆಗಳನ್ನೆಲ್ಲ ತೀರಿಸಿ ಎಲ್ಲರೂ ಮಲಗಿದರು. ಅನಂತ ಮಲ್ಲ ಹೊರಗೆ ಬಯಲಲ್ಲಿ ಮಲಗಿದರು. ತಾರೆಯೊಡನೆ ರತ್ನವ್ವ ಒಳಗೆ ಮಲಗಿದಳು. ಅವರಿಬ್ಬರ ನಡುವೆ ನಾಭಿರಾಜ ಮಲಗಿದ್ದ. ಆ ಇರುಳೆಲ್ಲ ತಾರಕ್ಕನಿಗೆ ನಿದ್ರೆಯಿಲ್ಲ. ಆ ಮಗ್ಗುಲಿನಿಂದ ಈ ಮಗ್ಗುಲಿಗೆ, ಈ ಮಗ್ಗುಲಿನಿಂದ ಆ ಮಗ್ಗುಲಿಗೆ ಹೊರಳಾಡುತ್ತಿದ್ದಳು. ರತ್ನವ್ವ ನಡುವೆ ಎಚ್ಚರಾದಾಗ ಒಂದೆರಡು ಸಲ "ಯಾಕ ತಾರಾ, ನಿದ್ದಿ ಹತ್ತಿಲ್ಲ ಯಾನಾ ?" ಎಂದು ಕೇಳಿದಳು. ಅದಕ್ಕೆ "ಇಲ್ಲ ; ಈಗ ಎಚ್ಚರಿಕಿ ಆಗೇತಿ" ಎಂದು ಸುಳ್ಳು ಹೇಳಿ ಸುಮ್ಮನಾದಳು. ಬೆಳಗು ಮುಂಜಾನೆ ಇನ್ನೂ ಎರಡು ತಾಸು ರಾತ್ರಿ ಇರುವಾಗ ಮಲ್ಲ ಎದ್ದು, ದನಗಳ ಕಾಲೊಳಗಿನ ಕಸ ಹೊಡೆಯ ತೊಡಗಿದ. ಆಗ ರತ್ನವ್ವ ಎದ್ದು, ಬುತ್ತಿ ಕಟ್ಟಿದಳು. ಮಲ್ಲ ಎತ್ತುಗಳನ್ನು ಬಿಟ್ಟುಕೊಂಡು, ಮೇಲಡವಿಗೆ ರೆಂಟೆ ಹೊಡೆಯಲು ಹೋದ. ಅನಂತರ ರತ್ನವ್ವ ಬೀಸಬೇಕಾದ ಗೋದಿಯ ಬುಟ್ಟಿಯನ್ನು ತಕ್ಕೊಂಡು "ತಾರಾ, ನಾ ಊರಾಗ ಹೋಗಿ ಬೀಸಕೊಂಡ ಬರತ್ಯಾನು. ಖೋಡಿ ನಮ್ಮ ಸಣ್ಣ ಕಲ್ಲಾಗ ಮುಕ್ಕು ಹಿಡಿದುಲ್ಲ" ಎಂದು ಹೇಳಿ ನಡೆದಳು.

“ನಾನೂ ಬರತ್ಯಾನಲ್ಲ ?” ಎಂದು ತಾರಕ್ಕ ಮನಸ್ಸಿಲ್ಲದಿದ್ದರೂ ಕೇಳಿದಳು.

“ಯಾನ ಬ್ಯಾಡ. ನಾಳಿಂದು ಅಲ್ಲಿ—ಅತ್ತಿಮನೀಗಿ—ಹೋದವ್ಯಾಲ ಬೀಸೋದ ಬೆನ್ನಿಗಿ ಹತ್ತೀದs ಏತೆಲ್ಲ. ಇಲ್ಲಿರ ನಾಲ್ಕ ದಿನಾ ಹೊತ್ತ ಉದೀ ಆಗೂ ತನಕ ಮಲಕೋ” ಎಂದು ಮಗಳಿಗೆ ಹೇಳಿ, ಊರಲ್ಲಿ ಹೋದಳು.

ಅಲ್ಲಿ ಇನ್ನಾರೂ ಇಲ್ಲ ; ಇದ್ದ ಚಿಕ್ಕ ನಾಭಿರಾಜನೊಬ್ಬ ನಿದ್ದೆಯಲ್ಲಿದ್ದಾನೆ. ಇನ್ನುಳಿದವರು ಅಲ್ಲಿ ತಾರಾ ಅನಂತ ; ಅನಂತ ತಾರಾ ಇಬ್ಬರೇ. ತಾರಕ್ಕ ಒಂದೆರಡು ಸಲ ಹಾಸಿಗೆಯಲ್ಲಿ ಹಾಗೆಯೇ ಹೊರಳಾಡಿದಳು. ಕೆಮ್ಮಿದಳು. ಅನಂತ ಮಾತಾಡಿಸಬಹುದೆಂದು ನಿರೀಕ್ಷಿಸಿದಳು. ಆದರೆ ಅನಂತನಿಗೆ ಎಚ್ಚರ ವಿರಲಿಲ್ಲ. ಬೆಳತನಕ ಅವನಿಗೂ ನಿದ್ರೆಯಿರಲಿಲ್ಲ. ನಿದ್ರೆಮಾಡಲು ಯತ್ನಿಸುವ ; ಆದರೂ ಅವನಿಗೆ ವಿಚಾರ ಬರುವದು. ಮಧ್ಯಾಹ್ನದ ರಸನಿಮಿಷದ ನೆನಪಾಗುವದು. ಹೃದಯದಲ್ಲಿ ಯಾವದೋ ಒಂದು ಅಶಾಂತಿ ಏಳುವದು. ಅತೃಪ್ತಿ ಜಾಗ್ರತಗೊಳ್ಳುವದು. ಆ ವಿಚಾರ ಆ ವಿಷಯ ಮರೆಯಿಸಬೇಕೆಂದು ಬೇರೆ ಇನ್ನೇನಾದರೂ ನೆನೆದರೂ ಮತ್ತೆ ಮತ್ತೆ ಅದೇ ವಿಷಯದ ನೆನಪು, ನಡುಕು ; ನಿದ್ರೆ ಬಾರದು ; ಕಣ್ಣಿಗೆ ಕಣ್ಣು ಹತ್ತದು. ಇಂಥದೆಂದು ಕಾರಣ ಗೊತ್ತಾಗದಿದ್ದರೂ ಯಾವದೋ ಒಂದು ಆಶೆ ಹಂಬಲ ಅವನ ಅಂತರಂಗವನ್ನು ಕೊರೆಯುತ್ತಿದ್ದಿತು. ಆ ಕೊರೆತದ ಕೊನೆಯೊಡನೆ ‘ನಾನು ಹೀಗೆ ಬಯಸುವದು ಒಳಿತೇ ? ನಾನು ತಿಳಿದವ, ಕಲಿತವ. ಶೀಲ ಸಭ್ಯತೆಗಳ ಬಗ್ಗೆ ಮಾತಾಡುವೆ. ಅವಳೊಂದು ಹಳ್ಳಿಯ ಹುಡುಗಿ. ಏನೂ ಅರಿಯದವಳು. ಅವಳೊಂದು ಹಾಗೆ ನಡೆದರೆ ನಾನೇಕೆ ಅದಕ್ಕೆ ಪ್ರೋತ್ಸಾಹನೆ ಕೊಡಬೇಕು ?’ ಈ ವಿಚಾರದಲ್ಲಿ ಅವನಿಗೆ ಬಹಳ ಹೊತ್ತು ನಿದ್ರೆ ಬರಲಿಲ್ಲ. ಇದೀಗ ನಸು ಜಂಪು ಹತ್ತಿದ್ದಿತು.

ಸ್ವಲ್ಪ ಸಮಯ ಕಳೆಯಿತು. ಸುತ್ತಲೂ ಶಾಂತವಾಗಿದ್ದಿತು. ಬೆಳಗಿನ ಮಂದ ಸಮೀರಣ ಸುಳಿಯುತ್ತಿತ್ತು. ತಾರಕ್ಕ ಹಾಸಿಗೆಯಿಂದ ಎದ್ದಳು. ಮೆಲ್ಲಗೆ ಹೊರಗೆ ಬಂದಳು. ಅನಂತನ ಹಾಸಿಗೆಯ ಕಡೆಗೆ ನಡೆದಳು. ಆಗ ಅವಳ ಮನಸ್ಸು ಅಳುಕಿತು. ಸುತ್ತಲೂ ನಿರೀಕ್ಷಿಸಿದಳು. ಹಿಂಜರಿದಳು.

ಆದರೆ ಯಾವದೊ ಒಂದು ಅವಳ ಆಂತರಿಕ ಅತೃಪ್ತಿ ಅವಳನ್ನು ಅನಂತನ ಕಡೆಗೆ ಎಳೆಯುತ್ತಿದ್ದಿತು. ಅದರ ಎಳೆತವನ್ನು ತಡೆದುಕೊಳ್ಳಲಾರದೆ ಅವಳು ಅತ್ತ ನಡೆದಳು. ಅನಂತನ ಹಾಸಿಗೆಯ ಹತ್ತಿರ ಹೋಗಿ ನಿಂತಳು. ಅನಂತನ ಮುಖವನ್ನು ದಿಟ್ಟಿಸಿ ನೋಡತೊಡಗಿದಳು. ನಿದ್ದೆಯಲ್ಲಿ ಮುಳುಗಿದ ಅವನ ಮುಖ ಒಳ್ಳೇ ಮೋಹಕವಾಗಿದ್ದಿತು. ಕೆದರಿ ಹರವಿದ್ದ ಕಪ್ಪು ಕೂದಲಿನಲ್ಲಿ, ನೀಲಾಕಾಶದಲ್ಲಿ ಉದಯೋನ್ಮುಖ ಚಂದ್ರನೊಪ್ಪುವಂತೆ ಅನಂತನ ಮುಖ ಒಪ್ಪುತ್ತಿದ್ದಿತು. ಕಣ್ಣು ಮೂಗು ಹಣೆ ತುಟಗಳೆಲ್ಲವೂ ಪ್ರಮಾಣದಲ್ಲಿ ಚೆಲುವಿಕೆಗೆ ಪುಷ್ಟಿಯನ್ನು ಕೊಡುವಂತಹವು. ಉಬ್ಬಿದ ಗಲ್ಲಗಳು, ತುಂಬು ತುಂಬಿದ ಕೆನ್ನೆ, ಎಂದಿಗಿಂತಲೂ ಸುಂದರವಾಗಿ ಕಂಡಿತಾವೊಗ, ತಾರಕ್ಕನಿಗೆ.

ತುಸು ಕಾಲ ಹಾಗೆಯೇ ನಿಂತು ನೋಡಿದಳು. ಉಸುರಿನ ತೂಗಾಟ ದಿಂದ ನಸುಕಂಪಿಸುವ ಅನಂತನ ಕೆಂದುಟಿಗಳನ್ನು ಬಾಗಿ ಮುದ್ದಿಡಬೇಕೆಂದ ಳೊಮ್ಮೆ. ಪ್ರತಿಕ್ಷಣದಲ್ಲಿ ಅವನ ಬದಿಗೆ ಕೂತು ಕೆದರಿದ ಕೂದಲನ್ನು ನೇವರಿಸ ಬೇಕೆನಿಸಿತು. ಯಾವುದನ್ನೂ ನಿಶ್ಚಯಗೊಳಿಸದಾಯಿತಾ ಮನಸ್ಸು. ಬಾಗಿ ಅನಂತನ ಮುಖವನ್ನು ನೆಟ್ಟಗಣ್ಣಿನಿಂದ ನೋಡಿದಳು. ಅದೇಕೊ ಹೆದರಿಕೆ ಯಾಯಿತವಳಿಗೆ. ಹೃದಯ ನಡುಗಿತು. ಯಾವದೋ ಹೆದರಿಕೆಯು ಅವಳ ಹೃದಯವನ್ನೆ ವ್ಯಾಪಿಸಿತು. ಮೆಲ್ಲನೆ ಹಿಂದೆ ಸರಿದಳು. ಸಪ್ಪಳ ಆಗದಂತೆ ಹೊರಳಿ ನಡೆದಳು. ನಾಲ್ಕು ಹೆಜ್ಜೆ ಗುಡಿಸಿಲಿನ ಕಡೆಗೆ ಹೋಗಿದ್ದಳು. ಅದೆಂತೋ ತಿರುಗಿ ನೋಡುವಂತೆ ಮನಸ್ಸಾಯಿತು. ಆದರೂ ನೋಡಲಿಲ್ಲ. ಮುನ್ನಡೆದಳು. ಹೃದಯದ ಹಾರುವಿಕೆ ಹೆಜ್ಜೆಹೆಜ್ಜೆಗೂ ಹೆಚ್ಚುತ್ತಲಿದ್ದಿತು. ಅದೇನೋ ಒಮ್ಮೆಲೇ ನಾಭಿರಾಜನನ್ನು ಕರೆದು ಎಚ್ಚರಿಸಲೇ ಎನ್ನಿಸಿತವಳಿಗೆ. ಆದರೆ ಅವಳ ಒಂದು ಪ್ರಬಲ ಕಾಮನೆ ಹಾಗೆ ಮಾಡಗೊಡಲಿಲ್ಲ. ಬಾಗಿಲವರೆಗೆ ಹೋದಳು. ಯಾವದೋ ಒಂದು ಶಕ್ತಿ ಅವಳನ್ನು ಒಳಗೆ ಹೋಗಗೊಡ ದಾಯಿತು. ಹೊರಳಿ ನೋಡಿದಳು. ಅಸ್ಫುಟವಾದ ಭಾವದ ಗಾಳಿ ಅನಂತನತ್ತ ಎಳೆಯಹತ್ತಿತು, ಗಾಳಿಗೆ ತೂರಿದ ಬೂರಲದ ಅರಳೆಯಂತೆ. ಅದಾವಾಗಲೋ ಅನಂತನ ಹಾಸಿಗೆಯ ಹತ್ತರ ಬಂದಿದ್ದಳು ತಾರೆ. ಅದೇಕೋ ಅವನ ಕಾಲಬದಿ ಯಲ್ಲಿ ಕುಳಿತಳು. ಕೊಂಚಕಾಲ ಮುಂದೇನು ಮಾಡಬೇಕೆಂಬುದು ಅವಳಿಗೆ ಹೊಳೆಯುಲಿಲ್ಲ. ಕೊನೆಗೆ ಅನಂತನ ಪಾದಗಳ ಮೇಲೆ ತನ್ನ ಕೋಮಲವಾದ

ಕರಗಳನ್ನಿಡುತ್ತ "ಅನಂತಾ!" ಎಂದು ಕರೆದಳು. ದನಿ ನಡುಗಿತು.

ಸಕ್ಕರೆಯ ನಿದ್ದೆಯ ಸಮಯುವದು. ಅನಂತ ಅರ್ಧ ನಿದ್ರೆಯಲ್ಲಿದ್ದ. ಮೇಲಿನ ವಿಚಾರ ಅವನ ತಲೆಯಲ್ಲಿ ಸುತ್ತುತ್ತಲೇ ಇದ್ದಿತು. ತಾರೆಯ ತಂಪು ಕರಸ್ಪರ್ಶದಿಂದ ಒಮ್ಮೆಲೇ ಎಚ್ಚೆತ್ತ ಅನಂತ. ಕಣ್ದೆರೆದ. ಎದುರಿಗೆ ತಾರೆ!

"ಯಾನ ಅನಂತಾ?" ತಾರಕ್ಕ ಕೇಳಿದಳು ನಡುಗಿ ಮಾತಾಡಲರಿಯದೆ. ಅನಂತ ಕಣ್ಣುಜ್ಜಿಕೊಳ್ಳುತ್ತ ಎದ್ದು ಕುಳಿತ. ತಾರಕ್ಕ ಕಾಲಬದಿಯಲ್ಲಿ ಕುಳಿತಿದ್ದಳು, ಅನಂತನ ಎದುರಿಗೇ. ಅನಂತ ಕೂಡಲೆ ದೂರಸರಿದು ಕುಳಿತ. ಭಯಚಕಿತನಾದ. ಹೊರಳಿ, ಮಾವನ ಹಾಸಿಗೆಯತ್ತ ನೋಡಿದ....ಭೀತಿಯಿಂದ.

"ಯಾರೂ ಇಲ್ಲ!" ಎಂದಳು ತಾರಕ್ಕ, ಅವನ ಭಾವವನ್ನರಿತು.

"ಎಲ್ಲಿ ಹೋದರು?" ಎಂದ ಅನಂತ.

"ಅಪ್ಪಾ ಹೊಲಕ ಹೋದಾ. ಅವ್ವಾ ಊರಾಗ ಬೀಸ್ಕ ಹೋಗಿದಾಳು" ಧ್ವನಿಯಲ್ಲಿ ವ್ಯಾಕುಲತೆಯಿತ್ತು.

ಅನಂತನ ಎದೆ ಹಾರಿತು. ತಾರಕ್ಕ ಉನ್ಮಾದಿನಿಯಂತೆ ಕಂಡಳವನಿಗೆ. ನಾನು ಈ ಮೊದಲು ಅರಿಯದೆಯೇ ಸಲಿಗೆಯಿಂದ ಅವಳೊಡನೆ ನಡೆದುದು ತಪ್ಪಾಯಿತಲ್ಲ ಎಂದುಕೊಂಡ. ಸ್ವಲ್ಪಕಾಲ ದಿಙ್ಮೂಢನಾಗಿ ಕುಳಿತ. ಕೊನೆಗೆ ಕೇಳಿದ: "ನೀ ಬೀಸಲಿಕ್ಕ ಹೋಗಲಿಲ್ಲಾ?"

ತಾರಕ್ಕ ಸುಮ್ಮನಿದ್ದಳು. ಮುಖ ಕೆಳಗೆ ಮಾಡಿ ಕುಳಿತಿದ್ದಳು. ಪುನಃ ಅನಂತನೇ "ನಿನಗೆ ಇಲ್ಲಿ ಯಾಕ ಬರುವಂತಾಯಿತು?" ಎಂದು ಕೇಳಿದ.

"ಯಾಕ ಬಂದಿದ್ಯಾನ ಹೇಳು?" ತಾರಕ್ಕನ ಧ್ವನಿಯಲ್ಲಿ ಸ್ಥಿರತೆಯಿತ್ತು. ಅದಕ್ಕೂ ಹೆಚ್ಚು ದೈನ್ಯ ತುಂಬಿತ್ತು.

ಅನಂತನಿಗೇನೂ ತೋಚದಾಯಿತು. ಮುಂದೆ ಏನು ಹೇಳಬೇಕೆಂಬುದೂ ತಿಳಿಯದಾಯಿತು. ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತ ಸುಮ್ಮನಿದ್ದರು, ಒಂದು ಗಳಿಗೆ. ಅನಂತನಿಗೆ ಕೊನೆಗೆ "ಇಲ್ಲಿಂದ ಹೋಗು" ಎಂದು ಹೇಳಬೇಕೆನಿಸಿತು. ಆದರೆ ಅದೇಕೋ ಅವನು ಹಾಗೆ ಹೇಳಲಿಲ್ಲ ಮಾತ್ರ. ಆದರೂ ಮೆಲ್ಲಗೆ ಮುಖಕ್ಕೆ ಶಾಲು ಎಳೆದುಕೊಂಡು ಮಲಗಿದ. ಅವನ ಮನಸ್ಸಿಗೆ ಸಮಾಧಾನವೆನಿಸಲಿಲ್ಲ. ಮನಸ್ಸು ಬೇಡವೆಂದಿತು. ಶಾಲಿನೊಳಗಿ

ನಿಂದ ಕಾಲುಬದಿ ಕುಳಿತ ತಾರಕ್ಕ ಇನ್ನೂ ಕಾಣಿಸುತ್ತಿದ್ದಳು. ಗಟ್ಟಿಯಾಗಿ ಕಣ್ಣು ಮುಚ್ಚಿದ ಅನಂತ. ಆದರೂ ತಾರಕ್ಕನ ರೂಪು ಮರೆಯಲಾಗಲಿಲ್ಲ! ನಾಲ್ಕು ನಿಮಿಷ ಕಳೆದಿರಬೇಕು. ಮತ್ತೆ ಕಣ್ದೆರೆದ. ಎದುರಿಗೆ ಇನ್ನೂ ತಾರೆ ಮಿನುಗುತ್ತಿದ್ದಳು. ಕೂಡಲೆ ಮುಖದೆರೆದ ಅನಂತ. ಅವನ ಮುಖದ ಮೇಲೆ ತಂಗಾಳಿಯ ಝುಳುಕೊಂದು ಸುಳಿಯಿತು. ಮನಸ್ಸನ್ನೂ ಒಲಿಯಿಸಿಹೋಯಿತೇನೋ ಅದು! ಅನಂತ ಎದ್ದು ಕುಳಿತ ಮತ್ತೆ. ಈ ಸಲ ದೂರ ಸರಿಯಲಿಲ್ಲ ಮಾತ್ರ.

ತಾರಕ್ಕ ಇನ್ನಷ್ಟು ಸಮೀಪಕ್ಕೆ ಸರಿದಿದ್ದಳು. "ಯಾನ ಮಾತಾಡುದುಲ್ಲಾ ?....ಬೇ....ಡಾ....? " ಎಂದಳು ಮರುಕದಿಂದ.

ಅನಂತನಿಗೆ "ಬೇಡ" ಎಂದು ಹೇಳಲೋ ಎನ್ನಿಸಿತಾಕ್ಷಣ. ಆದರೆ ಯಾವುದೊ ಒಂದು ಅಂತರ್ಯದ ಪ್ರಬಲ ಬಯಕೆ ಹಾಗೆ ಹೇಳಗೊಡಲಿಲ್ಲ. ತಾರಕ್ಕನ ಮುಖದ ಕಡೆಗೆ ನೋಡಿದ ನೆಟ್ಟ ದೃಷ್ಟಿಯಿಂದಲೇ. ಅವಳೂ ಅವನನ್ನು ನೋಡುತ್ತಿದ್ದಳು. ಹಲ್ಲುಗಳು ಕೆಳದುಟಿಯನ್ನು ಒತ್ತಿ ಹಿಡಿದಿದ್ದುವು. ಅನಂತನ ಕೈಗಳು ಅವನಿಗೆ ಗೊತ್ತಾಗದಂತೆಯೇ ಅವಳ ಗಲ್ಲದ ಮೇಲೊಂದು ಮೃದುವಾದ ಪೆಟ್ಟು ಕೊಟ್ಟವು. ತುಟಿಯಿಂದ ನಸುನಗೆ ನುಸುಳಿತು. ಅದಕ್ಕೆ ಪ್ರತಿಯಾಗಿ ತಾರಕ್ಕನ ತುಟಿಗಳೂ ಅರಳಿದುವು. ಜೊತೆಗೆ ಹುಬ್ಬೂ ಹರವಾದುವು, ಅನಂತನ ಹೃದಯದೊಲವನ್ನರಿಯಲು. ಅನಂತನ ಹುಬ್ಬುಗಳೂ ಅದಕ್ಕೆ ಒಪ್ಪಿಗೆ ಕೊಟ್ಟವೇನೊ! ತಾರಕ್ಕನ ಗೋಣು ಕೊಂಕಿತು ; ಅದಕ್ಕೆ ಪ್ರತಿಯಾಗಿ ಅನಂತನ ಗೋಣೂ ತೂಗಿತು !

ಸುತ್ತಲೂ ನಸುಕಿನ ತಿಳಿಬೆಳದಿಂಗಳು ; ತಾರಕ್ಕನ ಮೈಗೆ ಪುಳಕವನ್ನೆಬ್ಬಿಸಿತದು. ಮೆಲ್ಲಗೆ "ಒಳಗ್ಸ ನಡಿ ! " ಎಂದಳು ತಾರೆ, ಒಡಕು ದನಿಯಿಂದ.

"ನಾಭೂ ? " ಎಂದ, ಅನಂತ.

ತಾರಕ್ಕ ಸುಮ್ಮನಾದಳು. ವಿವರ್ಣವಾಗಿತ್ತವಳ ಮುಖ. ಮೈಯೊಳಗಿನ ಶಕ್ತಿಯನ್ನು ಯಾರೋ ಎಳೆದೊಯ್ದಂತೆ ಆಗುತ್ತಿದ್ದಿತು. ಕೊಂಚ ಯೋಚಿಸಿದಳು. ಕೊನೆಗೆ "ಕೊಂಪೆಯ ಆಸರಕ್ಕ ? " ಎಂದು ಅವಳ ಬಾಯಿಯಿಂದ ಮಾತು ಹೊರಟಿತು.

"ಅಲ್ಲಾ ಏಕ ?" ಆದರುತ್ತಿರುವ ಅನಂತನ ತುಟಿಗಳ ಅಸ್ಪಷ್ಟ ಧ್ವನಿಯದು.

ಸುತ್ತಲೂ ನೋಡಿದಳು ತಾರಕ್ಕ. ತಿಳಿಬೆಳದಿಂಗಳು. ಬೆಳಕಿನಲ್ಲಿ ಬೇಡವೆನಿಸಿತೇನೋ ಅವಳಿಗೆ !

ಇತ್ತ ಅನಂತನ ಹೃದಯದ ಹೊಡೆತ ಹೆಚ್ಚಾಯಿತು. ಮೈಯಲ್ಲಿ ರಕ್ತದ ಒತ್ತಡ ಬೆಳೆಯಿತು. ಕಸಿವಿಸಿಯಾದಂತಾಗತೊಡಗಿತು. ಕೂತಲ್ಲಿಯೇ ಶ್ವಾಸೋಚ್ಛ್ವಾಸ ಬೆಳೆಯಲಾಯಿತು. ಉಸಿರು ಮೂಗಿನ ಹೊರಳೆಗಳಿಂದ ಹಾಯಲಾಗದಕ್ಕೆ ಮಂದ ಸದ್ದೆಸಗಿತು. ಅವಯವಗಳಲ್ಲಿಯ ಶಕ್ತಿಯೆಲ್ಲ ಬಸಿದು ಹೋದಂತೆನಿಸಿತು. ಮೈ ತುಂಬ ನಡುಕ, ರೋಮಾಂಚ, ಉಷ್ಣತೆ, ಶಾಂತಿಗಾಗಿ ತಂಪಾದುದನ್ನು ಹಿಡಿಯಬೇಕೆಂಬ ಆತುರ. ಅದೇ ಅನಂತನ ಒಂದು ಕೈಯು ತಾರೆಯನ್ನು ಮುಂದೆಳೆಯಿಸಿದುದು. ಮತ್ತೊಂದು ಕೈಯು ಅವಳ ಹೆಗಲ ಮೇಲಿತ್ತು ; ಎದೆಯ ಮೇಲೂ ಹೋಯಿತು. ತಾರಕ್ಕನ ಎರಡೂ ಕೈಗಳು ಅನಂತ ಮುಖವನ್ನು ಬಲವಾಗಿ ಹಿಡಿದಿದ್ದುವು. ನೋಟ ಒಂದಾದುವು. ಎರಡೂ ಮುಖ ಕೂಡಿ ಸುಖವುಂಡವು. ತಾರಕ್ಕ ಅನಂತನ ತೋಳ ಸೆರೆಯಲ್ಲಿದ್ದಳು ಮರುಕ್ಷಣದಲ್ಲಿ.

ಪಡುವಣ ಬಾಂದಳದಲ್ಲಿ ಚಂದ್ರ ಇಳಿಯುತ್ತಲಿದ್ದ. ಅವನ ಮುಖ ಬೆಳ್ಳಗಾಗಿದ್ದಿತು. ಭೂವಧುವನ್ನು ಮುದ್ದಿಡುತ್ತಿರುವನೇನೋ ಆತ ಅನಂತ ಪ್ರೇಮದಿಂದ ! ಎದುರಿಗಿರುವ ಉಷೆಯ ಮುಖವೂ ಆರಕ್ತವಾಯಿತಿದನ್ನು ಕಂಡು. ಅವಳ ಮುಖದಲ್ಲಿ ಮೂಡಿದ ಮುಗುಳು ನಗೆಯೆಂಬಂತೆ ತಾರೆಯೊಂದು ಮಿನುಗುತ್ತಲಿತ್ತು, ಪೂರ್ವಭಾಗದಲ್ಲಿ. ಇದೆಲ್ಲವನ್ನೂ ಕಂಡೂ ಕಾಣದವಳಂತೆ ಕೃಷ್ಣೆ ಬದಿಗಾಗಿ ಹರಿಯುತ್ತಿದ್ದಳು. ಗಿಡಗಂಟಿಗಳ ಕೊರಳೊಳಗಿಂದ ಹಕ್ಕಿಗಳ ಹಾಡು ಹೊರಟಿತು.

"ತಾರಾ, ತಾರಾ ! " ಎಂದು ಕರೆಯುತ್ತ ರತ್ನವ್ವ ಬಂದಳಾಗ !

## ೧೩

ತಿಳಿದ ಮನುಷ್ಯನು ತಪ್ಪು ದಾರಿಗೆ ಇಳಿಯಬೇಕೆಂದರೂ ಸುಮ್ಮನೇ ಇಳಿಯುವದಾಗುವುದಿಲ್ಲ. ಅವನು ಒಳಿತು ಕೆಡಕುಗಳನ್ನು ಕುರಿತು ಸಾರಾ

ಸಾರ ವಿಚಾರ ಮಾಡುತ್ತಾನೆ. ಸನ್ಮಾರ್ಗವನ್ನು ಹಿಡಿದು ವಿಚಾರ ಮಾಡುತ್ತಾ ಬಹು ದೂರ ಸಾಗುತ್ತಾನೆ. ಮಾನವನ ನೈಸರ್ಗಿಕ ಆಕಾಂಕ್ಷೆಗಳು ಅಲ್ಲಿಯೂ ಅವನಿಗೆ ನಿರಾಶೆಗೊಳಿಸಲೆತ್ನಿಸುತ್ತವೆ. ಆಗ ಸದಸದ್ವಿವೇಕ ಬುದ್ಧಿಗೂ ಮಾನವ ಸಹಜಪ್ರವೃತ್ತಿಗೂ ಹೋರಾಟ ನಡೆಯುವುದು. ಅದರಲ್ಲಿ ಬಹು ಜನರು ಸಹಜ ಪ್ರವೃತ್ತಿಗೇನೇ ಅಂಟಿಕೊಳ್ಳುವರು. ಅದು ಸ್ವಾಭಾವಿಕವೂ ಇರುತ್ತದೆ. ಆದರೆ ಅದೆಷ್ಟು ಕಾಲ? ತಾತ್ಪೂರ್ವಿಕ ಅಗತ್ಯ ಪೂರ್ಣವಾಗುವವರೆಗೆ. ಕೂಡಲೆ ಸದಸದ್ವಿವೇಕ ಬುದ್ಧಿಯು ಜಾಗ್ರತಗೊಳ್ಳುವುದು. ಆಗ ಅದು ಅವನಿಗೆ 'ನೀನು ಮಾಡಿದ್ದು ತಪ್ಪು' ಎಂದು ಹೇಳುತ್ತದೆ. ಆಗ ಅವನ ಮನಸ್ಸು ತನ್ನ ತಪ್ಪನ್ನು ಒಪ್ಪಿಕೊಳ್ಳುವುದು. ಆಮೇಲೆ ಅದನ್ನು ಮುಚ್ಚಲು ಹವಣಿಸುವುದುಂಟು. ಇನ್ನೊಮ್ಮೆ ಮಾಡಕೂಡದೆಂದು ನಿಶ್ಚಯಿಸುವುದು. ಅನಂತನ ಸ್ಥಿತಿಯೂ ಹೀಗೆಯೇ ಆಗಿದ್ದಿತು.

ಅನಂತ ಅಲ್ಲಿಯೇ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ. ಒತ್ತಿ ಶಾಲಿನಿಂದ ಮುಸುಕು ಹಾಕಿದ್ದ. ಈಗ ಅವನಿಗೆ ತನ್ನ ಜೀವಿತವೇ ಅಸಹ್ಯವೆನಿಸಹತ್ತಿತ್ತು. ಹಾಗೆಯೇ ಯೋಚಿಸುತ್ತಿದ್ದಾನೆ: "ದುರ್ಘಟನೆಯು ಹೀಗೇಕೆ ನಡೆಯಿತು? ಇದನ್ನು ಅತ್ತೆ ಅರಿತಳೋ? ಮಾವನಿಗೆ ತಿಳಿದರೆ ನನ್ನ ಗತಿ ಏನಾದೀತು? ಬೇಡ. ಈ ಸಂಗತಿ ತಾರಕ್ಕನ ಗಂಡನ ಮನೆಯವರಿಗೆ ಗೊತ್ತಾದರೆ ಅವಳ ಗತಿಯೇನು? ಮೊದಲೇ ಬೇಡಾದ ಅವಳನ್ನು ಹೊರಗೆ ಹಾಕಿಬಿಟ್ಟರೆ? ಆಗ ತಾರಕ್ಕ ಎಲ್ಲಿ ಹೋಗುವಳು! ಈ ಅಪರಾಧ ನನ್ನನ್ನು ಸುಟ್ಟು ಬೂದಿಮಾಡದೆ ಬಿಟ್ಟೀತೆ? ಒಬ್ಬಳೇ ಮಗಳ ಮೇಲೆ ಕೈಯೂರಿ ಕುಳಿತ—ಅವಳ ಬಾಳಿನಲ್ಲಿ ಬರಲಿರುವ ತಮ್ಮ ಬಾಳಿನ ಬೆಳಗನ್ನು ನಿಡುಗಣ್ಣಿನಿಂದ ನಿರೀಕ್ಷಿಸುತ್ತಿರುವ—ಅತ್ತೆಮಾವಂದಿರ ಅವಸ್ಥೆ ಏನು? ಏನೇ ಇರಲಿ; ಇದೊಂದು ಸಲ ದೇವರು ಎಲ್ಲ ಮೊದಲಿನಂತೆಯೇ ಇಟ್ಟುಬಿಡಲಿ. ತಾರಕ್ಕ ಬೇಗನೇ ಗಂಡನ ಮನೆಗೆ ಹೋಗಿ, ಸುಖವಾಗಿ ಬಾಳಲಿ. ಅಂದರೆ ನನ್ನ ಮೇಲಿನ ಅಪರಾಧದ ಅಂಜಿಕೆಯೊಂದು ಅಳಿಯುವುದು.

ಅನಂತನ ವಿಚಾರದ ಹೊನಲು ಇಲ್ಲಿಗೆ ಬಂದು ತಡೆದು ನಿಂತಿತು. ಇನ್ನಾವುದಾದರೂ ಅಂತರ್ಯಾದ ಭಾವನೆಯು ಅದನ್ನು ಅಲ್ಲಿಯೇ ತಡೆದು

ಹಿಡಿಯಿತೇನೋ ! ತಟ್ಟನೆ ಆ ಪ್ರವಾಹವು ಇನ್ನೊಂದು ದಿಶೆಯನ್ನು ಹಿಡಿದು ಹರಿಯಹತ್ತಿತು.

" ತಾರಕ್ಕ ಗಂಡನ ಮನೆಯಲ್ಲಿ ಸುಖವಾಗಿ ಬಾಳಬೇಕೆ ? ಅದೇಕೆ ? ನನ್ನ ಮೇಲಿನ ಅಪವಾದ ಅಳಿಸಿಹೋಗಲಿಕ್ಕಲ್ಲವೆ ? ನಾನು ಹೀಗೆ ಬಯಸು ತ್ತಿರುವೆನಲ್ಲ ! ಆದರೆ ಅವಳು ಅಲ್ಲಿ ಸುಖವಾಗಿ ಬಾಳಿದರೆ ನಾನೂ ಸುಖವಾಗಿರ ಬಹುದೇ ? ಇಲ್ಲ ! ಅವಳು ಸುಖಿಯಾಗಿ ಬಾಳುವುದೇ ಬೇಡ. ಅದೇಕೆ ? ನನ್ನ ಸಮಾಧಾನಕ್ಕಾಗಿ ಅವಳು ದುಃಖದಲ್ಲಿಯೇ ಕಡೆತನಕ ಉಳಿಯಬೇಕೆ ? ಎಂತಹ ನನ್ನ ಅವಿವೇಕ ! ಸ್ವಾರ್ಥಾಂಧತೆ ! ಬೇಡ, ಬೇಡ, ಅವಳು ಸುಖಿ ಯಾಗಿರಲಿ ನಾನು ನೊಂದು ಸತ್ತರೂ ಚಿಂತೆಯಿಲ್ಲ. ಬೇಡ ಈ ವಿಚಾರವೇ ಬೇಡ. ನಾನು ಸತ್ತುಹೋದರೆ ತಾರಕ್ಕ ಸುಖವಾಗಿರಬಹುದೇ ? ಇಲ್ಲ ; ಎಂದೂ ಇಲ್ಲ. ಅವಳು ಮತ್ತಿಷ್ಟು ಕೊರಗುವಳು. ಅವಳು ಕೊರಗುವದು ಬೇಡ ಅವಳು ಸುಖದಲ್ಲಿ ನಗುನಗುತ್ತ ನನ್ನ ಮುಂದೆ ಇರುವದನ್ನು ನಾನು ಕಾಣಬಯಸುವೆ. ಇದಕ್ಕೆ ಇಬ್ಬರೂ ಕೂಡಿಯೇ ಇರಲಿಕ್ಕೆಬೇಕು ! ಅದೆಂತು ? "

ಮತ್ತೆ ಅವನ ವಿಚಾರದ ತೆರೆಗಳು ತಿರುಗಿದುವು. ಬೇರೊಂದು ನಿಟ್ಟನ್ನು ಹಿಡಿದು ಉರುಳಹತ್ತಿದುವು. " ಹೋಗಲಿ ! ಈ ಅನೀತಿಯ ಅನ್ಯಾಯದ ಸುಖಾಕಾಂಕ್ಷೆಯು ನನಗೇಕೆ ? ಇದೇ ಸಂಗತಿ ನಾಳೆ ನನ್ನ ಹೆಂಡತಿಗೆ ತಿಳಿ ದರೆ ? ನನ್ನ ವಿಷಯಕ್ಕೆ ಏನು ಭಾವಿಸುವಳೋ ! ಛೇ ಅವಳಿಗೆಲ್ಲಿಯ ಭಾವನೆ ! ನಾನು ಅವಳನ್ನು ಹೆಂಡತಿಯೆಂದು ಸ್ವೀಕರಿಸಿರುವೆನೆ ? ಎಲ್ಲಿಯೋ ಸಣ್ಣವ ನಿದ್ದಾಗ ಗೊಂಬೆಯ ಮದುವೆಯನ್ನು ಮಾಡುವಂತೆ ಮಾಡಿದ್ದಾರೆ. ಅದು ಮದುವೆಯೇ ? ಆದರೆ ನಾನು ಹೀಗೆ ಪರರಲ್ಲಿ ಆಸಕ್ತನಾಗಿದ್ದರೆ ಅವಳೂ ಅನ್ಯ ರೊಡನೆ....? ಎಂದೂ ಆಗದು. ಅವನ ಬಗ್ಗೆ ಕಣ್ಣೆದುರಿಗೆ ಯಾವದೋ ಒಂದು ಹೊಸ ವ್ಯಕ್ತಿ ಚಿಕ್ಕಂದಿರುವಾಗ ಕಂಡ ಸ್ತ್ರೀ ವ್ಯಕ್ತಿ ನಿಂತು ಅಪಹಾಸ್ಯ ಮಾಡು ತ್ತಿದ್ದಿತು. ಅವನ ಹೃದಯದಲ್ಲಿ ಹೆದರಿಕೆ ಹುಟ್ಟಿತು. ಆತ್ಮವಂಚನೆ ಮಾಡಲೆಳಿಸಿ ದನು ಆ ವ್ಯಕ್ತಿಯು ಎದುರಿಗೆ ಅನಂತ.

ಮುಂಜಾನೆಯ ಸೂರ್ಯ ಒಂದೆರಡು ನೂರು ಮೇಲಕ್ಕೆ ಏರಿದ್ದ, ಕ್ಷಿತಿಜ ವನ್ನು ಬಿಟ್ಟು. ಎಳೆಬಿಸಿಲು ಪ್ರಕೃತಿಗೆಲ್ಲ ಹೊಸ ಚೈತನ್ಯವನ್ನು ತಂದಿದೆ. ತಾರಕ್ಕ ದಿನದಕ್ಕಿಂತ ಉತ್ಸಾಹದಿಂದ ಎದ್ದು, ಪಾತ್ರೆಗಳನ್ನು ತೊಳೆಯುವ

ಕೆಲಸ ಮಾಡುತ್ತಿದ್ದಳು. ದಿನದಂತೆಯಾಗಿದ್ದರೆ ಈಗಾಗಲೇ ತಾರಕ್ಕ ಅನಂತನನ್ನು ಎಬ್ಬಿಸಿಬಿಡುತ್ತಿದ್ದಳು. ಆದರೆ ಇಂದು ಅವಳಿಗೆ ಅನಂತನನ್ನು ಕಾಣುವದೆಂದರೆ ಎಂದೂ ಇಲ್ಲದ ಸಂಕೋಚ. ಆದುದರಿಂದ ಹಾಗೆಯೇ ಕೆಲಸದಲ್ಲಿ ತೊಡಗಿದ್ದಾಳೆ.

ರತ್ನವ್ವ ಊರಕಡೆಯಿಂದ ಬಂದಾಗಿನಿಂದಲೂ ಮುಖ ಬಿಗಿದುಕೊಂಡೇ ಇದ್ದಳು. ಬಂದವಳೇ ಬೀಸುವ ಬುಟ್ಟಿಯನ್ನಿಟ್ಟು ಮನೆಗೆಲಸದಲ್ಲಿ ತೊಡಗಿದಳು. ಏನೂ ಮಾತಾಡಲಿಲ್ಲ. ಆಗಾಗ ಬಾಯಿಂದ ಏನಾದರೂ ಪುಟುಪುಟು ಒಟಗುಡುವಳು. ಇದೆಲ್ಲ ಪ್ರಕಾರವನ್ನು ಕಂಡು ತಾರಕ್ಕನಿಗೂ ತಾಯಿಯನು ಮಾತಾಡಿಸುವ ಧೈರ್ಯ ಸಾಲಲಿಲ್ಲ. ಸುಮ್ಮನೆ ಒಲೆಯ ಹತ್ತಿರ ಕುಳಿತು ಪಾತ್ರೆ ತಿಕ್ಕುತ್ತಿದ್ದಳು. ಅವಳ ಹೃದಯದಲ್ಲಿ ಹೆದರಿಕೆಯ ಏಕನಾದ ಒಂದೇ ಸವನೆ ಮಿಡಿಯುತ್ತಿದ್ದಿತು. ದೊಡ್ಡ ತಪ್ಪು ಮಾಡಿರುವೆನೆಂದು ಆಕೆಗೆ ಅನಿಸುತ್ತಿದ್ದಿತು. ತಾಯಿ ಆ ತಪ್ಪು ಕಂಡು ಕೋಪಿಸಿದಂತಿತ್ತು. ಇದ್ದಕ್ಕಿದ್ದ ಹಾಗೆಯೇ ಅವಳ ಮುಖ ಬೆಳ್ಳಗಾಯಿತು. ಲಜ್ಜೆ ಆವರಿಸಿತು. ಮೈಯೆಲ್ಲ ಒಂದು ಸಲ ವಿದ್ಯುದಾವೇಗಕ್ಕೆ ಸಿಕ್ಕಿದಂತೆ ಕಂಪಿಸಿತು. ದುಃಖ ತುಂಬಿ ಬಂದಿತು. ಅತ್ತುಬಿಡಲೋ ಎನ್ನಿಸಿತವಳಿಗೆ. ಕಣ್ಣಲ್ಲಿ ನೀರೂ ಊರಿದವು. ಕೂಡಲೆ ತಲೆ ತಗ್ಗಿಸಿದಳು ತಾರಕ್ಕ ತಾಯಿಗೆ ಕಾಣಬಾರದೆಂದು. ಅಷ್ಟರಲ್ಲಿ ರತ್ನವ್ವ “ ಅನಂತ ಇನ್ನs ಎದ್ದಿಲ್ಲ ? ಇದ್ಯಾಕ ಇಷ್ಟೊತ್ತ ಮಲಗಿದಾನು ? ” ಎಂದು ನಸುಬೆರಗಿನಿಂದ ಕೇಳಿದಳು. ಮಾತಿನಲ್ಲಿ ಬಿಗುವೂ ಇತ್ತು.

ತಾರಕ್ಕ ಸ್ವಲ್ಪ ನಿಧಾನಿಸಿ “ ಯಾಕೋ ಇಂದ ಎದ್ದಿಲ್ಲ ; ದಿನಾ ಲಗೂ ಏಳಾಂವ ” ಎಂದಳು. ಆಗ ಅವಳ ಮುಖದಲ್ಲಿ ಸ್ವಲ್ಪ ಭಯದ ಚಿಹ್ನೆಮೂಡದೆ ಇರಲಿಲ್ಲ. ಪಾಪ ರತ್ನವ್ವ ಹಳ್ಳಿಯ ಹೆಂಗಸು. ಇದನ್ನೇನು ಅವಳು ನಿರೀಕ್ಷಿಸಬಲ್ಲಳು ! ಲಗುಬಗೆಯಿಂದ ಗುಡಿಸಲಿನ ಹೊರಗೆ ಬಂದು “ ಅನಂತಾ !” ಎಂದು ಕೂಗಿ ಎಬ್ಬಿಸಿದಳು. ಅನಂತ ಮೈಮುರಿದು ಎದ್ದು ಕುಳಿತ. ಕಣ್ಣು ಕೆಂಪಾಗಿದ್ದುವು. ಮುಖ ಬಾಡಿದ್ದಿತು. ಹುಬ್ಬು ಗಂಟಿಕ್ಕಿ ಸುತ್ತಲೂ ಒಮ್ಮೆ ನೋಡಿದ.

ರತ್ನವ್ವ ಕೇಳಿದಳು “ ಯಾನ ಇನ್ನs ನಿದ್ದಿ ಆಗಿಲ್ಲಾ ? ಹಾಂಗಾರ ಮಲಗತಿ ಯಾನ ? ಮಲಗ ಇನs ಜರಾ. ನಿಮ್ಮ ಮನ್ಯಾಗ ಹೊರಗೆ ಮಲಗಿ ಗೊತ್ತಿಲ್ಲ. ರಾತ್ರಿ ನಿದ್ದಿ ಹತ್ತಿತೋ ಇಲ್ಲ ಯಾನೋ ? ”

"ನಿದ್ದಿ ಹತ್ತಿತು. ಆದರ ಯಾಕೋ ಸ್ವಲ್ಪ ಆಲಸ್ಯ ಬಂತು"

"ನಾನೂ ಅದs ಅಂದಿನಪ್ಪ ! ಇನ್ನs ಏಳೂಲ ಆಗಾನಾ ಗಾಬರಿ ಆದಿನು. ಬಂದಂಗ ತಣ್ಣಗ. ನಿಮ್ಮ, ನಿಮ್ಮ ಮನೀಗಿ ಹೋದರ ನೆಟ್ಟಗ. ಇಲ್ಲಾದರ ಬ್ಯಾಡಂದರ ತಣ್ಣೀರ ಜಳಕಾ ಒಂದ ಮಾಡಕ ಹತ್ತೀದಿ. ಎಲ್ಲ್ಯರ ಬ್ಯಾನಿ ಕರ ಕೊಂಡ ಊರಿಗಿ ಹೋದೀ ಅಂದರ ನನ್ನ ಸುತ್ರ ಹತ್ರ್ಯಾಳಪ್ಪ, ನಿಮ್ಮ ಅವ್ವಾ ! ಜಾತ್ರಿ ಆಯ್ತು. ಎಲ್ಲಾ ಆಯ್ತು. ಎಂಥಾವರ ನಾಲ್ಕ ಗೋದಿ ಉಂಡಿ ಕಟ್ಟಿ ಕೊಡತ್ಯಾನು. ಸುಸೂತ್ರ ನಾಳಿ ಹೋಗಿಬಿಡರಪ್ಪ ನಿಮ್ಮ ಮನೀಗಿ " ಎಂದು ಹೇಳಿ ಕೆಲಸಕ್ಕೆ ಹೋದಳು.

ಈ ಮಾತುಗಳು ಮುಗಿಯುವವರೆಗೆ ಅದೇಕೊ ಅನಂತನ ಎದೆಯಲ್ಲಿ ಎದೆಯಿರಲಿಲ್ಲ. ಕೊನೆಗೊಮ್ಮೆ ತಣ್ಣಗಿನ ಉಸಿರು ಬಿಟ್ಟು "ಇನ್ನೇನು ಸುಸೂತ್ರ ಹೋಗೋದು ?" ಎಂದು ಮನದಲ್ಲಿಯೇ ಅಂದುಕೊಂಡ.

ಹುಟ್ಟಿದಾಗಿನಿಂದಲೂ ತಾಯಿಯ ಸ್ವಭಾವ ಮಾತಿನ ರೀತಿಗಳನ್ನು ಬಲ್ಲ ತಾರಕ್ಕ "ಇರವಲ್ಲ ಯಾಕ ಇನ್ನೊಂದ ನಾಲ್ಕ ದಿನಾ. ಬುಧವಾರ ನಾನೂ ಹೋಗತ್ಯಾನು : ಅಂವೂ ಅಂದs ಹೋದಾ. ಭಾಳ ದಿನಕ ಬಂದಿದಾ ; ಎಲ್ಲಿ ಬರತಾ ಮ್ಯಾಲಿಂದ ಮ್ಯಾಲಿ ? ಅವನ ಸಾಲಿ ಸವುದಾ ಅಂತs ಹೇಳತ ಇರತಾ" ಎಂದು ಮೆಲ್ಲಗೆ ನುಡಿದಳು, ಅಂಜುತ್ತ್ರಂಜುತ್ತ.

"ನೀನsರ ಬುಧವಾರ ತನಕಾ ಯಾತಕ ತಾಯಿ ? ನಾಳಿ ಸೋಮಾರ ಹೋಗಿಬಿಡು. ಯಾನ ಇದ್ದದ ನಾಲ್ಕ ಉಂಡಿ ಕಟ್ಟಿ ಕುಡತ್ಯಾನು. ಮನ್ಯಾಗ ತಂದ ಇಟ್ಟಿದ ಸೀರಿ ಏತಿ ; ಹೆಣ್ಣಮಕ್ಕಳನಾ ಮನ್ಯಾಗ ಇಟಕೊಂಡು ಯಾನ ಉಪ್ಪಿನಕಾಯಿ ಹಾಕೋದೇತಿ ? ಅವಳ ಎಲ್ಲಿ ಇರಬೇಕ ಅಲ್ಲೇ ಇದ್ದರೆ ಛಂದ" ಎಂದಳು, ಸ್ವಲ್ಪ ಕಠಿಣವಾಗಿ ರತ್ನವ್ವ. ಮತ್ತು ತಂಬಿಗೆ ತಕ್ಕೊಂಡು, ಎಮ್ಮೆ ಯನ್ನು ಹಿಂಡಿಕೊಳ್ಳಲಿಕ್ಕೆ ಕೊಟ್ಟಿಗೆಗೆ ಹೋದಳು. ತಾಯಿ ಹೋಗುವತ್ತ ಸ್ವಲ್ಪ ಹೊತ್ತು ನೋಡುತ್ತ ಇದ್ದು, ನಿಟ್ಟುಸಿರೊಂದನ್ನು ಬಿಟ್ಟು ತಲೆಕೆಳಗೆ ಹಾಕಿದಳು ತಾರಕ್ಕ.

ಹೊರಗೆ ಕುಳಿತ ಅನಂತನ ಹೃದಯ ಡಪಡಪ ಹಾರಿತು. ಅತ್ತೆ ಕಂಡಳೋ ಎಂದು ಭಾವಿಸಿ ಗಾಬರಿಯಾದ. ಮುಖ ಸಪ್ಪಗಾಯಿತು. ಒಮ್ಮೆಲೇ ಮುಖ ಮುಚ್ಚಿಕೊಂಡು ಹಾಸಿಗೆಯಲ್ಲಿ ಒರಗಿದ. ಯಾರಿಗೂ ಮುಖ ತೋರಿಸ

ಬಾರದೆಂದೆನಿಸಿತವನಿಗೆ. ಸಮೀಪದ ಮಾವಿನಗಿಡದಲ್ಲಿ ಕುಳಿತ ಕಾಗೆಯ ಕೂಗು ತನ್ನನ್ನು ನೋಡಿ ವಿಕಟಹಾಸ್ಯ ಮಾಡುತ್ತಿರುವಂತೆ ಭಾಸವಾಯಿತು. ಮುಸುಕಿ ನಲ್ಲಿಯೇ ಮತ್ತಿಷ್ಟು ಮುದುರಿದ ಅನಂತ.

ತಾಸೆರಡು ತಾಸು ಹೊತ್ತೇರಿದ್ದರೂ ತಾರಕ್ಕನಿಗೆ ಮನೆಯು ಬಿಮ್ಮೆನ್ನ ಹತ್ತಿತು. ಕೊಟ್ಟಿಗೆಯಲ್ಲಿ ತಾಯಿ ಎಮ್ಮೆಗೆ ಬಾಯಿಮಾಡಿದರೂ ಅದು ಭಯಗೊಳಿಸುತ್ತಿತ್ತು, ತಾರಕ್ಕನಿಗೆ. ಅವಳ ಹೃದಯವನ್ನು ಯಾವದೋ ಒಂದು ಹೆದರಿಕೆಯು ಏಕಾಂತದಲ್ಲಿ ಕಿವುಚಿ ಕಿವುಚಿ ಹಿಂಡುತ್ತಿತ್ತು, ಹಿಚುಕುತ್ತಿತ್ತು. ತಾರಕ್ಕನಿಗೆ ತುಂಬ ಹೆದರಿಕೆಯಾಯಿತು. ಭರಮ ತನ್ನ ಕಡೆಗೆ ಕೆಂಗಣ್ಣು ಗಳಿಂದ ನೋಡುತ್ತಿರುವಂತೆ ಭಾಸವಾಗತೊಡಗಿತು. ಏನು ಕೆಲಸ ಮಾಡ ಬೇಕೆಂಬುದು ತಿಳಿಯದಾಯಿತು. ಮೆಲ್ಲನೆ ಎದ್ದು ನೀರೊಲೆಯಲ್ಲಿ ಉರಿಮಾಡ ತೊಡಗಿದಳು. ಒಲೆಯ ಉರಿಯೂ ಯಾವುದೋ ಒಂದು ಕೋಪವನ್ನು ಉಗುಳುವಂತೆ ತೋರಿತು. ಭುಗುಭುಗು ಎಂದು ಮೇಲೆದ್ದ ಹೊಗೆಯಲ್ಲಿ ಬೈಗುಳಿನ ಧ್ವನಿಯಿತ್ತು. ನೀರು ಸುರಿಯಲು ಕೊಡ ಎತ್ತಲು ಹೋದಾಗ ತಾಳಲಾರದೆ ಹಂಡೆಯ ಮೇಲೆ ಕೊಡ ಅಪ್ಪಳಿಸಿದಳು. ಕೊಟ್ಟಿಗೆಯಿಂದಲೇ ರತ್ನವ್ವ "ಯಾನ ಛಲ್ಲಿದಿ ಬೇ ?" ಎಂದು ಕೂಗಿದಳು. ತಾಯಿಯ ಮಾತಿಗೆ ತಾರಕ್ಕನಿಗೆ ಚರ್ರನೆ ಚೀರುವಂತಾಯಿತು. ರತ್ನವ್ವ ಕೊಟ್ಟಿಗೆಯಿಂದ ಬರಹತ್ತಿ ದಳು. ಅವಳ ಹೆಜ್ಜೆಯ ಸಪ್ಪಳು ಇವಳ ಎದೆಯನ್ನೇ ಒತ್ತಿ ಒಡೆಯುವಂತೆನಿ ಸಿತು. ಕೈಕಾಲುಗಳು ನಡುಗಲಾರಂಭಿಸಿದುವು. ಹೇಗೋ ಎದ್ದುನಿಂತಳು ತಾರಕ್ಕ. ಅದೇಕೊ ಅವ್ವ ಬಂದೊಡನೆಯೇ ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳ ಹತ್ತಿದಳು ತಾರಾ ತಾಯಿಯ ಸೆರಗಿನಲ್ಲಿ ಮುಖ ಸೇರಿಸಿದ್ದಳು. 'ಇಷ್ಟು ತಪ್ಪು ಹೊಟ್ಟೆಯಲ್ಲಿ ಹಾಕಿಕೋ' ಎನ್ನುವಂತೆ ಅವಳ ನಿಲುವಿಕೆ ಇತ್ತು.

ರತ್ನವ್ವನೂ ಕಣ್ಣೀರುಗರೆಯುತ್ತ "ನಾ ಯಾನ ಇಟಕೋಕ ಒಲ್ಲಿ ಅಂತ್ಯಾನ್ಯಾನ ? ಬರೇ ನಿಮ್ಮ ಅತ್ತೆ ಹನ್ನ್ಯಾಡ ಮಂದೀ ಮುಂದ ಒದರ್‍ಯಾಡಕ ಹತ್ತಿದಾಳ ; ಅದಕ್ಕ ನಾಳೇ ಹೋಗ ಅಂದಿನ ತಾಯಿ !" ಎಂದು ಮಗಳ ಕಣ್ಣೀರು ಒರಸಿದಳು.

ತಾರಕ್ಕ ತಾಯಿಯ ಮುಖವನ್ನು ನಿಟ್ಟಿಸುತ್ತ ಭೀತಿಯಿಂದಲೇ "ಯಾರ ಮುಂದ ಯಾನ ಅನತಿದ್ದಳು ?" ಎಂದು ಉತ್ಕಂಠತೆಯಿಂದ ಕೇಳಿದಳು.

"ಈಗ ಬರತಾ ಚಾಂಗಲಪ್ಪ ಮುದುಕಿ ಗಂಟುಬಿದ್ದೀಳು. ಆಕೀ ಮುಂದ ಅನ್ನತೀಳ ಅಂತ 'ಉಗಾದಿಗಂತ ಹೋದಾಕಿ ನಾಲ್ಕ ದಿನಾ ಹಬ್ಬಾ ಮಾಡಿ ತಿರಗಿ ಬರಬಾರದು? ಕಾಲಾಗ ಜಾತ್ರಿ ಬಂತಂತ ಇನ್ನs ಜಾತ್ರಿ ಹದನ ದಿನಾ ಇದ್ದರೂ ಹಾಂಗsನಿಂತಳ. ಆಕೀಗಿ ಯಾನ ಜನ್ಮ ಜೇಕಾತೇತಿ? ಇನ ನಾವs ಒದ್ದಾಡತೇವ ನಮ್ಮ ಮೈಯಾಗಿನ ಎಲವಾ ಎಲ್ಲಾ ತೇದ ತೇದ ಸಣ್ಣ ಆದು; ಇನs ದುಡೇದ ಬಿಡವಾಲ್ತ. ಆಕಿಗಿ ಯಾನ ತಯ್ನಾತ, ಬಂದ ಕೂತಿದಾಳ ಗಾದಿವ್ಯಾಲ."

"ಹೊಟ್ಟೀಲೆ ಹುಟ್ಟಿದಾವರಿಗಿ ಸುತ್ತ್ರೊಬ್ಬಾಕಿನಾ ಮಾಡಾಕಿ? ನನ್ನಾ ತಗೊಂಡ ಯಾನ ಮಾಡತಾಳು?" ಎಂದಳು, ನಿರ್ಭೀತಿಯಿಂದ ತಾರಕ್ಕ. ಮುನಿಸಿನಿಂದ ಮುಃಖವುಬ್ಬಿತ್ತಾಗ.

ತಾರಕ್ಕನಿಗೆ ಅತ್ತೆಯ ಮನೆಯ ವಿಷಯಕ್ಕಿರುವ ಬೇಸರವನ್ನು ಕಳೆಯಲೆಂದೊ ಏನೊ ರತ್ನವ್ವ "ಮಂದಿರs ಯಾನ ತಗೋ; ಇಲೀ ಹೋಯ್ತೆಂದರ ಹುಲೀ ಹೋಯ್ತು ಅಂತಾರ. ಅವರನಾ ಯಾನ ನಂಬೋದಾ?" ಎಂದು ಹೇಳಿದಳು.

ಈಗ ಅನಂತನ ಜೀವದಲ್ಲಿ ಜೀವ ಬಂದಂತಾಯಿತು. ಇದು ಚಿನ್ನಮ್ಮನ ಸುದ್ದಿಯೆಂದೂ ತನ್ನ ಮೇಲಿನ ಸಂಶಯುವಲ್ಲೆಂದೂ ಭಾವಿಸಿ ಮೆಲ್ಲನೆ ಎದ್ದು ಒಳಗೆ ಬಂದ. ತಾರಕ್ಕ ಸಂಕೋಚದಿಂದ ಎದ್ದು ತಂಬಿಗೆ ತುಂಬಿಕೊಟ್ಟಳು. ಅನಂತ ಹೊರಗೆ ಹೋಗಿ ಯಾರಿಗೂ ಹೇಳದೆ ದೋತರ ತಕ್ಕೊಂಡು ಹೊಳೆಗೆ ಹೋಗಿ ಸ್ನಾನ ತೀರಿಸಿ ಬಂದ. ಆದರೂ ದಿನದಂತೆ ಉತ್ಸಾಹಿತನಾಗಲಿಲ್ಲ. ಮಧ್ಯಾಹ್ನ ಊಟ ಮಾಡಿ ಮತ್ತೆ ಹಾಸಿಗೆ ಹಾಕಿದ. ಇಂದೇನು ಓದು ಬರಹ ಮಾಡಲಿಲ್ಲ. ಅವನು ಯಾವದೊ ಒಂದು ಗೂಢ ಸಮಸ್ಯೆ ಬಿಡಿಸುವುದರಲ್ಲಿ ಮಗ್ನನಾದಂತೆ ಇದ್ದ. ಮನಸ್ಸು ಚಿಂತೆಯಲ್ಲಿ ಬೆಂದುಹೋಗಿರಬೇಕು. ಇಳಿ ಹೊತ್ತಿನಲ್ಲಿ ಮಲ್ಲ ಊಟಕ್ಕೆ ಎಬ್ಬಿಸಿದ. ಆಗಲೂ ಅನಂತ ತನಗೆ ಹಸಿವಿಲ್ಲವೆಂದು ಹೇಳಿದ. ಆಗ ಮಲ್ಲ "ಯಾನೋಪ ನಿಮ್ಮದ! ನಂದ ಇಂದ ಮೂರನೇ ಸಾರೆ ಊಟ. ನೀವ್ಯಾನ ಇಷ್ಟು ಬಿಸಿನೀರ ಕುಡಿತೀರಿ, ಹಸಿವ ಆಗೂದುಲ್ಲಾ ಬಿಡೂದುಲ್ಲಾ ಆದರಿಂದ. ಒಳ್ಳೇ ಇಪ್ಪತ್ತ ವರ್ಷದ ಹುಡಗ ಆದೀ, ಇನ್ನಾ ಒಂದ ರೊಟ್ಟಿ ಯಾನ ಪೂರಾ ತಿಂದದ ನಾ ಯಾನ ಎಂದೂ ನೋಡಿಲ್ಲ. ನಮ್ಮ

ಊರಾಗಿನ ಹುಡುಗುರ ನಿನಕಿಂತ ಸಣ್ಣೋ. ತಿಂದಾಗ ಮೂರ ಮೂರ ರೊಟ್ಟಿ ತಿನ್ನತಾರ" ಎಂದು ನಗೆಯಾಡಿ ಊಟಕ್ಕೆ ಕುಳಿತ.

ಸಂಜೆಯಾಗುತ್ತ ಬಂತು. ಅನಂತ ಮಾವಿನ ಗಿಡದ ಹತ್ತರ ಹಾಗೇ ಕಂಬಳಿಯ ಮೇಲೆ ಉರುಳಾಡುತ್ತಿದ್ದ. ರತ್ನವ್ವ ಅವನ ಹತ್ತರ ಬಂದಳು. ಅನಂತನ ಮೈಗೆ ಕೈ ಹಚ್ಚಿ ನೋಡಿದಳು. "ಯಾಕ, ಮಾರಿ ಭಾಳ ಬಾಡೇತಿ? ಮೈಗಿಯ್ಯ ಕಾದಿತ್ಯಾನ, ನೋಡಿನಿ, ಇಲ್ಲ; ಸಂಜಿಕಿಗಿ ತಾರಾಗ ಹಾಕಲಾಕ ನೀರ ಕಾಯಸತ್ಯಾನ, ಆಗs ನೀವೊಂದ ನಾಲ್ಕ ತಂಬಿಗಿ ಎರಕೊಳಾಕೆ. ಮೈ ಹಗರ ಆಗತೇತಿ ಮುಚಕೊಂಡ ನಮ್ಮ ಹತ್ಯಾಕ ಒಳಗ ಮಲಗಕ್ಕೆ. ಹೊರಗ ಮೈ ತೆರಕೊಂಡ ಮಲಗತಿಯೇನೋ!" ಎಂದು ಗುಡಿಸಲಿನ ಕಡೆಗೆ ಹೋಗುತ್ತಾ —"ಹೋಗ ಕಿರಗಾಡಿ ಬರೋಗ. ಊರಾಗ ಹೋಗಿ ಭರಸು ಇದ ಯಾನ ನೋಡ. ಚಿನ್ಮವ್ವನ ಹತ್ಯಾಕ ಕೂತ ನಾಲ್ಕ ಮಾತ ಆಡಿ ಬಾ. ಊರಾಗ ಬಂದ ಮನೀ ತನಕಾ ಬರೂಲ್ಲದ ಹೋದ ಅಂತ ಅಂದಾರು. ಇಲ್ಲ್ಯರ ಕೂತ ಯಾನ ಮಾಡತಿ? ಒಂದs ಜಾಗಾದಾಗ ಕೂಡಾನಾ ಹೊತ್ತ ಹೋಗುದುಲ್ಲ" ಎಂದಳು.

"ಹೂಂ! ಅಲ್ಲ್ಯಾದಕ ಹೋಗತಾನು? ಅವರ್‍ಯಾನ ಸುದ್ದ ಮಂದೀ, ಮನೀಗಿ ಬಂದೀದಾರಂತ, ನಗನಗತ ಮಾತಾಡವರ ಇದಾರೋ? ಒಂದ ಕಪ್ಪ ಚಹಾ ಮಾಡಿ ಕುಡಾವರ ಇದಾರೋ? ಸುಳ್ಳs ಹೋಗೋದಾ!"

"ಇಲ್ಲಾದರೂ ಹೋಗಬೇಕವ್ವ, ನಿನಗ ಯಾನ ಗೊತ್ತಾ? ಒಬ್ಬರ ಮನಸ ಸಂಬಾಳಸೋದಂದರ ಭಾಳ ಬಿರೀ ಏತಿ. ಇನ್ನs ನಾಲ್ಕ ಒಪ್ಪತ...."

"ಮನಸ ಸಂಬಾಳಸೋದ ಮನಸ ಸಂಬಾಳಸೋದ ಅಂತ ಆಕಿ ಪಾದ ತೊಳದ ನೀರ ಕುಡೀ ಹೋಗರಿ. ನನ್ನ ಕೈಯಲೆ ಯಾನ ಆಗುದುಲ್ಲ. ತಾಯಿ! ಮತ್ಯಾರರ ಆದರ ಸುಮ್ಮ ಇದ್ದೀರೋರ ಯಾನ? ಇಷ್ಟೊತ್ತರೊಳಗs ಬಂದ ಕೇಳಿರೋರ. ನೀವ ಯಾನ ಇಲ್ಲs ಅಲ್ಲಿ ಹೋಗಿ ಹ್ಯಾಂಗ ಇರಬೇಕ ನಾ?" ಸ್ವಲ್ಪ ರಭಸದಿಂದ ನುಡಿದಳು ತಾರಕ್ಕ.

ಈ ಮಾತುಗಳನ್ನು ಕೇಳಿ, ಅನಂತನ ಮುಖದಿಂದ ಹಟಾತ್ತಾಗಿ ಮುಗುಳುನಗೆಯೊಂದು ಹೊರಹೊಮ್ಮಿತು.

# ೧೪

ತಾರಕ್ಕ ಪತಿಯ ಮನೆಗೆ ಹೋಗಲು ಮುಂಜಾನೆಯೇ ಮುಹೂರ್ತವಿತ್ತು. ಆದುದರಿಂದ ರತ್ನವ್ವ ಇಂದು ಬಹಳ ನಸುಕಿನಲ್ಲಿಯೇ ಎದ್ದಿದ್ದಳು. ಒಲೆಯ ಮೇಲೆ ಮಗಳ ಸ್ನಾನಕ್ಕೆ ಬಿಸಿನೀರು ಬೇಕೆಂದು ಕಾಯಲು ಇಟ್ಟಳು. ಹಾಗೆಯೇ ಸ್ವಲ್ಪ ಅನ್ನವನ್ನೂ ಮಾಡಿಟ್ಟಳು. ಮಗಳು ಎದ್ದು ಸ್ನಾನ ತೀರಿಸಿದೊಡನೆಯೆ ಹೊಸ ಸೀರೆ ಉಡಲು ಕೊಟ್ಟಳು. ಮಗಳಿಗೆ ಸೂರ್ಯೋದಯಕ್ಕೇನೇ ಊಟಕ್ಕೆ ಹಾಕಿ ತೀರಿಸಿದಳು. ಅನಂತರ ಹೋದಮೇಲೆ ಓಣಿಯಲ್ಲಿ ಹತ್ತೆಂಟು ಜನರಿಗೆ ಏನಾದರೂ ಕೊಡಲಿಕ್ಕೆ ಬೇಕೆಂದು, ಐವತ್ತರಷ್ಟು ಉಂಡಿಗಳನ್ನು ಒಂದು ಡಬ್ಬಿಯಲ್ಲಿ ಹಾಕಿದಳು. ಅವು ಎಣ್ಣೆಯೊಳಗೆ ಕಾಳು ಹರಿದು ಕಟ್ಟಿದ ಬುಂದೆಯ ಉಂಡಿಗಳು. ಮತ್ತೊಂದು ಸಣ್ಣ ಡಬ್ಬಿಯಲ್ಲಿ ಗೋದಿಯ ಗರಿಯಿಂದ ತುಪ್ಪಿನಲ್ಲಿ ಕಟ್ಟಿದ್ದ ಹತ್ತೆಂಟು ಉಂಡಿಗಳನ್ನು ಮನೆಯಲ್ಲಿ ತಿನ್ನಲೆಂದು ಹಾಕಿ ಇಟ್ಟಳು. ಹೋದ ಕೂಡಲೆ ಒಲೆ ಎಲ್ಲಿ ಹೊತ್ತಿಸುತ್ತ ಕೂಡುವದು ಎಂದು ಒಮ್ಮೆ ತಿನ್ನಲು ಕೂತರೆ ಮನೆಮಂದಿಗೆಲ್ಲ ಸಾಲುವಷ್ಟು ಬುತ್ತಿ ರೊಟ್ಟಿಯನ್ನು ಒಂದು ದುರುಡಿಯಲ್ಲಿ ಹಾಕಿ ಕಟ್ಟಿ ಸಿದ್ಧಪಡಿಸಿದಳು. ಇವೆಲ್ಲವುಗಳ ದೊಡ್ಡ ಗಂಟನ್ನು ಕಟ್ಟಿ ಮಲ್ಲನಿಗೆ ಒಪ್ಪಿಸಿಯಾದ ಮೇಲೆ ನಾಭಿರಾಜನಿಗೆ ತಾರಕ್ಕನ ಸೀರೆ ಕುಪ್ಪಸಗಳ ಒಂದು ಗಂಟು ಕಟ್ಟಿಕೊಟ್ಟು, ನೆರೆಮನೆಯ ಹುಡುಗನೊಂದನ್ನು ಊರೊಳಗಿಂದ ಕರಿಸಿ, ಜೊತೆ ಮಾಡಿಕೊಟ್ಟು ಬೇರೆ ದಾರಿಯಿಂದ ಕಳಿಸಿದಳು, ಮಗಳ ಸಂಗಡ ಮೈಲಿಗೆ ಅರಿವೆಗಳನ್ನು ಒಯ್ಯುವುದು ಅಶುಭವೆಂದು. ಇಷ್ಟೆಲ್ಲ ಸಲಕರಣೆಯಾಗಿ ತಾರಕ್ಕ ಮನೆಯಿಂದ ಹೊರಡಲಿಕ್ಕೆಂದರೆ ಮೂರುತಾಸು ಹೊತ್ತೇರಿತು. ತಾರಕ್ಕ ಕಣ್ಣಲ್ಲಿ ನೀರು ತಂದು—ಅಲ್ಲ ತಾರಕ್ಕನ ಕಣ್ಣಲ್ಲಿ ನೀರು ಬಂದು—ತಂದೆತಾಯಿಗಳಿಗೆ ವಂದಿಸಿದಳು. ಅನಂತನಿಗೂ ವಂದಿಸಹೋದಳು. ಆತ ಕೈ ಹಿಡಿದು ಎತ್ತಿದ. ಇಬ್ಬರ ದೃಷ್ಟಿಗಳೂ ಒಂದಾದುವು. ತಾರಕ್ಕನ ದೃಷ್ಟಿ ಗಂಡನ ಮನೆಗೆ ಹೋಗಲು ಅಪ್ಪಣೆ ಕೇಳಿಕೊಂಡಿತೇನೊ! ತಾರಕ್ಕ ಹೊರಬಿದ್ದಳು, ಗಂಡನ ಮನೆಗೆ ಹೋಗಲೆಂದು. ರತ್ನವ್ವ ಗುಡಿಸಲಿನ ಹೊರಗೆ ಬಂದು ನಿಂತು, ನಿಡುನೋಟದಿಂದ ಎದುರಿಗೆ ಆಗುವ ಶುಭಾಶುಭಗಳನ್ನು ನಿರೀಕ್ಷಿಸತೊಡಗಿದಳು. ಅಷ್ಟರಲ್ಲಿ

ಮಾದಿಗರ ಮುದುಕನೊಬ್ಬ ಉರುವಲ ಹೊರೆಯೊಂದನ್ನು ತಕ್ಕೊಂಡು ಹಿಂದಿನಿಂದ ಬಂದ. ಅಷ್ಟಕ್ಕೆ ರತ್ನವ್ವ ಕೂಡಲೆ "ತಾರಾ, ಬಾರವ್ವ ತಿರುಗಿ" ಎಂದು ಕರೆದಳು. ಆಮೇಲೆ "ಅಂವ್ಯಾನ ಎದುರಿಗೆ ಬಂದಿಲ್ಲ. ಆದರ ಸುಮ್ಮನ್ಯಾಕ ಸಂಶೆ" ಎಂದು ಮಗಳಿಗೆ ಸ್ವಲ್ಪ ಕೂಡಲು ಹೇಳಿ, ನೀರು ಕುಡಿಯಲೂ ಒಂದೆರಡು ಉಂಡಿ ತಿನ್ನಲೂ ಕೊಟ್ಟಳು. ಸ್ವಲ್ಪ ಹೊತ್ತು ಕಳೆದ ನಂತರ ಮತ್ತೆ ತಾರಕ್ಕ ಹೊರಟಳು. ಆಗಲೂ ರತ್ನವ್ವ ಬಂದು, ನಿರೀಕ್ಷಿಸುತ್ತ ನಿಂತಳು. ಆದರೆ ಊರ ಅಗಸಿಯಲ್ಲಿ ಸೇರುವವರೆಗೆ ಯಾರೂ ಎದುರಿಗೆ ಬರಲಿಲ್ಲ. ಇನ್ನು ಮುಂದೆಯಾದರೂ ಯಾರು ಬರುವರೋ ಎಂಬ ಯೋಚನೆಯಲ್ಲಿಯೇ ರತ್ನವ್ವ ಗುಡಿಸಲನ್ನು ಹೊಕ್ಕಳು.

ಇವರು ಇತ್ತ ಮನೆಗೆ ಬರುವಷ್ಟರಲ್ಲಿ ಚಿಮ್ಮವ್ವ ಬಾಗಿಲಿಗೆ ಬೀಗಹಾಕಿ ಮಳಿಗೆಗೆ ನಡೆದಿದ್ದಳು. ಇದನ್ನು ಕಂಡು ಮಲ್ಲ ಕರಳಿದ. ಆದರೂ ಅದನ್ನು ಮೇಲೆ ತೋರಗೊಡಲಿಲ್ಲ. ಚಿಮ್ಮವ್ವ ಇವರು ಬಂದುದನ್ನು ನೋಡಿ "ಬಂದರಿ! ಇಲ್ಲೀ ತನಕಾ ಹಾದಿ ನೋಡಿ ನೋಡಿ, ನಾ ಈಗ ಮಳಗಿಗಿ ನಡದಿನಿ, ನೀವ ಬರತೀರೋ ಇಲ್ಲೋ ಅಂತ" ಎಂದು ಮನೆಯ ಬೀಗ ತೆಗೆಯಹತ್ತಿದಳು.

"ನಿನ್ನೇ ಹೇಳಿ ಹಚ್ಚಿಕೊಟ್ಟಿದ್ಯಾನು, ನಾಳಿ ಹರಿವತ್ತ ಬರತೇವಂತ. ಬರತಾರೋ ಇಲ್ಲೋ ಅನಲಾಕ ಯಾನ? ಮತ್ತೊಂದಿಷ್ಟು ಹಾದೀ ನೋಡೋದಾ" ಎಂದ ಮಲ್ಲ.

"ಹಾದಿ ನೋಡೋದೆಲ್ಲಾ ಖರೇ. ಮಳಗ್ಯಾಗ ದನೀನ ಕಾಲಾಗಿಂದ ಹೊಡ್ಯೋದಾ ಮಾಡೋದಾ; ಕಸಾ ಎಲ್ಲಾ ಹಾಂಗs ಬೀಳತೇತೀ. ಆಕಳ ಒಂದ ಮುಕ್ಕ ಹಾಲಕೊಡತೇತಿ, ಜರಾ ವ್ಯಾಳೇ ಆಗಾನಾ ಅದ ಮೂರs ಕಾಲಮ್ಯಾಲ ನಿಲ್ಲತೇತಿ. ಬಿಸಲ ಆಗಾನಾ ನನ್ನ ಕೈಲೇನೂ ಆಗೂಲಪ್ಪ ಈಗ!"

"ತಾರಾ ಬಂದ ಮಾಡಿರೋಳು" ಒಂದೇ ಮಾತನಾಡಿದ ಮಲ್ಲ.

"ಹೂಂ! ಮಾಡ್ಯಾಳಪ್ಪ! ಹಿಂದ ಮಾಡೀರs ಇಂದ ಮಾಡ್ಯಾಳು? ಎಲ್ಲಾ ನಮ್ಮ ಹಣೆಬರಕ ಹತ್ತಿದ ಏತೆಲ್ಲ, ಗೋರ್ಯಾಗ ಹೋಗುತನಕಾ ಇದೆಲ್ಲಿ ಬಿಡೋದ ಏತಿ?"

ಮಲ್ಲ ಮನೆಯೊಳಗೆ ಹೋಗುತ್ತ, " ನಿಂದ್ಯಾನ ಇನ್ನ ? ಕುಳ್ಳ ಹೋಗಿ ಊರ ಹೊರಗ ಬಿದ್ದಾವು. ಅವರ ತಮ್ಮ ಮನೀ ಹೊಲಾ ನೊಡಕೋವಾರ ಯಾಕ ಬಿಡವಾರ ಯಾಕ, ನೀ ಒಂದ ರೊಟ್ಟಿ ತಿಂದ ಸುಮ್ಮ ಕಟ್ಟೆಗಿ ಕೂಡತ ಬಾ " ಎಂದು ಸಹಜ ಹೇಳಿದ.

" ಹೂಂ ! ಕಟ್ಟೆಗಿ ಕೂತರೆ ರೊಟ್ಟಿ ಕೊಟ್ಟಾರಪ್ಪ ? ಇನ್ನೂ ಕೈಯಾಗ ಕಾಲಾಗ ಶಕ್ತಿ ಏತಿ ಅಂದರ ನೋಡವಾರು. ನಾಳಿ ಕುಂಡರಬಿದ್ದರ ಇವರ್‍ಯಾನ ನೋಡ್ಯಾರಾ ಈಗಿನ ಸೊಸಿದೇರಾ ಮಕ್ಕಳಾ ? " ಅಣಕದ ಸ್ವರದಲ್ಲಿ ಚಿಮ್ಮವ್ವ ನುಡಿದಳು.

ಈ ಸಾರೆ ಮಾತ್ರ ಮಲ್ಲನಿಗೆ ಸಿಟ್ಟು ತಡೆದುಕೊಳ್ಳುವದಾಗಲಿಲ್ಲ. ಅವನೂ ಅಣಕದ ಸ್ವರದಲ್ಲಿ ಅಂದ " ಎಲ್ಲಾ ನಿಂದs ಏತಿ ; ಹ್ಯಾಂಗ ಮಾತಾಡಿದರೂ ನಡೀತೇತಿ. ನಮ್ಮವ್ವs ಸೊಸಿದೇರ ಯಾನ ಮಾಡ್ಯಾರು ? ಎಲ್ಲಾ ಅತ್ತಿದೇರ ಕೈಯಾಗ ಏತಿ "

" ಹೀಂಗ ನೀವ ಬಂದ ಬಂದ ಮಗಳಿಗಿ ಏರಿಸಿ ಕೊಡಾವರ ಅಂಯ್ದು. ಆಕಿ ನನಗ ಹ್ಯಾಂಗ ಮಣಿದಾಳು. ನೆಟ್ಟಗ ನಿಂತ ನನಗs ವಾದ ಹಾಕತಾಳು ತವರಮನ್ಯಾವರ ಬಂದ ಮಗಳಿಗ್ಯಾನ ಬುದ್ಧೀ ಕಲಸೋದೋ ? ಯಾನ ಹೀಂಗ ಆಕೀ ಕಡೇನ ಆಗಿ ಮಾತಾಡೋದೋ ? ಈಗ್ಯಾನ ಹದನ ದಿನಾ ನಿಂತ ಬಿರಸ ಆಗಿ ಬಂದಾಳು. ಇನ್ನ್ಯಾನ ನಮ್ಮ ಮನ್ಯಾಗ ದಗದಾ ಮಾಡತಾಳ? ಅದಕs ನಾವ ತವರಮನೀ ಕಟ್ಟೀಕಲ್ಲ ತೋರಸುದುಲ್ಲ "

" ಯಾತಕ ತೋರಸತೀಯವ್ವ ! ನಿಮ್ಮ ಮನ್ಯಾಗ ಆಕಿ ಸುಖದಿಂದ ಇದ್ದರs ನಮಗ ಭಾಳ ಸಂತೋಷ ಏತಿ. ನಾವ್ಯಾರ ಎಲ್ಲಿ ಮ್ಯಾಲಿಂದ ಮ್ಯಾಲ ಕರೀಕ ಬರತೇವು ? ಎಂದರ ವರ್ಷದಾಗ ಒಮ್ಮಿ ಹಬ್ಬಾ ಹುಣ್ಣಿವಿ ಅಂತ."

" ಅದ್ವಲ ; ಒಮ್ಮಿ ಕರದ ಓದರ ಅತ್ತs ; ಉಗಾದಿ ಆಯ್ತು, ಮುಂಗ ಳಾರ ಮಗಳ್ನ ಕಳಸೂದುಲ್ಲ ಅಂತ ಆಯ್ತು. ಮುಂದ ಜಾತ್ರಿ ಬಂತ. ಇಲ್ಲಿ ಯಾರ ಮನ್ಯಾಗ ಮಾಡಾವರಾ ? ನಮ್ಮ ಎಲವ ಮಾಡೀ ಮಾಡೀ ಸವದ ಹೋದು." ಮಲ್ಲಪ್ಪನಿಗೆ ಬೇಸರ ಬಂದಿತು. " ನೀ ಜಗಳಕs ನಿಂತೀದಿ. ನಾವೆಲ್ಲಿ ಜಗಳಕ ಬಂದಿದೇವು, ನಿಮ್ಮ ಹಂಗ ? ನನ್ನ ಧೋತರಾ ಬಿಚ್ಚಿತಾ ನಾವ ಹೋಗತೇವು " ಎಂದ.

"ಹಾಂಗ್ಯ ಅನ್ನು; ನಾ ಯಾನ ಜಗಳಕ್ಯ ನಿಂತಿದ್ಯಾನಲ್ಲ! ಗೊತ್ತಿಲ್ಲಾ ಊರಾಗ ಹೆಸರ್‍ಯ ಆಗೀತಿ. ಇಷ್ಟ ತಿಳಿದಾಂವ, ಇಲ್ಲಾೄಕ ನಿನ್ನ ಮಗಳ್ನ ಕೊಟ್ಟ?" ನಿಜವಾಗಿ ಜಗಳ ತೆಗೆಯಲೆಂದೇ ಚಿಮ್ಮಮ್ಮ ಕೇಳಿದಳು.

ಮಲ್ಲ ಮುಂದೆ ಮಾತನಾಡಲಿಲ್ಲ. ಮನದಲ್ಲಿಯೇ "ಕೊಟ್ಟ ಸೆಗಣಾ ತಿಂದಿನೆಲ್ಲ! ಇನ್ನಾ್ಯನ ಮಾಡೋದೇತಿ?" ಎಂದುಕೊಂಡ.

ಆದರೂ ಚಿಮ್ಮಮ್ಮ ತಾರಕ್ಕನ ಕಡೆಗೆ ನೋಡುತ್ತ "ಹೋಂದಬೇ, ಗೊತ್ತಿಲ್ಲ ಆಗಿತ್ತಾ್ಯನ, ನಾ ಇಂಥಾಕಿ ಇದ್ಯಾನ ಅಂಬೋದ?" ಎಂದು ಅಂದು ಅವರು ತಂದ ಗಂಟು ಬಿಚ್ಚಿ ನೋಡಿ, ಮತ್ತಿಷ್ಟು ಕೆರಳಿ "ಇದ್ಯಾನ ಮಾಡಿ ತಂದೀದೀರಿ" ಭರಮಪ್ಪ ಯಾನ ಇನ್ನ್ಯ ಸಕ್ಕರಿ ಉಣತಾ? ವರ್ಷ ಆಗಿಲ್ಲ ಇನ್ನ್ಯ ಅವರ ಸತ್ತ! ಬುದ್ಧಿ ಎಲ್ಲಿಟ್ಟದ್ದಿ? ನೀನರ ಹೇಳಬಾರದು?" ಅದಕ್ಕೆ ತಾರಕ್ಕ ಏನೂ ಹೇಳಲಿಲ್ಲ; ಮಲ್ಲನೇ ಉತ್ತರ ಕೊಟ್ಟ.

"ಭರಮು ಒಬ್ಬ ಸಕ್ಕರಿ ತಿನದಿರ ಯಾನ ಆಯ್ತು? ನೀವ ಇಲ್ಲ? ನಿಮ ಗ್ಯಾನ ಬಾಯಿ ಕಟ್ಟೇತು? ತಿನ್ನರಿ. ಆಳ್ಯಾಗ, ನಾಲ್ಕ ಮಂದಿಗಿ ಕೊಡರೀ. ಯಾತಕ ಮಾಡಿ ತಂದ ಆದೇವು? ಇಷ್ಟ ಖರ್ಚ ಮಾಡಿ ಗುದ್ದಾಡಿ, ಮಂದಿ ಬಾಯಾಗ ಬೀಳಲಿ ಅಂತ್ಯ ಅಲ್ಲ!"

"ಯಾರ ಮಾಡ ಅಂದಿದ್ದರ ನಿಮಗ ಖರ್ಚ? ಹೀಂಗ ಮನದಾಗ ಮರಗತ ಮಗಳಿಗಿ ಮಾಡಿದ್ದ ನಾ ಎಲ್ಲಿ ನೋಡಿಲ್ಲಪ್ಪ! ಇನ್ನ್ಯ ಮುದಕ ಸತ್ತ ವರ್ಷ ಆಗಿಲ್ಲಾ, ಹಗಲೀ ರಾತ್ರೀ ನನ್ನ ಬಾಯಿಂದ "ಆಂ!" ಅನ್ನೋದ ನಿಂತಿಲ್ಲ. ನಿಮಗ್ಯಾನ? ತಗೊಂಡ ಹೋಗರಿ ನಿಮ್ಮ ಉಂಡಿ" ಎಂದು ಡಬ್ಬಿಯನ್ನು ತಂದು ಮಲ್ಲನ ಮುಂದೆ ಅಪ್ಪಳಿಸಿದಳು.

"ಸಾಕ ಬಿಡ, ಸ್ಯಾಣ್ಯಾಳ ಇದೀ!" ಎಂದು ಮಲ್ಲನೆ ಎದ್ದು, ಧೋತರ ತಕ್ಕೊಂಡು ನಡೆದ. ಹುಡುಗರೂ ಅವನಿಗಿಂತ ಮುಂದಾಗಿ ಓಡಿದರು. ತಾರಕ್ಕ ಸಪ್ಪಗೆ ಮುಖ ಮಾಡಿಕೊಂಡು ನಿಂತು ನೋಡುತ್ತಿದ್ದಳು. ಮನದಲ್ಲಿ "ತಾಯಿ, ಅವರ ಮನೀಗಿ ಹೋದಮ್ಯಾಲರ ಅನ್ನೋದ ಇತ್ತು, ನನಗ. ಸಂಗಾಟ ಐನಾಪುರದ ಹುಡುಗ ಬಂದೀತಿ, ಅದ್ವರ ಯಾನ ಅಂದೋತ ಮನದಾಗ? ಜರಾರ ದಮ್ಮ ಐತ್ಯೊ ಇಲ್ಲೋ ಇಕೀಗಿ? ಜಗದ ಹೊರತಾಗೇ ಇಕ್ಕಿ ಒಬ್ಬಾಕಿ ಅತ್ತಿ ಆಗಿದಾಳ? ಊರಾಗ ಮತ್ತ ಯಾರ ಇದಾರೋ ಇಲ್ಲೋ!

ಕಾಳಗಕ್ಕ ಯಾನ ಬರತಾಳ ಹರದ ! ಮನೀಗಿ ಹಚಕುಡಕ ಬಂದರ, ಬಾ ಅಂಬೂದ ಇಲ್ಲ. ಯಾವಾಗ ಎಲ್ಲಾ ಧಗಾಧಗಾ ಉರಿತs ಇರೋದ ಅಂದರ ಯಾನ ಆಯ್ತು ?" ಎಂದು ಅನ್ನುತ್ತಿದ್ದಳು.

"ಯಾಕ ಹೀಂಗ ಕಲ್ಲ ನಿಂತಾಂಗ ನಿಂತೀ ? ಹೋಗ ಒಳಗ. ಯಾನ ಅಪ್ಪನ ಬೆನ್ನ ಹತ್ತಿ ಹೋಗತಿ ? ಸೀರೀ ಕಳದ ಹಳೇದ ಉಟಗೊಂಡ ಮಳಿಗಿಗಿ ನಡೀ. ಈಗ ಅಕ್ಕಾತಾಯಿ ಹೋಗಿದಾಳ ನೋಡ, ಆವರಿಕಾಯಿ ಹರೀಲಾಕ. ನಾ ಹಿಂದಿಂದ ಬರತ್ಯಾನಂತ" ಎಂದು ಸಿಟ್ಟನಿಂದಲೇ ಹೇಳಿದಳು.

ಇತ್ತ ರತ್ನವ್ವ ಗುಡಿಸಲಿಗೂ ಹಾದಿಗೂ ಹತ್ತುಸಲ ಎಡತಾಕಿದ್ದಳು, ಮಗಳು ಊರಲ್ಲಿ ಹೋದ ಮೇಲೆ ಶಕುನವೇನಾಯಿತೆಂದು ತಿಳಿಯಲು ತವಕ ಗೊಂಡು. ಅಷ್ಟರಲ್ಲಿ ಹುಡುಗರಿಬ್ಬರೂ ಓಡುತ್ತ ಬಂದರು.

"ಯಾಕ ಓಡಕೋತ ಬಂದಿರಿ ?" ಎಂದು ಕೇಳಿದಳು ರತ್ನಾ

"ಚಹಾ ಹೆಚ್ಚ ಆಗೇತಿ" ಎಂದು ಊರೊಳಗಿನ ಹುಡುಗ ನಿರಾಶೆಯಿಂದ ಹೇಳಿದ. ಅವನು ತಾರಕ್ಕನನ್ನು ಕಳಿಸಲು ಹೋದರೆ ಏನಾದರೂ ಫಲಹಾರ ತಿನ್ನಲು ಸಿಗುವದೆಂದು ಬಯಸಿ ಹೋಗಿದ್ದ.

ಆ ಹುಡುಗನ ಕೊಂಕುನುಡಿ ರತ್ನವ್ವನಿಗೆ ತಿಳಿಯಲಿಲ್ಲ. "ಯಾವ ಕಡೆಗೆ ಹೊತ್ತ ಉದಿ ಆಯ್ತಪ್ಪ ! ಚಹಾ ಸಿಕ್ಕಿತ ನಿಮಗ ?" ಎಂದು ಸ್ವಲ್ಪ ಸಂತಸ ದಿಂದಲೇ ನುಡಿದಳು.

ಅಷ್ಟರಲ್ಲಿ ಹಿಂದಿನಿಂದ ಮಲ್ಲ ಬಂದ, ಹೆಗಲ ಮೇಲೆ ಧೋತರ ಒಗೆದು ಕೊಂಡಿದ್ದ. ಮುಖ ನಿಸ್ತೇಜವಾಗಿತ್ತು. ಹಣೆಯ ಮೇಲೆ ಕಿರುಬೆವರು ಒಡೆದಿತ್ತು, ಗಂಡನನ್ನು ನೋಡಿ ರತ್ನವ್ವ ಏನೋ ವಿಶೇಷ ಸಂಗತಿ ನಡೆದಿದೆ ಯೆಂದು ತಿಳಿದಳು. ಆದರೂ "ಮಗಳನಾ ಕಳಿಸಿ ಚಹಾ ಕುಡಿದ ಬಂದಿ ಕಾಣಸ್ತೇತಿ ಇಂದ ?" ಎಂದು ಕೇಳಿದಳು.

ಮಲ್ಲನಿಗೆ ಏನು ಹೇಳಬೇಕೆಂಬುದು ತಿಳಿಯದಾಯಿತು. ಸ್ವಲ್ಪ ತಡೆದು "ಹೂಂ ! ಚಹಾ ಕುಡೀ ಮಗಳನಾ ಓದ ಹೊಳೀ ಕೂಡಿಸೆ ಬಂದ್ನಿ" ಎಂದ ಧೋತರದಿಂದ ಮುಖ ಒರಸಿಕೊಳ್ಳುತ್ತ.

"ಯಾಕ ? ಯಾನಾಯ್ತು ?"

"ಆಗೋದ ಯಾನ? ಅದs ಹಾಡ ಏತೆಲ್ಲ; ಐದಾರ ವರ್ಷ ನೋಡ ತೇವು, ಒಂದಿನಾರೇ ಆಕಿ ಸಮಾಧಾನ ಇರಬೇಕು? ಇಲ್ಲ; ಹಲಕಟ್ ಹೆಂಗಸ! ಹಚಕುಡಕ ಬಂದಿದಾರ ಅಂದಮ್ಯಾಲಿ ಸಮಾಧಾನ ಕರಕೋಬೇಕು. ಅದ್ಯಾನ ಇಲ್ಲ; ಯಾತಕ ಎಲ್ಲಾ ಅಡ್ಡಬೆಂಕಿ ಹಾಯ್ದಂಗs ಮಾಡತಾಳು! ನಾವ್ಯಾನ ಅಷ್ಟ ಬ್ಯಾಡಾದವರ ಆದೇವ ಯಾನ ಆಕೀಗಿ? ಇನ್ನೊನಿಮ್ಮ ಆಕಿ ಕಟ್ಟಿಕಲ್ಲ ಏರುದುಲ್ಲ....ನಾ!"

"ಯಾಕ ಯಾನ ಆಯ್ತು? ಜಗಳಾ ಗಿಗಳಾ ತಗದಿ ಯಾನ ಮತ್ತ? ಇಲ್ಲದ ಒಂದ ಕಡಚನಿ ಮಾಡಿ ಇಡತೀರಿ ಪೋಲಗಿ" ಎಂದು ಆತುರದಿಂದ ಕೇಳಿದಳು. ನಡುವೆ ಬಾಯಿಹಾಕಿ ಅವಳು ಕೇಳದಿದ್ದರೆ ಇನ್ನೂ ಎಷ್ಟು ಹೊತ್ತು ಮಲ್ಲ ಮಾತನಾಡುತ್ತಿದ್ದನೋ!

"ನಾ ಯಾತಕ ಸುಡಲಾಕ ಜಗಳಾ ತಗೀಲಿ? ಆಕೀನs ಅಡ್ಡಾತಿಡ್ಡಾ ಮಾತಾಡಿದಳು."

ರತ್ನವ್ವ ನಿಟ್ಟುಸಿರೊಂದು ಬಿಟ್ಟಳು. "ಮುಂದ ಊರಾಗ ಇದರಿಗಿ ಯಾರ ಬಂದರು?" ಎಂದು ಕೇಳಿದಳು.

ಮಲ್ಲ ತುಸು ಮೋರೆ ಕಿವುಚಿ "ಶುಭಾ ಛಲೂ ಆಗಲಿಲ್ಲ!" ಸ್ವಲ್ಪ ತಡೆದು ಕಣ್ಣು ಒರಿಸಿಕೊಂಡು " ಬಾವಾ ಬಂದ ಝೋಳಿಗಿ ತಗೊಂಡ."

"ಸಿಡಸಲಿ! ಅವೆಲ್ಲಿ ಕಾಯ್ತುಕೂತಿದ್ದ ಭಾ....!"

"ಅವಂಗ್ಯಾಕ ಬಯ್ಯತಿ? ಕಾಳಕ ವ್ಯಾಳೇಕ ಗಂಟ ಬೀಳಕ ಬ್ಯಾಡ್ಯಾನ? ಆ ಮನ್ಯಾಗ ಪೋರಿ ಬಾಳೋದ ಬಿಲೀ...."

ಎರಡು ದಿನಗಳು ಕಳೆದುವು. ಚಿಮ್ಮವ್ವ ಮೂರನೆ ದಿನ ಮುಂಜಾನೆ ನೆರೆ ಮನೆಯ ಹೆಂಗಸೊಬ್ಬಳನ್ನು ಕರೆದು, ತಾರಕ್ಕ ಬರುವಾಗ ತಂದ ಉಂಡಿಯ ಡಬ್ಬಿಗಳನ್ನು ರತ್ನವ್ವನ ಮಳಿಗೆಗೆ ಒಯ್ದು ಕೊಟ್ಟುಬರಲು ಹೇಳಿದಳು. ತಾರಕ್ಕ ಒಂದೆರಡು ಮಾತು ಹೇಳಿ ನೋಡಿದಳು. ಅದಕ್ಕೆ ಚಿಮ್ಮವ್ವ "ಯಾತಕ ಬೇಕ ತಾಯಿ ನಿಮ್ಮ ಉಂಡಿ? ಇಂಥಾ ಉಂಡೀ ತಿನಸಿ ಮತ್ತ ಯಾರಾನಾ ಆಗ ಮಾಡಬೇಕೆಂತ ಮಾಡಿದೀರಿ? ಯಾರಿಗಿ ಗೊತ್ತ ಮನ್ಯಾಗ ತಿನಕ ಅಂತ ಬ್ಯಾರೇನs ಬ್ಯಾರಿ ಕಟ್ಟೇದೀರಿ" ಅಂದಳು. ತಾರಕ್ಕನಿಗೆ ಮುಂದೆ ಮಾತಾಡುವಂತಾಗಲಿಲ್ಲ.

ಭರಮು ಇದನ್ನೆಲ್ಲ ಕೇಳುತ್ತ ಅಲ್ಲೇ ನಿಂತಿದ್ದ. ಅವನ ಕಡೆಗೊಮ್ಮೆ ತಾರಕ್ಕ ದೃಷ್ಟಿ ಬೀರಿದಳು. ಅವನೂ ಇವಳ ಕಡೆಗೊಮ್ಮೆ ನೋಡಿದ. ಅದು ಕೇವಲ ನೋಟವಾಗಿತ್ತಷ್ಟೆ. ಅದೇಕೊ ತಾರಕ್ಕನ ಮನಃಪಟಲದ ಮೇಲೆ ಅನಂತನ ಚಿತ್ರವೊಂದು ಮೂಡಿ ಮರೆಯಾಯಿತು. ಅದರೊಡನೆ ಸಮಾಧಾನ ಸೂಕ್ಷ್ಮಚಿಹ್ನೆಯೂ ಅವಳ ಮುಖದ ಮೇಲೆ ಮೂಡದೆ ಇರಲಿಲ್ಲ. ನೆರೆಮನೆ ಯವಳು ಗಂಟು ತಕ್ಕೊಂಡು ರತ್ನವ್ವನ ಕಡೆಗೆ ಹೋದಳು. ರತ್ನವ್ವನೂ ತಿರುಗಿ ಕಳಿಸಬೇಕೆಂದಳೊಮ್ಮೆ; ಮತ್ತೆ ಗಂಡನನ್ನು ಸಂಜೆಗೆ ವಿಚಾರಿಸಿ ಏನು ಮಾಡುವುದಕ್ಕೂ ಬರುತ್ತದೆ. ಎಂದು ಭಾವಿಸಿದಳೇನೋ ! "ನಮ್ಮ ಲಕ್ಷ್ಮಿ ನಮ್ಮ ಮನೀಗಿ ತಿರಗಿ ಬಂದೀತಿ, ತಿರಸಲಿ ಯಾಕ ತಾ" ಎಂದು ಬಂದವಳಿಗೆ ಹೇಳಿ ಇಟ್ಟುಕೊಂಡಳು. ಆದರೂ ಅವಳ ಮನಸ್ಸು ಸಂಜೆಯವರೆಗೆ ತಡೆಯಲಿಲ್ಲ. ಮಧ್ಯಾಹ್ನವೇ ಊರಲ್ಲಿ ಹೋಗಿ, ಚಿಮ್ಮವ್ವನಿಗೆ ಹೋಗಿ ಹೇಳುವಂತಹ ಅವರ ಬಾಂಧವರ ಹೆಂಗಸರ ಮುಂದೆ ಹೀಗೆ ಹೇಳಿದಳು.

"ನಮ್ಮದ್ಯ ಮನೀ ಅಂತಾ ಮಗಳನಾ ಕೊಟ್ಟೇವ; ನಮ್ಮ ಮನೀ ಎಲ್ಲಾ ಸುಲಗಿಮಾಡಕೊಂಡೇವ, ಇವರ ಸಲುವಾಗಿ. ಆದರ ಇಕ್ಕಿ ಒಂದಿನಾರ್ಯ ಪೋರಿ ಗೂಡಾ ಛಲೂ ಇರಬೇಕು ? ಇಲ್ಲ. ದಿನ ಹರಿವತ್ತ ಎದ್ದರ ವಾರಿವಸ್ಯ! ಹಾಂವ ಮುಂಗಲಿ ಇದ್ದಂಗs. ಇಂದ ನೆಟ್ಟಗ ಇದ್ದಾಳ! ನಾಳಿ ನೆಟ್ಟಗ ಇದ್ದಾಳ, ಅಂದ ಸುಮ್ಮನ ಇದ್ದರ ದಿನದಿನಕ ಈಕೇದ ಹೆಚ್ಚs ಆಗ್ತ ನಡದೀತಿ! ಪೋರಿಗಿ ಯಾರ ಕೇಳಾವರ ಇಲ್ಲ ಅಂತ ಮಾಡತಾಳ ಯಾನ ಇಕ್ಕಿ ? ಇಂದ ಸಂಜಿಕಿ ಅಂವ ಬರಲಿ. ಹುಡುಗರನ ಹಚಕುಡಕ ಹೋದಾಂವ ಇನ್ನs ಬಂದಿಲ್ಲ; ನಾವೂ ಅಣ್ಣಾ ಕುಲಕರ್ಣಿ ಹತ್ತ್ಯಾಕ ಓದ ಇಕೀಗಿ ಆಕಲಾ ಕಲಸತೇವ. ಉಂಡಿ ಡಬ್ಬಿ ಯಾರರ ತಿರಗಿ ಕಳಸತಾರು ? ತನಗ ಬ್ಯಾಡಾಗಿರ ಮನ್ಯಾಗ ನಾಯಿಗಿ ಹಾಕೋದಿತ್ತ" ಎಂದು ರತ್ನವ್ವ ಸ್ವಲ್ಪ ಬಾಯಿ ಬಿಟ್ಟಳು.

ಚಿಮ್ಮವ್ವ ರತ್ನವ್ವ ಬರುವದನ್ನು ಹೇಗೋ ನೋಡಿದ್ದಳು. ಆದುದರಿಂದ ಅವಳ ಬೆನ್ನ ಹಿಂದಿನಿಂದಲೇ ಬಂದು ಹೊರಗೆ ಮರೆಯಲ್ಲಿ ನಿಂತು ಬೀಗತಿಯ ಮಾತನ್ನೆಲ್ಲ ಕೇಳಿದ್ದಳು. ಅವಳೂ ಮುಂದೆ ಬಂದು ಬಾಯಿಮಾಡಹತ್ತಿದಳು. ಇಬ್ಬರೂ ಹೆಂಗಸರು ! ಕೇಳುವದೇನು ? ಬಾಯಿಗೆ ಬಾಯಿ ಹತ್ತಿತು. ಓಣಿ ಯೊಳಗಿನ ಹೆಂಗಸರೆಲ್ಲ ಕೂಡಿ, ಬಿಡಿಸಬೇಕಾದರೆ ಬೇಜಾರಾಗಿಹೋಯ್ತು.

ಮಾತಿನ ಭರದಲ್ಲಿ ಚಿಮ್ಮವ್ವ "ಖರೇ ಉತ್ತರದಕ್ಕಿ ಇದ್ದರಽ ಮಗಗ ಮತ್ತೊಂದ ಮದವಿ ಮಾಡೇ ತೋರಸತ್ಯಾನ! ನಿನ್ನ ಪೋರಿನಾ ಕೋಳೀಕ ಹಚ್ಚದಿದ್ದರ ನನ್ನ ಹೆಸರ ಇಡಬ್ಯಾಡ!" ಎಂದು ಹೇಳಲೂ ಹಿಂದೆಮುಂದೆ ನೋಡಲಿಲ್ಲ.

ಅದೇ ದಿನ ಸಂಜೆ ಚಿಮ್ಮವ್ವ ತನ್ನ ದೂರಿನ ಭಾವನಾದ ಭೀಮಪ್ಪನನ್ನು ಕರೆದು, ಅವನ ಜೊತೆಯಲ್ಲಿ ಒಳಮನೆಯಲ್ಲಿ ಕುಳಿತು, ಬಹಳ ಹೊತ್ತಿನವರೆಗೆ ಮಾತಾಡಿದಳು. ಹೃದಯದ ದುಃಖವನ್ನೆಲ್ಲ ತೋಡಿಕೊಂಡಳು. ಬೀಗರು ನಡೆದ ಅನುಚಿತ ರೀತಿಗಳನ್ನೆಲ್ಲ ಉಪ್ಪು ಕಾರ ಹಚ್ಚಿ ಹೇಳಿದಳು. ಭೀಮಪ್ಪನೂ ಅವಳ ಮಾತಿನ ನಡುನಡುವೆ ಏನಾದರೂ ಹೇಳಿ ಹುರಿದುಂಬಿಸುತ್ತಲೇ ಇದ್ದ. ಅದೇಕೊ ಕೊನೆಗೆ ಚಿಮ್ಮವ್ವ ಹೇಳಿದಳು: "ಅವ, ಸತ್ತಮ್ಯಾಲೆ ಭರುಮನಾ ನಿನ್ನ ಉಡ್ಯಾಗಽ ಹಾಕಿದ್ಯಾನ. ಯಾನ ಮಾಡತಿ ಮಾಡಕೋ. ಅವಂಗ ಒಂದ ಹ್ಯಾಂತಿನಾ ಮಾಡು. ಇಲ್ಲಾದರ ಹಾಂಗಽ ನಿಲ್ಲಿಸು ನಾ ಅಂತೂ ಹೆಂಗಸ ಬಾಲಿ! ಊರಾಗ ಎದೀಮ್ಯಾಲ ಅವರ ಬೀಗರ ಆಗದಾರ! ಅವನಾ ಒಬ್ಬನಾ ನೋಡತಾ ನೋಡತಾ ಆಗಿಮಾಡಿ ಬಿಟ್ಟರ. ನನಗೊಬ್ಬಾಕಿಗಿ ಯಾನರ ಮಾಡಿಬಿಟ್ಟರು ಅಂದರ ಆಯ್ತು. ಮನೀ ಎಲ್ಲಾ ಅವರದ ಆಗತೇತಿ!" ಎಂದು ಹೇಳಿ, ಒಂದು ಕಪ್ಪು ಚಹವನ್ನು ಮಗಳಿಂದ ಮಾಡಿಸಿ ತರಿಸಿ ಕುಡಿಯಲಿಕ್ಕೆ ಕೊಟ್ಟಳು.

ಚಹ ಕುಡಿದು ಎದ್ದುಹೋಗುತ್ತ ಭೀಮಪ್ಪ "ಊರ ಏತ್ಯಾನ, ಹೊಲ ಗೇರಿ ಏತಿ, ಹಾಂಗ ಕೊಲ್ಲಲಾಕ? ನಾವ ಯಾನ ಇಲ್ಲಾ? ಅದೊಂದ ಗೊತ್ತ ಇಲ್ಲದಕ ಕೈಮೀರಿಹೋಯ್ತು. ಮಾಡೂನು ಅಲ್ಲ ಮತ್ತೊಂದ ಮದಿವೀ ಈಗ್ಯಾನ ಹೆಣ್ಣಗೊಳಿಗಿ ಕೊರತಿ? ದುಡ್ಡಿಗಿ ಮೂರ ಆಗಿದಾವ! ಈಗ ಅನಕಾ ಮುಹೂರ್ತ ಹೋದೂನ? ಮಳಗಾಲ ಅಷ್ಟ ಹೋಗಲಿ, ತುಳಸಿ ಮದವಿಗಿ ಅಂದರಽ ಎಲ್ಲೇದರ ಒಂದ ಹೆಣ್ಣ ಜಗ್ಗಿತಂದ ಮದಿವೀ ಮಾಡೇ ಬಿಡೋದಲ್ಲ! ಅದಕ್ಯಾನ?" ಎಂದ.

ಚಿಮ್ಮವ್ವ ಕಳಿಸಲು ಬಾಗಿಲವರೆಗೆ ಬಂದು "ಅದೆಲ್ಲಾ ನಿನ್ನಾನಽ ಕೂಡೇತಿ. ಕುಡಗೋಲಾ ಕುಂಬಳಿಕಾಯಿ ನಿನ್ನ ಕೈಯಾಗಽ ಕೊಟ್ಟದ್ಯಾನ. ಯಾನ ಮಾಡತಿ ಮಾಡ. ದುಡ್ಡಿಗಿ ಯಾನ ಅನುಮಾನ ಇಲ್ಲ" ಎಂದು ಸೂಚಿಸಿ ಹಿಂದಿರುಗಿದಳು.

ದೀವಳಿಗೆಯಾದ ನಂತರ ಭೀಮಪ್ಪ ೫-೬ ಕಡೆಗೆ ಹೋಗಿ ಭರಮನಿಗೆ ಹುಡುಗೆಯರನ್ನು ನೋಡಿ ಬಂದ. ಸಂತೆಗೆ ಹೋಗಿದ್ದೆ, ದೇವರಿಗೆ ಹೋಗುವೆ, ಜಾತ್ರೆಗೆ ಹೋಗಬೇಕು ಎಂದು ಊರು ಬಿಡಲು ಕಾರಣಗಳನ್ನು ಸೂಚಿಸುತ್ತ ಚಿನ್ನಮ್ಮವ್ವನೂ ಒಂದೆರಡು ಹುಡುಗೆಯರನ್ನು ನೋಡಿ ಬಂದಳು. ಹೋದಲ್ಲೆಲ್ಲ ಇನ್ನೊಂದೇಕೆ ಮಾಡುವಿರೆಂದು ಕೇಳಲು "ನೆರೆದು ಐದಾರು ವರ್ಷ ಆಯ್ತು. ಇನ್ನs ಮಕ್ಕಳs ಆಗವಲ್ಲು, ಒಬ್ಬs ಮಗಾ ! ಎಷ್ಟ ವರ್ಷ ನೋಡೋದ ಹ್ಯಾಂಗs ? ಮನ್ಯಾಗ ತಿನಕಾ ಉಣಕಾ ಯಾನ ಕಡಿಮಿ ಏತಿ ? ಇರಲೆಲ್ಲ ಇಬ್ಬರ" ಎಂದು ನಾಲ್ಕು ಮಾತಿನಲ್ಲಿ ಕಾರಣ ಹೇಳಿ ಮುಗಿಸುತ್ತಿದ್ದಳು. ಒಂದೆರಡು ಹುಡಿಗೆಯರನ್ನು ಒಪ್ಪಿ ಬಂದಳು. ಆದರೆ ಅವರು ನೋಡಲಿಕ್ಕೆ ಬರುವೆವೆಂದವರು ಬರಲೇ ಇಲ್ಲ. ಭೀಮಪ್ಪ ಹೋಗಿ ಬಂದವರಲ್ಲಿ ಒಂದಿಬ್ಬರು ಹುಡುಗನನ್ನು ನೋಡಲಿಕ್ಕೆ ಬಂದರು. ಆದರೆ ಊರಲ್ಲಿ ಬಂದೊಡನೆಯೇ ಅವರ ಮನಸ್ಸು ತಿರುಗಿದಂತೆನಿಸಿತು ಇವರಿಗೆ. ಮೊದಲೇನೋ ಕೊಡುತ್ತೇವೆಂದು ಮಾತು ಕೊಟ್ಟು ಬಂದವರೂ ಕೊಡದೆ ಇರಬೇಕೆಂದರೆ ಊರಲ್ಲಿ ಯಾರಾದರೂ ಚುಚ್ಚಿಕೊಟ್ಟಿರಲಿಕ್ಕೇಬೇಕು. ಚುಚ್ಚಿಕೊಡಲಿಕ್ಕೆ ಏನು ? ಚಂದೂರಿನಲ್ಲಿ ಯಾರನ್ನು ಕೇಳಿದರೂ "ಅಲ್ಯಾತಕ ಕೊಡತೀರಿ ? ಆಕ್ಯಾನ ಬಾಳ್ವಿ ಮಾಡಗುಡತಾಳು ಮನ್ಯಾಗ ? ಪೋರಿಗೋಳ ಹೆಚ್ಚಾಗಿದ್ದರ ದುಡದ ತಿನ್ನಾವನ ಕೊಳ್ಳಾಗ ಕಟ್ಟೋಗರಿ, ಸುಖಾ ಆದೋತ. ಇಕ್ಕಿ ಬದಕಿಗಿ ಓದ ಬೆಂಕಿಹಚ್ಚಿರಿ !" ಎಂದು ಮೂಗುಮುರಿಯುತ್ತಿದ್ದರು. ಆಂದಮೇಲೆ ಪರವೂರವರಿಗೆ ಹೆಣ್ಣು ಕೊಡುವ ಧೈರ್ಯ ಹೇಗಾಗಬೇಕು ? ದಿನದಿನಕ್ಕೆ ಹುಡುಗನಿಗೆ ಬಂದ ಮನೆಗಳೆಲ್ಲ ತಿರುಗಿ ಹೋಗಹತ್ತಲು ಚಿನ್ನಮ್ಮವ್ವನಿಗೂ ಚಿಂತೆ ಹೆಚ್ಚಾಯಿತು. "ಈ ಸೊಸೀ ಮನ್ಯಾಗ ಇರೂತನಕಾ ನೋಡಕ ಬಂದಾವರರs ಹ್ಯಾಂಗ ಕೊಟ್ಟಾರು ?" ಅನ್ನುವ ಸತ್ಯದರ್ಶನವೂ ಅವಳಿಗೆ ಆಯಿತು. ಅದರಿಂದ ಮನೆಯಲ್ಲಿ ತಾರಕ್ಕನಿಗೆ ದಿನದಿನಕ್ಕೆ ಹೆಚ್ಚಿಗೇನೇ ತ್ರಾಸ ಕೊಡಹತ್ತಿದಳು.

ಭೀಮಪ್ಪನೂ ಅಲ್ಲಿ ಇಲ್ಲಿ ಹೋಗಿ, ನೋಡಿ ಕೇಳಿ, ಹೇಳಿ ಪ್ರಯತ್ನ ಮಾಡಿ ಏನೂ ಆಗದೆ ದೈವದ ಮೇಲೆ ಹೊರೆ ಹಾಕಿ ಕೈಯೂರಿದ. ಇದನ್ನು ಕಂಡು ಜನರು "ಸುಮ್ಮs ನಾಲ್ಕದಿನಾ ಅತ್ತಾ ಇತ್ತಾ ಓಡ್ಯಾಡಿದ, ಭೀಮಪ್ಪ.

ಮದವಿ ಮಾಡತ್ಯಾನಂತ. ಪೋರಿಮ್ಯಾಲ ಹೆಣ್ಣ ಯಾರ ಕೊಡತಾರು ? ಮತ್ತೊಂದ ಮಾಡೋದ ಯಾನ ಸುಮ್ನs ಇಲ್ಲs ! ಪೋರಿ—ಮುನ್ನೂರ ಕರಳ ಎಲ್ಲಾ ಕಳಕಳ ಮಾಡತಾವ. ದ್ಯಾವರಿಗಿ ಯಾನ ಕರುಣಾ ಇಲ್ಲಾ ? ಇಂಥಾ ವರೆಲ್ಲಾ ಮಾಡತೇವಂತ ಓಡ್ಯಾಡಲಾಕ, ಹೆಣ್ಣ ಯಾನ ಕುಂಬಾರ ಮನ್ಯಾಗ ಮಾಡಸೋದ ಏತಿ ? " ಹೀಗೆ ಹಿಂದೆ ಅನ್ನುತ್ತಿದ್ದರು. ದಿನಗಳೆದಂತೆ ಅವನ ಮುಂದೆಯೂ ಅನ್ನಲು ಅಂಜಲಿಲ್ಲ ಜನ. ಆದರೆ ತಮ್ಮ ಮಾತಿನ ಪರಿಣಾಮ ವೇನಾಗುವದೆಂಬುದರ ಕಡೆಗೆ ಯಾರ ಲಕ್ಷ್ಯವೂ ಇಲ್ಲ. ಜನ ಹೀಗೆ ಆಡಿ ಕೊಂಡಷ್ಟೂ ಭೀಮಪ್ಪನ ಮನದಲ್ಲಿ 'ಮದಿವೆ ಮಾಡೇ ತೋರಿಸುವೆ'ನೆಂಬ ಹಟವು ಗಟ್ಟಿಯಾಗುತ್ತ ನಡೆಯಿತು. ಆದಕ್ಕೆ ಯುಕ್ತಿಪ್ರಯುಕ್ತಿಗಳನ್ನೂ ಯೋಚಿಸತೊಡಗಿದ.

ಹೆಣ್ಣು ಯಾರೂ ಕೊಡಲಿಕ್ಕೆ ಒಪ್ಪುವುದಿಲ್ಲವೆಂದು ಅರಿತ ಮುಗುದುಮರ ಹೆಂಗುಸೊಬ್ಬಳು "ಎಂದ ಮದಿವೇ ಚಿಮ್ಮಾ ?" ಎಂದು ಕೊಂಕಿನ ನಗೆ ಬೀರುತ್ತ ಕೇಳೇಬಿಟ್ಟಳು ಚಿಮ್ಮವ್ವನಿಗೆ. ಚಿಮ್ಮವ್ವನಿಗೆ ಹುಣ್ಣಿನ ಮೇಲೆ ಬರೆಕೊಟ್ಟಂತಾಯಿತು. ಆದರೂ "ಆದೋತಲಾ, ಮದವೀನ್ಪ ಮಾಡಕೋಕ ನಿಂತಮ್ಯಾಲ ಯಾನ ? ನಾ ಕುಡತೇವ ನೀ ಕುಡತೇವ ಅಂತಾರ. ಆದರ ನಾವ ಇನ್ನs ಅನಮಾನಕ ಹತ್ತಿದೇವ. ಒಳಗಿನ ಪೋರಿ ಏತಿ, ಆಕಿಮ್ಯಾಲ ಯಾತಕ ಬೇಕು. ಅಂತ," ಎಂದು ಹೇಳಿ, ತನ್ನ ಇಲ್ಲದ ಸೌಜನ್ಯವನ್ನು ತೋರಿಸಲೆಳಸಿದಳು. ಇವಳ ಮಾತಿನ ಮರ್ಮವನ್ನು ಬಲ್ಲ ಅವಳು "ನಿಮ ಗ್ಯಾನ ಹೆಣ್ಣ ತೋಟಿ ಬಿಡ !" ಎಂದು ಅಪಹಾಸ್ಯದ ನಗೆ ನಕ್ಕು ಮುನ್ನಡೆದಳು. ಆ ನಗೆಯಲ್ಲಿಯ ಭಾವ ಮಾತ್ರ ಚಿಮ್ಮವ್ವನ ಬಾಯಿಯನ್ನೇ ಕಟ್ಟಿತು. ಆದರೆ ಮನದಲ್ಲಿಯ ಮಗನ ಮದುವೆ ಮಾಡಬೇಕೆಂಬ ಬಯಕೆಗೆ ಪುಟವನ್ನು ಕೊಟ್ಟಿತು.

ಊರ ಜನರಿಗೆಲ್ಲ ಇಷ್ಟು ತಿಳಿದ ಮೇಲೆ ತಾರಕ್ಕನ ತಂದೆತಾಯಂದಿರಿಗೂ ಇವರ ಮದಿವೆಯ ಪ್ರಯತ್ನ ತಿಳಿಯದಿರುತ್ತದೆಯೋ ? ರತ್ನವ್ವನಂತೂ ಭೀಮಪ್ಪನನ್ನೇ ಕುಳಿತಾಗ ನಿಂತಾಗ ಬಯ್ಯ ತೊಡಗಿದಳು. ಒಮ್ಮೊಮ್ಮೆ "ಅಂವಗೂ ಹೆಣ್ಣ ಮಕ್ಕಳ ಇದಾವು ! ಅವರಿಗೂ ನಮ್ಮ ಹಾಡs ಇಡಲೇ ! ಯಾನತ್ತ ನನ್ನ ಮಗಳಮ್ಯಾಲಿ ಮಾಡತಾನ ? ಮಕ್ಕಳ ಆಗಲಿಲ್ಲ ಅಂತ?

ನನ್ನ ಮಗಳಿಗಿ ಮಕ್ಕಳ ಯಾಕ ಕಡೀದ ಆದಾವು? ಗಂಡನ ಮಾರಿ ನೋಡಿ ಮಕ್ಕಳಾ ಹಡ್ಯೋದ ಏತಿ? ಬಿಳೀ ಕೂದಲ ಆದು, ತಿಳಿದುಲ್ಲ ಯಾಕ ಇವಗ? ಹ್ಯಾಂಗ ಮುದಕ ಆಗೀದಾ?" ಎಂದು ಚಿಟಕೆ ಮುರಿದು, ನೆಲ ತಿಕ್ಕಿ ಬಯ್ಯುವಳು. ಕೊನೆಗೆ ಹಾಡಿಹಾಡಿ ಅಳುವಳೂ ಕೂಡ. ಆಗ ಮಲ್ಲ "ಮಂದಿಗಿ ಹಾಂಗ ಬೇದರ ಆಗೋದ ಯಾನಾ? ಪೋರಿ ನಸೀಬದಾಗ ಇದ್ದದ ಆಗತೇತಿ. ಆಗೋದ ಯಾನ ಏತಿ ಅದ್ಯಾನ ನಿಲ್ಲೂದುಲ್ಲ!" ಎಂದು ಸಮಾಧಾನ ಹೇಳುವನು. ಅವನ ಮಾತಿನ ಶೀವಿಯಲ್ಲಿಯೂ 'ದಿನ್ನಾ ಆದೋತ ಮದಿವಿ! ಸವತಿಮ್ಯಾಲ ಯಾರ ಕೊಡತಾರ? ಯಾನ ಸಂಗತಿ?' ಎಂಬ ಭಾವ ಹೊರ ಹೊಮ್ಮುವದು. ಅದನ್ನರಿತು ರತ್ನವ್ವ ಹೇಳುವಳು "ಯಾನ ಹುಚ್ಚ ಹತ್ತೇತಿ ನಿಮಗ? ಅವರ ಮದವೀ ಮಾಡೇಬಿಡತಾರು ನೋಡಕ್ಕ ಅಂತ! ನಮ್ಮ ಪೋರಿಗೇ ಯಾರ ಇಲ್ಲ! ಪಕ್ಕಾ ಕಿತ್ತಿ ಒಗದ ಹಕ್ಕಿಹಂಗ ಆಗ್ತೇತೀ" ಎಂದು. ಅದಕ್ಕೆ ಮಲ್ಲ ಮತ್ತೂ ಸಮಾಧಾನ ಹೇಳುತ್ತ "ನಮಗೂ ಅಣ್ಣ ತಮ್ಮರ ರಗಡ ಮಂದಿ ಇದಾರ. ನಾವ್ಯಾನ ಬಳಗ ಇಲ್ಲದವರ ಹಾಂಗ ಇಲ್ಲಾ! ನಮ್ಮ ಮಂದ್ಯೂ ಅಂತಾರ 'ಮದವೀರ ಹ್ಯಾಂಗ ಮಾಡತಾರ ನೋಡೋದ ಏತಿ, ಹಂದರಾ ಹಾಕಿ! ಹಂದರಕ್ಕ ಬೆಂಕೀನs ಹಚ್ಚತೇವ. ಕೊಡಾವರ ಇಲ್ಲಿ ಬಂದ ಹ್ಯಾಂಗ ಕೊಡತಾರ? ಅವರ ಪೋರೀ ಜೀವ ಬ್ಯಾಡಾಗೇತಿ ಯಾನ? ಅಂತ ಇಷ್ಟ ಬೆನ್ನುರಿ ನೇಟ ಇದ್ದ ಮ್ಯಾಲ ನಾವರ ಯಾಕ, ಬುಡಬುಡ ಓಡಾಡೋದಾ?" ಎಂದು ಕೇಳುವನು. ಗಂಡನ ಈ ಮಾತನ್ನು ಕೇಳಿ ರತ್ನವ್ವ ಸ್ವಲ್ಪ ಶಾಂತಚಿತ್ತಳಾಗುತ್ತ "ಯಾನ ಮಾಡೋದ ಈಗಿಂದs ಮಾಡಿರಿ. ಸುಮ್ಮ ಕೂಡಬ್ಯಾಡರಿ! ಒಮ್ಮೆ ಆದಮ್ಯಾಲ ಯಾನ ಮಾಡಕ ಬರೂ ಹಂಗಿಲ್ಲ; ಆಮ್ಯಾಲಿ ಹಳ್ಳ ಹೋದ ಗೆಜ್ಜಿ ಹಂಗ ಗಪ್ಪಕೂಡೋದ!" ಎಂದು ಸೂಚಿಸುವಳು. ಅದಕ್ಕೆ ಮಲ್ಲನು "ಹಚ್ಚಿದ ಅರಿಸಿಣ ತೊಳೀತಾವ. ಈಗ್ಯಾನ ಆಗೀತಿ?" ಎಂದು ಮನದಲ್ಲಿಯೇ ಅಂದುಕೊಂಡು, ಸುಮ್ಮನಿರುವನು.

ಒಂದು ದಿನ ಸಂಜೆ ಮಲ್ಲ ಮನೆಯಲ್ಲಿ ಕುಳಿತಿದ್ದ. ಭೀಮಪ್ಪ ಹಿತ್ತಲ ಕಡೆಗೋ ಮತ್ತೆಲ್ಲಿಯೋ ಹೊರಟಿದ್ದ. ಮಲ್ಲನಿಗೆ ಸಹಜ ಕಾಣಿಸಿದ. ಕೂಡಲೆ ಮನದಲ್ಲೊಂದು ವಿಚಾರ ಹೊಳೆಯಿತು 'ನಾವ್ಯಾನ ವಾದ ಹಾಕಿಲ್ಲ ಎದಿಮ್ಯಾಲಿ ಕೂತ ಯಾನ ಬಡವಾಡಿಲೆಲ್ಲ. ಸುಮ್ಮ ಹುವ್ವಿನ ಕಾಲಾಗ ತಾನs ನಾಚಿ

ದಾಂವ ನನ್ನ ಗೂಡಾ ಮಾತಾಡುದುಲ್ಲ. ನಾನ್ಯರ ಮಾತಾಡಿಸಿದರ ಯಾನ ತಪ್ಪ ಆಗ್ತೇತಿ ? ಹಿರ್ಯಾಮನಸ್ಯಾ ಇದಾ ; ನನಗ್ಯಾನ ಕಡಿಮಿತನಾ ಬರತೇತಿ ? ಎಂದು ವಿಚಾರಿಸಿ ಕೂಡಲೆ ಭೀಮಪ್ಪನ ಕಡೆಗೆ ನೋಡಿ " ತಂಬಾಕ ಸೇದ ಬ್ಯಾಲಾ " ಎಂದು ಮಲ್ಲ ಕರೆದ.

" ಯಾನ ಹೊತ್ತs ಹೋಯ್ತುಲ್ಲ ! ಇನ್ನs ದನೀನ ಕಾಲಗಿಂದ ಹೋಡೀ ಬೇಕು " ಎಂದು ಹಾಗೇ ಒಂದೆರಡು ಹೆಜ್ಜೆ ಮುಂದೆ ಹೊರಟ ಅವನ ಮನಸ್ಸಿನಲ್ಲಿ ಇತ್ತ ಬರುವದು ಇರಲಿಲ್ಲವೇನೋ.

ಆದರೂ ಮಲ್ಲ " ತಗೀ ಅಂತ ಬಾ. ಇನ್ನs ಹೊತ್ತ ಏತಿ, ತಾಸ ! " ಎಂದು ಮತ್ತೊಮ್ಮೆ ಕರೆದ. ವ್ಯವಹಾರವನ್ನು ಲಕ್ಷ್ಯಕ್ಕೆ ತಂದು ಭೀಮಪ್ಪ ಬರಬೇಕಾಯಿತು. ಮಲ್ಲ ಎದ್ದು ಕಂಬಳಿ ಹಾಸಿಕೊಟ್ಟ. ಭೀಮಪ್ಪ ಬಂದು ಕೂಡುತ್ತ " ಯಾಕ ಇನ್ನs ಮನ್ಯಾಗ ಇದೀ ? ದನಗೋಳ ಮಳಗ್ಯಾಗs ಇಲ್ಲಾ ? " ಎಂದು ಕೇಳಿದ.

" ಈಗ ಅನಕಾರ ಮಳಿಗ್ಯಾಗ ಇದಾವ, ದನಾ ಕರಾ ಎಲ್ಲಾ. ಹಾಲ ಕೊಡು ಎಮ್ಮಿನೂ ಅಲ್ಲೇ ಏತಿ. ಆದರ ಇನ್ನೊಂದ ತಿಂಗಳದಾಗ ಎಲ್ಲ್ಯರ ಜಾಗ ನೋಡಿ ಮನೀಗಿ ತರಬೇಕಲಾ, ಮಳಗಾಲ ಬಂತು ! "

" ಏತ್ಯಲ್ಲ ; ಅಳ್ಯಾನ ಮನೀನ ದೊಡ್ಡದ " ಎಂದ ಭೀಮಪ್ಪ.

" ಅವರ ಮನೀ ಇದ್ದರ ನಮಗ್ಯಾನ ಆಯ್ತು ? " ಎಂದು ಮಲ್ಲ ನುಡಿದ ಭೀಮನ ಮಾತಿನ ಮಲಕನ್ನರಿತು.

" ಯಾಕ ! " ಎಂದು ಆಶ್ಚರ್ಯವನ್ನು ನಟಿಸುತ್ತ ಕೇಳಿದ ಭೀಮ.

" ಯಾನ ಗೊತ್ತ ಇಲ್ಲದಂಗs ಮಾತಾಡತಿಯಲ್ಲ ? ಸೂಲಗಿತ್ತಿಯಾಗಿ ಕೂಸಿನಾs ನೋಡಿಲ್ಲ ಅಂದರ ! " ಎಂದು ಸ್ವಲ್ಪ ಏರಿಕೆಯ ಸ್ವರದಲ್ಲಿ ಕೇಳಿದ, ಮಲ್ಲ ಹೀಯಾಳಿಸುತ್ತ.

ಭೀಮ ಸ್ವಲ್ಪ ಬೆದರಿದ. ಮುಖ ಬಿಳುಪೇರಿತು. ಮನದಲ್ಲಿ ಯೋಚಿಸಿ ಹತ್ತಿದ. ಕೆಮ್ಮು ನಿಂತ ಮೇಲೆ " ಚಿಮ್ಮವ್ವ ಹುಚ್ಚ ಹೆಂಗಸಾ. ತಿಳುವಳಿಕಿ ಇಲ್ಲಾ. ಹಾಂಗ ಮಾಡಬಾರದ ಖರೇ ಯಾನ ಮಾಡ್ಯೋದಾ ? " ಎಂದು ಮಾತಿನ ಕೊನೆಯೊಡನೆ ಮತ್ತೆ ಕೆಮ್ಮುತ್ತ ಚಿಲುಮೆಯನ್ನು ಮಲ್ಲನ ಕೈಗೆ ಕೊಟ್ಟ.

"ಚಿಮ್ಮವ್ವ ಒಬ್ಬಾಕಿ ಯಾನ ಮಾಡತಾಳು? ಇರತಾರಲ್ಲ ನಾಲ್ಕ ಮಂದಿ, ಹತ್ಯಾಕಿನವರ, ಎರಡ ಕಪ್ಪ ಚಹಾಕ್ಕ! ಅವರ್‍ಹ ಓಡ್ಯಾಡಿ ಬರತಾರಂತ್‍ಹ ಆಕಿ ಜಿಗದಾಡತಾಳ! ಅವರಿಗೂ ಬಂದೋತಲ್ಲಾ ವ್ಯಾಳೇ?" ಎಂದು ಮಲ್ಲಪ್ಪ ಮಾತನ್ನು ಭೀಮನ ಮೇಲೆ ಹೊರಳಿಸಿಯೇ ನುಡಿದ.

ಭೀಮ ಹಣೆಗೆ ಗಂಟುಹಾಕಿ "ಎಲ್ಲಾ ಬಿಟ್ಟ ನಮ್ಮ ಸುತ್ತ ಯಾಕೋಽಪಾ? ಆಕಿ ನಡೀ ಅನ್ನಾಣಾ ಹೋಗವರಾ ನಾವ. ಅಣ್ಣ ತಮ್ಮರ ಅಂದ ಮ್ಯಾಲ ಹೋಗಕಬ್ಯಾಡಾ?" ಎಂದು ಕೇಳಹತ್ತಿದ.

ಅಷ್ಟರಲ್ಲಿ ರತ್ನವ್ವ ಮಳಿಗೆಯಿಂದ ಹಾಲಿನ ತಂಬಿಗೆ ತಕ್ಕೊಂಡು ಬಂದಳು. ಅವಳನ್ನು ಮನೆಯ ಹೊರಗಿರುವಾಗಲೇ ಹಿಂದಿನಿಂದ ಯಾವಳೋ ಒಬ್ಬ ಹೆಂಗಸು "ಹೋಽಂದ್‍ಹ ರತ್ನಾ ಇಂಥಾ ಕತ್ತ್ರ್ಯಾಗ ಯಾಕ ಇಟ್ಟೇದಿ ಮಗಳನಾ ಅಲ್ಲೇ! ನಿಮಗ್ಯಾನ ಈಗ ಹನ್ಯಾಡ ಪೋಽರಿಗಳ ಇದಾವ ತಾಯಿ! ಹೊಟ್ಟೆಗಿ ಹಾಕವಾಳ, ದಿನಾ ಹರಿವತ್ತ ಎದ್ದರ ಬೈ ಬೈ ಬೈ! ಒಂದ್‍ಹ ಸವನ ಬೈಯ್ಯತಾಳ! ಗಡಿಗಬಾಯಿ ಇದ್ದರ ಒಡದಹೋಗೋದಾ! ಪೋಽರಿ ಹ್ಯಾಂಗ ಇರಬೇಕು? ನಮಗ್ಯಾನ ನೋಡೋದ ಆಗುದುಲ್ಲವ್ವ! ನಿಮ್ಮ ಮನೀಗಿ ಕರ ಕೊಂಡ ಬರ್‍ರಿ. ಈಗ್ಯಾನ ನಿನ್ನ ಮಗಳ ಗಂಡನ ಬೇಡಿ, ಎದ್ದ ಹೊಂಟದಾಳು? ಇಂಥಾ ಪರೀಲೆ ಅಲ್ಲ್ಯಾಕ ಇಡೋದ?" ಎಂದು ಏನೇನೋ ಹೇಳುತ್ತ ತಲೆ ಬಾಗಿಲವರೆಗೆ ಬಂದಳು. ಒಳಗೆ ಭೀಮಪ್ಪ ಕುಳಿತಿದ್ದನ್ನು ಕಂಡು, ಅಲ್ಲಿಂದಲೇ ನಾಲಿಗೆ ಕಚ್ಚಿಕೊಂಡು ತಿರುಗಿದಳು.

ಎದುರಿಗೆ ಭೀಮಪ್ಪನನ್ನು ಕಂಡೋ ಏನೋ ರತ್ನವ್ವ "ಬೇಕಲ್ಲ; ಅವರ ಹೆಣಕ್‍ಹ ಹಡದ ಇಟ್ಟೆನ್ನ್. ಆಕಿಗೂ ಒಂದ್‍ಹ ಹೆಣ್ಣು ಮಗಳ ಏತಿ. ಆಕೇದೂ ನಮ್ಮದ್‍ಹ ಗತಿ ಆದೋತ. ಎಲ್ಲಿ ಹೋಗತೇತಿ? ಈ ಕೈಲೆ ಮಾಡಿದ, ಇದ್‍ಹ ಕೈಲೆ ಕಳೀಕಬೇಕು. ನನ್ನ ಮಗಳ ಕಳ ಕಳ ಕಳ ಮಾಡಕ ಹತ್ತಿದಾಳೂ! ಅದ ಅವರಿಗೂ ಬಡೀದ ಇರತೇತಿ? ಎಲ್ಲಾರಿಗೂ ಬಡೀತೇತಿ, ಮಾಡವರಿಗೂ ಮಾಡಿದವರಿಗೂ!" ಎಂದು ಅನ್ನುತ್ತ ಒಳಗೆ ಬಂದಳು. ಹಾಲಿನ ತಂಬಿಗೆ ಯನ್ನು ಇಟ್ಟು, ಹಿಂದಿರುಗಿ "ಬಾರಕ್ಕ, ಇವರ್‍ಹ ಎಲ್ಲಾ ಕೂಡಿ ನನ್ನ ಮಗಳ ವಗತನಾ ಹರೀಕ ನಿಂತೀದಾರವ್ವ!" ಎಂದು ಅವಳು ಹೋದುದನ್ನರಿಯ ದೆಯೇ ಭೀಮನನ್ನುದ್ದೇಶಿಸಿ ನುಡಿದಳು.

"ನಾವ ಯಾದಕ ಹರೀನು ರತ್ನಾ, ನಮಗ್ಯಾನ ಹೆಣ್ಣುಮಕ್ಕಳ ಇಲ್ಲೋ ! ಯಾನೊ ! ನಾನ ಎಲ್ಲಾ ಮುರದ ಹಾಕಕಾ ಹತ್ತಿದ್ದ್ಯಾನು."

"ಎಲ್ಲಾ ಗೊತ್ತ ಏತಿ ಏಳ ; ಮೊನ್ನಿ ಮಂಗಸೂಳಿಗಿ ಹೋಗಿ ಯಾನ ಮಾಡಿಕೊಂಡ ಬಂದಿರಿ ? ಇಲ್ಲದ ಹಾರಿಸಿ ಮಾತಾಡಬ್ಯಾಡ" ಎಂದು ಅವನ ತಪ್ಪನ್ನು ಅವನ ಮುಂದಿಟ್ಟು ನುಡಿದಳು

ಕಳ್ಳ ಕದಿಯುವಾಗ ಸಿಕ್ಕಂತೆ ಭೀಮನ ಸ್ಥಿತಿಯಾಯಿತು. "ಯಾನ ಮಾಡಕೊಂಡ ಬರೋದ ? ಹೀಂಗ ಎಲ್ಲ್ಯರ ಮದಿವಿ ಆಗಕಬಲ್ಲವು ? ಥಡ ಥಡೀತ ಮನ್ಯಾಗ ಸೊಸೀ ಇದಾಳ, ಮತ್ತೊಂದ ಮದವೀ ಮಾಡತ್ಯಾನಂದರ್ಕ ಯಾರ್‍ಯರ ಹೆಣ್ಣು ಕೊಟ್ಟಾರು ? ಮತ್ತ ಚಿಮ್ಮವ್ವ ನಾಲ್ಕ ಊರಿಗಿ ಅಸ್ಕರಿ ಆಗಿದಾಳ. ಆಕಿ ಕೈಯಾಗ ನಿಮ್ಮ ತಾರಕ್ಕ ಅಂತ್ಯ ತಾಳೀದಾಳು !"

"ಯಾನ ತಾಳತಾಳೂ ! ಮನ್ಯಾಗಿಂದ ಯಾವಾಗ ಹೊರಗ ಹಾಕ್ಯಾ ನಂತ, ಅಡಕೋತಿನಾಗ ಅಡಕಿ ಹಿಡಿದಂಗ ಹಿಡದ್ದಾಳ ಪೋರಿನಾ !"

"ಹುಚ್ಚ ಹೆಂಗಸ...."

"ಹುಚ್ಚ ಯಾಕ ಆದಾಳು ? ಒಳ್ಳೇ ಬೆರಕಿ ಇದಾಳ ? ಮುದಾಮ್ಕ ಮತ್ತೊಂದ ಮಾಡ್ಯಾನಂತ ಆಕಿ ಮನಸಿನ್ಯಾಗ ಕುದೀತಾಳ ಎಂದಿಂದೂ !" ಭೀಮಪ್ಪ ಹೊರಟನೆಂದು ರತ್ನವ್ವನ ದನಿಯೇರಿತು.

"ಯಾತರ ಕುದೀ ! ನಾಲ್ಕ ದಿನಾ ಅತ್ತಾ ಇತ್ತಾ ಓಡ್ಯಾಡಿ ಸುಮ ಕೂಡಾಕೀ, ಇದ್ದಾವರ ಮನಸೂ ಒಡಕೊಂಡ. ನಾಳಿ ಕೊಯ್ದು ಬೊಟ್ಟಿನ ಮ್ಯಾಲ ಯಾರ ಉಚ್ಚಿ ಹೋಯೀಕಿಲ್ಲದ ಕೂತಾಳ ಆಯ್ತು" ಎಂದು ಮೃದು ವಾಗಿಯೇ ಹೇಳಿ, ತಲೆಬಾಗಿಲನ್ನು ದಾಟಿದ ಭೀಮಪ್ಪ.

"ಸುಮ್ಮ ಯಾಕ ಕೂಡತಾಳು ? ಮಾಡ್ಲಿ ಅಲ್ಲಾ, ಮಗ್ಗ ಮತ್ತ ಹತ್ತ ಹೆಣ್ಣ ! ನಮದ ಯಾನ ಹೋಗತೇತಿ ? ಇದ್ದಾರಲ್ಲ ಎಲ್ಲಾರೂ ಕೂಡಿ ತಿಂದ ನಮ್ಮ ಪೋರಿಗಿ ಯಾನ ನೆಟಿವಿ ಜೋಳರ ತಪ್ಪಿಲ್ಲ, ಎಲ್ಲಿ ಇದ್ದರೂ ? ತಂದ ಕುಡತಾರ ತಲೀಲೆ. ಅಂದಮ್ಯಾಲ ನಾವ್ಯಾಕ ಅಲ್ಲಿ ಪೋರೀನಾ ಇಡೂನು ? ನಾಳೀ ಕರಕೊಂಡಬರತೇವ ನಮ್ಮ ಮನೀಗಿ ನಮ್ಮ ಮಗಳನಾ" ಎಂದು ಭೀಮನಿಗೆ ಕೇಳಿಬರುವಂತೆ ಒದರಿ ಹೇಳಿದಳು.

ಈ ಮಾತು ಭೀಮಪ್ಪನ ಕಿವಿಗೆ ಕಟುವೆನಿಸಿದರೂ ಮನಸ್ಸಿಗೆ ಆನಂದವನ್ನೇ ಉಂಟುಮಾಡಿರಬೇಕು.

ಮರುದಿನ ಬೆಳಗಾಗುವುದರಲ್ಲಿಯೇ ಭೀಮಪ್ಪ ಚಿಮ್ಮವ್ವನನ್ನು ಕರೆದುಕೊಂಡು ಯಾರಿಗೂ ತಿಳಿಯದಂತೆ ಮಂಗಸೂಳಿಗೆ ಹೋದ. ಈ ಮನೆಯನ್ನು ನೋಡಿದ್ದು, ಹೊಂದುವಂತಿದ್ದುದು, ಊರಲ್ಲಿ ಒಂದು ನೊಲೆಗೂಸಿಗೂ ಗೊತ್ತಿಲ್ಲವೆಂದು ಭಾವಿಸಿದ ಅವನ ಭಾವನೆ ನಿನ್ನೆಯೇ ರತ್ನವ್ವನ ಮಾತಿನ ಮೇಲಿಂದ ಹುಸಿಯಾಗಿದ್ದಿತು. ಇವರಿಗೂ ಯಾರಾದರೂ ಹೋಗಿ ಕಿವಿಯಲ್ಲಿ ಊದಿದರೆ ಈ ಮನೆಯೂ ಕೈಬಿಟ್ಟೀತೆಂದು ಅವನ ಹೆದರಿಕೆ. ಇಂಥ ಅಗತ್ಯವಿದ್ದ ಮನೆ ಕೈಬಿಟ್ಟರೆ ಮುಂದೆ ತಾವು ಮದಿವೆ ಮಾಡುವದೂ ಮುಗಿಲಿನಲ್ಲಿ ಚಿಕ್ಕೆ ಎಣಿಸಿದಂತೆಯೇ ಎಂದು ಯೋಚಿಸಿ, ಇಂದು ಹೋಗಿ, ಅವರು ಹೇಳಿದಂತೆ ಒಪ್ಪಿ, ಮದಿವೆ ನಿಶ್ಚಯ ಮಾಡಿಕೊಂಡೇ ಸಂಜೆಗೆ ಮರಳಿದರು. ಮೋಟಾರು ಇಳಿದು ಊರ ಹಾದಿ ಹಿಡಿದ ಮೇಲೆ "ಯಾನ ಯಾಕ ಆಗವಲ್ತು, ಒಮ್ಮೆ ಹೆಣ್ಣು ಗಟ್ಟಿ ಆಯ್ತು" ಎಂದು ನುಡಿದ ಭೀಮಪ್ಪ, ತಲೆಯ ಮೇಲಿನ ಹೊರೆ ಇಳಿದಂತಾಗಿ.

"ಗಟ್ಟಿ ಆಯ್ತು ಖರೇ. ಇನ್ನs ಸುಸೂತ್ರ ದಂಡಿಗಿ ಹತ್ತಕಬೇಕಲ್ಲ !" ಎಂದು ಮುಂದಿನ ಯೋಚನೆಯಲ್ಲಿದ್ದ ಚಿಮ್ಮವ್ವ ನುಡಿದಳು.

"ದಂಡಿಗಿ ಹತ್ತಲಾಕ ಯಾನ ? ಮದವೀ ಕಾಳಜೀನs ಮಾಡತಿ ಅಲ್ಲ್ಯೈನಾ ? ಯಾರರ ತಿನ್ನತಾರ ಯಾರರ ಮಾಡತಾರು ; ನಾಲ್ಕು ದುಡ್ಡs ಹೆಚ್ಚು ಖರ್ಚ ಆದಾವ. ಇದs ಅಲ್ಲ ?"

"ಅದ ಅನಲಿಲ್ಲ ನಾ ; ದುಡ್ಡಿಂದ ಯಾನಾ ? ಯಾನsರ ಆದೋತ ಆದರ ಇದರ ಗುಬಸ ಆಯ್ತು. ಮುಂದ ಮಗಳ ಜನ್ಮ ಹ್ಯಾಂಗs ಅಂತ ನನ್ನ ಎದೀ ಹಾರಕಹತ್ತೇತಿ."

"ಆ ಮಂದಿ ಅಂಥಾದ ಯಾನ ಅಲ್ಲ ತಗೋ. ಇದs ಹೆಣ್ಣು ಆಗೂ ತನಕಾ ಆವಕ ಬಾಯಿಗಿ ಬೆಳ್ಳಗ ಆಗೇತಿ ! ಅಂಥಾವರ ಇದ್ದರ ಹೀಂಗ ನಿಂತ ಕಾಲಮ್ಯಾಲ ಗಟ್ಟಿಮಾಡಿರೋರ ಯಾನ ? ಎಲ್ಲಿ ಒಮ್ಮೆ ಅವರ ಸೋದರಮಾವ ಬಂದ ಹೋದಾ, ಅಷ್ಟರ ಮ್ಯಾಲs ಯಾದೀ ಮಾಡಿರು. ಈ ಮನಿ

ಬಿಟ್ಟೀರ—ಅಕ್ಕ್ಯಾತಾಯಿನ ಕೊಡೋದ ಬ್ಯಾಡಂತ—ನಮುಗರ ಯಾನ ಹೆಣ್ಣ ಆಗತಿತ್ತ ಅಂತೀ ಯಾನ ?" ಎಂದು ಕೇಳಿದ ಭೀಮಪ್ಪ, ತಾವು ಮಾಡಿದ ಕಾರ್ಯ ಗೌರವವನ್ನು ತೋರಿಸುತ್ತ.

"ಅದಕ ನಾನೂ ಸುಮ್ಮ ಆದಿನಲಾ ! ಪೋರೀನಾ ಮಾಡಕೋವಾರ ಯಾಕ, ಹುಡುಗನ ತಲಿಮ್ಯಾಲ ಅಕ್ಕಿಕಾಳ ಒಮ್ಮಿ ಬೀಳಲೀ ಅಂತ."

"ಬಿದ್ದಹೋದೂ ; ಇನ್ಯಾನ ಬೀಳೋದರಾಗ ಉಳದೇತಿ ?" ಸ್ವಲ್ಪ ತಡೆದು "ನೀ ಹಿಂಗ ಹೋಗು ; ನಾ ಮಳಿಗಿ ಕಡೆ ಹೋಗಿ ಬರತ್ಯಾನು. ಊರಾಗ ಕೂಡಿ ಹೋಗಾದ ಬ್ಯಾಡ" ಎಂದು ಅಡವೀ ಬಿದ್ದು, ಹಾದಿ ಬಿಟ್ಟು ಹತ್ತೆಂಟು ಹೆಜ್ಜೆ ಹೋಗಿ, ಹಿಂದೆ ಹೊರಳಿ " ಹೋಗ ಇನ್ನ ಖುಶಾಲ, ಬೇಂಡ ಹಚ್ಚಿ ಎರಡೂ ಮದಿವೀ ಮಾಡೂನು " ಎಂದು ಹೇಳಿ ಹೊರಟ.

"ಈಗs ಊರಾಗ ಯಾರ ಮುಂದ ಮಾತಾಡಬ್ಯಾಡ ಙ್ಞ ! ಇಲ್ಲಾದರ ಎಲ್ಲಾ...."

ಚಿಮ್ಮವ್ವನಿಗೆ ಮುಂದೆ ಮಾತಾಡಗೊಡದೆ ಭೀಮಪ್ಪ ಹೇಳಿದ. "ಹುಚ್ಚ ಇದೀಯಾನ ನೀ ?"

## ೧೫

ಬೇಸಿಗೆಯ ಮುಂಜಾವಿನ ತಂಗಾಳಿಯು ತಿಳಿಯಾಗಿ ಅನಂತನ ಕೋಣೆಯಲ್ಲಿ ಬೀಸಿದ ಮೇಲೆ ಬೆಳತನಕ ಎಚ್ಚರಿದ್ದ ಆತನಿಗೆ ನಿದ್ರೆ ಬರುವದು ; ರವಿಯ ಬೆಚ್ಚಗಿನ ಕಿರಣಸಮೂಹವು ಬೆಳಕಿಂಡಿಯೊಳಗಿಂದ ಹಾಯ್ದು ಬಂದು, ಅವನ ಮುಖದ ಮೇಲೆ ಬೀಳಲು ಎಚ್ಚರಾಗುವದು. ಆದರೆ ಅವನ ಮೈಯಲ್ಲಿ ಉತ್ಸಾಹ ಮಾತ್ರ ಬರುತ್ತಿದ್ದಿಲ್ಲ. ಆತನ ಅಂಗಾಂಗಗಳಲ್ಲೆಲ್ಲ. ಆಲಸ್ಯವು ವ್ಯಾಪಿಸಿರುವುದು. ಮುಖದಲ್ಲಿ ಯಾವಾಗಲೂ ಒಂದು ಚಿಂತೆಯ ಮ್ಲಾನತೆ ನೆಲಸಿರುತ್ತಿದ್ದಿತು. ಅಭ್ಯಾಸಕ್ಕೆ ಕುಳಿತನೆಂದರೆ ತೆರೆದಿಟ್ಟ ಪುಸ್ತಕ ಇಟ್ಟಂತೆಯೇ ಇರುವದು. ಆತ ಏನೋ ಧೇನಿಸುತ್ತ ಹಾಗೇ ಕುಳಿತಿರುವ. ತಾಯಿ ಬಂದು

ಕರೆಯಲು ಉಂಡು ಮನಸ್ಸಿಲ್ಲದೆ ಸಾಲೆಗೆ ಹೋಗುವ; ಬರುವ. ಸುಖ ಸಮಾಧಾನವಿಲ್ಲ; ಅಭ್ಯಾಸದಲ್ಲಿ ಉತ್ಸಾಹವಿಲ್ಲ; ದುಃಖವಿದೆಯೋ ಅಂಬುದು ಅವನಿಗೆ ಚೆನ್ನಾಗಿ ತಿಳಿಯದು. ಆನಂದಾಭಿಲಾಷೆಯನ್ನಂತೂ ತ್ಯಜಿಸಿಯೇ ಬಿಟ್ಟಿದ್ದ. ಅವನ ಸ್ಥಿತಿಯು ಹುಟ್ಟುಬಡವನಿಗೆ ಹೇಗೋ ಧನ ಸಿಕ್ಕು, ನೋಡು ನೋಡುತ್ತಿರಲಾಗಿ ಅನ್ಯರ ಸೊತ್ತಾಗಿ ಹೋಗಿ ಬಿಡಲು ಹಿಡಿಯುವ ಹುಚ್ಚ ನಂತೆ ಆಗಿದ್ದಿತು. ತನ್ನ ಸುಖದ ವೃಕ್ಷವು ಮೊಳಕೆಯಲ್ಲಿಯೇ ಬಾಡಿಹೋಯಿ ತೆಂದೂ ಅದೆಂದೂ ಚಿಗುರೊಡೆಯದೆಂದೂ, ಅದಲ್ಲಿಯೇ ನಷ್ಟವಾಯಿತೆಂದೂ ಆ ವಿಶಾಲ ಸುಖವೃಕ್ಷವನ್ನು ತನ್ನ ಜೀವಿತದಲ್ಲಿಯೇ ಇನ್ನು ಕಾಣಲಾರೆನೆಂದೂ ಅನಂತನು ಅರಿತುಕೊಂಡಿದ್ದಾನೆ. ಇನ್ನು ತನಗೆ ಅಭ್ಯಾಸ ಪರೀಕ್ಷೆಗಳೆಲ್ಲ ಏತಕ್ಕೆ ಬೇಕೆಂದು ಅವನ ಮನಸ್ಸು ಅವನಿಗೆ ಕೇಳುತ್ತಿದೆ. ಒಂದೊಂದು ದಿನ ಎಲ್ಲವನ್ನೂ ಬಿಟ್ಟು, ಹಾಸಿಗೆಯ ಮೇಲೆ ಸುಮ್ಮನೆ ಉರುಳಾಡುವನು. ದೀಪ ಇದ್ದಲ್ಲಿಯೇ ಉರಿಯುತ್ತಿರುವುದು. ಸುಂದರಾಬಾಯಿ ಇದನ್ನೆಷ್ಟೋ ಸಲ ಕಂಡಿರುವಳು. ಒಂದೊಂದು ದಿನ "ಅಂತೂ, ಓದೋದ ಆಯ್ತೇನ ?" ಎಂದೂ ಕೇಳುವಳು. ಆಗ ಅನಂತ ಬೇಸರ ದನಿಯಲ್ಲಿ "ಆಯ್ತು !" ಎಂದು ಹೇಳಿ ದೀಪ ತೆಗೆದು ಮಲಗುತ್ತಿದ್ದ. ಅನಂತನ ಈ ಸ್ಥಿತಿಯು ಅವನ ತಂದೆ ರಾಮಪ್ಪನಿಗೂ ಗೊತ್ತಿಲ್ಲದಿಲ್ಲ. ಆದರೆ ಮ್ಯಾಟ್ರಿಕ್ಕಿನ ಅಭ್ಯಾಸವಿದೆ. ಹಗಲಿರುಳೂ ಕೂಡಿ ಓದಬೇಕಾಗುವದೆಂದು ಭಾವಿಸಿ ವಿಶೇಷವಾಗಿ ಅತ್ತ ಮನಸ್ಸು ಹಾಕುತ್ತಿರಲಿಲ್ಲ.

ಅದೇನು ತಿಳಿದುಕೊಂಡಿದ್ದಳೋ, ಸುಂದರಾಬಾಯಿ ಆಗಾಗ ತನ್ನ ಗಂಡನಿಗೆ ಸೊಸೆಯನ್ನು ಕರೆದು ತರಲು ಹೇಳುತ್ತಿದ್ದಳು. ಈಗಿನ ಹುಡುಗರು ಹೋಗಿಬರುತ್ತ ಇದ್ದರೆ ಒಳಿತು. ಒಮ್ಮೆಲೇ ದೊಡ್ಡವರಾಗಿ ಮನೆಗೆ ಬಂದರೆ, ಮನೆಯ ರೀತಿ ನಡತೆ ಗೊತ್ತಾಗುವದಿಲ್ಲವೆಂದು, ಅವಳ ಭಾವನೆ ಇರಬೇಕೆಂದು ರಾಮಪ್ಪನ ತಿಳಿವಳಿಕೆ. ಅದಕ್ಕಾಗಿ ಅವನು 'ದೊಡ್ಡವಳಾಗಲಿ; ತಂದರೆ ಬಂದೀತು; ಈಗ್ಯಾನ ಗಡಬಡಿ ?' ಎಂದು ಹೇಳಿ ಹೋಗಿಬಿಡುತ್ತಿದ್ದ. ಅವನ ವ್ಯಾಪಾರವೇನೋ ಅಂಗಡಿ ಏನೋ ಇದ್ದುಬಿಡುತ್ತಿದ್ದ.

ಮತ್ತೂ ಜೀವ ತಾಳದೆ ಸುಂದರಾಬಾಯಿ ಒಂದು ದಿನ ರಾಮಪ್ಪ ಮನೆಗೆ ಊಟಕ್ಕೆ ಬಂದಾಗ "ಅನಂತ ಹಿಂಗ್ಯಾಕ ಆಗಿದಾನು ?" ಎಂದು ಕೇಳಿದಳು.

"ಅವನಿಗೇನ ಆಗೇತಿ ?"

ಅದನ್ನೇ ಅವಳು ಕೇಳಿದ್ದು. ಅವಳೇನು ಹೇಳುವಳು ಪಾಪ! ಅನಂತನ ಮನಸ್ಥಿತಿಯ ಚಿತ್ರವನ್ನು ಒಬ್ಬೊಬ್ಬರು ಒಂದೊಂದು ರೀತಿ ಬರೆದಿದ್ದರು. ರಾಮಪ್ಪ ಊಟಮಾಡುತ್ತ ಬಹಳ ಹೊತ್ತಿನ ಮೇಲೆ "ಮ್ಯಾಟ್ರಿಕ್ಕಿನ ಅಭ್ಯಾಸ! ಭಾಳ ಓದಬೇಕು, ಅದಕ ಹಾಂಗ ಆಗಿದಾನು" ಎಂದುಸುರಿದ.

"ಅಭ್ಯಾಸ ಮಾಡಿರ ಯಾನಾಯ್ತು ? ಹೀಂಗಾಽ ಮನ್ಯಾಗಿನ ಮಂದೀ ನ್ಯಾಲ ಹರೀಹಾಯ್ತಾರ್‍ಯಾನ ?"

"ಓದಿ ಓದಿ ಬೇಸರ ಬಂದ ಹಾಂಗ ಮಾಡ್ತಾನ."

ನಡುವೆಯೇ ಅವನ ಮಾತು ತಡೆದು "ಇಲ್ಲದ ಒಂದ ಹೇಳಾವರ ನೀವ! ಬ್ಯಾಸಗಿಯಿಂದ ಹಿಂಗ್ಯಾಕೋ ಆಗಿದಾನ! ಅತ್ತಿ ಮನೀಗಿ ಹೋಗಿ ನಾಲ್ಕದಿನಾ ನಿಂತ ಬಂದ; ಆವ್ಯಾಲ ಯಾನ ಇಲ್ಲಽ. ಒಂದ ವರ್ಷ ಆತ ನೋಡ ಪೋರಿ ದೊಡ್ಡದ ಆಗೇತಿ ಕರಕೊಂಡು ಬರ್‍ರ್ಯಲಾ" ಎಂದು ಸೊಸೆಯನ್ನು ತರುವುದರ ಕಡೆಗೆ ಮಾತು ಹೊರಳಿಸಿದಳು, ಸುಂದರವ್ವ.

ರಾಮಪ್ಪನಿಗೆ ಈ ವಿಚಾರ ಸರಿಬರಲಿಲ್ಲ. ಸುಮ್ಮನೆ ಊಟ ಮಾಡ ತೊಡಗಿದ.

ಮುಂದೆ ನಾಲ್ಕೆಂಟು ದಿನಗಳಾದಮೇಲೆ ಒಂದುದಿನ ರಾಮಣ್ಣ ಮುಂಜಾನೆ ಸ್ನಾನಮಾಡಿ ಅಂಗಡಿಗೆ ಹೋದವನು ಒಂದು ತಾಸಿನಲ್ಲಿಯೇ ಮನೆಗೆ ಮರಳಿ ಬಂದ. ಅದೂ ಊರಿಗೆ ಹೋಗುವ ಸಿದ್ಧತೆಯಲ್ಲಿ! ಹೀಗೆ ಆಕಸ್ಮಾತ್ತಾಗಿ ಗಂಡ ಮನೆಗೆ ಬಂದುದರಿಂದ ಸುಂದರಾಬಾಯಿ ಆಶ್ಚರ್ಯದಿಂದ ಅಡಿಗೆಯ ಮನೆಯಿಂದ ಹೊರಗೆ ಬಂದು, "ಈಗ್ಯಾಕಾ ಬಂದಿರಿ ಮನೀಗಿ ?" ಎಂದು ಕೇಳಿದಳು. ಊರಿಗೆ ಹೊರಟಾಗ ಅಡ್ಡಮಾತು ಹಾಕಬಾರದೆಂದು ಹೆಚ್ಚಿಗೆ ಕೇಳಲಿಲ್ಲ.

"ಚಂದೂರಿಗಿ ಹೋಗಿಬರತ್ಯಾನ ಎರಡು ದಿನಾ. ಈಗ ಎಲ್ಲಾ ರತ್ನಾಂದ ಸಿಸ್ತ ಆಗೇತಿ ಅನ್ನೂದರಾಗ...."

ಚಂದೂರಿನ ಮಾತು ಹೊರಟೊಡನೆಯೇ ಅನಂತ ಕೋಣೆಯೊಳಗಿಂದ ಎದ್ದು ಬಂದು ನಡುವೆಯೇ ಬಾಯಿ ಹಾಕಿ "ಈಗ್ಯಾಕ ಬಾ ಅಂತ ಹೇಳಿ ಕಳಿಸಿದಾರು ?" ಎಂದು ಕೇಳಿದ.

"ನಾಳಿನ ಶುಕ್ರವಾರs ಮದವೀ ಮಾಡತಾಳಂತ ಚಿಮ್ಮಾ, ಭರಮಗ ಮತ್ತೊಂದ. ನಾವ ಆಗs ಹೇಳಿದೆವು. ಅಲ್ಲಿ ಪೋರಿನಾ ಕೊಡಬ್ಯಾಡ ಅಂತ. ಆದರ ಮಲ್ಲಪ್ಪ ಕೇಳಲಿಲ್ಲ."

"ಅಂ! ಮತ್ತೊಂದ ಮದವೀ ಮಾಡತಾರು! ಯಾಕಂತ?" ಎಂದು ಚಂಚಲಚಿತ್ತನಾಗಿ ಅನಂತ ಕೇಳಿದ. ದನಿಯಲ್ಲಿ ಆವೇಗವಿತ್ತು. ಮನಸ್ಸು ಯಾವುದೋ ಒಂದು ಭೀತಿಗೆ ಒಳಗಾಗಿದ್ದಂತೆ ತೋರಿತು, ಆತನಿಗೆ.

"ಪೋರಿ ನೆರದಾಗಿಂದೂ ಅವರಿಗಿ ಇವರಿಗಿ ಹಾಂಗಾಂಗ ಇತ್ತಲ್ಲ! ಅತ್ತಿ ಸೊಸೀಗಿ ಹೊಂದಿಕೀ ಇಲ್ಲ! ಆದs ಯಾನರ ಇದ್ದೀತು!"

"ಮುಂದ ಆಕಿ ಹಾದೀ?" ಸುಂದರವ್ವ ವಿಚಾರಿಸಿದಳು.

"ಆಕೀದ ಯಾತರ ಹಾದಿ? ಬೇಕಾದರ ಇರಬೇಕು, ಸಾಕಾದರ ಹೋಗ ಬೇಕು! ಅವರಿಗ್ಯಾನ ಅದರದಾ?"

"ಈಗೆಲ್ಲಿ ಇದಾಳ, ತಾರಾ?" ಅನಂತ ಕೇಳಿದ.

"ಈಗನಕಾ ಪೋರೀ ಜನ್ಮs ಹಾಳಾದಂಗ ಆಯ್ತಲ್ಲ!" ನಿಟ್ಟುಸಿರೊಡನೆ ಮಾತು ಹೊರಬಿತ್ತು, ಸುಂದರವ್ವನ ಮುಖದಿಂದ. ಕಣ್ಣಲ್ಲಿ ನೀರೂ ಬಂದಿದ್ದವು.

ರಾಮಪ್ಪನ ಕಣ್ಣುಗಳಲ್ಲಿಯೂ ನೀರೂರಿದ್ದವು. ಕೈಯಿಂದ ಒರಸಿ ಕೊಂಡು "ಮೊನ್ನೆಲ್ಲ ತವರಮನೀಗೆ ಕರಕೊಂಡ ಬಂದಿದಾರಂತ. ಈಗೀಗ ಮತ್ತೊಂದ ಮಾಡೂಸಲುವಾಗೇ ಯಾನೋ ಭಾಳ ತ್ರಾಸ ಮಾಡಿಳ ಅಂತ ಪೋರಿಗೀ! ವ್ಯಾಳೀಕ ಹೊಟ್ಟೀಗಿ ಹಾಕಲಿಲ್ಲಾ; ಕೊಟ್ಟರ ಒಂದ ಹೊತ್ತ ಜೋಳದ ತವಡಿನ ರೊಟ್ಟೀ, ಕಾರ, ಇಲ್ಲಾದರ ಒಂದೊಂದು ದಿನಾ ಎರಡೆರಡು ದಿನಾ ಉಪಾಸs ಪೋರಿ! ನೆರೀ ಹೊರ್‍ಯಾವರ ನೋಡಲಾರದಕ್ಕ ರೊಟ್ಟಿ ಕೊಟ್ಟ ರಂತ!" ನಿಟ್ಟುಸುರು ಬರಲು ಮಾತು ನಿಂತಿತು. ಆಮೇಲೆ "ಸರಿ ದೊಡ್ಡಾಕಿ ಸೊಸೀ ಆಗಿದಾಳು ಹುಟ್ಟ ತಗೊಂಡ ಬಡೀಕ ಮೈಮೇಲ ಹೋಗಬೇಕೆಂದರ ಯಾನ? ಗಲ್ಲಿಗೆ ಓಡಿ ಬಂತ ಅಂತ ಪೋರಿ!"

"ಯಾವಾಗಾದರ ಚಿಮ್ಮಾ ಅಂಥಾಕೀ! ಇನ್ನ ಹೋಗಿ ನೀವ್ಯಾರ ಯಾನ ಮಾಡವರಾ?" ಎಂದು ಸುಂದರಾ ನಿರಾಶೆಯಿಂದ ಕೇಳಿದಳು.

"ಯಾನ ಮಾಡೋದ ಇಲ್ಲೇ ನಿಂತ ಯಾನ ಹೇಳಲಿ? ಅಲ್ಲಿ ಹೋದ

ಮ್ಯಾಲ ಯಾನ್ಯಾನ ಆಗೀತಿ ಯಾನ್ಯಾನ ಇಲ್ಲ ತಿಳಕೊಂಡ ಮ್ಯಾಲ ಯಾನ ಮಾಡೋದ ಮಾಡೋದಾ. ಇಂಥಾ ವ್ಯಾಳೇದಾಗ ನಾವೂ ಹೋಗದಿದ್ದರ ಹ್ಯಾಂಗ? ಒಂದೊಂದ ಪ್ರಸಂಗ ಇರತಾವು. ನೋಡೂಣು, ಚಿಮ್ಮವ್ವಗ ನಾಲ್ಕ ಮಾತ ಹೇಳಿ. ಇದ ಕೇಳಿ ರತ್ನಾ ಎದೀನಾ ಒಡಕೊಂಡ ಆದಾಳು, ಮಗಳದ ಹಿಂಗ್ಯಾಕ ಆಯ್ತಂತ! ಅಳಮನಸ್ಯಾ ಯಾನ ಹೇಳಾಂವ? ಒಂದ ಹೇಳಿದಾ ಒಂದ ಬಿಟ್ಟ" ಎಂದು ಹೊರಟೇನಿಂತ.

"ಅಂವಗರ ಯಾನ ಗೊತ್ತ ಇರೋದಾ" ಸ್ವಲ್ಪ ನಿಂತು "ನೀವ ಒಂದ ರೊಟ್ಟೇರs ತಿಂದ ಹೋಗರೆಲ್ಲ! ಅಲ್ಲಿ ಹೋಗಿ ಯಾವಾಗ ಕೂಳ್‌ಗಾಣತೀರ್‍ಯೋ ಯಾನೋ!" ಎಂದು ಬಾಗಿಲವರೆಗೆ ಸುಂದರಾ ಹೋದಳು.

"ಈಗ್ಯಾನ ಒಲ್ಲಿ; ಈಗ ಹೋಗತ್ಯಾನ ಸಾಯಕಲ್ಲಮ್ಯಾಲಿಂದ; ಚೆನ್ನ ಗಾಳಿ ಏತಿ" ಎಂದು ಸ್ವಲ್ಪ ಮುಂದೆ ಹೋಗಿ, ಹಿಂದೆ ಹೊರಳಿ "ಮನೀಕಡೆ ಜೋಕೆ ಲ್ಲಾ! ಸಂಜಿನಾಗ ಅನಂತಗ ಒಂದ ತಾಸ ಅಂಗಡಿ ತೆರಕೊಂಡ ಕೂಡನ್ನ" ಎಂದು ಹೇಳಿ ಹೋಗಿಬಿಟ್ಟ ರಾಮಣ್ಣಾ.

ಸುಂದರವ್ವ ಒಳಗೆ ಬಂದ ಮೇಲೆ ಅನಂತ "ಇನ್ಯಾಕ್ಯನ ಆಕೀ ಜನ್ಮ ಅಲ್ಲಿ ಆಗತೇತೀ? ಈಗs ಹಿಂಗ ಇತ್ತು. ಮತ್ತೊಂದ ಮಾಡಿದ ಮ್ಯಾಲ ಆಲ್ಲ್ಯಾನ ನಡೀತೇತಿ?" ಎಂದು ಹೇಳಿದ. ಆಗ ಸುಂದರವ್ವನಿಗೆ ಮಗನ ಮುಖದಲ್ಲಿ ಒಂದು ವರ್ಷದಿಂದಲೂ ಕಾಣದ ಒಂದು ಸಂತಸದ ಚಿಹ್ನೆ ಕಾಣಿಸಿತು.

ಎರಡು ಮೂರು ದಿನಗಳು ಕಳೆದುವು. ಒಂದು ದಿನ ಮಧ್ಯಾಹ್ನದಲ್ಲಿ ರಾಮಪ್ಪ ತಾರಕ್ಕನನ್ನು ಸಂಗಡ ಕರೆದುಕೊಂಡೇ ಊರಿಗೆ ಬಂದ. ಇನ್ನೂ ಬಾಗಿಲಲ್ಲಿರುವಾಗಲೇ ಸುಂದರಾಬಾಯಿ ಆತುರದಿಂದ ಕೇಳಿದಳು. "ಯಾನ್ಯಾನ ಆಯ್ತು?" ಎಂದು. ರಾಮಣ್ಣ ಕಣ್ಣುಸನ್ನೆಯಿಂದ ಹೆಂಡತಿಗೆ ಸುಮ್ಮನಿರಲು ಸೂಚಿಸಿ "ಯಾನ ಮಾಡಕೊಂಡ ಬರೋದಾ! ತಾರಕ್ಕನ ನಾಲ್ಕ ದಿನಾ ಕರಕೊಂಡ ಬಂದಿನು" ಎಂದು ಹೇಳಿ ಸುಮ್ಮನಾದ. ಹಿಂದಿನಿಂದ ತಾರಕ್ಕನೂ ಒಳಗೆ ಬಂದಳು. ಅವಳ ಮುಖ ಸಪ್ಪೆಯಾಗಿದ್ದಿತು. ಕಣ್ಣುಗಳೂ ಕೆಂಪಾಗಿದ್ದವು. ಸೋದರತ್ತೆಯನ್ನು ಕಂಡೊಡನೆ ಅವಳ ಕಣ್ಣಲ್ಲಿ ಇದುವರೆಗೆ ತಡೆದು ಹಿಡಿದ ನೀರುಗಳು ದಳದಳ ಹರಿಯಹತ್ತಿದವು. ಸುಂದರವ್ವನೂ ಕಣ್ಣೀರು ಸುರಿಸುತ್ತ ತಾರಕ್ಕನನ್ನು ತೆಕ್ಕೆಯಲ್ಲಿ ಹಿಡಿದು "ಯಾಕ ಅಳತೀ ಬಾ ತಾಯೀ!

ಯಾನ ಮಾಡೋದ ಅದಕ !" ಎಂದು ಸಮಾಧಾನಪಡಿಸುತ್ತ ಒಳಗೆ ಕರೆದೊಯ್ದು ಕೂಡಿಸಿದಳು. ಮುಂದೆ ತಾರಕ್ಕ ಸುಮ್ಮನೆ ಕುಳಿತಳು. ಇಳಿಹೊತ್ತಿಗೊಮ್ಮೆ "ಹುಡುಗೂರ ಎಲ್ಲಿ ಕಾಣಿಸುದುಲ್ಲ ?" ಎಂದು ಮೆಲ್ಲನೆ ಅತ್ತೆಯನ್ನು ಕೇಳಿದಳು. ಆದೇಕೊ, ಅನಂತ ಎಲ್ಲಿ ಹೋಗಿರುವನೆಂದು ಕೇಳಲು ಸಂಕೋಚಪಟ್ಟುಕೊಂಡು ಹೀಗೆ ಕೇಳಿದಳು. ಅದಕ್ಕೆ ಸುಂದರವ್ವ "ಸಾಲಿಗಿ ಹೋಗಿದಾತಾಯೀ ! ಅಭ್ಯಾಸ ಅಭ್ಯಾಸ ಅಂತ ಬರೀ ಬಡಕೋತಾ ! ಹಗಲೀ ರಾತ್ರಿ ಸವಡs ಇಲ್ಲ !" ಎಂದು ಹೇಳಿದಳು. ಅಷ್ಟರ ಮೇಲೆ ತಾರಕ್ಕ ಹೆಚ್ಚಿಗೆ ಮಾತಾಡಲಿಲ್ಲ. ಒಂದು ಚೀಲ ಹಾಸಿಕೊಂಡು ಸುಮ್ಮನೆ ಹೊರಳಾಡ ಹತ್ತಿದಳು. ನಡುವೆ ಸುಂದರಾಬಾಯಿಯೆ ಒಂದೆರಡು ಸಲ ಬಂದು, ಏನಾದರೂ ಕೇಳಿದರೂ "ಹೂಂ; ಇಲ್ಲ;" ಎಂದಿಷ್ಟೇ ಹೇಳಿ ಸುಮ್ಮನಾಗುತ್ತಿದ್ದಳು.

ಸಂಜೆ ಅನಂತ ಸಾಲೆಯಿಂದ ಬಂದ. ನಡುಮನೆಯಲ್ಲಿ ತಾರಕ್ಕ ಇದ್ದುದನ್ನು ಕಂಡು "ಯಾವಾಗ ಬಂದಳ ತಾರಾ ?" ಎಂದು ನಕ್ಕು ಕೇಳಿದ. ತಾರಕ್ಕ ಅಷ್ಟು ಉತ್ಸಾಹವನ್ನು ತೋರಿಸಲಿಲ್ಲ. ಆಶೆಯ ದೃಷ್ಟಿಯಿಂದ ಅನಂತನ ಕಡೆಗೊಮ್ಮೆ ನೋಡಿ "ಮದಿನದಾಗ ಬಂದೇವು" ಎಂದು ಹೇಳಿ ಸುಮ್ಮನಾದಳು. ಅನಂತ ಇನ್ನೂ ಏನೇನೋ ಕೇಳಬೇಕೆಂದಿದ್ದ. ಅವ್ವ ಅಲ್ಲೇ ಇದ್ದುದರಿಂದ ಕೇಳಲಿಲ್ಲ. ಹಿಂದೆ ಅವ್ವನ ಮುಂದೆಯೂ ತಾರಕ್ಕನ ಸಂಗಡ ಮಾತನಾಡುತ್ತಿದ್ದನಾದರೂ ಈಗ ಮಾತಾಡಬೇಕಾದರೆ ಅವನ ಮನಸ್ಸು ಅದೇಕೊ ಹಿಂಜರಿಯ ಹತ್ತಿತು. ಅನಂತ ತನ್ನ ಕೋಣೆಗೆ ಹೋದ. ಆದರೂ ಅವನ ಕಣ್ಣೆದುರಿಗೆ ತಾರಕ್ಕನ ನಿರುತ್ಸಾಹಿಯಾದ ಮೂರ್ತಿ ಕಾಣುತ್ತಿದ್ದಿತು. ಹಿಂದಿನ ಅವಳ ನಗೆ ಹಾರಾಟ ಉತ್ಸಾಹಗಳೆಲ್ಲಿ ? ಇಂದಿನ ಇಳಿಮೊಗ ಸಪ್ಪೆತನ ನಿರುತ್ಸಾಹಗಳೆಲ್ಲಿ ? ಆ ತಾರೆಯೇ ಇವಳೋ ! ಎಂದು ವಿಚಾರಿಸುತ್ತ ಕೆಲಹೊತ್ತು ಮೈಮರೆತು ನಿಂತಿದ್ದ.

ಅದೇ ದಿನ ಇರುಳು ರಾಮಪ್ಪ ಹಾಗೂ ಅವನ ಹೆಂಡತಿ ಸುಂದರವ್ವ ಬಹಳ ಹೊತ್ತಿನವರೆಗೆ ಮಾತನಾಡುತ್ತಿದ್ದರು ಹೀಗೆ....

"ಮಧ್ಯಾಹ್ನದಾಗ ನೀ ಬಂದ ಕೂಡ್ಲೆ ಕೇಳಿದಿ. ಆದರ ತಾರಾ ಇದ್ದಳು. ಆಕೀ ಮುಂದs ಹ್ಯಾಂಗ ಹೇಳೋದಾ ? ಪೋರಿ, ಮನಸಿಗಿ ಭಾಳ ಹಚಕೊಂಡಿ

ದಾಳು. ಅದಕ್ಕ ನಾ ನಿನಗೆ ಕಣ್ಣ ಹೊಡೆದಿನಿ. ನಿನಗ ಯಾನ ಹೇಳಿದಳು ?" ಎಂದು ರಾಮಪ್ಪ ಕೇಳಿದ.

"ಯಾನಿಲ್ಲ ; ಬರೇ ಮಲಗೇ ಇದಾಳು ! ಅಡಹೊತ್ತಿನ್ಯಾಗ ಚಹಾ ಕುಡೀ ಅಂದರೂ ಕುಡೀಲಿಲ್ಲ. ಬಾಯಾಗ ಒಂದ ತೊಟ್ಟ ನೀರೂ ಹಾಕಿಲ್ಲ ! ಯಾನ ಆಯ್ತು ?" ಎಂದಳು ಸುಂದರಾ, ಗಂಡನ ಮುಖದ ಕಡೆಗೆ ನೋಡುತ್ತ.

"ಆಗೋದ ಯಾನಾ ? ಮೋಕಳೀಕ ಮಾಡಿಬಿಟ್ಟಿತು."

"ಆ ! ಮೊನ್ನಿನ ಪೋರಿ ಅಲ್ಲ ! ನಮ್ಮ ಅಂತೂನಕಿಂತ ಎರಡ ವರ್ಷ ದೊಡ್ಡಾಕಿ. ಮೋಕಳೀಕ ಹ್ಯಾಂಗ ಮಾಡಿರ ? ಮತ್ತೊಂದ ಮಾಡಕೊಂಡರೂ ಮಾಡಕೋತಿದ್ದ ಅವ, ಇಕ್ಕೀನೂ ಇರತೀಳಲ್ಲ" ಸುಂದರವ್ವನ ದನಿಯಲ್ಲಿ ವ್ಯಾಕುಲತೆ ಇಡುಗಿತ್ತು, ಮೂಗಿನ ಮೇಲೆ ಬೆರಳಿತ್ತಾಗ.

"ಯಾನ ಇರತಾಳು ? ರತ್ನಾನಾ ಅಂದಳು : 'ಆಕಿ ಜನ್ಮ ಯಾನ ಅಲ್ಲಿ ದಂಡಿಗಿ ಹತ್ತೂಹಂಗಿಲ್ಲ ! ಇಟ್ಟ ಯಾನ ಮಾಡೋದಾ ? ಈಗ ನಾವ ಯಾನಾ ದರ ಕೇಳಿದರ ಮದವಿ ಖರ್ಚರ ಕೊಟ್ಟಾರು. ಮದವಿ ಮಾಡಿಕೊಂಡ ಮ್ಯಾಲ ಯಾನ ನಮಗ ಅವರ ದಾದ ತಗೋತಾರು ?' ಅಂತ"

"ಆಯ್ತು ; ಸುಟ್ಟಬರಲಿ ; ಆ ಖರ್ಚಗಿ ಓದ ! ಇವರಿಗ್ಯಾನ ಹನ್ಯಾಡ ಪೋರಿಗೋಳ ಇದ್ದೂ ಈಗ ?" ಸ್ವಲ್ಪ ಸುಮ್ಮನಿದ್ದು "ಯಾನ ಕೊಟ್ಟರು ?"

"ಮೂರನೂರ ರೂಪಾಯಿ ಕೊಟ್ಟರಲ್ಲ !"

"ಯಾನ ಕೊಟ್ಟರ ತಗೋ ! ಮನೀ ಸುಲದ ಸಾವಿರ ರೂಪಾಯಿ ಖರ್ಚ ಮಾಡಿದಾಳ ರತ್ನಾ, ಒಳಗಿನ ಒಬ್ಬ ಅಳ್ಯಾ ಅಂತ !"

"ಅದೆಲ್ಲಾ ಎಲ್ಲೀದ ಬಂದೋತು ? ನಮ್ಮ ಮತ್ತೆಲ್ಲಿ ಆದರ ಛಲೂ ಮನೀ ನೋಡಿ ಕೊಟ್ಟರ, ಮುದುಕಾ ಮುದುಕಿ ಮೊಮ್ಮಕ್ಕಳನಾರೇ ಕಂಡಾರು ? ಯಾನರ ಆದೋತ, ಅದಕ ನಾನೂ ಇರಲಿ ಅಯ್ನು."

"ಚಿಮ್ಮಾನಾ ಒಮ್ಮಿ ಕೇಳಿರಬಿಡಬೇಕಿಲ್ಲ ನೀ ? ಆಕಿ ತನಕ ಯಾರ ಕೇಳಾವರ ಇಲ್ಲಂತ ಭಾಳ ಬಡೇಜಾಂವ ಮಾಡತೀಳು !" ಕೆರಳಿದ ಸ್ವರದಲ್ಲಿ ಸುಂದರಾ ಹೇಳಿದಳು.

"ಇಲ್ಲಿಂದ ಹೋದ ದಿವಸ ಸಂಜಿಗೇ ಹೋದನೆಲ್ಲ; ನಾ ಇಲ್ಲಿಂದ ಹೋಗೂತನಕಾ ಮಲ್ಲಪ್ಪನ ವಿಚಾರ ಬ್ಯಾರೆ ಇತ್ತು. ನಾಲ್ಕು ಮಂದಿ ಅಣ್ಣ ತಮ್ಮರಾ ತಾವಾ ಕೂಡಿ, ಮದವೀನ ಮಾಡಗುಡೋದ ಇಲ್ಲಂತ. ಆದರ ನಾ ಹೇಳ್ನಿ ಅವರಿಗಿ, 'ಹೀಂಗಮಾಡಿದರ ಅವರ ಮತ್ತೆಲ್ಲಿರ ಹೋಗಿ ಮದವಿ ಮಾಡಕೊಂಡ ಬರತಾರ, ಇನ್ನ್ಯಾನ ನಿಲ್ಲೂದುಲ್ಲ. ಸರಳ ಆಕಿನಾನ ಒಂದ ಮಾತ ಕರವ ಕೇಳೂನು. ಯಾನ ಅಂತಾಳ, ಅಂದರ ಆಕ್ಯಾನ ಬರಲಿಲ್ಲಾ. ನಿರ್ವಾಹ ಇಲ್ಲದಕ ನಾನs ಸಂಜೀಕಡೆ ನಾಲ್ಕ ಮಂದೀನಾ ಕರಕೊಂಡ ಆಕೀ ಮನೀಗೇ ಹೋದಿನಿ."

"ಆಕೀ ಮನೀಗಿ ಒಮ್ಮಿ ಹೋದಿರಿ ಹಂಗಾರ ?"

"ಹೋಗಕಬ್ಯಾಡಾ ? ತಂಗೀ ಮಗಳನ್ನ ಕೊಟ್ಟದೇವ ಅಂದಮ್ಯಾಲ! ಹೇಳಿ ನೋಡಿನಿ ಆಕೀಗಿ. ಆದರ ಆಕಿ ಸಡಸಡೀತ ಒಂದ ಮಾತಿನ್ಯಾಗ ಹೇಳಿದಳು 'ನಮ್ಮೂ ಅವರು ಮನಾ ಒಡದ್ಯಾವು, ಇನ್ನ್ಯಾನ ಮಾಡಿದ್ರು ಕೂಡುದುಲ್ಲ. ನಾ ಮತ್ತೊಂದ ಮಾಡಾಕಿ' ಅಂತ."

"ಮನಸ ಒಡೀಕ ಯಾನ ಆಯ್ತು ಆಕೀಗೆ ? ಹೂವಣ್ಣ ಸತ್ತಾಗ ಹುಡುಗನ ತಗೊಂಡ ಮನೀ ತನಕಾ ಹೋದರ ಹುಡುಗನ ಕೈಯಾಗ ಒಂದ ರೂಪಾಯ ಕೊಡಲಿಲ್ಲ, ಅಂಗೀ ಮಾಡಸಕೋ ಅಂತ ! ನಾ ಯಾನ ಆಕೀ ಉಪಕಾರ ಇಟಕೋತೀನೀ ? ತಾ ಬೇಕಾದಾಂಗ ನಡದಳು. ಮತ್ತ ಇವರಿಗಿ ಅಂದರ ?"

ಹೆಂಡತಿಯ ಮಾತಿಗೆ ರಾಮಪ್ಪನ ಮೀಸೆ ಕೊಂಚ ಕುಣಿಯದಿರಲಿಲ್ಲ. "ಹೆಂಗಸ ಸಮಜೂತಿ. ತನ್ನ ಗಂಡಗ ಇವರ ಯಾನ ಮಾಡಿದಾರಂತ ಬಡಬಡಸತಾಳ ! ಆಕಿ ಮಾತಿಗಿ ಯಾನ ಕಿಮ್ಮತ್ತ ಕುಡೋದಾ ?"

"ಅಂವಗ್ಯಾನ ಮಾಡತಾರ ಇವರ ? ಆಕೆ ಸೊಸೀಗಿ ಮಗ್ಗಾ ಛಲೂ ಇರುಗುಡುವಾಳು, ಅಂತ ಹಗಲೀ ರಾತ್ರೀ ಚಿಂತಿ ಮಾಡಿಮಾಡಿ ನವದ ಬ್ಯಾನಿಲೇ ಸತ್ತ ! ತಾನs ಕೊಂದಿದಾಳ ತಗೊ ! ಸುಡವಾತ ಯಾಕ, ಇನ್ನ ಆಕೀ ಪಂಚಿತಿ ಯಾಸ ಮಾಡೋಡ ನಮಗ ? ಮುಂದ ಪೋರೀ ಗತಿ ಯಾನ ?"

"ಎಲ್ಲಿ ಆದರ ಛಲೂ ಮನೀ ನೋಡಿ ಕೊಡೋದಾ? ಮತ್ಯಾನ ಮಾಡೋದ? ಮನ್ಯಾಗ ಇಟಗೊಂಡ ಕೂಡೋದ ಏತಿ ಪರಾದ ಪೋರೀನಾ! ಅಲ್ಲೇ ನಾಳಿ ಅವರ ಎರಡೂ ಮದವಿ ಮೋಜಲೆ ಮಾಡಾವರ! ಅಲ್ಲಿ ಯಾತಕ ಇಡೋದಂತ ನಾಲ್ಕ ದಿನಾ ಇಕಡೆ ಕರಕೊಂಡು ಬಂದಿನ, ತಾರಾನಾ."

"ಅಕಣಿನಾ ಎಲ್ಲಿ ಕೊಟ್ಟರು?"

"ಆಕೀನಾ ಕೊಡದಿದ್ದರ ಹೆಣ್ಣ ಆಗತಿತ್ತ ಯಾನ ಇವರಿಗಿ? ಮಂಗ ಸೂಳಿಗೆ ಆ ಪೋರಿನಾ ಕೊಟ್ಟರು. ಆ ಹುಡುಗನ ತಂಗೀನಾ ಭರಮ್ಯಾಗ ಮಾಡಿರು."

"ಅಯ್ಯ! ಇದರಗುಬಸ ಮಾಡಿರ?" ಗೋಣುಹಾಕುತ್ತ "ಛಲೂ ಆಯ್ತು ಏಳ! ಆ ಸೊಸೀಗಿ ಯಾನರ ಅನ್ನಲಿ ಅಂದರ ಅಲ್ಲಿ ಇಕ್ಕಿ ಮಗಳ ಝಿಪ್ಪರಿ ಕಿತ್ತತಾರ! ಅವರ ಬಂಗಾರದಂಥಾ ಪೋರಿನಾ ಕಾಡಿದ ಪಾಪ ಹತ್ತದ ಇರತೇತಿ, ಆಕೀಗಿ? ಮದಿಂದಾಗಿಂದೂ ಇಷ್ಟs ಮಾರೀ ಮಾಡಕೊಂಡ ಕೂತೇತಿ ಪೋರಿ ಒಂದ ತುತ್ತ ರೊಟ್ಟಿ ಸುದ್ದಾ ತಿಂದಿಲ್ಲ! ನಾಚಿದಂಗ ಆಗೀತಿ! ಭಾಳ ಮಾನುಳ್ಳ ಪೋರೀ!"

"ಇಕೀನಾ ಯಾನ ಮಾಡತೀ? ಎರಡ ದಿನಾ ಆಯ್ತು ರತ್ನಾ 'ಅಂ!' ಅಂದಾಕಿ ಬಾಯೇ ಮುಚ್ಚಿಲ್ಲ. ಹಗಲೀ ರಾತ್ರೀ, ನನ್ನ ಮಗಳದ ಹಿಂಗ್ಯಾಕ ಆಯ್ತ್ತಂತ ಅಳತಾಳ. ಯಾನ ಸಮಜೂತಿ ಹೇಳಿದರೂ ಕೇಳವಳ್ಳ!" ಎಂದು ತನ್ನ ತಂಗಿಯ ಸ್ಥಿತಿಯನ್ನುಸುರಿದ ರಾಮಪ್ಪ.

"ಹಾಂಗಾರ ನಾಳಿ ಹೋಗಲಿ ಯಾನ? ತಾರಾ ಎದ್ದ ನಿಮಗಾ, ಅನಂತಗಾ ಎರಡ ರೊಟ್ಟೀ ಮಾಡಿಕೊಟ್ಟ್ಯಾಳಲ್ಲ! ಅನಂತಗ ಎರಡ ದಿನಾ ತಾರಾನಾ ಸಂಬಾಳಸ ಅಂತ ಹೇಳೋದಾ ಲ್ಲಾ?"

೧೬

ಈ ಸಂಗತಿ ಅನಂತನಿಗೆ ಗೊತ್ತಿರಲಿಲ್ಲ. ಅದನ್ನಾರೂ ಆತನಿಗೆ ಹೇಳಿರ ಲಿಲ್ಲ. ಹೇಳಿದ್ದರೆ ಅವನು ಹೇಗಿರುತ್ತಿದ್ದನೋ ಏನೋ! ಆದರೂ ತಾರಕ್ಕ

ಮನೆಯಲ್ಲಿ ಬಂದಾಗಿನಿಂದ ಸ್ವಲ್ಪ ಉತ್ಸಾಹದಿಂದ ಇದ್ದ. ಮರುದಿನವೇ ಅವನ ತಾಯಿ, ಸುಂದರಾಬಾಯಿ ಚಂದೂರಿಗೆ ಹೋದಳು. ರಾಮಪ್ಪ ಹಗಲೆಲ್ಲ ಅಂಗಡಿಯಲ್ಲಿರುವ. ಮನೆಯಲ್ಲಿ ಅನಂತ ತಾರಕ್ಕ ಇಬ್ಬರೇ. ನಾಭಿರಾಜನೂ ತಾಯಿಯ ಸಂಗಡ ಊರಿಗೆ ಹೋಗಿದ್ದನು. ಹೀಗಿದ್ದೂ ಅನಂತ ತಾರಕ್ಕನ ಗೂಡ ಮೊದಲಿನಂತೆ ಸಲಿಗೆಯಿಂದ ಇರುತ್ತಿರಲಿಲ್ಲ; ಮಾತಾಡುತ್ತಿರಲಿಲ್ಲ. ಅನ್ಯಸ್ತ್ರೀಯೊಡನೆ ಸಲಿಗೆಯಿಂದಿರುವದು ಅನುಚಿತವೆಂದು ಭಾವಿಸಿದ್ದನೇನೊ! ಇಲ್ಲವೇ ಪ್ರೀತಿಸಿ ಬರಿಗೈಯಿಂದ ಮರಳುವದು ಬಹುಕಷ್ಟಕರವೆಂದು ಅವನ ಅನುಭವ ಅವನಿಗೆ ಹೇಳುತ್ತಿರಬೇಕು. ಆದರೂ ನೊಂದ ಹೃದಯಕ್ಕೆ ಎಷ್ಟು ಸಾಂತ್ವನ ವಚನಗಳನ್ನಾಡಬೇಕೋ ವ್ಯವಹಾರಕ್ಕೆ ಎಷ್ಟು ಅಗತ್ಯವೋ ಅಷ್ಟು ತಾರಕ್ಕನೊಡನೆ ಅನಂತ ಮಾಡುತ್ತಿದ್ದ. ಅವನು ಮನಸ್ಸಿನಲ್ಲಿ ತಾರಕ್ಕನ ಅತ್ತೆಯ ವಿಷಯಕ್ಕೂ ಗಂಡನ ವಿಷಯಕ್ಕೂ ತೀರ ಅಸಹ್ಯಪಡುತ್ತಿದ್ದ.

ಒಂದೆರಡು ದಿನಗಳು ಕಳೆದನಂತರ ತಾರಕ್ಕ ಸ್ವಲ್ಪ ಉತ್ಸಾಹಿತಳಾದಳು. ಸೋದರತ್ತೆ ಊರಿಗೆ ಹೋದುದರಿಂದ ಮನೆಗೆಲಸವೆಲ್ಲ ಅವಳ ಮೇಲೆಯೇ ಬಿದ್ದಿತ್ತು. ನಿರಾಧಾರಿಯಾದ ತಾನು ಎಲ್ಲರನ್ನೂ ಹೊಂದಿಸಿಕೊಂಡು, ಹಚ್ಚಿಕೊಂಡು ಹೋಗಬೇಕೆಂದು ಭಾವಿಸಿದ್ದಳೇನೊ! ಮನೆಗೆಲಸವನ್ನೆಲ್ಲ ತುಂಬ ಆತ್ಮೀಯತೆಯಿಂದ ಮಾಡುತ್ತಿದ್ದಳು. ಮಾವನಿಗೆ ಹೊತ್ತಿಗೆ ಚಹಾ ಮಾಡಿ ಕೊಡುವದು, ಊಟಕ್ಕೆ ಬಡಿಸುವದರಲ್ಲೆಲ್ಲ ಜಾಗ್ರತೆಯಿಂದ ನಡೆದುಕೊಳ್ಳುತ್ತಿದ್ದಳು. ಅದರಂತೆ ಅನಂತನ ಸೇವೆಯಲ್ಲಿಯೂ ಮನಮುಟ್ಟಿ ವರ್ತಿಸುತ್ತಿದ್ದಳು. ಆದರೆ ಅನಂತನ ವರ್ತನೆಯಿಂದ ಅವಳಲ್ಲಿ ಆದೇಕೊ ನಿರಾಶೆ ಬೇರೂರುತ್ತಲಿದೆ. ಒಂದು ದಿನ ಮಧ್ಯಾಹ್ನದಲ್ಲಿ ಅನಂತ ಮನೆಗೆ ಬಂದಾಗ "ಏನು ತಾರಕ್ಕಾ, ಎಂದು ಹೋಗುವದು ಗಂಡನ ಮನೆಗೆ ?" ಎಂದು ಸಹಜವಾಗ ಕೇಳಿದ. ಕೇಳಿದೊಡನೆಯೇ ಅನಂತನ ಮುಖ ಬಾಡಿತು, ಈ ಪ್ರಶ್ನೆ ತಾನು ಕೇಳಬಾರದಾಗಿತ್ತೆಂದು. ಇದಕ್ಕೆ ತಾರಕ್ಕ ಎಷ್ಟು ನೊಂದುಕೊಳ್ಳುವಳೋ! ಆದರೆ ಬಾಯಿಂದ ಆಡಿದ ಮಾತನ್ನು ತಿರುಗಿ ತಕ್ಕೊಳ್ಳಲು ಬರುವುದೇ? ಆದರೆ ಅವನ ಮಾತಿನ ಪರಿಣಾಮ ತಾರಕ್ಕನ ಮೇಲೆ ಅವನು ತಿಳಿದಂತೆ ಆಗಲಿಲ್ಲ. ಅವಳು "ಈಗೆಲ್ಲಿ ಇದ್ದ್ಯಾನು ?" ಎಂದು ನಕ್ಕು ಕೇಳಿದಳು. ಅವಳ ಆ ನಗುವಿ

ನಲ್ಲಿ ಆತ್ಮೀಯತೆ ಇತ್ತು. 'ಇನ್ನು ನೀನೇ ನನಗೆ ಗತಿ, ಇದೇ ನನ್ನ ಮನೆ ಎಂಬ' ಭಾವನೆಯೆಲ್ಲ ಸ್ಪಷ್ಟ ಒಡಮೂಡಿತ್ತು.

ಅನಂತ ಸ್ತಬ್ಧನಾದ. ಈ ಮಾತು, ಈ ನಗೆ, ಅವನಿಗೆ ಅಸಹ್ಯವೆನಿಸಿತು. 'ಹಳ್ಳಿಯ ಹೆಂಗಸು ಹುಂಬ!' ಎಂದುಕೊಂಡ ಮನಸ್ಸಿನಲ್ಲಿ. ಅಂದಿನ ಚಿತ್ರ ಅವನ ಮನಃಪಟಲದ ಮೇಲೆ ಒಂದು ಕ್ಷಣ ಮೂಡಿತು. ಕೂಡಲೆ ಹೊರಗೆ ಹೋಗಬೇಕೆಂದೆನಿಸಿತು. ಆದರೂ ಮನಸ್ಸು ಮುಂದೊರೆದು "ಹೀಂಗ ಅಂದರ?" ಎಂದು ಕೇಳಿಯೇಬಿಟ್ಟಿತು.

ಆಗ ತಾರಕ್ಕ ನಡುಮನೆಯ ಬಾಗಿಲಿನಿಂದ ಹೊರಗೆ ಇಣಿಕಿ ನೋಡಿದಳು. ಆಮೇಲೆ "ನೀನೂ ನನ್ನ ಕೈ ಬಿಡತಿ ಯಾನಾ ?" ಎಂದು ಕೇಳಿದಳು, ಕಣ್ಣೀರು ತಂದು.

ಅನಂತನ ಹೃದಯವು ಕರಗಿತು. ಅವನ ಕಣ್ಣುಗಳು ಹನಿಗೂಡಿದುವು. ಅವುಗಳಿಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದಾಯಿತು. ಹಾಗೇ "ಅದಕ್ಕ ಯಾನ ಹಾದಿ ?" ಎಂದ ಪೆದ್ದನಂತೆ.

"ನೀ ಇಬ್ಬರ ಹೆಂಡರ ಗೂಡಾ ಜನ್ಮಾ ಮಾಡತೀ ಯಾನ ?" ಎಂದು ಮತ್ತೊಂದು ಪ್ರಶ್ನೆಯನ್ನೇ ಹಾಕಿದಳು ಅನಂತನಿಗೆ.

"ಪ್ರೇಮ ಒಬ್ಬರ ಮ್ಯಾಲಿ ಮಾಡಕ ಬರತೇತಿ. ಅದನ್ನ ಇಬ್ಬರ ಒಳಗ ಹ್ಯಾಂಗ ಪಾಲಾ ಮಾಡಕ ಬಂದೋತು ? ಅದ ಒಮ್ಮೆ ನಿನಗೆ ಕೊಟ್ಟಿದ್ಯಾನ. ನಾ ಇನ್ಯಾರಿಗಿ ಅದನಾ ಕೊಡಲಿ ? ನಂದ ಮಾಡಿದಾರ, ಅದಕ್ಯಾನ ಮದಿವಿ ಅಂತಾರ ಯಾನ ?"

ತಾರಕ್ಕನಿಗೆ ಅನಂತನ ಈ ಪ್ರೇಮತತ್ವ ಅಷ್ಟೇನೂ ಸ್ಪಷ್ಟವಾಗಿ ತಿಳಿಯಲ್ಲಿಲ್ಲ. ಆದರಿಂದ ಆಕೆ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ. ಮನದಲ್ಲಿಯೇ ಯೋಚಿಸತೊಡಗಿದಳು.

ಅನಂತನೇ ಮತ್ತೆ ಕೇಳಿದ "ಹೀಂಗೆ ಯಾಕ ಕೇಳತಿ ?"

"ಯಾಕ ಕೇಳತ್ಯಾನ ಹೇಳು ?" ಪ್ರತಿಯಾಗಿ ತಾರಕ್ಕ ಕೇಳಿದಳು.

"ಅದ ಗೊತ್ತಾಯಿತು ; ಆದರ ನೀ ಹೇಳೋದ ಹ್ಯಾಂಗ ಸಾಧ್ಯ ?"

"ಯಾಕ ಇಲ್ಲ ?" ನಕ್ಕು ನುಡಿದಳು ತಾರಕ್ಕ.

"ಗಂಡಸ ಇಬ್ಬರನಾ ಮದಿವಿ ಆಗತಾ ; ಅದs ಹೆಂಗಸ ಇಬ್ಬರನಾ ಮಾಡಕೋಕ ಬರತೇತಿ ಯಾನ ? ಹುಚ್ಚರಂಗ ಹೀಂಗ್ಯಾಕ ಮಾತಾಡತೀ"

"ಹೆಂಗಸರಿಗಿ ಇಬ್ಬರನಾ ಮಾಡಕೋಕ ಬರದೀರ ಇರಲಿ ; ಗಂಡಸರಿಗಿರs ಇಬ್ಬರನಾ ಮಾಡಕೋಕ ಬರತೇತಿ ಇಲ್ಲಾ ? ಆಂ ?" ಎಂದು ಅನಂತನ ಕೈ ಹಿಡಿದು, ಕರುಣಸ್ವರದಿಂದ ಕೇಳಿದಳು ತಾರಕ್ಕ.

"ನಿನ್ನ ಗಂಡ ಮಾಡಕೊಂಡ ಅಲ್ಲ !"

"ಯಾರಾ ?"

"ಭರಮು !"

"ಗೊತ್ತಿಲ್ಲದಾಂಗ ಹೇಳ್ತಿ ಅಲ್ಲ ! ಅಂವ ನನ್ನಾ ಬಿಟ್ಟಾ ಮತ್ತೊಬ್ಬಾಕಿನ ಮಾಡಕೊಂಡಾ !" ಎಂದು ಗೋಣು ಹಾಕಿದಳು ತಾರಾ.

ಅನಂತ ಬೆರಗುವಟ್ಟ. ಅದರಲ್ಲಿ ಸಂತಸವೂ ಅರ್ಥ ಇಲ್ಲದಿರಲಿಲ್ಲ. ಅವನ ಕೈಯು ಅವಳ ಕುರುಳನ್ನು ತೀಡುತ್ತಿದ್ದುದೆ ಅದಕ್ಕೆ ಸಾಕ್ಷಿ. "ಇದ ಖರೆ ನನಗೆ ಗೊತ್ತಿಲ್ಲಲಾ !" ಎಂದು ನುಡಿದ ಬೆರಗಿನಲ್ಲಿ ಅನಂತ.

"ನಾ ಸುಳ್ಳ ಹೇಳ್ತ್ಯಾನ ನಿನಗ ?" ಎಂದು ಅನಂತನ ಮುಖದ ಕಡೆಗೆ ನೋಡುತ್ತ ತಾರಕ್ಕ ಕೇಳಿದಳು.

ಸ್ವಲ್ಪಕಾಲ ಸುಮ್ಮನಿದ್ದು "ಅಪ್ಪಾ, ನಿನ್ನ ಗಂಡ ಮತ್ತೊಂದ ಮಾಡಕೋತಾ ಅಂತ ಹೇಳಿ, ಚಂದೂರಿಗಿ ಬಂದ ; ಹೆಚ್ಚಿಗಿ ನಂಗ್ಯಾನ ಗೊತ್ತಿಲ್ಲ" ಅನಂತ ಹೇಳಿದ.

"ನಿನಗ ಗೊತ್ತೇತಿ !" ಎಂದು ಅಪನಂಬಿಕೆಯ ನಗೆ ಬೀರಿದಳು ತಾರೆ.

"ನಿನ್ನಾಣೆ ; ನಂಗೊತ್ತಿಲ್ಲ !"

"ಮಾವಾ ಬಂದ ಕೇಳಿ ನೋಡಿದ ಅತ್ತೀನಾ ; ಯಾನ ಆಗಲಿಲ್ಲ. ಅವ್ವಾ ಮೊದಲ ಬಿಡಸಗೋಳೋದ ಅಂತೀಳು. ಹಾಂಗ ಆಯ್ತು" ತಾರಕ್ಕ ಸ್ವಲ್ಪದರಲ್ಲಿ ನಡೆದ ಸಂಗತಿ ಹೇಳಿದಳು.

ಅನಂತ ಚಕಿತನಾದ. ಅವಳ ಮಾತಿನ ಮೇಲೆ ಒಮ್ಮೆಲೇ ಅವನಿಗೆ ನಂಬಿಕೆ ಹುಟ್ಟಲಿಲ್ಲ. ಮಾನವನು ತನಗೆ ಪ್ರಿಯವಾದ ಸಂಗತಿ ಜರುಗಿದುದು ಗೊತ್ತಾದಾಗ ಮತ್ತಿಷ್ಟು ಸಂಶಯುವನ್ನು ಪ್ರದರ್ಶಿಸಿ ನಿಶ್ಚಯವಾಗಿ ತಿಳಿದು

ಕೊಳ್ಳಲು ಹವಣಿಸುತ್ತಾನೆ. ಹಾಗೆಯೇ ಅನಂತ. "ಇದೆಲ್ಲಾ ಖರೇ ?" ಎಂದು ಮತ್ತೂ ಕೇಳಿದ.

"ಹೋಂದ. ಎಲ್ಲಾ ಖರೇ !"

"ಹಾಂಗಾದರ ಇಷ್ಟ್ಯಾಕ ಮೆತ್ತಗ ಆಗೀದಿ ?"

ತಾರಕ್ಕನ ಮುಖ ಸ್ವಲ್ಪ ಮ್ಲಾನವಾಯಿತು. ಕೊಂಚವೇಳೆಯ ನಂತರ "ಬಿಡು; ನೀ ಹೀಂಗ ಕೇಳಿದರ ನಾ ಯಾತಕ ಮೆತ್ತಗ ಆಗಲಿ ?" ಅಂದಳು.

ಅನಂತನಿಗೆ ಈಗ ಹಿಡಿಸಲಾರದಷ್ಟು ಹಿಗ್ಗು. ಆ ಹಿಗ್ಗಿನ ಹೊನಲಿನಲ್ಲಿ ನಾಲ್ಕಾರು ದಿನಗಳು ಹೇಗೋ ಹರಿದುಹೋದವು. ಸುಂದರಾಬಾಯಿ ಚಂದೂರಿನಿಂದ ತಿರುಗಿ ಬಂದಳು. ಈಗ ಸುಮಾರು ಒಂದು ವರ್ಷದಿಂದ ಅನಂತನಲ್ಲಿ ನೆಲೆಯೂರಿದ ಜಾಡ್ಯವು ಕಳೆದಿದ್ದಿತು. ಈಗ ಅನಂತ ಮಧ್ಯಾಹ್ನದಲ್ಲಿ ಮನೆಯಲ್ಲಿ ತಾರಕ್ಕನಿಗೆ ಕಥೆ ಕಾದಂಬರಿಗಳನ್ನು ಓದಿ ಹೇಳುವನು. ತಾರಕ್ಕ ಸುಂದರವ್ವರಿಬ್ಬರೂ ಕೇಳುವರು. ಅನಂತನಲ್ಲಿ ಹಿಂದೆ ಕಾಣದ ಉತ್ಸಾಹವನ್ನು ಕಂಡು ಅವನ ತಾಯಿಗೂ ಸಂತಸವಾಯಿತು. ಏನಾದರೂ ಓದಿಹೇಳಿ ತಾರಕ್ಕನ ದುಃಖ ಮರೆಯಿಸಲೆಂದು ಅವಳೂ ಬಯಸುತ್ತಿದ್ದಳು. ಅದರಿಂದ ಅವಳೂ ಆಗಾಗ "ಅನಂತಾ, ಯಾನಾರ ಓದಿ ತೋರಿಸಬಾರಾಕೋ !" ಎಂದು ಕರೆಯುವಳು. ದಿನಗಳೆದಂತೆ ತಾರಕ್ಕನಿಗಿಂತ ಅವಳಿಗೇ ಓದಿಸಿ ಕೇಳುವ ಹಂಬಲ ಹೆಚ್ಚುತ್ತ ಹೋಯಿತು. ಮನೆಗೆಲಸವನ್ನೆಲ್ಲ ತಾರಕ್ಕ ನೋಡುವಳು. ಅದರಿಂದ ಸುಂದರಾಬಾಯಿಗೆ ಕೆಲಸವೇ ಕಡಮೆ. ಮೇಲಿನ ಚಿಕ್ಕಪುಟ್ಟ ಕೆಲಸಗಳನ್ನಷ್ಟು ತೀರಿಸಿದರೆ ತೀರಿತು. ಹೀಗಾಗಿ ಹೊತ್ತುಗಳೆಯುವುದಕ್ಕೆ ಅವಳಿಗೂ ಓದಿಸಿ ಕೇಳುವ ಪರಿಪಾಠಬಿತ್ತು. ಅನಂತನೂ, ಅವರಿಗೆಲ್ಲ ತಿಳಿಯುವಂತೆ ಒಳ್ಳೊಳ್ಳೆಯ ಕಥೆಗಳನ್ನು ಓದಿ ವಿವರಿಸಿ ಹೇಳುವನು. ಹೀಗೆ ಬೇಸಿಗೆಯಲ್ಲಿ ಬತ್ತಿದ ಹೊನಲು ಮಳೆಗಾಲದಲ್ಲಿ ಮತ್ತೆ ತುಂಬಿ ಹರಿಯುವಂತೆ ಅನಂತ ತಾರೆಯರ ಅನುರಾಗ ಸದ್ದಿಲ್ಲದೆಯೇ ತುಂಬಿ ಹರಿಯತೊಡಗಿತು.

ನಡುವೆ ಒಂದೆರಡು ಸಲ ಮಲ್ಲ ಮಗಳನ್ನು ಕರೆಯಲು ಚಂದೂರಿನಿಂದ ಬಂದ. ಆಗ ಸುಂದರಾಬಾಯಿ "ಇರಲಿ ಬಿಡು, ಇಲ್ಲೇ. ಎಲ್ಲಿ ಇದ್ದರ ಯಾನ ಏತಿ ? ಎಲ್ಲಾ ಒಂದ್ಽ ಅಲ್ಲ ! ಎಲ್ಲ್ಯಾದರ ಮಾಡಿಕೊಡೂ ತನಕಾ ! ಅಲ್ಲಿ ಎದಿ ಮ್ಯಾಲಿ, ಅವರ ನಕ್ಕ ಕೆಲದ ಜನ್ಮಾ ಮಾಡಾವರ ಅಲ್ಲ್ಯಾದಕ ಒಯ

ತೀರಿ ?" ಎಂದು ಹೇಳಿದಳು. ಈಗ ತಾರಕ್ಕ ಹೋದರೆ ಮನೆಗೆಲಸವೆಲ್ಲ ತನಗೇ ಬೀಳುವುದೆಂಬ ಭಾವನೆಯೂ ಹೀಗೆ ಹೇಳಲು ಪುಷ್ಟಿಕೊಡುತ್ತಿತ್ತೇನೊ !

ಮಲ್ಲನಿಗೆ ಸುಂದರಾಬಾಯಿಯ ಮಾತು ಸರಿದೋರುವುದು. ಅವಳ ಭಾವನೆಯೂ ಸ್ವಲ್ಪ ಸ್ವಲ್ಪ ಗೊತ್ತಾಗುವುದು. ಮಗಳು ಸಂತೋಷದಿಂದ ಇದ್ದುದನ್ನು ಕಂಡು "ಇಲ್ಲಾಕ್ಯದರ ಸುಖದಾಗ ಇರಲಿ ನಾಲ್ಕ ದಿನಾ ಮಗಳ" ಎಂದುಕೊಂಡು "ಇರಲಿ ತಗೋ, ವರ್ಷಾರತಿಂಗಳ ಇಲ್ಲೇ. ನಿನಗೂ ಹೆಣಮಕ್ಕಳ ಇಲ್ಲ; ಸೊಸಿದೇರ ಕೈಗುಟಕಿಗಿ ಬರೂ ತನಕಾ" ಎಂದು ಹೇಳಿ ಹೋಗುವನು.

ಇತ್ತಿತ್ತಲಾಗಿ ಅನಂತನ ಕೋಣೆ ಉಡುಗುವುದೂ ತಾರಕ್ಕನ ಮನೆಗೆಲಸ ಗಳಲ್ಲಿಯೇ ಒಂದು. ಆಗ ಅವಳು ತನ್ನ ಬುದ್ಧಿಗೆ ಹೊಳೆದಂತೆ ಅನಂತನ ಪುಸ್ತಕ ಗಳನ್ನು ಸರಿಜೋಡಿಸಿ ಇಡುತ್ತಿದ್ದಳು. ಹಾಗೆ ಅವಳು ಇಡುವುದರಿಂದ ಅನಂತ ನಿಗೆ ಬೇಕಾದ ಪುಸ್ತಕ ತಕ್ಕೊಳ್ಳಲು ಸ್ವಲ್ಪ ತ್ರಾಸವೇ ಆಗುತ್ತಿದ್ದಿತಾದರೂ ತಾರಕ್ಕನ ಕೆಲಸವನ್ನು ನೋಡಿ ಮೆಚ್ಚುವನು, ಆನಂದಿಸುವನು. ಒಮ್ಮೊಮ್ಮೆ ಮಧ್ಯಾಹ್ನದ ಚಹಾ ಮಾಡಿ, ಎರಡೆರಡು ಸಲ ಕರೆದರೂ ಅನಂತನು ಓದುವ ದನ್ನು ಬಿಟ್ಟು ಬರದಿರಲು, ತಾರೆಯೇ ಚಹಾ ತಕ್ಕೊಂಡು ಅವನ ಕೋಣೆಗೆ ಹೋಗುವಳು. ಚಹ ಕೊಡುತ್ತ ತಾರಕ್ಕ ನಗೆಯೊಂದನ್ನು ಬೀರುವಳು. ಅನಂತ ಚಹ ಕುಡಿಯುತ್ತ ನಗಲು ಹೋಗುವ. ಚಹ ಚಲ್ಲಿಕೊಳ್ಳುವ. ತಾರಕ್ಕ ಖೊಳ್ಳೆಂದು ನಗುವಳು. ಆ ನಗೆಯನ್ನು ಕೇಳಿ ನಡುಮನೆಯಿಂದಲೇ ಸುಂದರವ್ವ "ಯಾನ ಆಯ್ತು ಅನಂತಾ ?" ಎಂದು ಕೇಳುವಳು.

ಅದಕ್ಕೆ ಚಹಾ ಷರಟಿನ ಮ್ಯಾಲ ಚಲ್ಲಿಳ ನೋಡು !" ಎಂದು ನಕ್ಕು ಹೇಳುವ ಅನಂತ.

"ಜಪ್ಪಿಸಿ ಒಯ್ಯಬೇಕವ್ವ ತಾರಾ" ಎಂದು ಸುಂದರವ್ವ ಬುದ್ಧಿ ಹೇಳು ವಳು.

"ನಾ ಯಾನ ಮಾಡಲೇ ? ಅವನ್ಯ ಕೈ ಬಡಿದು" ಎಂದು ಹುಸಿನುಡಿದು ಹುಸಿ ಮುನಿಸಿನಿಂದ ಅನಂತನನ್ನು ನೋಡುವಳು. ಇಂಥ ಪ್ರಸಂಗಗಳು ಅದೆಷ್ಟೋ !

ಒಂದು ದಿನ ಮುಂಜಾನೆ ಅನಂತ ಏನೋ ಬರೆಯುತ್ತ ಕುಳಿತಿದ್ದಾನೆ. ಅವನ ತಾಯಿ ಅದೇತಕ್ಕೋ ಆವನ ಕೋಣೆಗೆ ಬಂದಳು. ವಿಶೇಷ ಕೆಲಸವಿಲ್ಲದ ಹೊರತು ಸುಂದರಾಬಾಯಿ ಆ ಕೋಣೆಗೆ ಬರುತ್ತಿರಲಿಲ್ಲ. ಅನಂತ ಬರೆಯುವು ದನ್ನು ಬಿಟ್ಟು ತಲೆಯೆತ್ತಿ ನೋಡಿ ಕೇಳಿದ. "ನಿನ್ನ ಕೆಲಸ ಎಲ್ಲ ಆಯ್ತು ಕಾಣ ಸ್ತೇತಿ ಅಲ್ಲ ?"

"ಹೋಂದ" ಎಂದು ನಸುನಗುತ್ತ ಅನಂತನ ಹತ್ತರ ಕುಳಿತಳು. ಅವಳ ಮುಖದ ಮೇಲಿಂದ ಅವಳಿಗೆ ಏನೋ ಹೇಳಬೇಕಾಗಿದೆಯೆಂದು, ಯಾರೂ ಊಹಿಸುವಂತಿತ್ತು. ಅನಂತ ಹಾಗೆಯೇ ಬರೆಯುತ್ತ ಕುಳಿತ. ಸ್ವಲ್ಪ ಹೊತ್ತಿನಲ್ಲಿ ಸುಂದರಾಬಾಯಿಯೇ "ತಾರಾ ಭಾಳಾ ಛಲೂ ಪೋರಿ, ಮನೀ ಕೆಲಸದಾಗ ಭಾಳ ಹುಷ್ಯಾರ ಇದಾಳು. ಆದರ್‍ ಯಾನ ಮಾಡೋದಾ ? ನಸೀಬ ಕೆಟ್ಟ ಆಕೇದಾ" ಹೇಳಿದಳು.

ಅನಂತ ಬರೆಯುತ್ತಲೇ "ಹ್ಯಾಂಗಾ ?" ಎಂದು ಕೇಳಿದ.

"ಪಾಪ ! ಇಂಥಾ ರೂಪಾ ಇಂಥಾ ಗುಣಾ ಇದ್ದ ಛಲೂ ಮನೀ ಸಿಗಲಿಲ್ಲ. ಹೊಡೆದ ಜನ್ಮಾ ಮಾಡಾಕಿಗಿ ಮನೀ ಇಲ್ಲ. ಕರದ ತಂದ ಜನ್ಮಕ ಹಚ್ಚ್ಯಾನ ಅಂದರ, ನಮ್ಮ ಪೋರಿಗಿ ಬುದ್ಧಿ ಇಲ್ಲ."

ನಡುವೆಯೇ ಅನಂತ ಕೇಳಿದ, ವಿಸ್ಮಯದಿಂದ "ಯಾರಿಗೆ ?"

"ಆಕೀಗೆ ಅಲ್ಲ ; ಇಂದರಿಗಿ ಈಗ್ಯ ತಂದಹಾದಿಗಿ ಹಚ್ಚಬೇಕಂದರ ಇವರೂ ತರವಾರು, ಅವರೂ ನೇರೀತನಕಾ ಹಚಕುಡೂದುಲ್ಲ ಅಂತಾರು."

"ಇಟಕೋಲಿ ಏಳ ; ಈಗ ಯಾರಿಗೆ ಬೇಕಾಗಿದಾಳು ?" ಕೇಳಿದ ಅನಂತ.

ಸುಂದರಾಬಾಯಿಯ ಮುಖದ ಮೇಲೆ ಅಸಂತೋಷದ ತೆರೆಯೊಂದು ಇಳಿಬಿದ್ದು ಮೇಲೇರಿತು. "ಸಣ್ಣಾಗಿರತಾನ್ಯ ಮನೀಗಿ ಬಂದ ಹೋದ ರೂಢಿ ಇದ್ದರ್‍ಯನ: ಎಲ್ಲಾ ; ನಾಳಿ ಮನೀತಾವ್ರೂ, ಇದ್ಯ ನೋಡಲಿಲ್ಲ: ತಾರಾ ದೊಡ್ಡಾಕಿ ಆಗಿ ಹೋದಳು. ಅತ್ತಿ ಸೊಸಿಗಿ ಮೇಳ್ಯ ಬರಲಿಲ್ಲ" ಅದೇಕೋ ತಾರಕ್ಕನ ನಿಂದಿಸುವುದರಲ್ಲಿ ಮುಗಿಯಿತು, ಸುಂದರಾಬಾಯಿಯ ಮಾತು.

ತಾಯಿಯ ಹೃದಯ ಗುಹೆಯುಲ್ಲಿರುವ ಬಣ್ಣವನ್ನೇನು ಬಲ್ಲ ಅನಂತ? ನಕ್ಕು ನುಡಿದನಾತ. "ಅದಕ್ಯ ನಿನಗಾ ಆಕಿಗಿ ಮೇಳ ಬರಕಿಲ್ಲಾ, ಅಲ್ಲೇ ಇರಲಿ ; ಅತ್ತಿದೇರ ಅಂದರ ಸೊಸಿ ಬಂದಕೂಡಲೇ ಫೌಜದಾರ್‍ಯ ಆಗತಾರು."

"ಎಲ್ಲಾರು ಯಾನ, ಚಿಮ್ಣಾನ ಹಂಗ ಇರತರ ಯಾನ ?"

ಅನಂತ ಮುಂದೆ ಬರೆಯತೊಡಗಿದ. ಅದಕ್ಕೇನೂ ಹೇಳಲಿಲ್ಲ. ಆಗ ಸುಂದರವ್ವ "ಇನ್ನ ತಾರಾ ಯಾನ ಮಾಡಬೇಕ ನೋಡು ? ಅವರಪ್ಪ ಅಲ್ಲಿ ಇಲ್ಲಿ ಮನೀ ನೋಡಿ ನೋಡಿ ಬೇಸತ್ತ. ಇನ್ನs ಮನೀನ ಸಿಗವಾಲ್ತು, ಆರ್‍ಯೋಳ ತಿಂಗಳಾಯ್ತು ಕಣ್ಣಿಗಿ ನಿದ್ದಿ ಇಲ್ಲ, ಹಗಲೀ ರಾತ್ರಿ ಅವರಿಗಿ" ಎಂದು ಮುಂದೆ ನುಡಿದಳು.

"ಮತ್ತ ಮದವಿ ಮಾಡಿಕೊಡಾವರ್‍ಯಾನ ಆಕೀನಾ ?" ಅನಂತ ಯಾವದೋ ಯೋಚನೆಯಲ್ಲಿ ಬರೆಯುವುದನ್ನು ಬಿಟ್ಟು ಕೇಳಿದ.

"ಇನ್ಯಾನ ಮದವಿ ಮಾಡಕ ಬರತೇತಿ ? ಎರಡನೇ ಸಾರಿ ಉಡಕಿನs ಅಲ್ಲ !"

"ಆಕಿ ಗಂಡಗ ಮದವಿ ಮಾಡಿರು, ಇಕೀಗಿ ಯಾನ ?"

"ಗಂಡಸಪ್ಪ ಅಂವ ; ಅಂವಗ ಬೇಕಾದಷ್ಟು ಮಾಡಕೋಕ ಬರತೈತಿ. ಹೆಂಗಸಂದರ ಮಣ್ಣಿನ ಗಡಿಗಿ ಇದ್ದಾಂಗ ಒಮ್ಮೆ ಮುಟ್ಟಿದರ ಬಾದs ಆಯ್ತು" ಎಂದು ಸುಂದರಾಬಾಯಿ ಹೇಳಿದಳು.

ಅನಂತನ ಎದೆ ಹಾರಿತು. ತಾನು ಅವಳನ್ನು ಮುಟ್ಟಿದ್ದು ನೆನಪಾಯಿತೇನೋ ಅವನಿಗೆ ! ಸುಂದರಾಬಾಯಿ ಮುಂದೆ ಹೇಳಹತ್ತಿದಳು. "ಇನ್ನರs ಛಲೂ ಗಂಡ ಸಿಗಲಿ ಆಕೀಗಿ."

"ಇನ್ನ ಆಕಿ ಯಾರನ್ನೂ ಮಾಡಕೊಳದ ಇದ್ದರ ಬರೂದುಲ್ಲಾ ?" ಅನಂತ ಚಿಂತಾತುರನಾಗಿ ಕೇಳಿದ.

"ಛೀ ! ಹೆಂಗಸ ಗಂಡ ಇಲ್ಲದ ಇರೋದ ಹ್ಯಾಂಗ ! ಎಲ್ಲ್ಯರ ಮೇವ ಇದ್ದದವನಿಗೆ ಓದ ಕಟ್ಟಿಕಬೇಕಲ್ಲ. ಇಕ್ಕಿ ಇಲ್ಲಿ ಇದಾಳ ಖರೇ ಅವ್ವ ಅಪ್ಪಗ ಕಟ್ಟೇಕ ಹತ್ತೇತಿ ಅಲ್ಲಿ !"

"ಯಾಕ ?" ಎಂದ ಅನಂತ.

"ನಿನಗ ಯಾನ ಗೊತ್ತಪ್ಪ ! ಬರೀ ನೀ ಓದೋದ ಬರ್‍ಯೋದರಾಗs ಶಾಣ್ಯಾ" ಎಂದು ಎದ್ದು ನಡೆದಳು, ಸುಂದರಾ.

ಅನಂತ ಯಾವದೋ ವಿಚಾರವಲ್ಲಿ "ನೀನೂ ಮಾಡಿದಿಯಲ್ಲಾ ಸೊಸೀನಾ ? ತಾರಕ್ಕನ ಹಂಗ ಕೆಲಸ ಬರೂದುಲ್ಲಾ, ಯಾನ ಇಲ್ಲಾ" ಎಂದು

ನಕ್ಕುನುಡಿದ. ಈ ಮಾತಿನ ಮೇಲಿಂದ ಮಗನ ಜಾಣತನ ಸುಂದರವ್ವ ಅರಿತಳೇನೋ! ಅದಕ್ಕೆ ಅವಳು ಕುತ್ಸಿತ ನಗೆಯೊಂದನ್ನು ಬೀರಿ ಅಂದಳು!

"ಇದ್ದರ ಯಾನ ಮಾಡೋದ ಹುಶ್ಯಾರ! ಆಡಿನ ಕೊಳ್ಳಾಗ ಮೊಲಿ ಇದ್ದಾಂಗs ಅಲ್ಲ."

ಅನಂತ ಮಾತಾಡಲಿಲ್ಲ.

ಅದೇ ದಿನ ಸಂಜೆ ಮಲ್ಲ ಐನಾಪುರಕ್ಕೆ ಬಂದ. ಅವನು ತಾರಕ್ಕನಿಗೆ ಮನೆ ನೋಡಲು ಹೋಗಿದ್ದ. ಐನಾಪುರದಿಂದ ಹತ್ತು ಹನ್ನೆರಡು ಮೈಲಿನ ಮೇಲಿರುವ ಹಾರೋಗೇರಿಯಲ್ಲಿ ಒಂದು ಮನೆತನವಿತ್ತು. ಅದನ್ನು ನೋಡಿ ಬಂದಿದ್ದ. ಸಾಧಾರಣ ಆ ಮನೆ ಆವನ ಮನಸ್ಸಿಗೆ ಬಂದಂತಿತ್ತು. ಬಂದಕೂಡಲೆ ಮಗಳಿಗೆ ಹೇಳಿದ. ಹಾರೋಗೇರ್ಯಾಗ ಆಕಿವಾಟಿಗೋಳ ಅಂತ ಇದಾರು; ಮನ್ಯಾಗ ಅವ್ವಾ ಮಗಾ ಇಬ್ಬರs; ಹುಡುಗನ ಹೆಸರ ಅಪ್ಪಣ್ಣಾ ಅಂತ. ಅವ್ವ ಇದ್ದರೂ, ಮುದುಕಿ; ಕಣ್ಣ ಕಾಣಸೂದುಲ್ಲಾ ಯಾನ ಇಲ್ಲಾ. ಹೋದವರs ಮನ್ಯಾಗ ಮಾಲಕರ. ಅಡವಿ ಏತಿ, ಒಂದ ತೋಟ ಏತಿ, ತೋಟದಾಗs ಇರತಾರ. ಅದರ ಊರಾಗ ಮನೀನೂ ಏತಿ, ನಾಲ್ಕ ಅಂಕಣ ಸಾಕಲ್ಲ? ಇವರ ಯಾವಾಗ ಎಲ್ಲಾ ತೋಟದಾಗs ಇರಾವರ" ತಂದೆಯ ಮಾತುಗಳನ್ನು ಕೇಳಿದಾಗ ತಾರಕ್ಕನ ಮೇಲೆ ಸಿಡಿಲೆರಗಿದಂತಾಯಿತು. ನಿಂತಲ್ಲಿಯೇ ಕುಸಿದು ಹೋದಳು.

ಹೊರಗಿನಿಂದ ಅನಂತ ಬಂದೊಡನೆ ಅವನಿಗೂ ಈ ಸಂಗತಿ ತಿಳಿಯಿತು. ನಿರರ್ಥಕವಾದ ನಗೆಯೊಂದನ್ನು ನಕ್ಕು ಕೇಳಿದ. "ಮನಿ ಹ್ಯಾಂಗೇತಿ?"

"ಮನೀ ಛಲೂ ಏತಿ, ಮನ್ಯಾಗ ಅತ್ತಿ ಇದ್ದರೂ ಇಲ್ಲದಂಗs. ತಿನಕಾ ಉಣಕಾ ಯಾನ ಕಡಿಮಿ ಇಲ್ಲಾ" ಎಂದ ಮಲ್ಲ.

"ಹುಡುಗ ಹ್ಯಾಂಗ ಇದಾನು?"

"ಹುಡುಗ ಯಾನಾ? ಮೂವತ್ತ ಮೂವತ್ತೈದ ವರ್ಷದಾಂವ ಇದಾ ಅಲ್ಲ; ನೋಡಕ ಛಲೂ ಇದಾ, ಸತ್ತಮಾರೀ ಆ ಭರಮ್ಯಾನಕಿಂತಾ ಛಲೂ."

"ಮೊದಲಿನ ಹ್ಯಾಂತಿ ಇದಾಳ ಯಾನಾ?"

"ಆಕ್ಯಾನ ಇಲ್ಲ; ಹತ್ತ ವರಸದ ಹಿಂದs ಬಿಟ್ಟದಾ ಅಂತ! ಮಕ್ಕಳಿಲ್ಲಾ ಮರೀ ಇಲ್ಲಾ."

"ಇನ್ನs ಮತ್ತೊಂದ ಯಾನ ಮಾಡಕೋಲಿಲ್ಲ ಅಂತ ?" ಎಂದ ಅನಂತ. ಮಲ್ಲ ಈ ವಿಷಯದಲ್ಲಿ ಹೆಚ್ಚು ವಿಚಾರಿಸಿರಲಿಲ್ಲ. ಆದರಿಂದ ಸ್ವಲ್ಪ ತಡೆದು,

"ಯಾಕೋ ಮದವೀನs ಒಲ್ಲಿ ಅನತಿದ್ದ ಅಂತ. ಈಗೀಗ ಅವ್ವಾ ಅಣ್ಣತಮ್ಮರಾ ಹೇಳಾನಾ ಮಾಡಕೋಬೇಕಂತ ಅಲ್ಲಿ ಇಲ್ಲೀ ಹುಡಕಾಡಕ ಹತ್ತೀದಾ."

"ನೋಡರಿ ಮತ್ತ ! ಒಲ್ಲ್ಯಾದವರ ಕೊಳ್ಳಾಗ ಓದ ಕಟ್ಟೀರಿ ಮತ್ತ ! ಹಿಂದಕ ಒಂದ ಆದ ಹಾಂಗ ಆಗಿ ಯೋಯ್ತು. ಇದ ಹೀಂಗ ಆಗೋದ ಬ್ಯಾಡ. ಒಮ್ಮೆ ಎಡವಿದ ಮ್ಯಾಲ, ನೋಡಿ ಕಾಲ ಇಡೋದ ನೆಟ್ಟಗ."

"ಅದ್ಯಾನ ನಾ ಎಲ್ಲಾ ಜವಾಬುದಾರಿ ಹೊರಾಂವ ಇಲ್ಲಪ್ಪ! ಹಿಂದಿನ ಸಾರೆ ಎಲ್ಲಾರ ಮಾತ ಮೀರಿ ಕೊಟ್ಟೆನು. ತಪ್ಪಿನ್ಯಾಗ ಸಿಕ್ಕ ಕಿವೀಗಿ ಹಳ್ಳ ಹಚ್ಚಿಕೊಂಡ್ಹಂಗ ಆಗೇತಿ. ದಿನಾ ಹರಿವತ್ತ ಆಕಿ ಜೀವಾ ತಿಂದ ತಿಂದ ಸಣ್ಣ ಮಾಡಿಳು. ಈ ಸಾರೆ ನೀವೆಲ್ಲಾ ಇದೀರಿ. ನೋಡಿ ಮನಸಿಗಿ ಬಂದರ ಕೊಡರಿ" ಎಂದು ತನ್ನ ಮೇಲಿನ ಹೊಣೆಯನ್ನು ಮಲ್ಲ ಕಡಮೆ ಮಾಡಿಕೊಂಡ.

"ಇಷ್ಟು ಗಡಬಿಡಿ ಯಾಕ ? ಸಾವಕಾಶ ನೋಡರಿ."

"ಸಾವಕಾಶ ಯಾನ ನೋಡತಿ? ಎಲ್ಲ್ಯಾದರೂ ತೊಡಕಿಸಿಬಿಟ್ಟರ ತೀರಿತು. ನಾಳೇ ಅವರೂ ಚಂದೂರಿಗಿ ಬರತಾರು. ಇತ್ತಿಂದ ನೀವೂ ನಡೀರಿ. ನೋಡಿ ಯಾನರ ಒಂದ ಮಾಡಿಬಿಡೂನು. ಅಲ್ಲೇ ಅವರು ತಾರಾನಾನೂ ನೋಡತಾರಂತ."

ಇಷ್ಟು ಕೇಳಿ ಅನಂತ ಸುಮ್ಮನಾದ. ಸಮೀಪದಲ್ಲಿದ್ದ ತಾರಕ್ಕ ಅನಂತನ ಕಡೆಗೆ ನೋಡಿ, ಏನೋ ಹೇಳಲು ಸೂಚಿಸಿದಳು. ಅನಂತನಿಗೆ ಆವಳು ಸೂಚಿಸುವ ಸಂಗತಿ ಗೊತ್ತಾಯಿತು. ಆದರೂ ಅದರ ವಿಷಯಕ್ಕೆ ಅವನೇನೂ ಮಾತಾಡಲು ಬರುವಂತಿರಲಿಲ್ಲ. ಮಾತಾಡುವಷ್ಟು ಉದ್ಧಟನೂ ಆತನಿರಲಿಲ್ಲ. ಅದಕ್ಕಂತೋ ಏನೋ ತಾರಕ್ಕನ ಭಾವ ತನಗೆ ತಿಳಿಯದವ ನಂತೆ ನಟಿಸಿ ಸುಮ್ಮನಿದ್ದುಬಿಟ್ಟ. ಆದರೂ ಆ ದಿನ ಬೆಳತನಕ ಅವನಿಗೆ ನಿದ್ರೆ ಹತ್ತಲಿಲ್ಲ. ಹಾಸಿಗೆಯಲ್ಲಿ ಜಂತೆಗಳನ್ನೆಣಿಸುತ್ತ ಬಿದ್ದವರಂತೆ ಮೇಲೆ

ನೋಡುತ್ತ ಬಿದ್ದ. ಮಲಗಿದಾಗ ಅರನಿದ್ರೆಯಲ್ಲಿ ಮಾನವನು ತನ್ನಷ್ಟಕ್ಕೆ ತಾನೇ ಮಾತಾಡುತ್ತಿರುವಂತೆ.

“ ತಾರಾ ನಾಳಿ ಹೋಗತಾಳು. ಆಕೀನಾ ಇನ್ನೊಬ್ಬಗ ಮಾಡಿಕೊಡ ತಾರಂತೆ ” ಇದೊಂದೇ ಮಾತನ್ನು ತಿರುತಿರುಗಿ ಅನ್ನತೊಡಗಿದ. ಅದೆಷ್ಟೋ ಸಲ ಬಾಯಿಂದ ಹೇಳಿ, ತನ್ನ ಕಿವಿಯಿಂದಲೇ ಕೇಳಿದ. ಆದರೂ ಯಾವ ಬಗೆಯಿಂದಲೂ ಈ ಮಾತು ಅವನಿಗೆ ತಿಳಿಯದಾಯಿತು. ಅವನು ತಾರೆಯ ಸಲುವಾಗಿ ನಿರಾಶನಾಗಿದ್ದಾನೆ. ಆಶೆ ಬಿಟ್ಟಿದ್ದಾನೆ. ಅವಳನ್ನು ಮರೆಯಲು ಯತ್ನಿಸಿದ್ದಾನೆ. ಮನದೊಳಗಿಂದ ಕಿತ್ತು ಎಸೆಯಲು ಯತ್ನಿಸುತ್ತಿದ್ದಾನೆ. ಅದರಂತೆ ಈಗ ಅವಳು ಅವನಾಕೆ ಅಲ್ಲ. ಎಂದೂ ಇರಲಿಲ್ಲ. ನಿಜವಾಗಿಯೂ ಈ ಮಾತು ಹೇಗಿದೆ, ಯಾವ ಸ್ವರೂಪದ್ದಿದೆ, ಎನ್ನುವುದು ಎಷ್ಟು ಪ್ರಯತ್ನಿಸಿ ದರೂ ತಿಳಿಯಲೊಲ್ಲದು. ಹಿರಿಯರೇನೂ ಈ ಬಗ್ಗೆ ವಿಚಾರಿಸುವುದಿಲ್ಲ. ಅವರ ಹೃದಯದಲ್ಲಿ ನನ್ನ ಭಾವನೆಯನ್ನು ತಿಳಿದುಕೊಳ್ಳುವ ಶಕ್ತಿಯಿದೆಯೋ ? ಈ ಕಾರ್ಯವು ಕಠಿಣವಿದೆಯೆ ? ನನ್ನಿಂದ ಇದು ಅಗುತ್ತದೆಯೋ ? ಯಾವದೂ ಅವನಿಗೆ ಮನದಟ್ಟಾಗದು. ಅವನು ನಿರ್ಜೀವಿಯಂತೆ ಬಿದ್ದುಕೊಂಡಿದ್ದ. ಕೊನೆಗೆ ಅವನಿಗೆ ನಿದ್ರೆ ಬಂದಿತು. ನಿದ್ರೆಯಲ್ಲಿಯೂ ಅನೇಕ ಕನಸುಗಳನ್ನು ಕಂಡ ನಾತ. ಅವುಗಳಲ್ಲಿ ಕೆಲವು ಮೂರ್ತವೂ ಕೆಲವು ಅಮೂರ್ತವೂ ಆಗಿದ್ದುವು. ಆ ನಿದ್ರೆಯಲ್ಲಿಯೇ ತನ್ನಲ್ಲಿ ಒಂದು ಅಸ್ಪಷ್ಟವಾದ ವೇದನೆಯು ಹರಿದಾಡು ತ್ತಿರುವದನ್ನು ಅನುಭವಿಸಿದ. ಬೆಳಗಾಗುತ್ತ ಬಂದಿತು. ನಿದ್ರೆ ಹರಿಯಿತು. ಆಗ ಅವನನ್ನು ತಂದೆ ಬಂದು ಎಬ್ಬಿಸಿದ: ನಾನು ಎರಡು ದಿನ ಚಂದೂರಿಗೆ ಹೋಗಿಬರುವೆ. ಮನೆಯ ಕಡೆಗೆ ಜೋಕೆ ’ ಎಂದು ಹೇಳಲಿಕ್ಕೆ. ಆಗ ಅನಂತನ ಮಾನಸಿಕ ಸ್ಥಿತಿಯು ತೀರ ಬದಲಾಯಿಸಿದ್ದಿತು. ಅದರಲ್ಲಿ ಪ್ರೇಮ, ಬಾಂಧವ್ಯಕ್ಕೆ ಎಡೆಯಿರಲಿಲ್ಲ ; ಕೋಪ ತಿರಸ್ಕಾರಕ್ಕೆ ಎಡೆಯಿರಲಿಲ್ಲ. ಒಂದು ಅವ್ಯಕ್ತ ನಾಚಿಕೆಯಿಂದ ಬಳಲಿ ಕಂಗೆಟ್ಟು ಅವನ ಮನಸ್ಸು ಶರೀರಗಳು ಪಾತಾಳಕ್ಕೆ ಇಳಿಯುತ್ತಿರುವಂತೆ ಇದ್ದುವು. ಸ್ವಲ್ಪ ಹೊತ್ತಿನಲ್ಲಿ ತಾರಕ್ಕ ಅನಂತನಿಗೆ ಹೇಳಿ ಹೋಗಲಿಕ್ಕೆ ಬಂದಳು. ಆಗ ಅನಂತ ಎದ್ದು ಕೋಣೆಯಲ್ಲಿ ಅಲೆದಾಡುತ್ತಿದ್ದ. ತಾರಕ್ಕ ಅನನ ಕಾಲುಗಳನ್ನು ಹಿಡಿದು ಬಹಳ ಹೊತ್ತಿನ ವರೆಗೆ ಅತ್ತಳು. ಅವಳ ಬಾಯಿಂದ ಮಾತುಗಳೇ ಹೊರಡಲಿಲ್ಲ. ಅನಂತನೂ

ಏನೂ ಮಾತಾಡಲಿಲ್ಲ. ಸುಮ್ಮನೆ ನಿಂತ. ಎರಡು ದೊಡ್ಡ ಬಿಸಿಯಾದ ನೀರ ಹನಿಗಳು ತಾರೆಯ ತಲೆಯ ಮೇಲೆ ಬಿದ್ದುವು. ಆಗ ಆಕೆ ಅನಂತನ ಮುಖದ ಕಡೆಗೆ ನೋಡುವಷ್ಟರಲ್ಲಿ ಹೊರಗಿನಿಂದ ಮಲ್ಲ ಕರೆಯುತ್ತ ಬಂದ. ಕೈಯಲ್ಲಿಯ ಏಕ ಸರ ಒಂದನ್ನು ತಾರಕ್ಕನ ಕೈಯಲ್ಲಿ ಕೊಡುತ್ತ "ನಿಮ್ಮ ಅತ್ತೀದ ಏತಿ, ಅನಕಾ ಕೊರಳಾಗ ಹಾಕೋ. ನಾಳಿ ನೋಡಕ ಬರಾವರ ಮಾಡಾವರ" ಎಂದ.

"ಹೂಂ!" ಎಂದು ಮುಖ ತಂದೆಗೆ ಕಾಣದಂತೆ ಮರೆಮಾಡಿ ಒರಿಸಿ ಕೊಳ್ಳುತ್ತ ತಾರೆ ಹೋದಳು. ಮಾಯವಾದಳು!

ಚಂದೂರಿಗೆ ಹೋದ ಅನಂತನ ತಂದೆ ಮೂರು ದಿನಗಳ ಮೇಲೆ ತಾರಕ್ಕನ ಉಡುಕಿಯನ್ನು ನಿಶ್ಚಯಮಾಡಿಕೊಂಡೇ ಬಂದ. ಬಂದ ಮರು ದಿನವೇ ಅನಂತನಿಗೆ ಹೇಳಿದ. "ನಾಳಿನ ಆಯ್ತಾರ್‍ಯ ಕಾರಣಾ ಮಾಡೋ ದಂತ ಮಾಡೀದಾರು. ಶನಿವಾರ ನೀ ಚಂದೂರಿಗಿ ಹೋಗು. ಅವರ ಗೂಡಾನ್ಯ ಹೋಗಿ ಕಾರಣಾ ಮಾಡಿ ಬಾ."

"ಅಭ್ಯಾಸ ಭಾಳ ಏತಿ. ನಾ ಹೋಗುದುಲ್ಲ! ಪರೀಕ್ಷಾ ಸಮೀಪಕ ಬಂತು."

"ಯಾವಾಗ ಎಲ್ಲಾ ಅಭ್ಯಾಸ ಇರತೇತಿ ಅಲ್ಲ ನಿಂದ! ನನಗ ಹೋಗ ಲಾಕ ಆಗುದುಲ್ಲಾ. ಅಂಗಡಿ ಮನೀ ಅಂತ. ಆಕಿ ಹೋಗೂಹಂಗಿಲ್ಲ. ಮತ್ತ ಯಾರ ಇದಾರ ಮನ್ಯಾಗ ಹೋಗಾವರಾ?" ಎಂದು ಸ್ವಲ್ಪ ಸಿಟ್ಟಿ ನಿಂದ ಹೇಳಿದ ರಾಮಪ್ಪ. ಅನಂತ ಹೆಚ್ಚಿಗೆ ಹೇಳದೆ ಕಾರಣಕ್ಕೆ ಹೋಗ ಬೇಕಾಯಿತು.

ಅನಂತ ತನ್ನ ಕಾರಣಕ್ಕೆ ಬಂದುದರಿಂದ ತಾರಕ್ಕನಿಗೆ ನಿರಾಶೆಯಲ್ಲಿಯೂ ಆಶಾಂಕುರ ಒಡೆದಂತಾಯಿತು. ರವಿವಾರ ನಸುಕಿರುವಾಗಲೇ ಎಲ್ಲರೂ ಕೂಡಿ ಎರಡು ಗಾಡಿ ಜನ-ಹಾರೋಗೇರಿಗೆ ಹೊರಟರು. ಒಂದು ಬಂಡಿ ಹೆಂಗಸ ರದು; ಇನ್ನೊಂದು ಬಂಡಿ ಗಂಡಸರದು. ಗಂಡಸರ ಬಂಡಿಯಲ್ಲಿ ಅನಂತ ಕುಳಿತ. ಹೆಂಗಸರ ಗಾಡಿಗೆ ಸವಾರಿ ಕಟ್ಟಿತ್ತು. ಬಿಸಿಲೇರಿದ ನಂತರ ತಾರಕ್ಕ ಅನಂತನಿಗೆ ಬಿಸಿಲು ಬಡೆಯುವದೆಂದು ತನ್ನ ಗಾಡಿಯಲ್ಲಿ ಕರೆಯಿಸಿಕೊಂಡಳು.

ಹೆಂಗಸರಿಗೂ ಅನಂತನ ಕತೆ ಕೇಳುವ ಲವಲವಿಕೆ ಇತ್ತು. ಆದರೆ ಅನಂತ ಬಂದವನೆ ಸುಮ್ಮನೆ ಕುಳಿತುಬಿಟ್ಟ. ಹೆಚ್ಚಿಗೇನೂ ಮಾತುಕತೆಯಾಡಲಿಲ್ಲ. ಓಂದು ತಾಸು ರಾತ್ರಿಗೆ ಬಂಡಿಗಳೆರಡೂ ಹಾರೋಗೇರಿಗೆ ಹೋಗಿ ತಲುಪಿದವು. ಅಲ್ಲಿ ಇವರಿಗಾಗಿ ಇಳಿದುಕೊಳ್ಳಲಿಕ್ಕೆ ಬೇರೆ ಮನೆಯನ್ನೇ ಗೊತ್ತುಮಾಡಿದರು. ಆ ಮನೆಯಲ್ಲಿ ಹೋಗಿ ಎಲ್ಲರೂ ಇಳಿದರು.

ಒಂದೆರಡು ತಾಸುಗಳು ಕಳೆದುವು. ಬಂಡಿಯೊಳಗಿನ ಸಾಮಾನುಗಳನ್ನೆಲ್ಲ ಇಳಿಸಿ ಇಟ್ಟಿದ್ದಾಯಿತು. ನೆಂಟರಿಗೆ ಬೆಲ್ಲ ನೀರು ತಂದುಕೊಟ್ಟರು. ಎಲ್ಲರೂ ಸ್ವಲ್ಪ ಸ್ವಲ್ಪ ತಿಂದು ನೀರುಕುಡಿದರು. ಅನಂತ ಏನೂ ತಿನ್ನದೆ ಒಂದೆಡೆಗೆ ಹಾಸಿದ ಗುಡಾರದ ಮೇಲೆ ಸುಮ್ಮನೆ ಬಿದ್ದುಬಿಟ್ಟಿದ್ದ. ರಾತ್ರಿಯ ಊಟಕ್ಕೆ ಆಪ್ತರಿಂದ ಕರೆ ಬಂದಿತು. ಎಲ್ಲರೂ ಹೊರಡಲು ಸಿದ್ಧರಾದರು. ಅನಂತ "ನನಗೆ ಹಸಿವಿಲ್ಲ" ಎಂದು ಹೇಳಿ ಹಾಗೆಯೇ ಒರಗಿದ. ತಾರಕ್ಕನೂ ಆಪ್ತರ ಮನೆಗೆ ಈಗಲೇ ಊಟಕ್ಕೆ ಹೋಗುವಂತಿರಲಿಲ್ಲ. ರತ್ನವ್ವ ಅನಂತನಿಗೆ ಮತ್ತೊಮ್ಮೆ "ಹಸಿವಿ ಇಲ್ಲ ಅಂದರ ಹ್ಯಾಂಗಪ್ಪಾ, ಮಧ್ಯಾಹ್ನದಾಗ ಯಾವಾಗ ಹೊಳೀವ್ಯಾಲ ಜರಾ ಉಂಡೀದಿ" ಎಂದು ಕರೆದಳು. ಆಗಲೂ ಅನಂತ ಹಸಿವಿಲ್ಲ ವೆಂದೇ ಹೇಳಿದ. ಅನಂತರ ರತ್ನವ್ವ ಮಗಳ ಹತ್ತಿರ ಹೋಗಿ "ಅಂತೂ ಉಣಾಕ ಬರೂದುಲ್ಲಾ. ಅಂವಗ ಟ್ರಂಕಿನೊಳಗಿನ ಎರಡ ಉಂಡೀ ತಗದಕೊಡು, ತಿಂದ ನೀರ ಕುಡೀಲಿ" ಎಂದು ಹೇಳಿದಳು. ತಾಯಿ ಹೇಳಿದ ಮಾತಿನ ಕಡೆಗೆ ತಾರಕ್ಕನ ಲಕ್ಷ್ಯವಿರಲಿಲ್ಲ. ಸುಮ್ಮನೆ ನಿಂತಳು. ರತ್ನವ್ವ ಮತ್ತೊಮ್ಮೆ,

"ನಾ ಹೇಳಿದ್ದ ತಿಳೀತಿಲ್ಲ ?" ಎಂದು ಕೇಳಿದಳು.

"ಹೂಂ !" ಅಂದಳು ತಾರಾ.

ಎಲ್ಲರೂ ಊಟಕ್ಕೆ ಹೋದರು. ಹಾಸಿಗೆಯ ಮೇಲೆ ಅನಂತ ಸುಮ್ಮನೆ ಉರುಳಾಡುತ್ತಿದ್ದ. ಮನದಲ್ಲಿ "ತಾನು ಈಗ ಮದುವೆಯಾಗದೆ ಇದ್ದಿದ್ದರೆ ಈಗ ನನಗೆ ಹೆಣ್ಣು ಆರಿಸಿಕೊಳ್ಳುವ ಸ್ವಾತಂತ್ರ್ಯವಿರುತ್ತಿದ್ದರೆ—ತಾರೆಯನ್ನೇ ಆರಿಸಿಕೊಳ್ಳಬಹುದಾಗಿತ್ತಲ್ಲವೆ ? ಆಗ ನಾನು ಎಷ್ಟೊಂದು ಸುಖದಲ್ಲಿರಬಹು ದಾಗಿತ್ತು. ಆ ಸುಖವನ್ನು ಈ ಜನ್ಮದಲ್ಲಿ ಇನ್ನು ಪಡೆಯಲು ಸಾಧ್ಯವೇ ? ಇಲ್ಲ. ಅದೇಕೆ ? ಯಾರಿಂದ ? ಈ ಸಮಾಜದ ರೂಢಿಯಿಂದಲ್ಲವೆ ?" ಎಂದು ಏನೇನೋ ಧೇನಿಸುತ್ತ ಸಾಗಿದ್ದ. ತಾರಕ್ಕ ಹೊರಗೆ ಹೋಗಿ ಎಲ್ಲರೂ

ಊಟಕ್ಕೆ ಹೋದರೇನೆಂದು ನೋಡಿ ಬಂದಳು. ಆಮೇಲೆ ಅನಂತನ ಹತ್ತರ ಬಂದು "ಈಗ ನನ್ನ ಮಾತ ಒಂದು ಕೇಳತಿ ಯಾನಾ?" ಎಂದು ಕರುಣದಿಂದ ಕಣ್ಣೀರುಗರೆಯುತ್ತ ಕೇಳಿದಳು.

ಅನಂತನಿಗೂ ತುಂಬ ವೇದನೆಯಾಗಿತ್ತು. ತಾರಕ್ಕನನ್ನು ತಬ್ಬಿಕೊಂಡು ಅತ್ತುಬಿಟ್ಟ. ಅಳುವಿನ ಆವೇಗ ಸ್ವಲ್ಪ ಕಡಿಮೆಯಾಗಲು "ಯಾನ ಮಾಡಲಿ?" ಎಂದು ಕೇಳಿದ.

"ಇದೊಂದ ರಾತ್ರಿ ಹೋದರ ತೀರಿತು. ನನಗಾ ನಿನಗಾ ಯಾನೂ ಸಂಬಂಧ ಇಲ್ಲ. ಈಗs ಯಾನಾರ ಮಾಡೂಣು."

"ಯಾನ ಮಾಡೋದಾ?" ದಿಙ್ಮೂಢನಾಗಿ ಕೇಳಿದ ಅನಂತ.

"ಅದ ನಾ ಹೇಳ್ತ್ಯಾನಲ್ಲ; ಆದರ...."

"ಆದರ ಯಾನ?"

"ಅದ ಭಾಳ ಕೆಟ್ಟ ಕೆಲಸ."

"ಕೆಟ್ಟ ಕೆಲಸಾ!"

"ಹೋಂದ; ಮಂದಿ ಎಲ್ಲಾ ಬಯ್ಯಾವರ."

"ಹಾಂಗಾರ ಯಾಕ ಮಾಡೋದಾ?"

"ಮಾಡದಿರ ಗತೀನ ಇಲ್ಲ"

"ಯಾಕ?"

"ಅದ ನನಗ ಗೊತ್ತಿಲ್ಲ; ಅದನ್ನ ಮಾಡದಿರ ಮಾತ್ರ ಇಬ್ಬರಿಗೂ ಸಾಯೂ ತನಕಾ ಸುಖಾ ಆಗೂದುಲ್ಲ ಅನ್ನೋದ ನಾ ಖಾತ್ರಿಲೆ ಹೇಳ್ತ್ಯಾನ"

"ಮಾಡಿರ ಸುಖಾ ಆದೋತು?"

"ಆದೋತಲಾ!"

"ಹಾಂಗಾರ ಮಾಡೂಣು."

"ಇಬ್ಬರೂ ಇಲ್ಲಿಂದ ಈಗ ಹೋಗುಣು ನಡಿ."

"ಎಲ್ಲಿ?"

"ಎಲ್ಲಿರ!"

"ಹೀಂಗ?"

"ಅದಕ್ಯಾನ ಅಗ್ರೈತಿ ? ನನ್ನ ಮೈಮ್ಯಾಲಿ ದ್ಯಾಗೀನಿ ಇದಾವು. ಮುರಿಸಿ ತಿನೋದಾ."

"ಹಾಂಗಾರ ಹೋಗೂಣು ನಡಿ ! ಏಳ !"

ತಾರಕ್ಕನ ಮನಸ್ಸು ಹಗುರಾಯಿತು. ಮುಖದ ಮೇಲೆ ಉತ್ಸಾಹ ಉಕ್ಕಿತು. ಸಂತಸದ ಚಿಹ್ನೆ ಸುಳಿಯಿತು. ಕೊಂಚಕಾಲ ಶಾಂತಚಿತ್ತದಿಂದ ಕುಳಿತಳು. ಏನೋ ಧೇನಿಸುವಂತಿತ್ತು ಅವಳ ಮುಖ. ಜೊತೆಗೆ ಅರಿವೆಗಳ ನ್ನೇನೇನು ಒಯ್ಯುವದೆಂದು ವಿಚಾರಿಸುತ್ತಿದ್ದಳೇನೊ ?

"ತಾರಾ !" ಎಂದ ಅನಂತ.

"ಯಾಕ ?"

"ಮುಂದ ಯಾನ ಮಾಡೋದಾ ?"

"ಹೋಗೋದಾ."

"ಹೋಗೋದಾ ಆಯ್ತು ! ಮುಂದ !"

"ಮುಂದಿಂದ ಮುಂದ."

ಹಣೆ ಏರಿಸಿ ಕುಳಿತ ಅನಂತ, ವಿಚಾರದಲ್ಲಿ.

"ನಾ ದುಡದ ತಂದ ಹೊಟ್ಟಿಗಿ ಹಾಕ್ತ್ಯಾನು. ಹೊಟ್ಟಿಗಿ ಸಿಗದಿರ ಹೊಳಿ ಭಾವೀ ಬಿದ್ದ ಸಾಯೂನು."

"ಆಂ !"

"ಆಂ ! ಅನ್ನಲಾಕ ಯಾನ ? ಇಬ್ಬರು ಕೂಡೇ ಸಾಯೂನಲ್ಲ ;"

"ಹೂಂ !"

"ಏಳ ಹೊರಡೂನು."

ಅನಂತ ಈ ಮಾತಿಗೆ ಮುಂದೆ ಮಾತಾಡಲಿಲ್ಲ. ಕಲ್ಲಿನಂತೆ ಕುಳಿತ. ಅವಳಿಗೇನೂ ಹೇಳಲಿಲ್ಲ. ಹೊತ್ತು ಹೋಗಹತ್ತಿತು. ಗಳಿಗೆಯೊಂದು ಕ್ಷಣ ವಾಗತೊಡಗಿತು. ಸುತ್ತಲೂ ನೀರವ. ತಾರಕ್ಕ ಅನಂತನ ಕಡೆಗೇ ನೋಡು ತ್ತಿದ್ದಳು. ಹಲ್ಲಿಯೊಂದು ನುಡಿಯಿತು. ತಾರಕ್ಕ ನಿಸ್ಪಂದ ನಯನಳಾಗಿ ಕುಳಿತಿದ್ದಳು. ಗ್ಯಾಸು ಉರಿಯುತ್ತಿದ್ದಿತು. ಕೊನೆಗೆ ತಾರಕ್ಕನೇ "ಯಾಕ ಅನಂತಾ, ಹಿಂದಿಂದ ಎಲ್ಲಾ ಮರತಿ ? ನಿನ್ನ ಸಲುವಾಗಿರನಾ ಇನ್ನs ಜೀವ ಹಿಡದ್ದಾsನ. ನೀ ಈಗ ಬರಲಾಕs ಬೇಕ" ಎಂದು ಆಗ್ರಹಮಾಡಿದಳು.

ಹೀಗೆ ತಾನು ಆಗ್ರಹಮಾಡಲು ಅನಂತನ ಮೇಲೆ ತನಗೆ ಹಕ್ಕಿದೆ ಎಂದು ಭಾವಿಸಿದ್ದಳು, ತಾರೆ. ಅವಳ ಭಾವನೆಯಂತೆ ಅವಳಿಗೊಂದು ಅಧಿಕಾರವೂ ಇತ್ತು. ಈ ಅಧಿಕಾರ ಅವಳಿಗೆ ಯಾರೂ ಕೊಟ್ಟಿರಲಿಲ್ಲ. ಅದು ನಿಸರ್ಗ ದಿಂದಲೇ ಅವಳಿಗೆ ಲಭಿಸಿದುದು. ಇದು ಅವಳಿಗೇ ಮೊದಲು ತಿಳಿದಿರಲಿಲ್ಲ. ಅವಳ ಅಶಾಂತ ಮನೋಧಾರೆಯು ಅವಳಿಗೆ ತಿಳಿಯದಂತೆಯೇ ಸರಿದು, ಅತ್ಯಂತ ಆಳವಾದ ಈ ಅಧಿಕಾರವನ್ನು ಸಂಪಾದಿಸಿಕೊಂಡಿತ್ತು. ಅದಕ್ಕೆ ಅನಂತನೂ ಎಡೆಗೊಟ್ಟಿದ್ದ. ಆ ಅಧಿಕಾರ ಇಲ್ಲಿಯವರೆಗೆ ಇತ್ತು ಎಂಬುದರ ಅರಿವು ಅಷ್ಟು ಸ್ಪಷ್ಟವಾಗಿ ಇರದೆ ಇದ್ದರೂ ಕೂಡ ಈಗ ಅದು ನಷ್ಟವಾಗಿ ಹೋಗಹತ್ತಲು ಅವಳ ಹೃದಯವನ್ನೆಲ್ಲ ಹಿಂಡಿ ಹೋಗಹತ್ತಿತು.

ಅನಂತನ ಮನದಲ್ಲಿ "ಹುಡುಗತನದಿಂದ ಹೃದಯದಲ್ಲಿ ಹರೆಯ ಹುಟ್ಟಿ ಬರುವಾಗ—ಪುುತ್ತಿ ಬರುವಾಗ—ಅದೆಷ್ಟೋ ಸಲ ನನಗೆ ಹೆಂಡತಿ ಎಂಬ ವಸ್ತು ವೊಂದು ದೂರದಲ್ಲಿದೆ. ನಾನು ಅದರ ಸ್ವತ್ತು, ಎಂಬ ಅರಿವಿದ್ದೂ ಕೂಡ ಮುಂದಿನ ಪರಿಣಾಮಕ್ಕೆ ಯೋಚಿಸದೆ ಯಾವುದನ್ನೂ ಮಾಡಲು ಸಿದ್ಧನಾದೆ, ನಾನು. ಒಲವಿನ ಆವೇಗದಲ್ಲಿ ಕಷ್ಟವು ಬಂದಿತೆಂದು ತಿಳಿದೂ ಅದರಲ್ಲಿ ಕೊಚ್ಚಿ ಕೊಂಡು ಹೋದೆ. ಇಂದಿನ ದುಃಖದ ಬಾಳು ಅಂದಿನ ತಪ್ಪಿದ ಅಡಿಗೆ ಫಲ ವಾಯಿತು. ಆ ತಪ್ಪು ಈಗ ತಿದ್ದುವಂತಿದೆ. ಆದರೆ ಅದು ನನ್ನಿಂದಾದೀತೆ ? ಧ್ಯೇಯವಾದಿ ತ್ಯಾಗಿಯೂ ಕಷ್ಟಸಹಿಷ್ಣುವೂ ಆಗಬೇಕಾದ ದೃಢತೆಯು ನನ್ನಲ್ಲಿ ದೆಯೇ ?" ಎಂಬ ವಿಚಾರದ ಜೋಕಾಲಿಗೆ ನೇತು ಬಿದ್ದು, ಆ ಅಂಚಿಗೊಮ್ಮೆ ಈ ಅಂಚಿಗೊಮ್ಮೆ ಹೋಗಿ ಅಪ್ಪಳಿಸುತ್ತಿದ್ದ.

## ೧೭

ಆ ದಿನ ರಾತ್ರಿ ಹನ್ನೊಂದು ಗಂಟೆಯ ಸುಮಾರಿಗೆ ತಾರಕ್ಕನನ್ನು ಬೇರೆ ಕಡೆಗೆ ಕರೆದೊಯ್ದರು. ನಾಲ್ಕು ಜನ ವಿಧವೆಯರು ಕೂಡಿ ನೀರೆರೆದರು. ಬಿಳಿಯ ಧೋತರವೊಂದನ್ನು ಉಡಿಸಿ ದೇವರ ಮನೆಗೆ ಕರೆದೊಯ್ದರು. ಈ

ಮೊದಲೆ ಅಲ್ಲಿ ಅಪ್ಪಣ್ಣ ಬಂದು ಕುಳಿತಿದ್ದ. ಅಪ್ಪಣ್ಣನ ವಯಸ್ಸು ನಲವತ್ತರ ಮನೆಯನ್ನು ಮುಟ್ಟಲಿದೆ. ಬಣ್ಣ ಸಾಧಾರಣ ಕಪ್ಪು, ಎಲೆ ತಿನ್ನುವುದರಿಂದ ತುಟಿಗಳಷ್ಟು ಒಳ್ಳೆಯ ಕೆಂಪಾಗಿದ್ದುವು. ಹುರಿಗೊಂಡ ಮೀಸೆಗಳು, ಎರಡೂ ಬಣ್ಣದಿಂದ ಕೂಡಿರುವವು. ಸ್ವಲ್ಪ ಕುಳ್ಳ ಹಾಗೂ ದಪ್ಪ ಮನುಷ್ಯನಾತ. ಈ ಹೊತ್ತು ದೊಡ್ಡದೊಂದು ಪಟಕೆ ಸುತ್ತಿ ಹೊಸಧೋತರ ಉಟ್ಟುಕೊಂಡು, ದೇವರ ಜಗುಲಿಯ ಎದುರಿಗೆ ಪೂರ್ವಕ್ಕೆ ಮುಖಮಾಡಿ ಒಳ್ಳೆಯ ಠೀವಿಯಿಂದ ಕುಳಿತಿದ್ದಾನೆ. ತಾರಕ್ಕನನ್ನು ಒಯ್ದು ಅವನ ಪಕ್ಕದಲ್ಲಿ ಕೂಡಿಸಿದರು. ಅಪ್ಪಣ್ಣ ನಗುಮುಖದಿಂದ ಅತ್ತಿತ್ತ ನೋಡುವ. ತಾರಕ್ಕನ ಮುಖವನ್ನು ನೋಡಲು ಹವಣಿಸುವ. ಆದರೆ ತಾರಕ್ಕನ ಮುಖ ಅವನಿಗೆ ಕಾಣುತ್ತಿರಲಿಲ್ಲ. ಅಷ್ಟು ಬಾಗಿ, ಬುರುಕ ಹಾಕಿಕೊಂಡು ಕುಳಿತಿದ್ದಳಾಕೆ. ವಿಧವೆಯೊಬ್ಬಳು ಗೋಮುಲದ ಬೊಟ್ಟೊಂದನ್ನು ತಾರಕ್ಕನ ಹಣೆಗೆ ಹಚ್ಚಿದಳು. ಅನಂತರ ಪಂಡಿತ ಕುಂಕುಮ ಅರಿಸಿಣ ಹಚ್ಚಿ ತಾರಕ್ಕನಿಗೆ ಮಂಗಲಸೂತ್ರ ಕಟ್ಟಿದ. ಆಮೇಲೆ ಇಬ್ಬರ ಅರಿವೆಗಳನ್ನೂ ಕೂಡಿಸಿ ಗಂಟುಹಾಕಿದ. ಆಗ ಅಪ್ಪಣ್ಣ ನಗುತ್ತ, "ಗಟ್ಟಿ ಹಾಕಪ್ಪ ಬಿಚ್ಚೋತ ಮತ್ತ !" ಎಂದು ನಗೆಯಾಡಿದ.

"ಬಿಚ್ಚಲಾಕ ಯಾನ ಪುಕ್ಕಟೆ ಬಂದಿತ್ಯಾನ ? ಏಳರಿ ಇನ್ನ. ದೇವರಿಗೆ ನಮಸ್ಕಾರ ಮಾಡಿರಿ !" ಎಂದು ಪಂಡಿತ ಹೇಳಿದ.

ಸುತ್ತಲೂ ನಿಂತ ವಿಧವೆಯರು ಅರ್ಥಪೂರ್ಣವಾದ ನಗೆಯೊಂದನ್ನು ಬೀರಿದರು. ಬಾಗಿಲ ಕಡೆಗೆ ಏನೋ ಸ್ವಲ್ಪ ಸದ್ದಾಯಿತು. ಕೂಡಲೆ ಒಬ್ಬ ಮುದುಕಿ ಅತ್ತ ಓಡಿಹೋಗಿ, ಬಾಗಿಲ ಸಂದಿಯಿಂದ ಹೊರಗೆ ಹಣಕಿ ಹಾಕಿ ನೋಡಿ "ನಡೀರತ್ತ, ನೋಡಬಾರದ ನೀವ !" ಎಂದು ಸಿಟ್ಟಿನಿಂದ ಗದರಿಸಿದಳು. ಹೊರಗೆ ಹುಡುಗೆಯರೋಡಿದ ಸದ್ದಾಯಿತು. ಮುದುಕಿ ತಿರುಗಿ ಜಗುಲಿಯ ಕಡೆಗೆ ಬಂದು "ಪಂಡಿತರs ಆಯ್ತು ಅಲ್ಲೇನರಿ ನಿಮ್ಮ ಕೆಲಸಾ ?" ಎಂದು ಕೇಳಿದಳು.

"ಆಯ್ತು ನನ್ನ ಕೆಲಸ. ಇನ್ನೊಮ್ಮಿ ನೀರ ಹಾಕಿ. ಹೊಸಾ ಸೀರಿ ಉಟಕೋಕಕೊಡರಿ. ಅಂದರ ಆಯ್ತು ಇಕೀಗಿ."

"ನೀ ಹೋಗ ಇನ್ನ ; ನಾವ ಎಲ್ಲಾ ಮಾಡಕೋತೇವ."

"ನಾ ಹೋಗತ್ಯಾನ ನಿಲ್ಲೂದುಲ್ಲ! ಆದರ ಆಕಿ ಉಟಕೊಂಡದ ಧೋತರ ನಮಗs ಬರೋದ. ಅಂ ?"

"ಹ್ಣ ! ಅದನ ಮರಿಬ್ಯಾಡರಿ ಪಂಡಿತರ? ಪಂಡಿತರಂದರ ಎಲ್ಲಾ ಗೋಳೀ ಮಾಡಕೋಳಾವರ ಇರತಾರ ನೋಡು!" ಎಂದು ನಗೆಯಲ್ಲಿ ನುಡಿದ ಅಪ್ಪಣ್ಣ.

"ಇರಾವರಲ್ಲ! ಇಂದ ಪಾರಾದಿರೆಂದರ ನಾಳಿ ಯಾನ ನೀವ ಕುಡತೀರಿ ?" ಎಂದು ಮತ್ತೊಬ್ಬಾಕೆ ಕೇಳಿದಳು.

"ನೋಡಪ್ಪ! ಎಂಥಾ ಬಂಗಾರದಂಥಾ ಪೋರಿನಾ ಗಂಟ ಹಾಕಿ ಕೊಟ್ಟೆನು. ಮತ್ತ ಹಿಂಗ ಅನ್ನತಾ, ಜರದ ರುಮಾಲಿ ಒಂದ ಸುತ್ತವಲ್ಲ ನನಗ ?" ಎಂದು ನಕ್ಕು ಕೆಲೆದು ಪಂಡಿತ ಹೋದ.

ಮುಂದೆ ಆದುದೆಲ್ಲ ಸರಿಯಾಗಿಯೇ ನಡೆಯಿತು.

ಮರುದಿನ ಬೆಳಗ್ಗೆ ಸ್ನಾನ ಮಾಡಿದ ಮೇಲೆ ತಾರಕ್ಕನ ಮೈಮೇಲೆ ನಾಲ್ಕಾರು ಆಭರಣಗಳು ನಲಿಯತೊಡಗಿದವು. ಅದೇ ದಿನ ದೈವದೂಟ. ಅಪ್ಪಣ್ಣ ಓಡಾಡಿ ಕಾರ್ಯಮಾಡುತ್ತಿದ್ದಾನೆ. ಅತ್ತಿತ್ತ ಹರುಷದಿಂದ ಓಡಾಡುತ್ತಿದ್ದಾನೆ, ಮನದಲ್ಲಿ ಆನಂದ ಹೆಚ್ಚಾಗಿ. ತಾರಕ್ಕನಿಗೆ ಈಗ ಅದು ತನ್ನ ಮನೆಯೇ ಅಂಬುವಂತೆ ಒಳಗೆ ಕೆಲಸ ಮಾಡಬೇಕಾಗಿದೆ. ಆದುದರಿಂದ ಅವಳ ಗೆಳತಿ ಸುಮತಿ ತಾರಕ್ಕನನ್ನು ನೋಡಲು ಒಳಗೇ ಬಂದಳು, ತನ್ನ ಹುಡುಗನನ್ನು ಎತ್ತಿಕೊಂಡು. ಅವಳು ನಗುತ್ತ "ನಾವ ಮೋಕಳೀಕ ಅದೇವ ತಾಯಿ ಇನ್ನ!" ಎಂದು ನುಡಿದಳು.

ಅಲ್ಲಿ ಇನ್ನಾರೂ ಇರಲಿಲ್ಲ. ತಾರಕ್ಕ ಸ್ವಲ್ಪ ತಡೆದು "ಯಾರನಾರೇ ಸೂಲಕ ಕೊಟ್ಟೆ ನೀವ ಯಾವಾಗದರs ಪರಭಾರೇನs ಇದೀರಲ್ಲ! ಹರಹರಾ ಅನ್ನಾವರ ಹಜಾರ ಮಂದಿ ಆದರ ಕಿಚ್ಚಾಚ ಏರಾವರ ಒಬ್ಬರs ಅಲ್ಲಾ !"

"ಹಿಂಗ್ಯಾಕ ಅನ್ನತಿ ?"

"ಯಾಕ ಅನ್ನೋದ ಗೊತ್ತಿಲ್ಲ ಯಾನ ನಿನಗ ?"

ಸುಮತಿಗೆ ತಾರಕ್ಕ ಅನಂತನನ್ನು ಪ್ರೀತಿಸುವಳೆಂಬ ಸಂಗತಿ ಸ್ವಲ್ಪ ಸ್ವಲು ಗೊತ್ತಿದ್ದಿತು. ಅದಕ್ಕೆ ಅವಳು ಮಾತು ತಿರುಗಿಸಿ "ಅನಂತ ಇಂದs ಉಂಡ ಹೋಗತಾ ಅಂತ" ಎಂದಳು.

ತಾರಕ್ಕ ಚಕಿತಳಾಗಿ "ಅದ್ಯಾಕ ? ಇದೊಂದ ದಿನಾ ನಿಂತ ಹೋಗುದುಲ್ಲಾ, ಈ ಪಾಪಿ ಮನ್ಯಾಗ ? " ಎಂದು ಸುಮತಿಯ ಕೈ ಹಿಡಿದು ಕೇಳಿದಳು.

ಸುಮತಿಯ ಕಂಠವೂ ಗದ್ಗದಿತವಾಯಿತು. "ಅವನಾ ಯಾಕ ಇಟಕೋಬೇಕ ಅಂತೀ ? " ಅಂದಳು.

"ಮುಡದ ಹೂ ದೇವರಿಗಿ ಏರಸಕ ಬರೂದುಲ್ಲ. ಆದರ...." ಮುಂದೆ ಅವಳ ಬಾಯಿಂದ ಮಾತುಗಳು ಹೊರಡಲಿಲ್ಲ. ನೋಟ ತಗ್ಗಿತು. ಮುಂಗೈ ಮೇಲೆ ಎರಡು ಹನಿಗಳು ಉರುಳಿದುವು.

ಅಷ್ಟರಲ್ಲಿ ಅಮ್ಮವ್ವ—ತಾರಕ್ಕನ ಹೊಸ ಅತ್ತೆ—"ಯಾನ ಮಾಡಕ ಹತ್ತಿದಿರಿ ಬೇ" ಎಂದು ಕೇಳುತ್ತ ಒಳಗೆ ಬಂದಳು.

ಇಬ್ಬರೂ ಕಣ್ಣೀರು ಒರಸಿಕೊಂಡು, "ಯಾನಿಲ್ಲs" ಎಂದು ಹೊರಗೆ ಬಂದರು.

ಮಧ್ಯಾಹ್ನ ಊಟವಾದೊಡನೆಯೇ ಅನಂತ ಹೊರಟು ನಿಂತ. ಮಾವ ಅತ್ತೆ ಎಲ್ಲರೂ "ನಾಳೆ ಎಲ್ಲರೂ ಕೂಡಿಯೇ ಹೋಗೋನು, ಬಂದಾಂಗ ಊರಿಗೇ ಹೋಗೇ ಹೋಗಾಕೆ ಅಂತ" ಎಂದು ಎಷ್ಟು ಹೇಳಿದರೂ ಅವನು ನಿಲ್ಲಲಿಲ್ಲ. ಹೋಗುವಾಗ ಎಲ್ಲರಿಗೂ ಹೇಳಿದ. ತಾರಕ್ಕ ಬಾಗಿಲ ಮರೆಗೆ ನಿಂತಿದ್ದಳು. ಅವಳಿಗೂ ಹೇಳಬೇಕಾಯಿತು. ಆಗ ಅನಂತನ ಹೃದಯದಲ್ಲಿ ಸಾವಿರ ಚೇಳು ಕಡಿದಷ್ಟು ನೋವಾಯಿತು. ಧ್ವನಿಯೂ ನಡುಗಿತು. ಅವನಿಗೆ ಭ್ರಮೆ ಹಿಡಿದಂತೆ ಆಗಿದ್ದಿತು. ಮೆಲ್ಲಗೆ ಹೊರಳಿ ನಡೆದ. ಯಾವಾಗ ಇಲ್ಲಿಂದ ಹೋಗುವೆನೋ ಎಂದುಕೊಂಡಿದ್ದ. ಮನದಲ್ಲಿ ಇವರೆಲ್ಲರ ಮುಂದಿಂದ ಒಮ್ಮೆ ಓಡಿ ಹೋಗಿ ಮಾಯವಾಗಲೇ ಅನ್ನಿಸಿತು. ಆದರೆ ಹಾಗೆ ಮಾಡಲಿಲ್ಲ, ಮಾತ್ರ. ಅವನು ಹೋದ ಮೇಲೆ "ಹುಡುಗ ಯಾಕೋ ನಿನ್ನಿಂದೂ ಮೆತ್ತಗs ಇದಾ ಉಂಡಿಲ್ಲ ತಿಂದಿಲ್ಲ" ಎಂದು ಒಬ್ಬ ಹೆಂಗಸು ಅಂದಳು.

"ವಿಚಿತ್ರ ಪ್ರಾಣಿ" ಎನ್ನುತ್ತಿತ್ತು, ಸುಮತಿಯ ಮನಸ್ಸು.

"ಅದಕs ಇದೊಂದ ದಿನಾ ನಿಲ್ಲ ಅಂದರ ನಿಲ್ಲಲಿಲ್ಲ ; ಹೋದ. ಮನ್ಯಾಗ. ಅವ್ವಾ ಅಪ್ಪಾ, ಒಬ್ಬನಾನs ಹಿಂಗ್ಯಾಕ ಬಿಟ್ಟರ ಅಂದಾರು. ಆದರ ಹುಡಗ ಕೇಳಲಿಲ್ಲ ; ಅಲ್ಲ ? ಈಗ್ಯಾನ ಅಂವ ಸಣ್ಣಾವ ಇದಾ ? ಹಿಡದ ನಿಲ್ಲಸೂಣು ? " ಎಂದು ಹೇಳಿದಳು ರತ್ನಾ.

ಹಾಗೆ ಹೊರಟ ಅನಂತ. ಕುಡಚಿ ನಿಲ್ದಾಣದಿಂದ ತೇರದಾಳಕ್ಕೆ ಹೋಗುವ ರಾಜಮಾರ್ಗಕ್ಕೆ ಬಂದು ತಲುಪಿದ. ಸ್ವಲ್ಪ ಹೊತ್ತು ಮೋಟಾರು ಬರುವ ದಾರಿ ಕಾಯ್ದ. ಅದೇಕೋ ಎದ್ದು ಕುಡಚಿಯ ನಿಲ್ಮನೆಯತ್ತ ನಡೆದ. ಹಾಗೇ ಅವನ ಕಾಲುಗಳು ದಾರೀ ಹಿಡಿದು ಸಾಗಿದ್ದುವು! ಭ್ರಮಿಷ್ಟನಂತೆ ಹೇಗೋ ಹೆಜ್ಜೆಗಳನ್ನು ಒಗೆಯುತ್ತ ನಡೆದಿದ್ದ. ಫರ್ಲಾಂಗಿನ ಮೇಲೆ ಫರ್ಲಾಂಗುಗಳು ಬಂದುವು. ಮೈಲಿನ ಮೇಲೆ ಮೈಲುಗಳೂ ಬಂದು ಹೋದುವು. ಹಿಂದಿನಿಂದ ಒಂದು ಮೋಟಾರೂ ಬಂದು ಹೋಯಿತು. ಆದರೂ ಅವನಿಗೆ ಮೋಟಾರು ನಿಲ್ಲಿಸ ಹೇಳಿ ಕೂಡಬೇಕೆಂಬ ಎಚ್ಚರವೇ ಇಲ್ಲ. ಏನೋ ವಿಚಾರದ ಸುಂಟರಗಾಳಿಯಲ್ಲಿ ಸುತ್ತುತ್ತ ನಡೆದಿದ್ದ. ಹೊತ್ತು ಮುಳುಗಿತು. ಕತ್ತಲಾಯಿತು. ಇದಾವುದರ ಅರಿವೇ ಇಲ್ಲ, ಅವನಿಗೆ. ಹೇಗೋ ರಾತ್ರಿ ಹತ್ತು ಗಂಟೆಗೆ ಕುಡಚಿ ನಿಲ್ದಾಣಕ್ಕೆ ಬಂದ. ಅಲ್ಲಿ ಒಂದು ಬೆಂಚಿನ ಮೇಲೆ ಹೋಗಿ ಕುಳಿತ.

ಅನಂತನಿಗೆ ಅತ್ಯಂತ ಸಂಕಟವಾಗುತ್ತಿದ್ದಿತು. ದೈಹಿಕ ನೋವು ಅವನಿಗೆ ಏನೂ ಇರಲಿಲ್ಲ. ಆದರೆ ಅವನ ಅಂತರಾತ್ಮನಿಗೇ ಒಂದು ಅನಿರ್ವಚನೀಯವಾದ ನೋವು ಉಂಟಾಗಿದ್ದಿತು. ತನ್ನ ಸುಖ ತನ್ನ ಕೈಯಲ್ಲಿ ಇರಲಿಕ್ಕಾಗಿ ಕಳೆದುಕೊಂಡೆನೆಂದು ಈಗ ಅವನಿಗೆ ಅನಿಸಹತ್ತಿತ್ತು. ಒಂದು ಸಿಗಲಾರದಂಥ ಒಡವೆಗಾಗಿ ಹಗಲಿರುಳು ಹಂಬಲಿಸಿ, ಬಾಯಿತೆರೆದು ಕುಳಿತಿರುವಾಗ, ಬಯಸಿದ ವಸ್ತುವು ಒಮ್ಮೆಲೇ ಸಿಕ್ಕು, ಇನ್ನೇನು ಈ ವಸ್ತು ನನ್ನದೇ ಇರುವದು, ಎಂದು ಭಾವಿಸಿ ಸುಮ್ಮನೆಇರುವಾಗ ಕಣ್ಣೆದುರಿಗೆಯೇ ಆ ವಸ್ತು ಅನ್ಯರ ಸ್ವತ್ತಾಗಿ ಹೋದರೆ ಯಾವ ಸ್ಥಿತಿಯಾಗುವದೋ ಅದೇ ಸ್ಥಿತಿ ಅನಂತನದಾಗಿದ್ದಿತು. ಆ ವಸ್ತು ತನ್ನಲ್ಲಿರುವವರೆಗೆ ಅದರ ಮಹತ್ವ ಅಷ್ಟು ಅನ್ನಿಸದು. ಅದೇ ಅಗಲಿ ಹೋದ ಮೇಲೆ ಅದರ ಮಹತ್ವದ ಅರಿವಾಗುವದು. ಆ ರಾತ್ರಿ ಈ ಅರಿವು ಅನಂತನಿಗೆ ಬರತೊಡಗಿದ್ದಿತು. ತನ್ನ ವಸ್ತುವು ಅನ್ಯರಿಗೆ ಪಾಲಾಗುವದನ್ನು ಕಂಡೂ, ಉಳಿಸಿಕೊಳ್ಳಲು ಯತ್ನಿಸಲಿಲ್ಲವೇಕೆ ? ಅದರ ಉತ್ತರ ಅನಂತನಿಗೇ ದೊರೆಯದೀಗ. ತನ್ನ ಆತ್ಮದ ಒಂದಂಶ ಇದೀಗ ಕಳಚಿಹೋಯಿತು. ಇನ್ನು ಆ ಭಾಗ ಮರಳಿ ಎಂದಿಗೂ ತನಗೆ ಸೇರದು. ಇಂದಿಗೆ ಪೂರ್ಣ ವಿನಿಯೋಗ

ವಾಯಿತು. ಹಿಂದಿನ ಆ ದಿನಗಳನ್ನು ನೆನೆಸುತ್ತ ಕೂಡುವುದು ಕೇವಲ ಮೂರ್ಖತನ.

ಹೀಗೆ ಅನಂತ ವಿಚಾರಸಾಗರದಲ್ಲಿ ಮುಳುಗಿರುವಾಗಲೇ ಮೂಡಲ ಮುಗುದೆಯ ಮುಖ ಬಿಳುಪೇರತೊಡಗಿತು. ಆಗ ಅವನಿಗೆ ತಾನಿನ್ನೂ ಊರಿಗೆ ಹೋಗಬೇಕಾಗಿದೆ; ತಾನೀಗ ಕುಡಚಿಯ ನಿಲ್ಮನೆಯಲ್ಲಿದ್ದೇನೆ, ಎಂಬುದರ ಅರಿವು ಬಂದಿತು. ಎದ್ದು ಐನಾಪುರದ ಹಾದೀ ಹಿಡಿದ. ಹುಚ್ಚನಂತೆ ಕಾಲುಗಳನ್ನು ಒಗೆಯುತ್ತ ನಡೆದಿದ್ದ. ಬೆಳತನಕ ನಿದ್ರೆಯಿಲ್ಲದುದರಿಂದ ಕಣ್ಣುಗಳು ಕೆಂಪ ಗಾಗಿದ್ದುವು. ಮೈಮೇಲಿನ ಅರಿವೆಗಳೆಲ್ಲ ಮಲಿನವಾಗಿದ್ದುವು. ಹೇಗೋ ಅಲೆ ಯುತ್ತ ಅಲ್ಲಿ ಇಲ್ಲಿ ಕೂಡುತ್ತ ಸಂಜೆಗೆ ಬಂದು ಮನೆಯನ್ನು ತಲುಪಿದ.

ಆಗ ಸುಂದರಾಬಾಯಿ ಒಳಗಿನ ಮನೆಯಲ್ಲಿ ಏನೋ ಕೆಲಸ ಮಾಡು ತ್ತಿದ್ದಳು. ಹೊರಗೆ ಹೆಜ್ಜೆಯ ಸಪ್ಪಳ ಕೇಳಿ, "ಯಾರವರಾ ?" ಎಂದು ಕೇಳಿದಳು.

ಅನಂತ ಮಾತಾಡುವ ಅವಸ್ಥೆಯಲ್ಲಿರಲಿಲ್ಲ. ಅವನು ಏನೂ ಹೇಳಲಿಲ್ಲ. ಸುಂದರವ್ವ ಚಟ್ಟನೆ ಎದ್ದು ಹೊರಗೆ ಬಂದು ನೋಡಿ "ಯಾಕೋ ಅನಂತಾ ಯಾವ ಕಡೇದ ಬಂದಿ ?" ಎಂದಳು ಬೆರಗಿನಿಂದ.

"ಹಾರೋಗೇರಿಯಿಂದs ಬಂದಿನು" ಎಂದ ಅನಂತ.

"ಯಾವಾಗ ಹೊರಟಿದ್ದಿ ? ಮೋರೆ ಬಾಡೀತೀ ! ಅತ್ತ ಚಂದೂಗಿಗಿ ಹೋಗಿ ಬರಲಿಲ್ಲಾ ?"

"ನಾ ನಿನ್ನೇ ಹೊರಟಿದ್ಯಾನು ; ಅವರ ಇನ್ನs ಅಲ್ಲೇ ಇದ್ದರು."

"ನಿನ್ನೆ ಹೊರಟಿದಿ ! ಬೆಳತನಕ ಎಲ್ಲಿದ್ದಿ ?" ಬೆರಗುಪಟ್ಟು ನುಡಿದಳು.

"ಕುಡಚಿ ಸ್ಟೇಶನ ಮ್ಯಾಲ ವಸ್ತಿ ಇದ್ದಿನು !"

"ಯಾನೋಪಾ ಎಲ್ಲೇರೆ ತಿರಗತ ಹೋಗತಿ. ಯಾರರ ನಿನ್ನ ಮೈತರ ಗಂಟ ಬಿದ್ದೀರ ಹೋಂದ ?" ಸ್ವಲ್ಪ ಸುಮ್ಮನಿದ್ದು "ಕಾರಣ ಎಲ್ಲಾ ಛಲೂ ಆಯ್ತು ?"

ಅನಂತ ನಿಂತಲ್ಲಿಯೇ ಕುಳಿತು ಬಿಟ್ಟ. ಸುಂದರವ್ವ ಗಾಬರಿಯಿಂದ ಹತ್ತರ ಬಂದು, "ಯಾಕ, ಅನಂತಾ ಮೈಯಾಗ ನೆಟ್ಟಗ ಇಲ್ಲಾ್ಯನ ?" ಅವನು ಉಟ್ಟಧೋತರ ಕೈಯಲ್ಲಿ ಹಿಡಿದು ನೋಡಿ "ಛೀ ! ಧೋತರೆಲ್ಲಾ ತೊಯ್ದೀ

ತೆಲ್ಲಾ! ಹೊಳ್ಯಾಗ ವ್ಯಾಲಿ ಎತ್ತಿ ಹಿಡೀಬಾರದು? ಮೊದಲs ತಣ್ಣೀರ ತಾಳೂದುಲ್ಲ ನಿನಗ" ಎಂದಳು.

ಅನಂತನಿಗೆ ಧೋತರ ತೊಯ್ದುದರ ಅರಿವು ಈಗ ಆಯಿತು. "ಹೋಂದ; ಧೋತರ ತೊಯ್ಯತಲ್ಲ!" ಎಂದ.

ಅಷ್ಟರಲ್ಲಿ ಸಂಜೆಯ ಊಟಕ್ಕೆ ತಂದೆ ಮನೆಗೆ ಬಂದ. ಅನಂತನನ್ನು ನೋಡಿ "ಕಾರಣ ಎಲ್ಲಾ ಛಲೋ ಆಯ್ತ್ಯನೋ ಅನಂತಾ? ತಾರಾನ ಗಂಡ ಮನಸಿಗಿ ಬಂದ ಯಾನ ನಿನಗ? ಯಾವಾಗ ಬಂದಿ ನೀ" ಎಂದು ಗಡಬಡಿಯಿಂದ ಅಂಗಿ ಕಳೆಯುತ್ತ ಕೇಳಿದ ರಾಮಪ್ಪ.

"ಈಗ ಬಂದಾನ! ನಿನ್ನೆ ಹೊರಟಿದಾನ ಅಂವ, ಅವನಾ ಯಾನ ಕೇಳತೀರಿ?" ಎಂದು ಸ್ವಲ್ಪ ಸಿಟ್ಟಿನಿಂದ ಸುಂದರವ್ವ ಹೇಳಿದಳು.

"ಅಂ! ಹೋಂದ ಯಾನೋ ಅನಂತಾ? ನಿನ್ನಿ ಹೊರಟೇದಿ ಹಾರೋಗೇರಿಂದ? ಅವರದ ಊರ ಊಟ ಇರಲಿಲ್ಲ ಯಾನ?"

"ಇತ್ತ; ಊಟಾ ಮಾಡೇ ಹೊರಟೆನ್ನು."

"ಚಂದೂರಿಗೆ ಹೋಗಲಿಲ್ಲಾ? ಅತ್ತ ಹೋಗೇ ಬರಬೇಕಿಲ್ಲ!"

"ಅವರ ಇನ್ನs ಒಂದ ದಿನಾ ನಿಲ್ಲಾವರ ಇದ್ದರು! ನಾ ಹೊರಟ ಬಂದಿನು" ಅವರು ಆತುರಗೊಂಡು ಕೇಳಿದಷ್ಟೂ ಅನಂತ ಸರಿಯಾಗಿ ವಿವರಿಸಿ ಹೇಳದೆ ಒಂದೊಂದೇ ಮಾತಿನಲ್ಲಿ ಉತ್ತರ ಹೇಳಹತ್ತಿದ್ದರಿಂದ ತಂದೆತಾಯಂದಿರಿಬ್ಬರೂ ಕೆರಳಿದರು. "ಹೂ! ಅಟ್ಟ ಆರಾಕಿ ಹೋಗಿದ್ದ; ಉಣಕ ಇತ್ತs ಲಗೂನ ಬಂದಿದಾ—ಅವರ ಬರಾಬರಿ ಎರಡ ದಿನಾ ಛಂದ ಹಂಗ ನಿಂತ ಬರೋದ ಇಲ್ಲಾ. ಊರಿಗೆ ಹೋಗಿದ್ದರ ಒಂದ ಧೋತಾರಾ ರುಮಾಲಾರs ಮಾಡತ್ತಿದ್ದರ, ರೀತಿಲೆ ನಡೇದ ಇದಕ ಯಾನ ಗೊತ್ತಾ?" ಎಂದಳು ಸುಂದರಾ.

ರಾಮಪ್ಪ ಒಳಗೆ ಹೋಗುತ್ತ "ಇರಲಿ ಬಾ; ಹುಡುಗ ಯಾನ ಛಲೂ ಆಗುದುಲ್ಲ. ಮೊದಲs ಮನಸ ಇಲ್ಲದ ಹೋಗಿದ್ದ. ಸುಮ್ಮ ಜಬ್ರೀಲೆ ಹೋಗಿ ಒಂದ ದಿನಾ ನಿಂತ ಬಂದ ಆಯ್ತು. ಬಂದ ಕೆಲಸಾ ಮನಸಕೊಟ್ಟ ಮಾಡೂಹಂಗಿಲ್ಲ. ಹೋದಲ್ಲಿ ಬಂದಲ್ಲಿ ಧ್ಯಾನ ಇಲ್ಲಾ. ಚಿತ್ತ ಇಲ್ಲಾ. ಎತ್ತರ ನೋಡತ ಎಲ್ಲೀರೆ ಕೂಡತ ಇರತಾನು. ಇಂವ್ಯಾನ ಜನ್ಮಾ ಛಲೂ ಮಾಡಾಂವ

ಇದಾ ಅಂತೀ ಯಾನ? ನಾವೆಲ್ಲ ಮಣ್ಣ ಕಚ್ಚಿ ಜನ್ಮಾ ಮಾಡಿ ಕೂಡಿಸಿದೇವು, ಗಳಿಸಿದೆವು. ಮನೀ ಹೊಲಾ ಎಲ್ಲಾ ನಾಲ್ಕ ದಿನದಾಗ ವಾಟೋಳಿ ಮಾಡಿ ಇಡತಾನ ನಾವ ಸತ್ತ ಮರದಿನಾ" ಎಂದ.

"ಮುಂದಿಂದ ಯಾರ ನೋಡಿದಾರು? ನಾವ ಇರೂ ತನಕಾರ್ಯ ತಿನಕಾ ಉಣಕಾ ಕಡಿಮಿ ಬಿಳೂದುಲ್ಲs" ಎಂದು ಒಳಗೆ ಹೋಗಿ ಗಂಡನಿಗೆ ಬಡಿಸ ಹತ್ತಿದಳು. ಆದರೂ ರಾಮಪ್ಪ ಊಟಕ್ಕೆ ಕೂಡುವ ಮೊದಲು "ಬಾರೋ ಅನಂತಾ ಉಣತಿ ಯಾನ?" ಎಂದು ಕರೆದ.

ಅನಂತ ಏನೂ ಹೇಳಲಿಲ್ಲ.

"ತಗೋ ಹಟೀಲದಾಗ ಎಲ್ಲೀರಿ ತಿಂದಾದಾ" ಎಂದು ಸುಂದರವ್ವ ಪತಿಗೆ ಉಣಲಿಕ್ಕೆ ಹೇಳಿದಳು.

"ಹ್ಯಾಂಗಾರ ಹೋಗಿದ್ದಿ; ನಾಲ್ಕ ದಿನಾ ನಿಂತ ಬರೋದಪ್ಪ! ಇಪ್ಪತ್ತ ಇಪ್ಪತ್ತನಾಲ್ಕ ವರ್ಷದ ಮಗಾ ಆದೀ, ಯಾನ ಹೇಳೋದ ನಾವ ಇನ್ನ ನಿನಗ?" ಎಂದ ರಾಮು.

ಸುಂದರವ್ವ ಏನೋ ಸ್ವಲ್ಪ ವಿಚಾರಿಸಿ "ಇಂವ ಕಾರಣಕ ಹೋದಾಗ ತಂದಾ ಅಂತ, ಏಕಸರಾ ಒಂದ ಕೊಟ್ಟೆನ್ನನಾ" ಇನ್ನು ಗಂಡನಿಗೆ ತಿಳಿಸುವು ದಗತ್ಯವೆಂದು ಕಂಡುಬಂದುದರಿಂದ ಹೇಳಿದಳು.

"ಯಾರಿಗೆ?" ನಡುವೆಯೇ ಉಣ್ಣುವದನ್ನು ನಿಲ್ಲಿಸಿ ಕೇಳಿದ ರಾಮು.

"ತಾರಾನ ಕೊಳ್ಳಾಗ ಯಾನ ಇಲ್ಲಾಗಿತ್ತು: ನಾಳಿ ನೋಡಕ ಬರಾ ವರ ಮಾಡಾವರ. ನಾಲ್ಕ ದಿನಾ ಕೂಡ ಅಂತ ಮಲ್ಲಪ್ಪಣ್ಣ ಹೇಳಾನಾ; ಆಗs ತಾರಾ ಹೋಗುವಾಗs ಕೊಟ್ಟೆನ್ನು" ಎಂದು ಅನುಮಾನಿಸುತ್ತ ಹೇಳಿದಳು.

"ಹಳ್ಳಿ ಪೋರಿಗೋಳಾ ಯಾನ ಸಿಸ್ತಲೆ ಹಾಕೋತಾವs? ನೆಗ್ಗಿಸಿ ನುಚ್ಚ ಮಾಡಿ ಇಟ್ಟಾವ ಆಯ್ತು, ನಾಲ್ಕ ದಿನದಾಗ; ಇನ್ನ ಯಾವಾಗ ತಿರುಗಿ ಕೊಡತಾರೋ ಯಾರಿಗಿ ಗೊತ್ತ. ಆಕಿ ಇರಾಕಿ ಇನ್ನ ಗಂಡನ ಮನ್ಯಾಗ, ಒಂದೊಂದ ಆಗೂತನಕಾನs ಕಣ್ಣೀರ ಕಪ್ಪಾಳಿಗಿ ಬರತಾವು" ಎಂದು ಸ್ವಲ್ಪ ರೇಗಿಯೇ ನುಡಿದ ರಾಮು.

"ಕಾರಣ ಆದ ಮರುದಿನಾ ಕಾರಣಕ ಬಂದಾವರ ಕೈಯಾಗs ಉಚ್ಚಿ

ಕೊಡತೇವ ಅಂತ ಹೇಳಾನಾ ಗನಸ ಮನಸ್ಯಾ ಕೇಳಿದ ಮ್ಯಾಲ ಇಲ್ಲ ಅನ್ನೋದ ಹ್ಯಾಂಗ ಅಂತ ಕೊಟ್ಟೆನು."

" ಇವs ಇತ್ತ ಬಂದ ; ಇನ್ನ ಅವರ ಯಾರ ಕೈಯಾಗ ಕುಡತಾರು ? "

" ಕಾರಣ ಮಾಡಿ ಚಂದೂರಿಗಿ ಹೋಗ್ತಾ, ರತ್ನಾ ಸಂಗಾಟ ನೆನಪಲೆ ತಗೊಂಡ ಹೋದಳೂ ಅಂದರ ನಾಲ್ಕು ದಿನದಾಗ ಮಲ್ಲಣ್ಣನ ಕೈಯಾಗ ಕೊಟ್ಟ ಕಳಸತಾಳು. ಮರತ ಅಲ್ಲೇ ನಿಂತಿತು ಅಂದರs ತುರ್ತ ಯಾನ ಬರೂದುಲ್ಲ " ಎಂದು ಸುಂದರಾ ಹೇಳಿದಳು.

" ನೀ. ಹೋಗೋಗ ಹುಡುಗಗರ ಹೇಳೋದ. ನಿನಗ ಮೊದಲs ಬುದ್ಧಿ ಇಲ್ಲಾ. ಹುಡುಗ್ಗ ಯಾನ ಹೆಸರು ಇಡೋದಾ ? "

ಸುಂದರವ್ವ ನಡುವೆಯೇ " ಅಯ್ಯs ! ಇವಗ ಹೋಗುತ್ತಿನ್ಯಾಗs ಹೇಳಿ ಹಚ್ಚಕೊಟ್ಟದ್ಯಾನ. ಅವರಿಗಿ ಗದ್ದಲದಾಗ ನೆನಪ ಆಗದೀರೂ ನೀನs ನೆನಪ ಮಾಡಿ ತಗೊಂಡು ಬಾ, ಅಂದಿದ್ಯಾನ. ಮುದುಕ ಆಗೀದಾ ಇಂವಗ ತಿಳೀಬಾರದು ? ನನ್ನ ಮ್ಯಾಲ ಯಾಕ, ಎಲ್ಲಾ ಬಿಟ್ಟ ? "

" ಸಾಕ ಸುಮ್ನ ಇರ ; ಆಗೂ ಕಾರಭಾರ ಎಲ್ಲಾ ಆಗಿ ಹೋಗೇತಿ. ಇನ್ನ ಅಂವಗ ಅಂದರ ಯಾನ ಆಗೋದಾ ? ಹುಡುಗ ಮನಸಿಗಿ ಹಚ ಕೊಂಡೋತು " ಎಂದು ಅಷ್ಟಕ್ಕೆ ಮಾತು ಮುಗಿಸಿಬಿಟ್ಟ ರಾಮು.

ಇನ್ನೂ ಇದರ ಹತ್ತರಷ್ಟು ಅಂದರೂ ಮನಸ್ಸಿಗೆ ಹಚ್ಚಿಕೊಳ್ಳುವಂತಹ ಸ್ಥಿತಿಯಲ್ಲಿ ಅನಂತನಿದ್ದಿಲ್ಲ. ಆತ ಈಗಾಗಲೇ ತನ್ನ ಕೋಣೆಯಲ್ಲಿ ಹೋಗಿ ಹಾಸಿಗೆ ಹಾಸಿ ಮಲಗಿಬಿಟ್ಟಿದ್ದ. ರಾತ್ರಿ ಹತ್ತು ಗಂಟೆಯ ಸುಮಾರಿಗೆ ಸುಂದರವ್ವನೇ ಹೋಗಿ, ಎಬ್ಬಿಸಲು ಎದ್ದು ಒಂದು ನಾಲ್ಕು ತುತ್ತು ತಿಂದು ಹೋಗಿ ಮಲಗಿ ಬಿಟ್ಟ. ಅವನಿಗೆ ರಾತ್ರಿ ನಿದ್ರೆ ಚೆನ್ನಾಗಿಯೇ ಹತ್ತಿತು. ಮರುದಿನ ಮುಂಜಾನೆ ಒಂಬತ್ತು ಗಂಟೆಗೆ ತಮ್ಮ ನಾಭಿರಾಜ ಹೋಗಿ ಎಬ್ಬಿಸಿದಾಗಲೇ ಎಚ್ಚರಾಯಿತವನಿಗೆ. ಎದ್ದು ಯಾರೊಡನೆಯೂ ಮಾತಾಡದೆ ಸ್ನಾನಮಾಡಿದ. ಸುಂದರವ್ವನೂ " ನಿನ್ನೆ ಅಂದದಕs ಸಿಟ್ಟ ಮಾಡೀದಾ ತಿಳಿದುಲ ಇಂವಗಾ ? ಸಣ್ಣಾವ ಇದಾ ಇನ್ನ ? " ಎಂದು ಮನದಲ್ಲಿ ಭಾವಿಸಿ ಸುಮ್ಮನೆ ಇದ್ದಳು. ಅನಂತನನ್ನು ಮಾತಾಡಿಸಲಿಲ್ಲ. ಅಡಿಗೆಯಾಗಲು ಊಟ

ಮಾಡಿ ಅನಂತ ಮತ್ತೆ ಹೋಗಿ ಹಾಸಿಗೆ ಹಾಕಿದ. ಆಗ ಮಲಗಿದವ ಮತ್ತೆ ನಿದ್ದೆ ಹತ್ತಿತು. ಸುಂದರವ್ವ ಎರಡು ಮೂರು ಸಲ ಕೋಣೆಯಲ್ಲಿ ಹಣಿಕಿ ಹಾಕಿ ನೋಡಿದಳು. ಸಂಜೆಯಾದಂತೆ "ಹುಡುಗನ ಮೈಯಾಗ ನೆಟ್ಟಗಿಲ್ಲ ಯಾನೊ" ಎಂದು ಅಧೀರೆಯಾಗಿ ಅವಳೇ ಹೋಗಿ ಎಬ್ಬಿಸಿದಳು, ಚಹ ಕುಡಿಯೆಂದು. ಅನಂತ ಎದ್ದು ಮುಖ ತೊಳೆದುಕೊಂಡು ಚಹ ಕುಡಿದು ಹೊರಗೆ ಬಾಗಿಲಲ್ಲಿ ಬಂದು ಕಟ್ಟೆಯ ಮೇಲೆ ನಿಂತ. ಇದೀಗ ಮೋಡಗಳ ಮರೆಯಲ್ಲಿ ಮುಳುಗುತ್ತಿರುವ ರವಿಯ ಸ್ವರ್ಣಪ್ರಕಾಶವೂ ಅನಂತನ ಮನವನ್ನು ಅರಳಿಸಲು ಯತ್ನಿಸಿತು.

ಅನಂತ ಮನಸ್ಸನ್ನು ಅಭ್ಯಾಸದಲ್ಲಿ ತೊಡಗಿಸಲು ಯತ್ನಿಸಿದ. ಆದೇಕೊ ಬರಬರುತ್ತ ಆ ಪ್ರಯತ್ನದಲ್ಲಿ ಅಪಯಶಸ್ಸೇ ಬಂದಿತು. ಕೊನೆಗೆ ಪರೀಕ್ಷೆಗೆ ಕಟ್ಟಲು ಫಾರ್ಮು ದೊರೆಯಲಿಲ್ಲ. ಅನಂತ ಸ್ಕೂಲಿಗೆ ಹೋಗುವದನ್ನು ಬಿಟ್ಟುಬಿಟ್ಟ. ರಾಮಪ್ಪ ಇನ್ನೊಂದು ವರ್ಷ ಅಭ್ಯಾಸಮಾಡಿ ಪರೀಕ್ಷೆಗೆ ಕೂಡೆಂದು ಸೂಚಿಸಿದ. ಅನಂತ "ಬೇಸಿಗೆಯ ಬಿಡುವಾದಮೇಲೆ ನೋಡೋಣ" ಎಂದು ಹೇಳಿ ಸುಮ್ಮನಾದ. ಬೇಸಿಗೆಯ ಬಿಡುವೂ ಆಯಿತು. ತಿರುಗಿ ದೀಪಾವಳಿಯ ಬಿಡುವೂ ಸಮೀಪಿಸಿತು. ಆದರೂ ಅನಂತ ಸ್ಕೂಲಿಗೆ ಹೋಗಲಿಲ್ಲ ; ಅಭ್ಯಾಸ ಮಾಡಲಿಲ್ಲ. ಈಗ ಅನಂತ ಮನಸ್ಸಿಗೆ ಬಂದರೆ ಒಂದೆರಡು ತಾಸು ಅಂಗಡಿಯಲ್ಲಿ ಕುಳಿತುಕೊಳ್ಳುವ. ಇಲ್ಲವಾದರೆ, ಹೊಲದ ಕಡೆಗ ಅಡ್ಡಾಡುತ್ತ ಹೋಗುವ. ಅದೆಲ್ಲದರಲ್ಲಿಯೂ ಬೇಜಾರು ಬಂದರೆ ಗೆಳೆಯರ ಮನೆಗೆ ಹೋಗಿ ಇಸ್ಪೇಟು ಪಗಡೆಗಳನ್ನಾಡಿ ಹೇಗೋ ಹೊತ್ತು ಕಳೆಯುವನು. ಈ ಸಲ ನಾಲ್ಕೆಂಟು ಗೆಳೆಯರು ಕೂಡಿ, ಮಹಾನವಮಿಯ ಜಾಗರಣೆಗೆಂದು ಪಗಡೆಯಾಡಲು ಆರಂಭಿಸಿದವರು, ಹಾಗೇ ದಿನಾಲು ಆಡುವ ಪರಿಪಾಠವಿಟ್ಟರು. ಹೀಗೆ ಒಂದು ದಿನ ಅನಂತ ರಾತ್ರಿ ಹನ್ನೆರಡು ಗಂಟೆಯವರೆಗೆ ಪಗಡೆಯಾಡಿ ಬಂದು ತನ್ನ ಕೋಣೆಯಲ್ಲಿ ಮಲಗಿದ್ದ. ಬೆಳಗು ಮುಂಜಾನೆ ಶರತ್ಕಾಲದ ತಂಗಾಳಿಗೆ ಅರ್ಧ ಎಚ್ಚತ್ತು ಹಾಗೇ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ. ಇನ್ನೂ ಅವನ ಅಂಗಾಂಗಗಳಲ್ಲಿ ನಿದ್ರೆ ವ್ಯಾಪಿಸಿದಂತಿತ್ತು. ಜಡತ್ವವನ್ನೂ ಉಂಟುಮಾಡಿದ್ದಿತು. ಆದುದರಿಂದ ಮತ್ತೆ ಮುಸುಕು ಹಾಕಿ ನಿದ್ರೆ ಹೋಗುವುದರಲ್ಲಿದ್ದ.

ಅಷ್ಟರಲ್ಲಿ ಅವನ ತಮ್ಮ ನಾಭಿರಾಜ ಓಡಿ ಬಂದು ಕಿವಿಯಲ್ಲಿ "ತೇರದಾಳದ ಪೈನಿ ನೆರದಳು!" ಎಂದು ಹೇಳಿದ ಆನಂದದಿಂದ.

ಅನಂತ ಹುಬ್ಬು ಗಂಟಿಕ್ಕಿ "ಸರೀ ಅತ್ತ; ಇಲ್ಲದ ಒಂದ ಹೇಳ್ತ ಬಂದೀದಾ?" ಎಂದು ದೂರ ಸುಗಿಸಿ ಬೆದರಿಸಿದ.

ಅಲ್ಲೇ ಹೊರಗಿನ ಮಗ್ಗಲು ಇದ್ದ ಸುಂದರವ್ವ "ಅದ್ಯಾಕೋ; ಹಾಂಗ ಸಿಟ್ಟಿಗಿ ಬರತಿ? ನಿನ್ನ ಹ್ಯಾಂತಿ ನೆರದರ ಹೇಳ್ಕ ಬಂದರ್‍ಸ ಬಾಯಾಗ ಸಕ್ಕರೀ ಹಾಕಬೇಕೋ, ಯಾನ ಅದೆಲ್ಲ ಬಿಟ್ಟ ಹೀಂಗ ಸಿಟ್ಟಗೆ ಬರಬೇಕು" ಎಂದು ಕೇಳಿದಳು.

ಅದಕ್ಕೆ ಅನಂತ ಏನೂ ಮಾತಾಡಲಿಲ್ಲ; ಆಕಳಿಸಿ ಮೈ ಮುರಿದು ಎದ್ದು, ಒಳಗೆ ಮುಖ ತೊಳೆದುಕೊಳ್ಳಲು ಹೋದ ಸುಂದರವ್ವ "ಹೋಗಪ್ಪಾ ನಾಭೂ, ಅಂಗಡಿಗೆ ಹೋಗಿ ಅವರ್ನ ಕರಕೊಂಡ ಬಾ, ತೇರದಾಳದಿಂದ ಪಂಡಿತರ ಬಂದಾರಂತ ಹೇಳ, ಸಕ್ಕರಿ ತಗೊಂಡ" ಎಂದು ಹೇಳಿ ಕಳಿಸಿದಳು. ಮತ್ತು ಬಂದ ಪಂಡಿತನ ಕಡೆಗೆ ಹೊರಳಿ "ಯಾವಾಗ ನೆರದಳು? ವ್ಯಾಳೇ ಛಲೂ ಹತ್ತೀತ್ಯಾನಪ್ಪಾ?" ಎಂದು ಕೇಳಿದಳು.

"ನಿನ್ನಿ ಹರಿಪತ್ತನ್‍ಸ ನೆರದಳು; ವ್ಯಾಳೇ ಎಲ್ಲಾ ಛಲೂ ಏತಿ. ಹರಿ ನತ್ತ ಎದ್ದ. ಹೀಂಗ ತಂಬಿಗಿ ತಗೊಂಡ ಹೋಗಿರ ಅಕ್ಕಾ ತಂಗಿ, ಅಲ್ಲೇ ನೆರದಳ ಖಾಣಸ್ತೇತಿ. ಬಂದ ಇಂದರಾ ಬ್ಯಾರೇನ್‍ಸ ನಿಂತಿಳು. ಆಂಯ್ದ ಮನ್ಯಾಗ ಎಲ್ಲಾ ಮನ್ಯಾಗ ಎಲ್ಲಾ ಗೊತ್ತ ಆಯ್ತು."

"ಸಣ್ಣ ಪೋರಿ ಇನ್ನ್‍ಸ ಯಾನ ಗೊತ್ತಾ; ಮೈಮ್ಯಾಲ ಸೆರಗಿನ ಸೀರರ್‍ಸ ಇತ್ತ ಯಾನ?"

"ಸೆರಗಿನ ಸೀರೆ ಇತ್ತ; ಅದರಾಗ ಹಸರ ಸೀರಿ. ಎಲ್ಲಾ ಛಲೂ ಆಯ್ತು ತಗೋವ್ವಾ. ರುಕ್ಕೂರೇ ಹಿರೀ ಹಿರೀ ಹಿಗ್ಗಿದಾಳ ಹೋಗು" ಎಂದು ಬಾಯಿ ಯೊಳಗಿನ ಎಲೆಯನ್ನು ಉಗುಳಿ ಬಂದು ಹೇಳಿದ, ಪಂಡಿತ.

"ಕೂಡಸತಾರೋ ಇಲ್ಲೋ ಯಾನೋ?"

"ಕೂಡಸ್ಯಾರಲ್ಲ; ಮದವೀ ಒಂದ ಹಂಗ ರಾತ್ರೋ ರಾತ್ರಿ ಮಾಡ ಕೊಂಡರಿ ನೀವ, ತೇರದಾಳ ಪಂಡಿತರನಾ ಬಿಟ್ಟ. ಇದರ್‍ಸ ಒಂದ ಕಾರಣ ಆಗಲೆಲ್ಲಾ? ಬಾಳಪ್ಪಗ ಯಾನ ಧಾಡೀ? ಕೂಡಸೂಹಂಗ ಕಾಣಸತೇತಿ."

ಅಷ್ಟರಲ್ಲಿ ಅಂಗಡಿಯಿಂದ ರಾಮಪ್ಪ ಬಂದು, ಇನ್ನೂ ಬಾಗಿಲ ಹೊರಗ ಇರುವಾಗಲೇನೇ "ಯಾವಾಗ ಬಂದರೀ ಪಂಡಿತರ ? " ಎಂದು ಕೇಳಿದ.

"ಈಗ ಹರಿವತ್ತಿನ ಮೋಟಾರಿಗ್ಯ ಬಂದಿನ" ಮತ್ತೆ ಅಡಗಿನ ಮನಿಯತ್ತ ತಿರುಗಿ "ಬರತಾ ಇವರನ್ನಾ ಕರಕೊಂಡು ಬಾ, ಅಂದಿದಾ ಬಾಳಪ್ಪ. ಯಾನರ ಅದ್ಯ ವಿಚಾರ ಮಾಡೋದ ಇರಬೇಕ" ಎಂದ.

"ಪಂಡಿತರಿಗಿ ಚಹಾ ಮಾಡಿಕೊಟ್ಟಿಲ್ಲಾ ? ಚಹಾ ಮಾಡಿ ಕೊಡಲ್ಲ ! " ಎಂದು ರಾಮು ಹೆಂಡತಿಗೆ ಹೇಳಿದ.

"ಯಾತಕರೀ ನಾ ಈಗ ಸ್ಟೇಶನ ಮ್ಯಾಲ ಕುಡದ್ಯ ಬಂದಿದ್ದ್ಯಾನು."

"ಕುಡದ ಬಂದಿರ ಯಾನ ಆಯ್ತು ತಗೋರಿ ; ಮತ್ತೊಮ್ಮಿ ಕುಡ್ಯೋದಲ್ಲ. ಹಾಂಗ್ಯಾನ ನಾಚಬ್ಯಾಡರೀ. ನಮ್ಮ ಮನ್ಯಾಗ ಚಹಾದ ಜೋಡಣಿ ಬೇಕಾದಾಗ ತಯಾರ್‍ಯ ಇರತೇತಿ ? " ಹೇಳಿದ ರಾಮು.

ಕೂಡಲೆ ಸುಂದರವ್ವ ಒಳಗಿನಿಂದ ಎರಡು ಕಪ್ಪು ಚಹಾ ತಂದು, ಇಬ್ಬರಿಗೂ ಕೊಟ್ಟಳು.

ಪಂಡಿತ ಚಹದ ಕಪ್ಪು ಕೈಯೊಳಗೆ ತಕ್ಕೊಳ್ಳುತ್ತ "ನಾವ ನಾಚಿರ ಹ್ಯಾಂಗಪ್ಪ ? ದಿನಾ ಒಬ್ಬರ ಮನ್ಯಾಗ ಉಣ್ಣಾವರ ತಿನ್ನಾವರ ಹೀಂಗ ನಾಚಿರ ಉಪಾಸ್ಯ ಬೀಳಬೇಕಾದೋತು. ಇಲ್ಲದಿದ್ದರೂ ಮಾಡಿಕೊಡ ಅನ್ನಾವರ ನಾವು."

"ಅನ್ನಾಕ ಯಾನ ತಗೋರಿ ! ನಮ್ಮಲ್ಲೀರೇ ಹರಿವತ್ತಿಂದೂ ಮದೀನ ತನಕಾ ಒಲೀ ಮ್ಯಾಲ ಚಹಾ ಕುದೀತ ಇರತೇತಿ. ಅವರಿಗೀ ಹುಡುಗ್ಯರಗೀ ನೆನುಗಾ ಮತ್ತ ಯಾರರ್‍ಯ ನಿಮ್ಮಹಂಗ ಬರತಾರ ಹೋಗತಾರ" ಎಂದು ಸುಂದರವ್ವ ಪಂಡಿತರ ಮಾತನ್ನು ನಡುವೆಯೇ ತಡೆದು, ತಮ್ಮ ಮನೆಯ ದೊಡ್ಡಸ್ತಿಕೆ ಏನೋ ಅನ್ನುವಂತೆ ಹೆಮ್ಮೆಯಿಂದ ಹೇಳಿದಳು.

"ಬೇಕಲವ್ವ್ಯ ಅದ್ಯ ದಾನದ ಕೈ. ಮಂದಿ ತಿಂದಷ್ಟು ಉಂಡಷ್ಟ್ಯ ಬಂತ. ಸತ್ತರ ಸಂಗಾಟ ಯಾನ ಬರೋದ ಏತಿ ? ಛಲೂ ಒಂದಾ, ಕೆಟ್ಟ ಒಂದ ಅಷ್ಟ ಅಲ್ಲ" ಎಂದು ಹೊಗಳಿದ. ಎದುರಿಗಿನವರ ಹೊಲುಬು ನೋಡಿ ಮಾತಾಡುವ ಬಗೆಯನ್ನು ಪಂಡಿತರಿಗೇನೂ ಹೇಳಿಕೊಡಬೇಕಾಗುವುದಿಲ್ಲ.

ರಾಮಪ್ಪ ಚಹಾ ಕುಡಿಯುತ್ತ "ಅನಂತ ಎದ್ದೀದಾ ಯಾನ ?" ಅನಂತ ಹೊರಗೆ ಬರಲು "ಹೋಗಪ್ಪ ಅನಂತಾ, ಅಂಗಡಿ ಕಡೇ ಜರಾ. ನಾ ಈಗ ಬರ ತ್ಯಾನು. ಹುಡುಗ ಒಬ್ಬಽ ಕೂತಿದಾ" ಎಂದು ಹೇಳಿದ.

ಅನಂತ ಅಂಗಡಿಗೆ ಹೋದ. ರಾಮಪ್ಪ ಸೊಸೆ ಯಾವಾಗ ನೆರೆದಳು ? ಮುಹೂರ್ತ ಹೇಗಿದೆ, ಎಂಬುದನ್ನೆಲ್ಲ ಕೇಳಿಕೊಂಡ. ಪಂಡಿತ ಮತ್ತೆಲ್ಲವನ್ನೂ ವರ್ಣಿಸಿ ವರ್ಣಿಸಿ ಹೇಳಿದ. ಕೊನೆಗೆ ಕಪ್ಪು ಕೆಳಗಿಡುತ್ತ ರಾಮಪ್ಪ ಕೇಳಿದ.

"ಯಾನ ಕೂಡಸು ವಿಚಾರ ಐತ್ಯೋ ಇಲ್ಲೋ ಅವರದು ?"

"ಅದ ಎಲ್ಲಾ ನೀವ ಅಲ್ಲಿ ಬಂದಮ್ಯಾಲಽ ನಕ್ಕಿ ಆಗೋದಾ"

"ನಾ ಬರಲಾಕ ಯಾನ ? ಕೂಡಿಸಿಬಿಡೋದ. ಅದರಾಗ ಯಾನ ಐತಿ ?"

"ಅದೆಲ್ಲಾ ನೀವ ಅನ್ನೋದ ಬರೋಬರಿ ಆಯ್ತು ; ನೀವ ಒಂದ ಹೆಡಿಗಿ ಹೇಳ್ಕೊಂಡ ಕೂತರಽ ನೇಗೀಕ ಒಂದ ಬೇಕಲ್ಲ, ಅವರಿಗಿ ? ಹಿಂದಿಂದ ಒಬ್ಬರ ಒಬ್ಬರ ಕೂಡಿದ ಮ್ಯಾಲ ಕಾಡೋದ ನೆಟ್ಟಗಲ್ಲ !" ಎಂದು ಪಂಡಿತ ಕಾರಣ ವನ್ನು ಸೂಚಿಸಿದ.

"ಯಾನ ಮ್ಯಾಲಿಂದ ಮ್ಯಾಲ ಕೊಡತಾರು ? ಇದೊಮ್ಮಿ ಆಯ್ತಂದರ ಆಯ್ತಲ್ಲ" ಎಂದು ಒಳಗಿನಿಂದ ಸುಂದರವ್ವ ನುಡಿದಳು. "ಮದಿವ್ಯಾಗೂ ಆಯ್ತೋ ವ್ಯಾಳೇಕ ಮಾಡಿದಿರಿ. ನಮುಗ್ಯಾನ ತರಕ ಆಗಲಿಲ್ಲ ಅಂತ ಹೇಳಿ ಮುಗಿಸಿದರು."

"ಮುಗಸಲಾಕ ಯಾನಾ ? ನೀವೂ ಹಾಂಗ ಮಾಡಿದಿರಿ ! ಆಯ್ತು ಅಂದರೂ ಹೆಣ್ಣಮಕ್ಕಳಿಗಿ ಯಾನ ಒಂದಽ ಹತ್ತೇತಿ ? ನಾಳಿ ಬಸರ ಆದರ ಹಡದರ ಮಾಡೋದ ಏತೆಲ್ಲ" ಸ್ವಲ್ಪ ತಡೆದು "ಯಾನ ಮಾಡತಿ ಬಾ, ಹೆಣ್ಣ ಹಡೀಲಿಲ್ಲ ನೀ. ನಾವೂ ಒಂದ ನಿಮ್ಮದ ಪದಮಣ್ಣಗಾಗಲಿ ಸಾತಪ್ಪಗಾಗಲಿ ಮಾಡತಿದೇವ ಅಂದರ ನಿಮುಗ ಕಾಣಸತಿತ್ತ. ಬರೀ ಅತ್ತಿಂದ—ತವರಮನೀ ಕಡೇದ—ಎಳಕೊಂಡ ಬರೋದಽ ಆಗೇತಿ ನಿಮುಗ" ಎಂದು ನಸುನಗೆಯೊಡನೆ ಪಂಡಿತ ನುಡಿದ.

"ಅವ್ವ ! ಯಾನ ಹೇಳತಾರ ನೋಡಲಾ ಪಂಡಿತರ. ಈಗ ಎರಡ ಮೂರ

ವರ್ಷದಾಗ ಒಮ್ಮೆರೆ ಓದ ಸೀರಿ ಉಡಸೀದಾರ ಯಾನ ನನಗ ?" ಎಂದು ಸ್ವಲ್ಪ ಅಣಕದ ಸ್ವರದಲ್ಲಿ ಸುಂದರವ್ವ ಹಾರಿಬಿದ್ದು ಕೇಳಿದಳು.

"ಉಟಕೊಂಡ ಬರೂಹಂಗ ಸೊಸಿದೇರ ಬಂಡರೂ ಮತ್ತ ಇನ್ನs ಎಷ್ಟ ಉಡಸ್ಯಾರ ನಿಮುಗ ?"

"ಅದ ಯಾನ ಮಾಡೋದಾ ? ಈಗ ಯಾನ ಕೊಡಬೇಕಂತ ಮಾಡಿ ದಾರು" ರಾಮಪ್ಪ ನಡುವೆಯೇ ಕೇಳಿದ.

"ನನಗರs ಯಾನ ತಿಳ್ಯೋದಾ, ಅವರ ಮನಸಿನ್ಯಾಗಿಂದ ?" ಎಂದು ರಹಸ್ಯದ ಮುಗುಳುನಗೆಯೊಂದನ್ನು ಬೀರಿದ ಪಂಡಿತ.

"ಅವರ ಅಂದಾಜರ ಒಂದ ಹೇಳಲ್ಲ ; ನಿನ್ನ ಮುಂದರs ಯಾನ ಮಾತಾಡಿ ದರು ?" ಎಂದು ಸ್ವಲ್ಪ ಆಗ್ರಹದಿಂದಲೇ ಕೇಳಿದ.

"ಯಾನ ಹಾಕತಾರ ಇಂಥಾ ದಿನದಾಗ ? ಅಳ್ಯಾಗ ಒಪ್ಪೊ ಅಂಥಾ ಆಯಾರ ತಗೊಂಡರ ಆಯ್ತು" ಇವರ ಮನಸ್ಸಿನ ಬಯಕೆಯ ಮೆಟ್ಟಿಲನರಿ ಯಲು ಬೇಕಂತಲೇ ನುಡಿದ.

"ಹಾಂಗಾದರ ಯಾತಕ ಕೂಡಸತಾರು ?"

ಗಂಡನಿಗೆ ಮುಂದೆ ಮಾತಾಡಗೊಡದೆ "ಸೊಕ್ಸ ಬಂದೀತಿ ಅಕ್ಕೊ ನಮುಗ ಬರಲಾಕ ? ಒಂದ ಕಾರಣದಾಗ ಎರಡ ಕೆಲಸಾ ತೀರಸಕೋಳವರ" ಸುಂದರಾ ಬಾಯಿ ಒಳಗಿನಿಂದ ಹೇಳಿದಳು.

"ಎರಡ ಯಾನಾ ?" ಗೊತ್ತಿದ್ದ ಪಂಡಿತ ಗೊತ್ತಿಲ್ಲದಂತೆ ಕೇಳಿದ.

"ಹೊಸವಾಗೆ ಅಳ್ಯಾ ಮನೀಗಿ ಹೋಗ್ತಾ, ಅದಕೊಂದ ಆಯಾರ ಬ್ಯಾಡ್ಯಾನ ?"

"ನಿಮ್ಮಲ್ಲೆ ತಂದ ಕೂಡಸರೀ, ನಮ್ಮದ್ಯಾನ ಹೋಗತೇತಿ ? ಆ ಹಿರೀ ಅಳ್ಯಾಗ ಮಾಡಿದಷ್ಟು ಮಾಡತಾರಲ್ಲ !"

"ಅಷ್ಟ ತಂದಾರಲ್ಲ ; ಅಷ್ಟ್ಯಾಕ ಭಾಳ ಆಯ್ತ್ಯಾನ ?" ಎಂದ ರಾಮು.

"ಯಾನರ ಮಾಡಕೋರಿ, ನೀವ ಇದೀರಿ, ಅವರ ಇದಾರು. ನಾವ್ಯಾನ ನಡವಿನವರ, ಸಕ್ಕರಿ ಕೊಡಾವರ ಧೋತರಾ ರುಮಾಲಾ ಮಾಡಕೊಂಡ ಹೋಗಾವರ. ಮೊನ್ನಿ ಹೀಂಗs ಆಯ್ತು. ನರಸಾಯುಗೋಳ ಪೋರಿ ನೆರೀತs.

ಅವರ ಸಕ್ಕರಿ ತಗೊಂಡ ಹೋಗಿನ್ನಿ; ಅವರ ಈ ಜರದ ರುಮಾಲ ಸುತ್ತೀದಾರು" ಎಂದು ಪಂಡಿತ ತನ್ನ ಕಾರ್ಯ ಸಾಧಿಸಿಕೊಳ್ಳುವತ್ತ ಲಕ್ಷ್ಯ ಹೊರಳಿಸಿದ.

ಹೀಗೆಯೇ ಹಲವು ಮಾತುಕತೆಗಳಾದನಂತರ ರಾಮಪ್ಪ ಪಂಡಿತನನ್ನು ಕರೆದುಕೊಂಡು ಅಂಗಡಿಗೆ ಹೋದ. ಅನಂತ ಮನೆಗೆ ಬಂದು ಸ್ನಾನ ತೀರಿಸಿ ಚಹಾ ತಕ್ಕೊಂಡು, ನಿತ್ಯದಂತೆ ಗೆಳೆಯರ ಮನೆಗೆ ಹೋಗಲೆಂದು ಹೊರಬಿದ್ದ. ಅಷ್ಟರಲ್ಲಿ ಅವನ ಗೆಳೆಯ ಎದುರಿಗೇ ಬಂದ. ಅವನ ಕೈಯಲ್ಲಿ ಏನೋ ಇದ್ದಿತು. ಅದನ್ನು ಹಿಂದೆ ಮರೆ ಮಾಡಿದ್ದ. ಅನಂತ "ಕೈಯಾಗ ಯಾನೋ ?" ಎಂದು ಕೇಳುಕೇಳುವಷ್ಟರಲ್ಲಿ ಮುಂದೆ ಧಾವಿಸಿ ಬಂದು ಅನಂತನ ಮೈಮೇಲೆ ಬಣ್ಣ ಸುರಿದೇ ಬಿಟ್ಟ. ನಗುತ್ತ ನಿಂತ. ಅನಂತ ಟೊಪ್ಪಿಗೆ ತೆಗೆದು ಝಾಡಿಸುತ್ತ "ಇದ್ಯಾನ ಮಾಡಿದ್ಯೋ ?" ಎಂದ.

"ಇದ್ಯಾನ ಮಾಡಿದಿ ? ಪೇಡೆ ಹತ್ತಿದು ನಿನಗ."

"ನಿಮಗೆಲ್ಲಾ ಪೇಡೆ ಆಯ್ತು ಆದರ" ಅಷ್ಟಕ್ಕ ಮಾತು ನಿಲ್ಲಿಸಿ ನಾಲಗೆ ಕಚ್ಚಿದ ಅನಂತ

ಅನಂತನ ಭಾವವನ್ನರಿಯದೆಯೇ "ನಮಗ ಪೇಡೇ ; ನಿನಗ ಮನ್ಯಾಗ ಹ್ಯಾಂತಿ ಬರತಾಳಲ್ಲ !" ಎಂದು ಗಹಗಹಿಸಿ ನಗಹತ್ತಿದ ಗೆಳೆಯ.

"ದೊಡ್ಡ ಹ್ಯಾಂತಿ !"

"ಎಲ್ಲಾರು ಹೀಂಗs ಅನಬೇಕ ಆಗತ್ತೇತಿ". ವ್ಯಂಗ್ಯವಾಗಿ ನುಡಿದ ಗೆಳೆಯನ ಮಾತಿದು.

"ಇಲ್ಲ ; ಹಾಂಗs ಏತಿ !"

"ಅದೆಲ್ಲಾ ನಾಲ್ಕದಿನದಾಗ ತಿಳೀತೇತೆಲ್ಲ ; ನಾಳೆ ಹ್ಯಾಂತಿ ಮನ್ಯಾಗ ಬರಲಿ, ಮನೀ ಬಿಟ್ಟ ಹೊರಗ ಬಂದೀ ಅಂದರ ನನ್ನಾ ಕೇಳ. ಇನ್ನ್ಯಾಕ ನಮ್ಮ ಸಗಡಿ ಮೇಳ ಮುರದಂಗs ಆಯ್ತು."

"ಅದೆಲ್ಲಾ ಆಮ್ಯಾಲಿ ನಿನಗ ಗೊತ್ತ ಆದೋತ" ನೀರಸನಾಗಿ ನುಡಿದ

ಅನಂತ. ಆದರೂ ಅವನ ಗೆಳೆಯ ಆನಂದದಲ್ಲಿಯೇ ಅನಂತನ ಕೈ ಹಿಡಿದು "ಸಾಕ ನಡೀ ಇನ್ನ ಹೊರಗ; ಈಗಿಂದೂ ಮನ್ಯಾಗ್ಯ ಕೂಡ ಬ್ಯಾಡ" ಎಂದು ಎಳೆದ.

" ಈ ಬಣ್ಣದ ಅರವೀರ ಕಳದ ಬರತ್ಯಾನಲ್ಲ ! "

" ಯಾತಕ ಬಾ ; ಮಂದಿಗಿ ಜರ ಗೊತ್ತಾಗಲಿ. ಉಳದ ಅರವಿ ಎಲ್ಲಾ, ಬಣ್ಣಾ ಯಾಕ ಮಾಡಕೋತಿ ? "

ಇಬ್ಬರೂ ಗೆಳೆಯರು ಕೂಡಿ ನಡೆದರು. ಅಲ್ಲೇ ಬಾಗಿಲಲ್ಲಿ ಬಂದು ಕಣ್ಣರಳಿಸಿ, ಮಗನ ಬಣ್ಣದ ಸಡಗರವನ್ನು ನೋಡುತ್ತ ನಿಂತ ಸುಂದರವ್ವ ಸಂತಸ ದಿಂದ ನುಡಿದಳು, "ಲಗೂನ ಬಾರಪ್ಪ ಅನಂತಾ, ಉಣಕ. ಪಂಡಿತಗ ಆಯಾರ ಮಾಡೋದ ಏತಿ. ಅವರೂ ತೇರದಾಳಕ ಹೋಗ್ತಾರ ಕಾಣಸ್ತೇತಿ ಪಂಡಿತರ ಗೂಡಾನs. ನೀ ಮನ್ಯಾಗ ಇಲ್ಲಾದರ ಸಿಟ್ಟಿಗಿ ಬಂದಾರ. ಅತ್ತs ಕೂಡಬ್ಯಾಡ. ಲಗೂನs ಹೊರಳಿ ಬಾ.''

## ೧೮

ಅತ್ತ ತಾರಾ ?

ಈಗಿನ ತಾರಕ್ಕನ ಗಂಡನ ಮನೆಯವರ ಅಡ್ಡಹೆಸರು 'ಆಕಿವಾಟಿ ಗೋಳ' ಅಂತ ಇದ್ದಿತು. ಆಕಿವಾಟಿಯವರು ಅಪ್ಪಣ್ಣನ ಉಡುಕಿಯ ಸಲು ವಾಗಿ ಮೂರು ನಾಲ್ಕು ದಿನ ಊರೊಳಗಿನ ಮನೆಗೆ ಹೋಗಿದ್ದರು. ಕಾರಣಕ್ಕೆ ಬಂದ ಆಪ್ತರೆಲ್ಲ ತೆರಳಿದ ಮೇಲೆ ಮತ್ತೆ ತೋಟದಲ್ಲಿಯ ಮನೆಗೆ ಬಂದರು. ಮಗಳ ಜೊತೆಯಲ್ಲಿ ನಾಲ್ಕು ದಿನ ನಿಂತು ಹೋಗಬೇಕೆಂದು ರತ್ನವ್ವನೂ ಹಾರೋಗೇರಿಯಲ್ಲಿಯೇ ನಿಂತಿದ್ದಳು. ಹೊಸ ಮನೆ, ಹೊಸ ಜನ, ಸಂಗಡ ನಾಲ್ಕು ದಿನವಾದರೂ ತಾಯಿ ಬೇಡವೆ ? ಎಲ್ಲರೂ ಕೂಡಿ ತೋಟಕ್ಕೆ ಬಂದರು. ತೋಟ ದೊಡ್ಡದಾಗಿದ್ದಿತು. ಅಪ್ಪಣ್ಣನ ನಾಲ್ಕು ಜನ ಕಕ್ಕಂದಿರ

ಮಕ್ಕಳೂ ತೋಟದಲ್ಲಿಯೇ ವಾಸವಾಗಿದ್ದರು. ಅವರ ಹೆಂಡಿರು, ಮಕ್ಕಳು ಮರಿಗಳು, ಅಂದರೆ ತೋಟದಲ್ಲಿ ಸಾಕಷ್ಟು ಜನವಿದ್ದಿತು. ಆ ಭಾಗದ ಅಡವಿ ಯಲ್ಲಿ ನೀರಿಗೆ ಅದೊಂದೇ ಬಾವಿಯಾದುದರಿಂದ ಸುತ್ತಲಿನ ಹೊಲಗಳ ಜನರೂ ನೀರಿಗೆ ಬರುವರು. ತಮ್ಮ ದನಕರುಗಳನ್ನು ನೀರು ಕುಡಿಸಿಕೊಂಡು ಹೋಗಲು ತರುವರು. ಇದೆಲ್ಲವನ್ನೂ ಕಂಡು ರತ್ನವ್ವ ಸಮಾಧಾನಪಟ್ಟಳು. 'ತೋಟದಲ್ಲಿ ಮಗಳು ಹೇಗಿರುವಳೋ ! ನಾಲ್ಕ ಮಂದ್ಯಾಗ ಇದ್ದಾಕಿ ತಾರಾ !' ಎಂದು ಅಂಜಿದ ಅವಳ ಮನಸ್ಸು ಈಗ ಧೈರ್ಯಗೊಂಡಿತು. ತೋಟದಲ್ಲಿಯ ಮನೆಯು ಇದ್ದುದರಲ್ಲಿಯೇ ಚೆನ್ನಾಗಿದ್ದಿತು. ಒಳಗೊಂದು ಅಡಿಗೆ ಊಟ ಮಲಗಿಕೊಳ್ಳ ಲಿಕ್ಕೆ ಒಂದು ಕೋಣೆ. ಹೊರಗೆ ದನಕರ' ಆಳುಮಕ್ಕಳಿಗೆ ಒಂದು ಬಂಕ. ಮನೆಯ ಎದುರಿಗೆಯೇ ಯಾತದ ಕಟ್ಟೆ. ಅದರ ಮೇಲೆ ನಾಲ್ಕಾರು ಗಿಡಗಳು. ಹೀಗೆ ತಾರಕ್ಕನ ವಾಸಸ್ಥಳ—ಗಂಡನ ಮನೆ—ಕಣ್ಣಿಗೆ ರಮಣೀಯವಾಗಿತ್ತು. ಮನೆಯಲ್ಲಿ ಅರ್ಧಮರ್ಧ ಕಣ್ಣು ಕಾಣುವ ಮುದುಕಿ—ಅಮ್ಮವ್ವ ಆಕೆಯ ಹೆಸರು—ಅತ್ತೆ, ಅವಳೇ ತಾರಕ್ಕನಿಗೆ ನಿವಾಳಿ ತಂದು ಇಳಿಸಿ ಸ್ವಾಗತಿಸಿದಳು. ಮನೆಯಲ್ಲಿ ಆ ಮುದುಕಿಯ ಹೊರತು ಉಳಿದ ಹೆಂಗಸರಾರೂ ಇಲ್ಲದುದ ರಿಂದಲೂ ನಾಲ್ಕ ದಿನ ಬಿಟ್ಟು ಹೋದುದರಿಂದಲೂ ಮನೆ ಹೊಲ ಸಾಗಿದ್ದಿತು. ಇಲಿ ಹೆಗ್ಗಣಗಳ ಗುದ್ದುಗಳೂ ಇದ್ದುವು. ರತ್ನವ್ವ ಮಗಳ ಮನೆಯನ್ನೆಲ್ಲ ಆಸ್ಥೆಯಿಂದ ಸಿಸ್ತುಗೊಳಿಸಿ ನಾಲ್ಕು ದಿನ ನಿಂತು, ಮಗಳಿಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿ, ಅಮ್ಮವ್ವನಿಗೂ ಸೊಸೆಯನ್ನು ಸಂಭಾಳಿಸಲು ಬೇಡಿ ಕೊಂಡು, ಮೊದಲಿನ ಅತ್ತೆಯನ್ನು ಸ್ವಲ್ಪ ಹಳಿದು 'ಹಿರಿಕಿರಯ್ಯನ ಮಕ್ಕಳಾದರ ಯಾನಾಯ್ತು ಎಷ್ಟಾದರ ನೆಗೆಣ್ಣೇರs ಅಲ್ಲ' ಎಂದುಕೊಂಡು ಅವರಿಗೆ ಹೇಳಿ, ಅಳಿಯನಿಗೂ ಹೇಳಿ, ಅಳಿಯನಿಗೂ ವಿನಯದಿಂದ ನಾಲ್ಕು ಮಾತು ಹೇಳಿ ಕೊಂಡು ತಮ್ಮೂರಿಗೆ ಹೋದಳು.

ಒಂದು ದಿನ ಸಂಜೆಯ ಹೊತ್ತಿಗೆ ಅಮ್ಮವ್ವ ಸೊಸೆಯನ್ನು ಹತ್ತರ ಕರೆದು "ನೀನs ಮನೀಗಿ ಮಾಲಕತಿ ತಾಯೀ, ನೀನs ಎಲ್ಲಾ ನೋಡಾಕಿ. ಮನ್ಯಾಗ ಬಂದದ ಕಾಳಾ ಕಡೀ ಎಲ್ಲಾ ತಿದ್ದಿ ತೀರಿಸಿ ರೂಪಾ ಮಾಡಾಕಿ. ನಾ ಅಂತೂ ಇಂಥಾ ಕಣ್ಣ ಕಾಣುಸುಲ್ಲದಾಕೀ. ನೀ ಮಾಡಿದ್ದ ಮನ್ಯಾಗ ಸಿದ್ಧ ಏತಿ. ಅದರ ನಮ್ಮ ಹುಡುಗಗ ಮಂದೀ ಗಂಡಸರ ಗೂಡಾ ಮಾತಾಡೋದ ಸೇರ

ಬರೂದುಲ್ಲ. ಮನೀ ಹೆಂಗಸರ. ಅಷ್ಟs ಮತ್ತ್ಯಾನ ಇಲ್ಲ, ಉಣ್ಣಾಕ ತಿನ್ನಾಕ ಉಟಕೋಕ ತೊಟಕೋಕ ಯಾತರದೂ ಕೊರತೆ ಇಲ್ಲ" ಎಂದಳು.

ತಾರಕ್ಕ ಅದಕ್ಕೆ ಏನೂ ಹೇಳಲಿಲ್ಲ. ಅತ್ತೆಯ ಮುಖದ ಕಡೆಗೆ ಲಕ್ಷ್ಯ ಪೂರ್ವಕವಾಗಿ ನೋಡಿದಳಷ್ಟೆ. ಅತ್ತೆ ಮುಂದೆ ಹೇಳಲು ಆರಂಭಿಸಿದಳು: "ಮೊದಲಿನಕ್ಕಿ ಹೀಂಗs ಮಾಡಿ ಹಾಳ ಆಗಿ ಹೋದಳವ್ವ! ನನ್ನ ಮಗಾ ಇನ್ನs ತನಕಾ ಹ್ಯಾಂತಿ ಇಲ್ಲದ ಕೂತಾ. ಆಕೇ ಸುದ್ದ ಇದ್ದರs ಇಷ್ಟೊತ್ತಿಗೇ ನಾಲ್ಕಾರ ಮೊಮ್ಮಕ್ಕಳನಾ ನೋಡತಿನ್ನ ನಾ" ಮೊದಮೊದಲಾ ಬಿರುಸಾಗಿದ್ದ ಸ್ವರವು ಕರುಣಾಮಯವಾಯಿತು. ಈಗ ತಾರಕ್ಕನಿಗೂ ಅತ್ತೆಯ ಮಾತಿನಲ್ಲಿ ಕುತೂಹಲ ಹುಟ್ಟಿತು. ಸ್ವಲ್ಪ ಹೊತ್ತು ಆಶ್ಚರ್ಯದಿಂದ ನಿಂತುಕೊಂಡಳು. ಅನಂತರ ಅತ್ತೆಯ ಹತ್ತರ ಹೋಗಿ ಕುಳಿತಳು. ವಿನೀತ ಸ್ವರದಲ್ಲಿ ಕೇಳಿದಳು: "ಯಾನ ಆಯ್ತು ಅತ್ತೀ? ಎಷ್ಟ ವರ್ಷ ಆಯ್ತು ಆಕಿ ಸತ್ತ?" ಎಂದು ಕೇಳಿದಳು. ಅತ್ತೆ ಈಗ ನಿಃಸಂಕೋಚವಾಗಿ ಹೇಳಹತ್ತಿದಳು. "ಎಲ್ಲೀ ಸಾಯತಾಳು? ಸತ್ತಿದ್ದರ ತಣ್ಣಗ ಇತ್ತೋ ಯಾನೋ! ಆಗ ನನ್ನ ಮಗಾ ಮತ್ತೊಂದರ ಮಾಡಿಕೊಂಡಿರೋ? ಇಲ್ಲೀ ಪರಮಾನಟ್ಟಿಕ್ಕೀ ಹಳ್ಳೀ ಪೋರಿ, ಛಲೂ ಇದ್ದೋತ ಅಂತ ನಾಲ್ಕುವರ್ಷ ಹುಡಕಾಡೀ ಹುಡಕಾಡೀ ಕಡೀಕ ಮಾಡಿದೇವ ಮಗಗ. ಆಗ ನಾವಿನ್ನs ಊರಾಗ ಇದ್ದೇವ. ಆಗ ಆ ಹಲಕಟ ಸತ್ಯಾ, ನಮ್ಮ ಹುಡುಗನ ಹತ್ತ್ಯಾಕ ಬರೋದ ಕೂಡೋದ ಭಾಳ; ನಾನೂ ನನ್ನ ಮಗ್ಗ ಬೆನ್ನಮ್ಯಾಲಿ ಯಾರ ಇಲ್ಲಾ. ಅಣ್ಣ ತಮ್ಮರ ಒಂದ ಇಂಥಾವರಾ ಬರತಾ ಇರತಾ ಜೋಡಿ ಮಗನ ಎದೀ ಮ್ಯಾಲಿನ ಕೈ ಅಂತ, ತಿನ್ನಸತೀನ ಉಣ್ಣಸತೀನ ಅಂವ ಈಕಿನಾ ಕೆಣಕಿದೋ ಈಕೆ ಅವನ ಕೆಣಕಿದಳೋ ದ್ಯಾವರs ಬಲ್ಲವ್ವ! ಮೂರು ಸಂಜೆ ಆಗೀತಿ ಕಾಣುಲ್ಲದ ನಾವ ಹ್ಯಾಂಗ ಅನ್ನೂಣು? ಒಂದ ದಿನಾ ವ್ಯಾಳೆ ಕೂಡಿ ಬಂತು. ಆಕಿ ಬುತ್ತಿ ತಗೊಂಡ ತೋಟಕ ಹೊಂಟ ಲಾಕ, ನಮ್ಮ ಅಪ್ಪ್ಯಾ ತೋಟದಿಂದ ಮನೀಗಿ ಬರಲಾಕ ಕೂಡಿತ. ತೋಟಕ ಹೋಗ್ತಾ ಹೋಗ್ತಾ ಈಕಿ ಹಾದ್ಯಾಗ ಸತ್ತ್ಯಾನ ಮನ್ಯಾಗ ಬುತ್ತಿ ಇಳಿಸಿ ಇಟ್ಟ ಒಳಗ ಇದ್ದಳೂ. ನೋಡಿದವನs ಲಾಲಬೆಂಕಿ ಆಗಿ ಬಂದವ್ವ ಹುಡುಗ ಮನೀಗಿ; ಆಕೀನಾ ಕಡೀತ್ಯಾನಂತ ಕೊಡಲಿ ತಗೊಂಡ ಎದ್ದ "ಯಾನ ಆಯ್ತೋ?" ಅಂದರ ಹೇಳವಲ್ಲ! ನಾಲ್ಕೆಂಟ ಮಂದಿ ಕೂಡಿ ಸಮಜೂತಿ ಹೇಳಿ ಸುಮ್ಮ

ಕೂಡಸೂತನಕಾ ಸಾಕಾಗಿ ಹೋಯ್ತು. ಅದ ದಿನಾ ಆಕೀನ ಓದ ತಾಯಿಗಣಾ ಕೂಡಿಸಿ ಬಂದೇವು. ಆಮ್ಯಾಲಿ ಆಕೀ ಮಾರಿ ಅತ್ತs ನಮ್ಮ ಮಾರಿ ಇತ್ತs. ಮುಂದ ಒಂದ ವರ್ಷದವ್ಯಾಲ ಆಕೀ ಅವ್ವ ಅಪ್ಪ ಆಳತ ಬಂದ ನನ್ನ ಕೈಕಾಲ ಹಿಡಿದ 'ಸೋಡಚೀಟಿ' ತಗೊಂಡ ಹೋದರು. ನಮ್ಮ ಹುಡುಗ ಕುಡುದುಲ್ಲ ಅಂತಿದ್ದ. ಆದರ ಮಂದಿ ಹೆಣ್ಮಕ್ಕಳ ಬೇಲಿ ಮ್ಯಾಲ ಹಾಕಿರ ಛಲೂ ? ಅಂತ ಹೇಳಿ ಕುಡಸಿದ್ಯು. ಈಗೆಲ್ಲಿ ಕುರುಂದವಾಡ ಹಟ್ಯಾಗ ಮತ್ತೊಬ್ಬನಾ ಮಾಡಕೊಂಡ ಜನ್ಮಾ ಮಾಡಕ ಹತ್ತೀದಾಳಂತ."

"ಮಕ್ಕಳಾ ಎಲ್ಲಾ ಯಾನ ಆಗಿದ್ದು ?" ಎಂದಳು ತಾರಾ.

"ಎಲ್ಲಿ ಮಕ್ಕಳಾ ತರತೀ ದವಳಕ್ಕೀ ; ಮೈನೆರದ ವರ್ಷದಾಗs ಇದೆಲ್ಲಾ ಹುಲಗಾಬಳಗಾ ಆಗಿ ಹೋಯ್ತು. ಆಮ್ಯಾಲಿ ಇವನೂ ಮತ್ತೊಂದ ಮಾಡಕೊ ಅಂದರ ಮಾಡಕೋವಾಲ, ಭಾಳ ಹಟಖೋರ ! ತಲೆತಿರಕ ಇದಾ. ನನ್ನ ಮಗಾ ಅಂತಾ ನಾ ಯಾನ ಮುಚ್ಚಿ ಇಡೂದುಲ್ಲ. ನಾ ಮಾಡಕೋ ಅಂತ ಹೇಳಕ ಹೋಗಾನ ಸಿಟ್ಟಿಗಿ ಬರಾಂವ ; ಎಲ್ಲಿ ನನ್ನ ಅತ್ತೀ ಮಾವರ ಪುಣ್ಯಾ ಇತ್ತು ನೀ ಗಂಟ ಬಿದ್ದಿ. ಅಣ್ಣ ತಮ್ಮರ ಒಂದ ಇದಾರಲ್ಲ, ಖೋಡಿಗೋಳ ತಾವs ಮುಂದ ಆಗಿ ಮಾಡಬೇಕೋ ? ಅದೆಲ್ಲಾ ಬಿಟ್ಟ ನಾವ ನೋಡಕ ಹೋದಲ್ಲಿ ಹೋಗಿ ಯಾನರs ಹೇಳಿ ಮುರದ ಬಿಡಬೇಕೋ ? ಯಾನ ಆಯ್ತೋ ಈ ಸಾರೆ ನಿಮಗಷ್ಟ ಹೇಳಲಿಲ್ಲ ; ಹೇಳಲಾಕರ ಎಲ್ಲಿ ದಿನಾ ಇದ್ದೂ ? ನಾಲ್ಕು ದಿನದಾಗ ಗಟ್ಟಿ ಆಯ್ತು ಅನ್ನೂಷ್ಟಗೆ ಕಾರಣs ಆಗಿಹೋಯ್ತು."

ತಾರಕ್ಕನಿಗೆ ಈ ವಿಷಯ ಹೊಸತು. ಹೊಸ ಮನೆಗೆ ಬಂದ ಮೇಲೆ ಹುಡುಗೆಯರು ಎಷ್ಟೋ ವಿಷಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಎಷ್ಟೋ ಸಲ ಅವುಗಳನ್ನು ಅರಿತುಕೊಳ್ಳದಿದ್ದರೆ ಎಷ್ಟೋ ತಪ್ಪು ಕಲ್ಪನೆಗಳೂ ತಪ್ಪು ನಡತೆಗಳೂ ಆಗುವುದುಂಟು. ಇಂಥ ತಪ್ಪು ಕಲ್ಪನೆಗೆ ಎಡೆಗೊಟ್ಟೇ ಎಷ್ಟೋ ಹೆಣ್ಣು ಮಕ್ಕಳ ಗುಲಾಬಿ ಹೂವಿನಂತಹ ಬಾಳು ಹದಗೆಡುವುದೂ ಉಂಟು. ಮನೆಗೆ ಹೊಸದಾಗಿ ಸೊಸೆ ಬಂದಾಗ ಹಿರಿಯರು ತಮ್ಮ ಮನೆಯ ರೀತಿ ನೀತಿಗಳನ್ನೂ ಜನರ ಗುಣ ಸ್ವಭಾವಗಳನ್ನೂ ಹೇಳಿ ಪರಿಚಯ ಮಾಡಿ ಕೊಡುವುದು ಒಳಿತು. ಹಾಗೆ ಮಾಡುವುದು ಹಳ್ಳಿಯಲ್ಲಿ ರೂಢಿಯಲ್ಲಿ ಇಲ್ಲವೇ ಇಲ್ಲ. ಆದುದರಿಂದ ಹುಡುಗೆಯರು ಮನೆಗೆ ಬಂದು ತಾವೇ ಸೂಕ್ಷ್ಮವಾಗಿ

ನಿರೀಕ್ಷಿಸಿ, ನಾಲ್ಕೆಂಟು ವರ್ಷ ಅತ್ತೆಯ ಮುಖದ ಕಡೆಗೆ ನೋಡುತ್ತ ಬಾಳ ಬೇಕಾಗುವದು.

ಅದರಲ್ಲಿ ಸ್ವಲ್ಪ ತಪ್ಪಿದರೆ ತಮ್ಮ ಮನೆಯ ರೀತಿ ತಪ್ಪಿತೆಂದು ಅತ್ತೆಯರ ಕೋಲಾಹಲ, ಮಗನ ಮುಂದೆ ದೂರು. ಇವೆಲ್ಲವುಗಳು ನಡೆಯದಂತೆ ಎಚ್ಚರ ದಿಂದ ಬಾಳುವೆ ಸಾಗಿಸುವಷ್ಟು ಬುದ್ಧಿ ಬಲಿತ ಹೆಣ್ಣು ಮಕ್ಕಳು ಸ್ವಾಭಾವಿಕ ವಾಗಿಯೇ ಕಡಮೆ. ಅದರಲ್ಲೂ ಅತ್ತೆಯಮನೆಗೆ ಬರುವ ವಯಸ್ಸಿಗೆ ಇಷ್ಟು ಪರಿಜ್ಞಾನ ಬರುವದು ಅಪರೂಪ. ಗೃಹಶಿಕ್ಷಣವೂ ಅವರಿಗೆ ದೊರೆತುದು ಅಷ್ಟುಕಷ್ಟೇ. ತವರುಮನೆಯ ಗೃಹಶಿಕ್ಷಣ ಅತ್ತೆಯ ಮನೆಯಲ್ಲಿ ಉಪಯೋಗ ಬೀಳದು ಬೇರೆ. ಒಮ್ಮೆ ಅತ್ತೆ ಬೀಸುವದು ಸಾಕೆನ್ನುವಳು. ಸೊಸೆ ಸಾಕು ಮಾಡಿದರೆ 'ಒಂದು ಮಾತು ಹೇಳೋದೇ ತಡ ಬೀಸುವುದನ್ನೇ ಬಿಟ್ಟಳು ಹಿಟ್ಟೆಲಿಂದ ಬಂದೋತು ?' ಎಂದು ಮಗನ ಮುಂದೆ ದೂರು ಸಿದ್ಧ. ಬಿಡಲಿಲ್ಲ ಹಾಗೇ ಬೀಸಿದರೆ 'ಸಂಜೀತನಕಾ ಬೀಸತ ಕೂತಳು ಹಸ್ತ ಬಂದರ ಅಡಗಿ ಎಲ್ಲೇದ ಆದೋತು ? " ಎಂದು ಗಂಡನ ಮುಂದೆ ಪ್ರಶ್ನೆ. ಹೀಗಾಗಿ ಅತ್ತೆಯ ಮನಸ್ಥಿತಿ ಅಸಾಮಾನ್ಯ ಮಾನಸಶಾಸ್ತ್ರಜ್ಞನೂ ಅರಿಯಲಾರನು. ಪಾಪ! ಬೆಕ್ಕಿನ ಕೈಯಲ್ಲಿ ಸಿಕ್ಕ ಇಲಿಯ ಮರಿಯಂತಹ ಸೊಸೆಯಂದಿರೇನು ತಿಳಿಯ ಬಲ್ಲರು ! ಆದರೂ ಈ ವಿಷಯದಲ್ಲೆಲ್ಲ ತಾರಕ್ಕ—ಚಿಮ್ಮವ್ವನ ಕೈಯಲ್ಲಿ ಕೆಲ ದಿನ ಕಳೆದುದರಿಂದಲೋ ಏನೋ ತನ್ನ ವಯಸ್ಸಿನ ಹುಡುಗೆಯರಿಗಿಂತ ಹೆಚ್ಚಿಗೆ ತಿಳಿದವಳೆಂದೇ ಹೇಳಬೇಕು. ಆದರೂ ಈ ಹೊಸ ಪತಿಯ ವಿಷಯಕ್ಕೆ ಇನ್ನಷ್ಟು ತಿಳಿದುಕೊಳ್ಳಬೇಕೆಂದೆಣಿಸಿ ಅವಳಿಗೆ ಇನ್ನೂ ನಾಲ್ಕೊಪ್ಪತ್ತು ಬದುಕಲೆಂದು "ಹೋಂದs ನಿನ್ನ ಕಣ್ಣು ಕಾಣಸುದುಲ್ಲಾ ಮನ್ಯಾಗ ಯಾರ ಅಡಗಿ ಮಾಡತ್ತಿದ್ದರು ? " ಎಂದು ತಾರಕ್ಕ ಕೇಳಿದಳು.

" ಹಾಂಗ ಯಾನರ ಮಟ್ಟಥಟ್ಟೆ ನಾ ಮಾಡತಿನ್ನು , ಯಾರರ ಅಚ್ಚಿ ಕಡ್ಯಾವರ ಇಚ್ಚಿ ಕಡ್ಯಾವರ ನಾಲ್ಕ ರೊಟ್ಟಿ ಮಾಡಿ ಕೊಡಾವರ. ಒಮ್ಮೊಮ್ಮಿ ಅಂವs ಯಾನರ ಕುದಸಕೋತಿದ್ದ. ಅಂವರ್ s ಎಲ್ಲಿ ಭಾಳ ತೋಟದಾಗ ಇರತ್ತಿದ್ದಾ ? "

"ತೋಟದಾಗ ಇಲ್ಲದ ಎಲ್ಲಿ ಇರತ್ತಿದ್ದರ ಅವರ ?" ತಾರಕ್ಕ ನಡುವೆಯೇ ಪ್ರಶ್ನೆ ಹಾಕಿದಳು.

" ಹಗಲೀ ರಾತ್ರಿ ಊರಾಗs ತಿರಗತಿದ್ದ ಅಲ್ಲ, ಮನೀಕಡೆ ಅವನ ಮನಸ ಎಲ್ಲಿತ್ತು ? ಒಂದು ದಿನಾ ಉಣಕ ಬಂದರ ಬರಾಂವ, ತೋಟಕ. ಇಲ್ಲಾದರ ನಾಲ್ಕ ನಾಲ್ಕ ದಿನಾ ಪತ್ತೇನs ಇಲ್ಲ, ಅಂವಂದ. ಹಾದಿ ನೋಡಿ ನೋಡಿ ಸಾಯಿಬೇಕ ನಾ."

ಅತ್ತೆ ಏನನ್ನೂ ಮುಚ್ಚಿಡುವಳೆಂದು ತಾರಕ್ಕನಿಗೆ ಅನ್ನಿಸಿತು. ಕೆರೆಯೇನೋ ನೋಡಲಿಕ್ಕೆ ತಿಳಿಯಾಗಿ ಕಾಣಿಸುತ್ತಿತ್ತಾದಾದರೂ ತಳಕ್ಕೆಲ್ಲ ಹೊಲಸು ತಂಗಿದಂತಿದೆ. ಇನ್ನೊಂದು ಹರಳು ಒಗೆದು ನೋಡಬೇಕು. ಮತ್ತೇನೇನು ಕೊಳಚೆ ಏಳುವುದೋ! ಎಂದು ಭಾವಿಸಿಯೋ ಏನೋ ತಾರಕ್ಕ " ಅವರ ಊಟಾ ?" ಎಂದು ಆಶ್ಚರ್ಯದಿಂದ ಕೇಳಿದಳು.

"ಅಂವಗ್ಯಾನ ಮಂದಿ ಕಡಿಮಿ, ಉಣಕ ಹಾಕಾವರಾ ? ಹಗಲಿ ರಾತ್ರಿ ಅಲ್ಲೇ " ಎಂದು ಅಪ್ಪವ್ವ ಮಾತನ್ನು ಅಷ್ಟಕೇ ನಿಲ್ಲಿಸಿ ನಾಲಿಗೆ ಕಡಿದು ಕೊಂಡಳು. ಕತ್ತಲೆಯಲ್ಲಿ ಅದು ತಾರಕ್ಕನಿಗೆ ಕಾಣಿಸಲಿಲ್ಲವೇನೋ !

ಹೊಸ ಹೆಂಡತಿಯನ್ನು ಮಾಡಿಕೊಂಡಂದಿನಿಂದ ಅಪ್ಪಣ್ಣ ತೋಟ ಪಟ್ಟಿಯತ್ತ ಮನಸ್ಸು ಹಾಕಿದ್ದನು. ಯಾವಾಗಲೂ ಆಳುಮಕ್ಕಳನ್ನು ಕರೆದು ಕೊಂಡು ಕೆಲಸದಲ್ಲಿ ತೊಡಗಿರುವನು. ಊರಲ್ಲಿ ಹೋಗುವುದೇ ಇಲ್ಲ. ಈಗ ಒಂದು ಆಳನ್ನು ಕಡಿಮೆ ಮಾಡಿದ್ದಾನೆ. ಅವನ ಕೆಲಸವನ್ನು ತಾನು ಮಾಡು ವನು. ಮನೆಗೆ ಹತ್ತುವ ಯಾವ ಸಾಮಾನು ಬೇಕಾದರೂ ಊರಲ್ಲಿ ಹೋಗಿ ಬರುವ ಆಳುಮಕ್ಕಳ ಕೈಯಿಂದ ತರಿಸುವ. ಈಗ ಕೆಲವು ದಿನಗಳಿಂದ ತಾನು ಚಹಾಕುಡಿಯುವದನ್ನು ಬಿಟ್ಟಿದ್ದನಾದರೂ ತಾರಕ್ಕ ಕುಡಿಯುವವಳೆಂದು ಚಹಾ ಸಕ್ಕರಿ ತರಿಸಿ ಮನೆಯಲ್ಲಿಡುವನು. ಈಗ ಸರಿಯಾಗಿ ಎರಡು ಹೊತ್ತು ಊಟಕ್ಕೆ ಬರುವನು. ನಡುನಡುವೆ ಕೆಲಸ ಬಿಟ್ಟು ಮನೆಯತ್ತ ಬಂದು ಒಮ್ಮೊಮ್ಮೆ ಹೆಂಡತಿಯ ಗೂಡ ನಕ್ಕು ಕಲೆದು ಹೋಗುವ. ಗಂಡನಿಗಾಗಿ ತಾರಕ್ಕನೂ ನಗುವಳು, ಹರಟೆ ಹೊಡೆಯುವಳು. ಅಪ್ಪಣ್ಣ ಒಮ್ಮೊಮ್ಮೆ ತನ್ನ ತಾಯಿಗೆ ಹೇಳುವನು :

" ನೀ ಇನ್ನ ಒಲೀ ಮುಂದ ಹೋಗಬ್ಯಾಡ ನೋಡ, ಅದ ಛಲ್ಲು ಇದ ಛಲ್ಲು ಮಾಡಕೋತ. ಈಗ ಹ್ಯಾಂಗ ಪಾಕಚಾಕ ಮಾಡಿದಾಳ ನೋಡ ಮನೀ ? "

"ಹೊಂಡೋ ಒಳ್ಳೆ ಪುಣ್ಯಮಾಡಿ ಬಂದಿದ್ದೀ, ಇಷ್ಟ ದಿನಾ ನಿಂತದಕ ಛಲೂ ಹ್ಯಾಂತಿ ಸಿಕ್ಕಳು! ನಾ ಯಾದಕ ಹೋಗಲಿ ಒಲಿ ಮುಂದ ಇನ್ನ, ಹಾಕಿದ ಮೂರ ಹೊತ್ತ ತಿಂದ, ಸುಮ್ಮನ ಹೊರಗ ಹೋಗಿ ಕೂಡತ್ಯಾನು" ಎಂದು ಅಮ್ಮವ್ವ ಹೇಳುವಳು.

ಇನ್ನು ಮನೆಯಲ್ಲಿ ಇಬ್ಬರು ಆಳುಮಕ್ಕಳು ಇದ್ದರು. ತೋಟದ ಕೆಲಸ ಹನ್ನೆರಡು ತಿಂಗಳೂ ಇರುವಂತಹದೇ, ದುಡಿಯಲು ಜನ ಬೇಕಲ್ಲ. ಆದುದ ರಿಂದ ತಾರಕ್ಕ ಐದಾರು ಜನರಿಗೆ ಅಡಿಗೆ ಮಾಡಬೇಕಾಗುವುದು. ಮೊದಲೇನೋ ಆಳುಮಕ್ಕಳು ತಮ್ಮ ತಮ್ಮ ಮನೆಯಲ್ಲಿಯೇ ಊಟ ಮಾಡುತ್ತಿದ್ದರು. ಅದ ಕ್ಕಾಗಿ ಹೆಚ್ಚಿಗೆ ಹಣವನ್ನು ಕೊಡಬೇಕಾಗುತ್ತಿದ್ದಿತು. ಅಲ್ಲದೆ ಅವರು ಊಟಕ್ಕೆ ಮನೆಗೆ ಹೋಗುವುದರಿಂದ ಕೆಲಸವೂ ಕಡಿಮೆಯಾಗುತ್ತಿತ್ತು. ಈ ಎಲ್ಲಾ ತೊಂದರೆ ಬೇಡವೆಂದು, ತಾರಕ್ಕ ಬಂದಾಗಿನಿಂದ ಆಳುಮಕ್ಕಳಿಗೆ ಊಟ ತೋಟದಲ್ಲಿಯೇ ಎಂದು ಅಪ್ಪಣ್ಣ ಹೇಳಿಬಿಟ್ಟಿದ್ದ. ಇವರೆಲ್ಲರ ಊಟ, ಮನೆ ಯಲ್ಲಿ ಎಮ್ಮೆ ಒಂದಿದೆ, ಅದರ ಕೆಲಸ, ಎಂದರೆ ತಾರಕ್ಕನಿಗೂ ಹೊತ್ತು ಹೇಗೆ ಹೋಗುವುದೆಂಬುದು ಗೊತ್ತಾಗುತ್ತಿರಲೇ ಇಲ್ಲ. ಇಲ್ಲಿ ಬಂದಮೇಲೆ ತಾರಕ್ಕ ಎಮ್ಮೆಯ ಧಾರಿ ತೆಗೆಯುವುದನ್ನು ಕಲಿತುಕೊಂಡಿರುವಳು. ನಾಲ್ಕೆಂಟು ದಿನಗಳ ಸಹವಾಸದಿಂದಲೂ ಅತ್ತಿಯ ಮಾತುಗಳಿಂದಲೂ ಅಣ್ಣ ತಮ್ಮಂದಿರಿಗೂ ತನ್ನ ಗಂಡನ ಮನೆಯವರಿಗೂ ಅಷ್ಟು ಮನಸ್ಸು ಸರಳವಿಲ್ಲೆಂದರಿತುಕೊಂಡು, ಅವರೊಡನೆ ಕೆಲವೇ ಮಾತುಗಳನ್ನಾಡಿದರೂ ಸವಿಯಾಗಿ ಮಾತಾಡಿ ಸುಮ್ಮ ನಿರುತ್ತಿದ್ದಳು, ತಾರಕ್ಕ. ಮೊದಲೇನೋ ಆಳುಮಕ್ಕಳು ಮನೆಯೊಳಗೆಲ್ಲ ಬೇಕಾದ ಹಾಗೆ ಬರುತ್ತಿದ್ದರು. ಈಗ ಊಟಕ್ಕೆ ಕುಳಿತುಕೊಳ್ಳುವದಾದರೂ ಬಂಕದಲ್ಲಿಯೇ ಕೂಡುವರು. ಅಪ್ಪಣ್ಣನಷ್ಟು ಒಳಗೆ ಕೂಡುವನು. ಮೊದ ಲೊಂದೆರಡು ಸಲ ಅಪ್ಪಣ್ಣ ಅಂದ " ಹೊರಗ ಯಾಕರ್‍ಯೋ ? . ಒಳಗs ಬರ್‍ರೆಲಾ ! "

ಆಗ ಆಳುಮಕ್ಕಳು "ಯಾತಕ್ಕ ಏಳರೆಪ್ಪ ! ಇಲ್ಲೆ ಕೂಡತೇವು" ಎಂದು ಹೇಳಿ ಒಬ್ಬರ ಮುಖವನ್ನು ಒಬ್ಬರು ನೋಡಿ ಪಿಸಿಪಿಸಿ ನಗುವರು.

ಆ ಕಾಲಕ್ಕೆ ಅಲ್ಲೇ ಕುಳಿತ ಅಮ್ಮವ್ವ ಅವರ ನಗುವನ್ನು ಅರಿತುಕೊಂಡು "ಯಾಕ ನಗುತೀರ್‍ಯೋ ?" ಎಂದು ಕೇಳುವಳು.

"ಯಾಕ ಇಲ್ಲ; ನಿಂಗ ಯಾವ ಕಡೆ ಕಾಣಿಸಿತ ಮತ್ತ, ನಾವ ನಕ್ಕಿದಾ ?" ಎಂದು ನಗೆಯಾಡಿದನೊಬ್ಬ.

"ಅತ್ತೀ ಕಣ್ಣ ಕಾಣದುಲ್ಲಂತ ಸೊಸಿಯಾನ್ಯರ ಮಾಡಕ ಹೋದರ" ಆ ಆಳುಮಗನ ಮಾತನ್ನು ಅಷ್ಟಕ್ಕೇ ತಡೆದು, "ಎಲ್ಲಾರೂ ಹಾಂಗs ಇರತಾರ ಯಾನೋ ?" ಎಂದು ಕೇಳುವ.

ಅಷ್ಟಕ್ಕೆ ಆ ಮಾತನಾಡುವ ಮನುಷ್ಯ ದವಡಿಯ ಹಲ್ಲಿನಲ್ಲಿ ನಾಲಿಗೆ ಹಿಡಿದುಕೊಂಡು ಸುಮ್ಮನಾಗುವ. ಊಟ ಮಾಡುವವರೆಲ್ಲ ತಮ್ಮ ಮಾತು ಗಳು ಊಟಕ್ಕೆ ಹಾಕುವವಳಿಗೇನೂ ತಿಳಿಯವು ಎಂದು ಭಾವಿಸಿಕೊಂಡು ಮಾತಾಡುತ್ತಿದ್ದರು. ಆದರೆ ತಾರಕ್ಕ ಎಲ್ಲವನ್ನೂ ಅರಿತೂ ಅರಿಯದವಳಂತೆ ನಗುನಗುತ್ತ ಎಲ್ಲರಿಗೂ ಊಟಕ್ಕೆ ಕೊಡುವಳು. ಅದು ಅವಳ ಸ್ವಾಭಾವಿಕ ನಗೆಯೆಂದು ಅವರು ಭಾವಿಸುತ್ತಿದ್ದರೇನೋ !

ತಾರಕ್ಕ ಆಳುಮಕ್ಕಳಿಗೊಂದು ಬೇರೆ ಅಡಿಗೆ ತಮಗೊಂದು ಬೇರೆ ಅಡಿಗೆ ಮಾಡುತ್ತಿರಲಿಲ್ಲ. ಎಲ್ಲರಿಗೂ ಒಂದೇ ತರಗತಿಯ ಆಹಾರ. ಇದನ್ನು ಕೆಲವು ದಿನ ಕಂಡು ಅಪ್ಪಣ್ಣ ಮನದಲ್ಲಿ 'ಇವಳಿಗೆ ಆಳುಮಕ್ಕಳ ಅಡಿಗೆ ಮಾಡಿ ಗೊತ್ತಿಲ್ಲ ವೇನೋ' ಎಂದು ಯೋಚಿಸಿ ಒಂದೆರಡು ಸಲ ಹೆಂಡತಿಗಿ "ಅವರಿಗೆ ಬೇರೆ ಅಡಿಗೆ ಮಾಡ್ತಿರು. ನಾವ ತಿನ್ನೋದs ಅವರಿಗೂ ಹಾಕಿದರ ಹ್ಯಾಂಗ ಆದೋತು ? ನುಚ್ಚು ಮಜ್ಜಿಗೆ ಅವರಿಗೆ ಮಾಡು. ದುಡದ ಬರತಾರು, ಅಕ್ಕಿ ಅನ್ನಾ ತಿಂದ ಹಸವ ಹ್ಯಾಂಗ ತಡದಾವ ಅವರಿಗಿ ?" ಎಂದು ಪರ್ಯಾಯದಿಂದ ಸೂಚಿಸಿದ. ಆದರೂ ಅವಳು ತಾನು ಮೊದಲು ಮಾಡುತ್ತಿದ್ದಂತೆಯೆ ಮಾಡುತ್ತಿದ್ದಳು. ಬೇರೆ ಬೇರೆ ಅಡಿಗೆ ಮಾಡಲು ಬೇಸರ ಪಡುವಳೆಂದೇನಲ್ಲ, ಸತ್ತರ ಸಂಗಡ ಯಾನ ಒಯ್ಯೋದ ಅದ, 'ಇವರಿಗೊಂದಾ ಅವರಿಗೊಂದಾ ಹಾಕಿ ? ಪಂತ್ಯಾಗ ಪರಪಂಕ್ತಿ ಮಾಡಿ ಪಾಪಾ ಯಾತಕ ಕಟಕೋಬೇಕು. ಎಲ್ಲಾರದು ಮಕ್ಕಳ ಹಂಗ ಹೊಟ್ಟೀ ನೆತ್ತಿ ನೋಡಿ, ಇರೂ ತನಕಾ ನಾಲ್ಕ ದಿನಾ ಛಲೂ ಅನಿಸಿಕೊಂಡ ಹೋಗೋದ ಒಂದ ದಿನಾ' ಎಂದು ಭಾವಿಸಿದ್ದಳು. ಆದುದರಿಂದ ಗಂಡನ ಮಾತಿಗೆ ಕಿವಿಗೊಡಲಿಲ್ಲ. ಅಪ್ಪಣ್ಣನೂ ಮನೆಗೆ ಹತ್ತುವ ಸಾಮಾನುಗಳನ್ನೆಲ್ಲಾ ತರಿಸಿಕೊಡುತ್ತ ಹೋಗಹತ್ತಿದ. ಎರಡನೆಯ ಹೆಂಡತಿಯ ಮನಸ್ಸನ್ನು ನೋಯಿಸುವುದು ಅವನಿಗೂ ಸರಿಯೆನಿಸುತ್ತಿರಲಿಲ್ಲ.

ಒಂದು ದಿನ ಮುಂಜಾನೆ ತಾರಕ್ಕ ಒಳಗೆ ಅಡಿಗೆ ಮಾಡುತ್ತಿದ್ದಳು. ಆಳು ಮಗ ಸಿದ್ದ ಯಾತ ಹೂಡಿದ್ದ. ಅಷ್ಟರಲ್ಲಿ ಐದಾರು ವರ್ಷದ ಹುಡುಗಿಯೊಂದು ಒಳಮನೆಯಲ್ಲಿ ಬರುವುದರಲ್ಲಿತ್ತು. ಆ ಹುಡುಗಿಯ ಹೆಜ್ಜೆ ಸಪ್ಪುಳ ಕೇಳಿ ತಾರಕ್ಕ ಹೊರಳಿ ನೋಡುವಷ್ಟರಲ್ಲಿ ಹೊರಗಿನಿಂದ ಯಾರೋ ಹೇಳಿದರು, ಆ ಹುಡುಗಿಗೆ. "ಒಳಗ ನಿಮ್ಮಪ್ಪ ಇಲ್ಲ ಬೇ !"

ಬರುವ ಹುಡುಗಿ ಅಷ್ಟಕ್ಕೆ ತಿರುಗಿ ನಿಂತು "ಅಂ ? ಎಲ್ಲಿ ಹೋಗಿದಾ ?" ಎಂದು ಕೇಳಿತು. ದನಿ ಇನಿದಾಗಿದ್ದಿತು.

"ಎಲ್ಲಿ ಮೇಲಡವಿಗೆ ಹೋಗಿದಾ ಯಾನೋ? ಯಾಕ ಬಂದೀದಿ? ನಿಮ್ಮ ಅವ್ವಾ ಬಂದಿದಾಳ ಯಾನ?"

"ಆವರವ್ವ ಇಲ್ಲಾ್ಯದಕ ಬರತಾಳ ಇನ್ನs ?" ಎಂದು ಬಾರಿಯ ಮೇಲೆ ಯಾತ ಹೊಡೆಯುತ್ತಿರುವ ಸಿದ್ದ ಕೇಳಿದ.

"ಯಾರ ಗೂಡಾ ಬಂದೀತ್ಯೋ ಪೋರಿ ?"

"ಯಾರರ ತೋಟಕ ಬರಾವರ ಗೂಡಾ ಬಂದಾದೋತ."

"ಹಿಂಗ ಬಿಡಾಕಿ ಅಲ್ಲ ಪೋರಿನಾ ?" ಎಂದು ಒಳಗೆ ಬರುತ್ತ ತಾರಕ್ಕನ ಚಿಕ್ಕತ್ತಿ "ನಿನ್ನ ಮಗಳ ಬಂದಾಳ ನೋಡ ಬೇ ತಾರಾ" ಎಂದು ನಗೆಗೂಡಿದ ದನಿಯಲ್ಲಿ ಹೇಳಿದಳು.

ಇದು ತಾನು ತಿಳಿದುಕೊಳ್ಳಬೇಕಾದ—ಇನ್ನೂವರೆಗೆ ತಿಳಿಯದ ಪತಿ ಗೃಹದ ಹೊಸ ಸಂಗತಿಯೋ ಅಥವಾ ಸರಳ ಪರಿಹಾಸವೋ ತಾರಕ್ಕನಿಗೆ ತಿಳಿಯ ಲಿಲ್ಲ. ಈ ಮೊದಲು ಹೊರಗೆ ನಡೆದ ಮಾತುಗಳನ್ನೆಲ್ಲ ಕೇಳಿ ಕುತೂಹಲ ಗೊಂಡ ಆಕೆ "ಯಾರ ಮಗಳ ?" ಎಂದು ಬೆರಗುದನಿಯಲ್ಲಿ ಕೇಳಿದಳು.

"ನಿನ್ನ ಮಗಳs ಅಲ್ಲ ; ನಿನಗ ಇನ್ನs ಗೊತ್ತಿಲ್ಲ ಕಾಣಸ್ತೇತ್ತಿ ?" ತಾರಕ್ಕ ಸ್ವಲ್ಪ ಹೊತ್ತು ಸುಮ್ಮನಾದಳು. ಆವಳು ಗಂಡನ ಮನೆಗೆ ಬಂದಾಗಿನಿಂದ ಅವಳಿಗೆ ಗಂಡನ ಮನೆತನದ ವಿಷಯಕ್ಕೆ, ಗಂಡನ ವಿಷಯಕ್ಕೆ ಇನ್ನೂ ಎಷ್ಟೋ ಹೊಸ ಹೊಸ ಸಂಗತಿಗಳು ತಿಳಿಯುತ್ತಲೇ ಇದ್ದುವು. ಅದರಿಂದ ಅವಳು ಯಾವುದಕ್ಕೂ ಬೆದರದೆ ಬೆಚ್ಚದೆ, ಬಂದುದಕ್ಕೆಲ್ಲ ಸಂತೋಷದಿಂದ ಸ್ವಾಗತ ವನ್ನೀಯುವಳು. ಅವಳಿಗೆ ಉಳಿದುದು ಅದೊಂದೇ.

"ಇರಲಿ ಅಲ್ಲ; ಮಗಳ ಇದ್ದರ ಯಾನ ವ್ಯೆಮ್ಯಾಲ ಬೀಳತಾಳು ?" ಎಂದು ಚಿಕ್ಕತ್ತಿಗೆ ಕೇಳಿದಳು.

ಈ ಮಾತು ಮಗಳ ವಿಷಯಕ್ಕೆ ಇವಳಿಗೆ ಇರುವ ಅಜ್ಞಾನದ ಚಿಹ್ನೆಯೆಂದರಿತಳಾ ಚಿಕ್ಕತ್ತೆ. ಅಂತೇ ಚಿಕ್ಕತ್ತೆ ಹೀಗೆ ಹೇಳಿದಳು: "ಇನ್ಯಾನ ಅಪ್ಪು ಮತ್ತೊಬ್ಬಾಕಿನಾ ಮಾಡಕೋತಾ ಅಂತಿದ್ಯು ನಾವ. ಹುಡುಗ ಇನ್ಯಾನ ಕೈಗಿ ಹತ್ತೂದುಲ್ಲ ಅಂತ ಅಮ್ಮಾನೂ ಆಶಾ ಬಿಟ್ಟೇಳು."

"ಯಾಕ ?" ಎಂದಳು ತಾರಾ,

ಈ ಪ್ರಶ್ನೆ ಅವಳ ಚಿಕ್ಕತ್ತೆಗೆ ಬೇಕಾಗಿಯೇ ಇದ್ದಿತು. ಮುಂದೆ ಹೇಳಲು ಪ್ರಾರಂಭಿಸಿದಳು. ಊರಾಗ ಒಬ್ಬಾಕಿ ಆರೇರಕ್ಕಿ ಇದಾಳ, ಸೋನಾ ಅಂತ. ಎಲ್ಲೀದ ಸುಟ್ಟ ಬರಲಿ ಆಕೀ ಕಾಲಾಗ ಹುಡುಗ ಹಾಳಾಗಿ ಹೋದ. ಊರಾಗ ನಾಲ್ಕಮಂದೀ ಗೂಡಾ ಕೆಟ್ಟ. ತನ್ನ ಪರಪಂಚಿ ಹಾಳ, ಆಕೀ ಖರ್ಚ ಒಂದ ಹಿಡ್ಯೋದ ಅಲ್ಲದ ತಾ ಒಂದ ಹಾಳ ಆಗೋದ; ಅಗಸುದ್ದಿ ಅಗಸುದ್ದಿ ಅಂತ. ಮಳದಾಗ ಬಂದದ ಬೆಳೀ ಎಲ್ಲಾ ಡಾಕ್ತರ ಮನೀಗಿ ಸುರದ. ಅದs ಆಗs ಒಂದ ಎಲ್ಲೀದರ ಹೆಣ್ಣ ನೋಡಿ, ಮದವಿ ಮಾಡಕೋರೋ ಅಂದರ ಕೇಳಲಿಲ್ಲ. ನಮ್ಮ ಮಾತ. ಯಾವ ಕಡೇದ ಬುದ್ಧಿ ಬಂತೋ ಯಾನೋ ? ನಿನ್ನ ನೋಡಿ ಬಂದಾಂವ ಬಿಡಲಿಲ್ಲs ಮಾಡಕೊಂಡ್ಯs ಬಿಟ್ಟ. ಈಗ್ಯಾನ ಊರಾಗ ಹೋಗುದುಲ್ಲಾ ಯಾನ ಇಲ್ಲ; ಅಲ್ಲಾ ?"

"ಯಾನೋ ತಾಯಿ; ಯಾನ್ಯಾನ ಹಣೆಬರದಾಗ ಏತಿ ಅದೆಲ್ಲಾ ಆಗಲಾಕಬೇಕಲ್ಲ! ಇದ್ದರು ಇರತಾಳಲ್ಲ ಆಕಿಯೂ...." ತಾರಕ್ಕ ಸಮಾಧಾನದಿಂದ ನುಡಿದಳು.

ಈ ಮಾತು ಕೇಳಿ ತಾರಕ್ಕನ ಚಿಕ್ಕತ್ತೆ ಬೆರಗಾದಳು. ತಾರಕ್ಕ ಕೆರಳಿ ಅಪ್ಪಣ್ಣನಿಗೆ ಏನಾದರೂ ಅನ್ನಬಹುದು. ಇದೇ ಸಂಧಿಯನ್ನು ಸಾಧಿಸಿ ಅವರ ಮನೆಯಲ್ಲಿ ಒಡಕಿನ ಬೀಜ ಬಿತ್ತಬೇಕು ಎಂದು ಬಯಸಿಬಂದ ಆಕೆಯ ವಿಚಾರ ತಲೆಕೆಳಗಾಯಿತು. ಅದಕ್ಕೆಂತಲೇ ಸ್ವಲ್ಪ ಆಣಕದ ಸ್ವರದಲ್ಲಿ "ಇನ್ನ ಹಾಂಗs ಅನ್ನಕ ಬೇಕಲ್ಲ; ಪದರಾಗ ಬಿದ್ದಿದ ಪವಿತ್ರ ಮಾಡಿ ಉಣ್ಣೋದ ಅಲ್ಲ! ಇಷ್ಟ ದಿನಾ ತೋಟದಾಗ ಬಂದರs ಸೋನೇದs ಕಾರಾಭಾರ. ನಮ್ಮನಾ ಸಹಿನ ದೂರ ಮಾಡಿ ಇಟ್ಟೇಳ ಖೋಡಿ, ಖೋಡಿ ಎಲ್ಯಾಕಿ ನಾಲ್ಕ ವರಸ ಯಾತ

ಮೆರದಳ ಅಂತೀ ? ಈಗ ಹೋಗಿ ಕೂತಳ ನೋಡ ಮಾರಿಗಿ ಸೆರಗ ಹಾಕಿ ಕೊಂಡ" ಎಂದು ಕೆಣಕಿ ನುಡಿದಳು.

"ಮಾರಿಗಿ ಸೆರಗ ಯಾಕ ಹಾಕಬೇಕು ? ಬರಬೇಕ ಹೋಗಬೇಕ ಈಗ್ಯಾನ ಆಯ್ತು ಆಕೀಗಿ ? "

"ಈಗ್ಯಾನ ಆಯ್ತು ಆಕೀಗಿ ? ಯಾನ ಹುಚ್ಚ ಇದ್ದಾದೀವಾ ನೀ ? ನಿನ್ನಾ ಮಾಡಕೊಂಡ, ಇವನ ಮನೀ ಸರಳ ನಡೀತಾ, ಇನ್ನ ಆಕಿ ಕಡೆ ಯಾದಕ ಹೋದಾನು ? ಆಕ್ಕೇದ ಯಾನ ನಡ್ಯೋದ ಏತಿ ಇಲ್ಲಿ ಇನ್ನಾ ? ಮೆಲ್ಲಕಾ ರಮಿಸಿ ನಮ್ಮ ಹುಡುಗನ ಕಡಿಂದ ಒಂದ ಕೂರಗಿ ಅಡವಿ ಮಾಡಸಕೋಬೇಕಂತ ಮಾಡಿಳ್ಳ, ತನ್ನ ಹೆಸರಲೆ."

"ಅಂವಗ್ಯ ಆಕಿ ಬೇಕೆಂದ ಮ್ಯಾಲ, ಮಾಡಿ ಕುಡಕ ಬ್ಯಾಡಾ ? ಆಕಿಗಿ ಯಾನರ ಆಧಾರ ಬೇಕೋ ಬ್ಯಾಡೋ ? ಈ ಗಂಡಸರದ ಯಾನ ನೇಮ ? ಆಕ್ಯಾನ ಮದವಿ ಮಾಡಕೊಂಡಾಕಿ ಇದಾಳು, ಹಾಂಗ್ಯ ನಾಲ್ಕೆಂಟ ವರ್ಷ ಇವರ ಗೂಡಾ ಜನ್ಮಾ ಹಾಕಿಳ."

ತಾರಕ್ಕನ ಈ ಮಾತಿನ ಕಡೆಗೆ ಅವಳ ಚಿಕ್ಕತ್ತೆಯ ಲಕ್ಷ್ಯವಿರಲಿಲ್ಲ. ಹಾಗೇ ಮುಂದೆ ಹೇಳತೊಡಗಿದಳು. "ಅದೆಲ್ಲಾ ಹೋಯ್ತಂತ ಹೀಂಗ ಮರ ಗಕ ಹತ್ತೀದಾಳಲ್ಲ ! ಮೊನ್ನಿ ಯಾರ ಕೈಲೆ ಹೇಳಿ ಹಚಕೊಟ್ಟೀಳಂತ, ಹೋಗ ಲಿಲ್ಲ ಅಪ್ಪ. ನಿನ್ನ ಮಾಡಿಕೊಂಡ ಮ್ಯಾಲ ಅಂವ ಆಕೀ ಮನೀ ಕಡೆ ಹಾಯ್ದ್ಯ ಇಲ್ಲ, ಸತ್ತಳೋ ಇದಾಳೋ ಅಂತ. ನಿನ್ನಾ ನೋಡಿ ಬಂದ ಮ್ಯಾಲ ಒಮ್ಮೆ ಆಕೀಗಿ ಇವಗ ಜಗಳ ಆಯ್ತಂತ 'ನಿನಕಿಂತ ಚಲುವ ಹೆಣ್ಣ ತಂದ ಇಡತ್ಯಾನ ಹೋಗ ನನ್ನ ಮನ್ಯಾಗ' ಎಂದು ವಾದ ಹಾಕಿ ಬಂದಾವ ತಿರಗಿ ಆಕೀ ಮಾರಿ ನೋಡಿಲ್ಲ" ಎಂದು ಹೇಳುತ್ತ ದೂರದಲ್ಲಿ ಅಮ್ಮವ್ವ ಬರುತ್ತಿದ್ದುದರಿಂದ ಹೊರಗೆ ಹೊರ ಟಳು.

"ಗೌಡತಿ ರೂಪ ಎಲ್ಲಿ ? ಆಕಿ ರೂಪ ಎಲ್ಲಿ ? ಗೌಡತಿ ಪಾಸಂಗಕ್ಕರ ಆಕಿ ನಿಂತಾಳ ಯಾನ ? " ಎಂದು ಕೇಳಿದ ಆಳುಮಗ ಸಿದ್ದ.

"ಇದ್ದಳಲ್ಲ ! ಆಕಿಯೂ ಮಸ್ತ ಚಲುವಿ ! ಗೌಡನ ಹತ್ಯಾಕ ಇರತಾ ಯಾನ ಕಡಮಿ ಚಲುವಿ ಇದ್ದಳು ? ಈಗ ಇಳತರ ವಯಾ ಆಯ್ತು, ಹುಚ್ಚರಂ –ಪುಣೇಕ ಹೋಗಿ ಯಾನ ನಿಂತ ಬಂದಳು. ಅಂದಿಂದು ಇಳದಳ್ಯ ನೋಡು."

"ಆಕೀನಾ ಪುಣೇನs ಮುದ್ಸೀ ಮಾಡಿತು, ಇಲ್ಲಾದರ ಇಳತರ ವಯಾ ಆಗಲಾಕ ಯಾನ? ಆಕಿ ನನಕಿಂತ ಯಾನ ಭಾಳ ದೊಡ್ಡಾಕಿ ಅಲ್ಲ! ಆ ಕಡೇದ ಹನ್ನೆರಡ ಮಂದಿ ಕೆಟ್ಟ ಹುಣ ಹಚ್ಚಗೊಂಡ ಬಂದಳು, ಇಲ್ಲಿ ಎಲ್ಲಾರನೂ ಹಾಳಿಗಿ ಹಚ್ಚಿ ಇಟ್ಟಳು! ಇದs ಒಂದ ಪೋರಿ ಎಲ್ಲೇದ ತಪ್ಪಿ ಹುಟ್ಟೇತಿ, ಇಲ್ಲಾದರ ಆಕಿಗಿ ಯಾನ ಮಕ್ಕಳ ಆಗೋವ ಅಂತಿ ಯಾನ ನೀ ಕಾಕೀ?" ಎಂದು ಸಿದ್ದ ಹೇಳಿದ, ತನಗೆ ಎಲ್ಲ ಗೊತ್ತಿದೆಯೆಂಬ ಭಾವ ಪ್ರದರ್ಶಿಸುತ್ತ. ಇವಳು ಹೇಳಬೇಡೆಂದು ಎಷ್ಟು ಸೂಚನೆ ಮಾಡುತ್ತಿದ್ದರೂ ಅವನ ಲಕ್ಷ್ಯಕ್ಕೆ ಬರಲಿಲ್ಲ. ಮಾತಿನ ಭರದಲ್ಲಿ "ಇನ್ನ ನಮ್ಮ ಮಾಲಕರಿಗೂ ಮಕ್ಕಳ ಆಗೋದ ಬಿರೀನs ಕಾಣತೇತಿ" ಎಂದು ಸ್ವಲ್ಪ ತಗ್ಗಿದ ದನಿಯಲ್ಲಿ ತಾರಕ್ಕನಿಗೆ ಕೇಳಿಸದಂತೆ ಹೇಳಿ ಕೊನೆಮುಟ್ಟಿಸಿಯೇ ಬಿಟ್ಟ.

"ಪೋರಿ ಎಲ್ಲಿ ಹೋಯ್ತೋ?" ಎಂದು ಆ ವಿಷಯ ಬದಲಿಸುವುದಕ್ಕಾಗಿ ಕೇಳಿದಳಾಕೆ, ಹಿಂದೆ ಅಮ್ಮವ್ವನ ಕೈ ಹಿಡಿದುಕೊಂಡು ಬರುತ್ತಿದ್ದುದನ್ನು ಅರಿತೂ ಅರಿಯದವಳಂತೆ.

ಸಿದ್ದ ಎದುರಿಗೆ ನೋಡಿ "ತಗೋ, ಇಲ್ಲೇ ಬಂದಳ ನೋಡ ತಮ್ಮ ಆಯಿ ಕೈ ಹಿಡಕೊಂಡ" ಎಂದು ಹೇಳಿದ.

ತಾರಕ್ಕನಿಗೆ ಎಲ್ಲ ಸಂಗತಿ ಗೊತ್ತಾಯಿತು. ಮನದಲ್ಲಿ ಪುರುಷ ಜಾತಿಯನ್ನೇ ಹಳಿದಳೇನೋ! ಆದರೂ ಮೇಲೆ ಏನೂ ತೋರಗೊಡಲಿಲ್ಲ. ಮೊದಲಿದ್ದಂತೆಯೇ ಇರುತ್ತಿದ್ದಳು. ಒಂದು ದಿನ ಅವಳ ತಂದೆ ಮಲ್ಲಪ್ಪ ಕರೆಯಲು ಬಂದ. ಅಳಿಯನನ್ನು ಕೇಳಿದ, "ನಾಲ್ಕು ದಿನ ಕರಕೊಂಡು ಹೋಗುವೆ" ನೆಂದು. ಅಪ್ಪಣ್ಣ ತಾರಕ್ಕನ ಎದುರಿನಲ್ಲಿಯೇ ಅವಳ ಮುಖವನ್ನು ನಿರೀಕ್ಷಿಸುತ್ತ "ಆಕೀನಾನ ಕೇಳ, ಬಂದರ ಕರಕೊಂಡ ಹೋಗು" ಎಂದು ಹೇಳಿದ. ಗಂಡನ ಭಾವವನ್ನರಿತು ತಾರಕ್ಕ "ಅಪ್ಪಾ, ಮನ್ಯಾಗ ಅಡಿಗಿಗಿ ಬೇಕು ಅತ್ತೀ ಕಣ್ಣ ಛಲೂ ಕಾಣಸುದುಲ್ಲ. ಇಬ್ಬರ ಮೂರ ಮಂದಿ ಆಳ ಮನಸೇರ ಬ್ಯಾರೇ ಉಣ್ಣಾವರ" ಎಂದಳು.

ಮಲ್ಲ ನಕ್ಕು ಮನದಲ್ಲಿಯೇ "ಮಗಳಿಗಿ ಈಗ ಜನ್ಮ ಹತ್ತಿತ ನೋಡ" ಎಂದುಕೊಂಡು ಊರಿಗೆ ಹೋಗಿ ಹೆಂಡತಿಗೆ ಹೇಳಿದ. "ಈಗ್ಯಾನ ಬರತಾಳ

ಆಕೀ ? ಜನ್ಮಾ ಮಾಡೂ ಛಂದ ಕೂತೇತಿ ಆಕೀಗಿ. ಮನ್ಯಾಗ ಎಮ್ಮ್ಯಾಕ್ಸಿನ, ಹಾಲ ಯಾನ, ಹೈನ ಯಾನ, ಬಿಟ್ಟ ಬರತಾಳು, ನಿನ್ನ ಮಗಳ ? ”

ರತ್ನವ್ವ ಮಗಳು ಬಾರದ ಚಿಂತೆಯನ್ನು ಅವಳ ಸುಖದ ಸಂಸಾರವನ್ನು ಕೇಳಿ ಮರೆತು “ಬರದಿರ ಇರಲಿ ಏಳು. ನಾವs ಒಮ್ಮೆ ಹೋದರ ಬಂದೋತ, ಯಾನರ ಮಾಡಕೊಂಡ ತಿನ್ನಾಕ” ಎಂದು ಸಂತಸದ ನುಡಿ ಆಡಿದಳು.

ಮುಂದೆ ಒಂದು ದಿನ ಆ ಹುಡುಗಿ ತಾರಕ್ಕನ ಮಗಳು, ಚಂಪಾ ಎಂದು ಆಕೆಯ ಹೆಸರು, ತೋಟಕ್ಕೆ ಬರಲು, ತಾರಕ್ಕ ಕರೆದು ತಮ್ಮ ತಂದೆ ಚಂದೂರಿ ನಿಂದ ತಂದ ಉಂಡಿಯೊಂದನ್ನು ತಿನ್ನಲು ಕೊಟ್ಟಳು. ಆದರೆ ಆ ಹುಡುಗಿ ಆ ಉಂಡಿಯನ್ನು ತಿನ್ನಲಿಲ್ಲ. ಹಾಗೆಯೆ ಕೈಯಲ್ಲಿ ಹಿಡಿದುಕೊಂಡು ನಿಂತಿತು. ತಾರಕ್ಕ ತಿನ್ನೆಂದು ಎರಡು ಸಲ ಹೇಳಿದರೂ ತಿನ್ನಲಿಲ್ಲ. ಹೆಚ್ಚಿಗೆ ಆಗ್ರಹ ಮಾಡಲು ಚಂಪೆಯು ಮುಂಗಾಣದೆ “ಮನೀಗಿ ಒಯ್ಯತ್ಯಾನು” ಎಂದು ಹೇಳಿದಳು.

“ಮನೀಗಿ ಒಯ್ಯಲಾಕ ಮತ್ತ ಕೊಡತ್ಯಾನು, ಇದ ನೀ ತಿನ್ನು!” ಎಂದಳು ತಾರಾ. ಆದರೂ ಆ ಹುಡುಗೆ ತಿನ್ನಲಿಲ್ಲ. ಅಲ್ಲೆ ಸಮೀಪದಲ್ಲಿದ್ದ ಅಮ್ಮಣ್ಣಿ “ಅವರ ಅವ್ವ ತಿನ್ನಬ್ಯಾಡ ಅಂದ ಆದಾಳು ; ಅದಕ್ಕs ತಿನವಲ್ತ ಪೋರಿ” ಎಂದು ಹೇಳಿದಳು. ಮತ್ತು ಚಂಪೆಯನ್ನು ಹತ್ತರ ಕರೆದು,

“ನಿಮ್ಮ ಅವ್ವ ನಮ್ಮಲ್ಲೆ ಯಾನ ತಿನಬ್ಯಾಡ ಅಂದಿದಾಳು ? ” ಎಂದು ಕೇಳಿದಳು. ಹುಡುಗಿ “ಇಲ್ಲ” ಎಂದು ಗೋಣು ಹಾಕಿತು.

“ಆಮ್ಯಾಲಿ ಯಾಕ ತಿನ್ನುದುಲ್ಲಾ ? ” ತಾರಾ ಮುಂದಾಗಿ ಕೇಳಿದಳು.

ಚಂಪೆ ಸುಮ್ಮನೆ ನಿಂತಳು. ತಾರಕ್ಕ ಏನೋ ಯೋಚಿಸಿ ಸ್ವಲ್ಪ ತಡೆದು “ನಾ ಕೊಟ್ಟದ ತಿನಬ್ಯಾಡ ಅಂದಿದಾಳು ? ” ಎಂದೂ ಕೇಳಿದಳು.

“ಹೂಂ ! ” ಅನ್ನುವಂತೆ ಚಂಪೆ ಗೋಣು ಹಾಕಿದಳು.

ತಾರಕ್ಕ ನೊಂದುಕೊಂಡಳು. ಅವಳ ಕಣ್ಣುಗಳೂ ಹನಿಗೂಡದಿರಲಿಲ್ಲ.

“ಇಂಥಾ ಪೋರಿಗಿ ವಿಷಾ ಹಾಕಿ, ನಾ ಯಾವ ಜನ್ಮದಾಗ ಕಳೀಲಿ ಆ ಪಾಪಾ ! ” ಎಂಬ ಮಾತು ಅವಳ ಮನದಲ್ಲಿಯೇ ಮೂಡಿ ಮಿಡಿಯತೊಡಗಿತು. ಇದೇ ವಿಚಾರ ಮೂರು ನಾಲ್ಕು ದಿನಗಳವರೆಗೂ ಅವಳ ತಲೆಯಲ್ಲಿ ತಿರುತಿರುಗಿ

ಸುತ್ತುತ್ತಿತ್ತು. ಊರೊಳಗಿನವಳ ಮನದೊಳಗಿನ ಈ ವಿತುಷ್ಟತೆಯನ್ನು ಹೇಗೆ ಕಳೆಯಬೇಕೆಂದು ಯೋಚಿಸುತ್ತಿದ್ದಳು. ಹುಡುಗೆಯನ್ನು ಮಮತೆಯಿಂದ ಕಾಣುತ್ತಿದ್ದಳು.

ಈಗ ಅಪ್ಪಣ್ಣ ತೋಟದಲ್ಲಿ ಚೆನ್ನಾಗಿಯೇ ದುಡಿಯುವ. ಹಗಲೆಲ್ಲ ದುಡಿದು, ದಣಿವಾಗುವದರಿಂದ ಬೇಗನೆ ಮಲಗಿಬಿಡುವ. ಅವನು ರಾತ್ರಿಯ ಊಟ ತೀರಿಸುವುದರಲ್ಲಿಯೇ ತಾರಕ್ಕ ಹಾಸಿಗೆ ಹಾಸಿ ಸಿದ್ಧಪಡಿಸಿರುವಳು. ಅದಕ್ಕೂ ಮೊದಲು ಅತ್ತೆಗೆ ಬಂಕದಲ್ಲಿ ಕಟ್ಟಿಗೆಯ ಮಂಚದ ಮೇಲೆ ಹಾಸಿಗೆ ಹಾಸಿಕೊಡುತ್ತಿದ್ದಳು. ಅಮ್ಮವ್ವ ಹೊತ್ತು ಮುಳುಗುವುದರಲ್ಲಿ ಸಂಜೆಯ ಊಟ ತೀರಿಸಿ ಅಲ್ಲಿ ಹೋಗಿ ಮಲಗುವಳು. ತಾರಕ್ಕ ಮನೆಯ ಕೆಲಸವನ್ನೆಲ್ಲ ತೀರಿಸಿಕೊಂಡು ಗಂಡನ ಪಕ್ಕದಲ್ಲಿ ಹೋಗಿ ಮಲಗುವದು ದಿನದ ರೂಢಿ. ಒಂದೊಂದು ದಿನ ಬಹಳ ದಣುವಾಗಿದ್ದರೆ ಗಂಡನು ಎಚ್ಚರಿರುತ್ತಿರಲಿಲ್ಲ. ಒಂದೊಂದು ದಿನ ಎಚ್ಚರಿರುತ್ತಿದ್ದರೆ ಪ್ರೀತಿಯಿಂದ ನಾಲ್ಕು ಮಾತುಗಳನ್ನು ಆಡುತ್ತ ಕಾಲು ಒತ್ತಲು ಹೇಳುವ. ಅದೇತಕ್ಕೋ ತಾರಕ್ಕನೊಡನೆ ಸಲಿಗೆಯಿಂದ ಮಾತಾಡಬೇಕೆಂದರೆ ಅವನಿಗೆ ಸಂಕೋಚವೆನಿಸುವದು. ಒಮ್ಮೊಮ್ಮೆ ಆಕೆ ಕಾಲು ಹಿಚುಕುತ್ತಿರುವಾಗ "ನಾಲ್ಕೆಂಟ ವರ್ಷ ನಿಂತದಕ ಯಾನರ ಆಗಲಿ ನೀವೊಬ್ಬಾಕಿ ಭಲೂ ಸಿಕ್ಕಿ" ಎಂದು ತನಗೆ ತಾರಕ್ಕನ ಬಗ್ಗೆ ಇದ್ದ ವಿಶ್ವಾಸವನ್ನು ಪ್ರದರ್ಶಿಸುವ.

ತಾರಕ್ಕ ಹಾಗೆಯೇ ಕಾಲು ಹಿಚುಕುತ್ತ "ನೆಟ್ಟಗ ಆಯ್ತಲ್ಲ!" ಅನ್ನುವಳು. ಅಪ್ಪಣ್ಣ ಮುಂದೆ ಹೇಳುವ "ನೀ ಇಲ್ಲದಾಗ ಈ ತೋಟದಾಗ ಒಂದ ತಾಸ ಅಂದರ ಒಂದ ವರ್ಷ ಆಗತಿತ್ತ ನನಗ ನೋಡು."

ತಾರಕ್ಕ ಗಂಡನ ನಡತೆಯನ್ನು ನೆನೆದು ಮನದಲ್ಲಿ ಅಸಹ್ಯಪಟ್ಟುಕೊಳ್ಳುವಳು. ಆದರೂ ಮುಖದಲ್ಲಿ ಮುಗುಳು ನಗೆಯೊಂದು ಮೂಡುವುದು, ಗಂಡನ ಮಾತು ಕೇಳಿ. ಮುಂದೆ ಅಪ್ಪಣ್ಣ ಹಾಗೇ ಹೇಳಹತ್ತುವ.

"ಚಂಪಿ ಅನ್ನೋದ ಪೋರಿ ಬರತೇತಲ್ಲ; ಆದ ಏಷ್ಟ ಚಲವ ಏತಿ ಅಲ್ಲಾ? ನೋಡಾನಾ ಮಾಯೇ ಬರತೇತಿ, ಭಾಳ ಶಾಣ್ಯಾ ಪೋರಿ! ಅವ್ವ ಬ್ಯಾಡ ಅಂದರೂ ಓಡಿ ಇಲ್ಲೇ ಬರತೇತಿ, ಆ ಪೋರಿ!" ಮುಂದೆ ಏನೋ ಹೇಳಬೇಕೆಂದು ಇದ್ದರೂ ಹೇಳಲು ಸಂಕೋಚಪಟ್ಟುಕೊಳ್ಳುತ್ತಿರುವಾಗ ತಾರಕ್ಕ "ಆಕಿ ನಿಮ್ಮ

ಹೊಟ್ಟೇಲಿ ಹುಟ್ಟಿದಾಕೆ ಅಂಬೋದ ನನಗೆ ಗೊತ್ತ ಏತಿ” ಎಂದು ಹೇಳಿ ಬಿಡುವಳು.

“ಗೊತ್ತ ಇಲ್ಲದ ಹ್ಯಾಂಗ ಇದ್ದೋತು ? ಇಂದ ಇಲ್ಲ ನಾಳಿ ಗೊತ್ತ ಆಗೋದ್ವ ಅಲ್ಲಾ. ಗಡಗೀಬಾಯಿ ಮುಚ್ಚಾಕ ಬಂದೋತ ಅಂದರ ಮಂದೀ ಬಾಯಿ ಮುಚ್ಚಾಕ ಬರತೇತಿ ? ” ಸ್ವಲ್ಪ ತಡೆದು “ಸೋನಿಯೂಭಾಳು ಛಲೂ, ಪೋರಿ ಹಾಂಗ್ಯ ಆದರ ಇನ್ನ.”

ತಾರಕ್ಕ ಮತ್ತಿಷ್ಟು ಸಮೀಪಕ್ಕೆ ಸರಿದು, ಗಂಡನ ಕರೇಹಾವಿಗೆ ಹೋಲುವ ಕೈಗಳನ್ನು ಸವರುತ್ತ ಮೆಲುಮಾತುಗಳಿಂದ “ಯಾಕ ? ಇನ್ನ್ಯ ಆದರ ಯಾನ ಆಯ್ತು ? ಆಕ್ಯಾನ ಮೈಮ್ಯಾಲ ಬೀಳತಾಳು ? ಆಕಿಯು ಬರತ ಹೋಗತ ಇರಲಿ, ಹೇಳಿ ಹಚಕುಡರಿ ಆಕಿಗಿ, ಬರಲಾಕ” ಎನ್ನುವಳು.

“ಹಾಂಗ ಮಾಡೂನು ? ನಿನ್ನ ಮನಸಿಗಿ ಬರತೇತೀ ? ” ಪ್ರಾರ್ಥಿಸುವ ದನಿಯಲ್ಲಿ ಕೇಳುವನಾತ.

“ಮನಸಿಗಿ ಬರದ ಯಾನ ? ನಿಮಗ ಬೇಕಾದಾಕಿ ನನಗೆ ಬ್ಯಾಡಾ ? ”

“ಹಾಂಗಾರ ನಾಳೇ ಕರಸೂನು ! ಮೊನ್ನಿ ಸಿದ್ದನ ಮುಂದ ಅಳತೀ ಳಂತ ! ”

“ಹರಿವತ್ತ ಎದ್ದಕೂಡ್ಲೆ ಸಿದ್ದಪ್ಪನ ಕಳಸರಿ ! ಇಲ್ಲಾದರ ನೀವ್ಯ ಯಾಕ ಹೋಗಿ ಕರಕೊಂಡ ಬರವಾರೀ ? ”

ಆಗ ತಾರಕ್ಕನನ್ನು ಅಪ್ಪಣ್ಣಿ ಹತ್ತರ ಸೆಳೆದು ಗಟ್ಟಿಯಾಗಿ ಅಪ್ಪಿ ಕೊಳ್ಳುವನು. ಅವಳ ತಲೆಯನ್ನು ಅಕ್ಕರೆಯಿಂದ ಸವರುವ. “ನಿನ್ಹಂಗ ದೊಡ್ಡ ಮನಸಿನ ಹೆಂಗಸರನಾ ಎಲ್ಲಿ ನೋಡಲಿಲ್ಲ ನಾ. ನಿನ್ನ ಅಂಥಾಕಿ ಸಿಕ್ಕದ್ದ ನನ್ನ ನಸೀಬ ಭಾಳ ಛಲೂ” ಎನ್ನುತ್ತ ಹಾಸಿಗೆಯಲ್ಲಿ ತಾರಕ್ಕನನ್ನು ಬಿಟ್ಟು ಅದೇಕೋ ದೂರ ಹೊರಳುವ ! ಮನದಲ್ಲಿ ಮತ್ತೇನೇನು ವಿಚಾರಗಳು ಬರುವವೋ ! ಮತ್ತೆ ಹೊರಳಿ ತಾರಕ್ಕನ ಸಮಿಾಪಕ್ಕೆ ಬಂದು “ಹಾ ! ಆಕಿ ನಿನ್ನಷ್ಟ ಛಲೂ ಹೆಂಗಸಲ್ಲ ? ” ಎನ್ನುವ. ಈ ಕಾಲಕ್ಕೆ ಅವನ ಕಣ್ಣುಗಳು ಸ್ವಲ್ಪ ಕೆಂಪಾಗುವವು. ತುಟಿಗಳೂ ನಡುಗುವವು. ಅವನೊಮ್ಮೆಲೇ ಮನ ದಲ್ಲಿಯೇ ಪುಟಪುಟಿಸುವನು. “ನಾ ಈಕಿನಾ ಮಾಡಕೋತ್ಯಾನ ಅನ್ನೂನಾ ಹ್ಯಾಂಗ ಜಗಳಾ ತಗದಳ ಆಕೀ ? ಆಕೀ ಮಾತ ನಾ ಕೇಳೀರ ಇಂಥಾಕಿ

ಸಿಗತೀಳು" ಎಂದು ತಾರಕ್ಕನನ್ನು ಗಟ್ಟಿಯಾಗಿ ಅಪ್ಪುವ. ಅಪ್ಪಿಕೊಂಡೇ "ನನ್ನ ಜನ್ಮ ಹಾಳ ಆಗಲಿ ಅಂತೀಳ ನೋಡ ಆಕಿ, ಇಂಥಾಕಿ ಇರತಿರಲಾಕ ಮತ್ತ ಆಕೀನಾ ತರಲಿ ? ಈಕೀನೂ ಎಷ್ಟ ನನ್ನ ಮ್ಯಾಲ ಮಾಯೇ ಮಾಡತಾಳ ಇದ ಹೀಂಗ ಇದ್ದೋದೀತು ?" ಎಂದು ತಾರಕ್ಕನ ಕಿವಿಯ ಹತ್ತರ ಮುಖ ಒಯ್ಯುವ. ಆಗ ತಾರಕ್ಕನಿಗೆ ತೂಕಡಿಕೆ ಬಂದಿರುವದೋ ಏನೋ! ಸುಮ್ಮ ನಿರುವಳು. 'ಇನ್ನ ನಾ ಆಕೀನಾ ತರೂದಲ್ಲ ಬಿಡ' ಅನ್ನುವಂತೆ ತನ್ನಿಂದ ತಾನೇ ಗೋಣು ಹಾಕುವನು. ಆಗ ತಾರಕ್ಕ ಎಚ್ಚರಾಗಿಯೇ ಏನೋ ಕೇಳು ವಳು. "ನೀವ ಇಷ್ಟ ದಿನಾ ಮದಿವಿ ಯಾಕ ಮಾಡಕೋಲಿಲ್ಲಾ ?"

"ಹೋಂದ ; ನನಗ ಮದವೀನs ಮಾಡಕೋಬಾರದ ಅನಸಿತ್ತ. ಹೆಂಗಸರ್‍ಯಾನ ವಿಶ್ವಾಸದವರಲ್ಲ ! ಆ ಹ್ಯಾಂತಿ ನಡತಿ ನೋಡಿರ ಆಕಿನಾ ಎಷ್ಟ ಛಲೂ ಇಟ್ಟೀನ. ಮೈಮ್ಯಾಲ ಹತ್ತತೊಲೀ ಬಂಗಾರ, ಹೊರಗಿನ ಬಿಸಲ ಗೊತ್ತಿಲ್ಲ ಆಗಿತ್ತ, ಯಾನ ಆದರ ಹೆಂಗಸರ ವಿಶ್ವಾಸದವರಲ್ಲ ನೋಡು."

ಗಂಡನ ಈ ಮಾತನ್ನು ಕೇಳಿ ಪುರುಷ ಜಾತಿಯನ್ನೇ ಅಪಹಾಸ್ಯ ಮಾಡುವಂತಹ ನಗೆಯೊಂದನ್ನು ಬೀರಿದಳು ತಾರಕ್ಕ. ಆದರೂ "ಎಲ್ಲಾರು ಹಾಂಗ ಇರತಾರ ಯಾನಾ ?" ಎಂದು ಕೇಳಿದಳು. ಆಗಿನ ಅವಳ ದನಿಯಲ್ಲಿ ದಗ್ಧಹೃದಯದ ಬಹು ಆಳವಾದ ಭಗ್ನ ಮನಸಿನ ಸ್ವಾನುಭವವೊಂದು ಹೊರ ಬೀಳುವಂತೆ ಆದರಲ್ಲಿ ಆತ್ಮೀಯತೆಯಿತ್ತು.

"ನೀ ಹಾಂಗ ಅಂತ ಅನಲಿಲ್ಲ ನಾ ; ಹಾಂಗ ತಿಳಿಕೋಬ್ಯಾಡ" ಎಂದು ಪ್ರೇಮಪೂರಿತ ಸ್ವರದಿಂದ ಹೇಳುತ್ತ ಎದ್ದು ಕುಳಿತು, ತಮ್ಮಲ್ಲಿರುವ ಪತಿ ಪತ್ನಿಯ ಸಂಬಂಧವಿರುವದೆಂಬುದನ್ನೂ ಮರೆತು ವೈದಡವಿ ಮುದ್ದಿಡುವನು. ಆಗ ತನ್ನಲ್ಲಿರುವ ಮಮತೆಯನ್ನೆಲ್ಲ ಅವಳ ಅಂಗಾಂಗಗಳಲ್ಲಿ ಮುಖದ ಮುಖಾಂತರ ಹರಿಯಿಸುತ್ತಿದ್ದನೋ ಏನೊ ! ಆ ಮೇಲೆ ಅನ್ನುವ "ನಾ ಯಾನ ಆಕಿನಾ ತರೂದುಲ್ಲ ಬಿಡು" ಎಂದು.

"ಅದ್ಯಾಕ ? ತರೂನು ಅಲ್ಲ. ನಾವಿಬ್ಬರೂ ಇರತೇವು" ಎನ್ನುವಳು ತಾರಾ. ಮರುದಿನ ಮುಂಜಾನೆ ತಾರಕ್ಕ ಗಂಡನಿಗೆ 'ಸೋನಾ' ನನ್ನು ಕರೆದುತರಲು ನೆನಪು ಮಾಡಿದಳು. ಅಪ್ಪಣ್ಣ ತಾರಕ್ಕನ ಮುಖದ ಕಡೆಗೊಮ್ಮೆ ದಿಟ್ಟಿಸಿ ನೋಡಿ ತನ್ನ ಕೆಲಸಕ್ಕೆ ಹೋದ. ಏನೂ ಮಾತಾಡಲಿಲ್ಲ. ಸ್ವಲ್ಪ

ಹೊತ್ತಿನ ಮೇಲೆ ಊರೊಳಗಿಂದ ಚಂಪೆ ಬಂದಳು. ಆ ಹುಡುಗೆಗೆ "ನಿಮ್ಮವ್ವನಾ ಒಂದ ದಿನಾ ತೋಟದ ಕಡೆ ಕರಕೊಂಡ ಬಾ" ಎಂದು ತಾರಕ್ಕ ಹೇಳಿದಳು. ಆ ಹುಡಗಿಯೂ ಬೆರಗುಗಣ್ಣುಗಳನ್ನು ತೆರೆದು ತಾರಕ್ಕನ ಮುಖವನ್ನು ನಿರೀಕ್ಷಿಸಿತು. ತಾಯಿ ತೋಟಕ್ಕೆ ಬರುವದಿಲ್ಲೆಂದು ಚಂಪಿಗೆ ಗೊತ್ತು. ಅದಕ್ಕೇ ಅವಳು "ನಾ ಯಾನ ಇಲ್ಲ" ಎಂದು ಹೇಳಿದಳು.

"ಹಾಂಗ ಮಾಡಬಾರದು; ಅವರ ಕರೀತಾರಂತ ಹೇಳಿ ಕರಕೊಂಬಾ ಅಲ್ಲ! ನಿನಗ ಹೊಸಾ ಪರಕಾರ ಹೊಲಿಸಿ ಕೊಡತ್ಯಾನು" ಎಂದು ತಾರಕ್ಕ ಸಲಿಗೆಯಿಂದ ಮೈದಡವಿ ಹೇಳಿದಳು.

ಚಂಪೆ ಅಕ್ಕರೆಯಿಂದ ಗೋಣು ಹಾಕಿ "ನನಗ ಪರಕಾರ ಹೊಲಿಸಿ ಕೊಡತಿ? ಅಪ್ಪಾಗ ಹೇಳದರ ಜಾತ್ರಿಗಿ ಅಂತಾನು."

"ಹೂಂ! ನಾಳೇ ಹೊಲಿಸಿ ತರಸತ್ಯಾನು, ಸಿದ್ದನ ಕಡಿಂದ. ನೀ ನಿಮ್ಮವ್ವನ ಕರಕೊಂಡ ಬಾ."

ಮರುದಿನ ತಾರಕ್ಕನ ಸರಳ ಹೃದಯವು ಸೋನಾನ ಭೆಟ್ಟಿಗಾಗಿ ತವಕಗೊಳ್ಳದಿರಲಿಲ್ಲ. ಆದರೆ ಅವಳು ಬರಲಿಲ್ಲ ಮತ್ತೆ ನಾಲ್ಕಾರು ದಿನಗಳ ಮೇಲೆ ಅಪ್ಪಣ್ಣ ಕರೆಯಲು ಕಳಿಸಿದರೂ ಅವಳು ಬರಲಿಲ್ಲ. ಇಷ್ಟೇ ಅಲ್ಲ, ಕರೆಯಲು ಹೋದವನ ಕಡೆಯಿಂದ ಹೇಳಿಕಳಿಸಿದಳು. "ಹುಟ್ಟಿ ಏತಿ ಅವಂಗ ಈಗ ಕೈಯಾಕ ಸುಟಕೋ ಅಂತಿ? ಇಂಥಾ ಕಂರ್ಯಾವ ಐದ ತಿಂಗಳಾಯ್ತು ಇಕಡೆ ಮಾರಿ ಸುದ್ದಾ ತೋರಿಸಿಲ್ಲ. ಇಂವ ಬರೋದ ಬಿಟ್ಟರ ದೇವರ ಹುಟ್ಟಿಸಿದಾ ಅಂದಮ್ಯಾಲ ಯಾವ ಹುಲ್ಲಮೇಯಿಕ ಹಚ್ಚತಾ ಯಾನ ಮನುಷ್ಯಾನಾ? ದ್ಯಾವರ ಹ್ಯಾಂಗಾರ ದಂಡಿಗೆ ಹಚ್ಚ್ಯಾನಲ್ಲ. ಇವನ ಸೂರದ ನೆಳ್ಳಿನ್ಯಾಗ ಬಂದ ಬೀಳಲಿ ನಾ, ನಾಯೀ ಹಂಗ?" ಒಡಲುರಿಯ ಕಿಡಿಗಳಿವು!

ಅದನ್ನು ಕೇಳಿ ಅಪ್ಪಣ್ಣ "ಬಂದರ ಬರಲಿ, ಇಲ್ಲಾದರ ಬಿಡಲಿ; ನಮ ಪೋರಿ ಒಂದ ಬರತೇತಿ ಹೋಗತೇತಿ ಸಾಕಲ್ಲ" ಎಂದು ಅಂದು ಸುಮ್ಮನಾದ.

ಮುಂದೆ ನಾಲ್ಕೆಂಟು ದಿನಗಳಲ್ಲಿ ತೇರದಾಳಕ್ಕೆ ಹೋಗಿಬರುವ ಗುರುತಿನವರಿಂದ ಎರಡೂ ಸೀರೆಗಳನ್ನೂ ಪರಕಾರದ ಅರಿವೆಯನ್ನೂ ತಾರಕ್ಕ ತರಿಸಿದಳು. ಅವುಗಳನ್ನು ಸಿದ್ದನ ಕೈಯಲ್ಲಿ ಕೊಟ್ಟು, ಸೋನಾನ ಮನೆಯಲ್ಲಿ ಕೊಟ್ಟು ಬರಲಿಕ್ಕೆ ಹೇಳಿದಳು. ಸಿದ್ದ ಒಯ್ದಂತೆಯೇ ತಿರುಗಿ ತಕ್ಕೊಂಡು ಬಂದು

ಹೇಳಿದ. "ನನಗ್ಯಾತಕ ಬೇಕು ? ಇವ ಓದ ಮತ್ತಾತ್ಯರರ ಜೋಗತಿಗೆ ಕೊಡ ಅನ್ನ ಅವಗ" ಎಂದು ಅಂದಳಾಕೆ. ಈ ಮಾತ ಕೇಳಿ ತಾರಕ್ಕನ ಹೃದಯದಲ್ಲಿ ಕತ್ತಿಯಿಂದ ಇರಿದಂತಾಯತು. ಬಾಯಲ್ಲಿಯೇ " ಹ್ಯಾಂಗ ತಗೊಂಡಾಳಾಕಿ ಸೀರಿ ? ಮೈ ಮೇಲಿನ ಅರಿವಿ ಹೊಟ್ಟಿಗಾಗಿನ ಇದ್ದಳ ಯಾನ ಆಕಿ ? ಗಂಡಸರ ಗಟ್ಟಿ ತಾಯಿ ! " ಎಂದು ತನ್ನಂತೆ ಎಂದೇ ಭಾವಿಸಿ, ಬಾಯಲ್ಲಿಯೇ ಪುಟ ಪುಟಿಸಿದಳು. ಅವಳ ಮುಖದಿಂದ ಅವಳರಿಯದೆಯೇ ನೊಂದ ನಿಟ್ಟುಸಿರೊಂದು ಹೊರಬಿದ್ದು ಸುತ್ತಲಿನ ಹವೆಯನ್ನು ಬೆಚ್ಚಗೆ ಮಾಡಿತು.

ಅದೇ ದಿನ ಮಧ್ಯಾಹ್ನ ಚಂಪಾ ತೋಟಕ್ಕೆ ಬಂದಾಗ ತಾರಕ್ಕ ಅವಳಿಗೆ ಕೇಳಿದಳು : "ನಿನ್ನ ಪರಕಾರ ಅರಿವಿನೂ ಯಾಕ ತಿರಗಿ ಕೊಟ್ಟ ?"

" ಎಲ್ಲಿ ಏತಿ ನನ್ನ ಪರಕಾರ ಅರಿವಿ ? ಸುಳ್ಳs ಹೇಳತಿ ನೀ ?" ಎಂದು ಆನಂದದಿಂದ ಗೋಣುಹಾಕಿ ಕೇಳಿದಳಾ ಚಿಕ್ಕ ಹುಡಗಿ.

"ಹರೀವತ್ತ ಮನೀಗಿ ಹಚ್ಚಿಕೊಟ್ಟನಲ್ಲ. ನಿಮ್ಮವ್ವ ತಿರುಗಿ ಕೊಡ್ಡಳು " ಹುಡುಗಿ ಸ್ವಲ್ಪ ಹೊತ್ತು ಸುಮ್ಮನಾಯಿತು. ಆಮೇಲೆ "ಅದಕ್ಕs ಇಂದ ಸಿಟ್ಟಿಗಿ ಬಂದೀಳ ನನ್ನ ಮ್ಯಾಲಿ " ಎಂದು ಮೈಮುರಿತು ನುಡಿಯಿತು.

"ಯಾಕ ? ಸಿಟ್ಟಿಗಿ ಯಾಕ ಬಂದಳು ? ಮನ್ಯಾಗ ಯಾನ ಅನ್ನತಿಳು ? ನನಗ ಯಾನರ ಅನತಿದ್ದಳ ಯಾನಾ " ಆತುರವನ್ನು ಧ್ವನಿಯಲ್ಲಿ ತೋರ ಗೊಡದೆ ಕೇಳಿದಳು ತಾರ.

" ಇಲ್ಲ, ನಿನಗ್ಯಾನ ಅನಲಿಲ್ಲ ಆಕಿ, ಅಪ್ಪಾಗ...." ಅಷ್ಟರಲ್ಲಿ ಅತ್ತಿಂದ ಅಪ್ಪಣ್ಣ ಬಂದು "ಯಾಕಬೇ ನಿಮ್ಮವ್ವ ಸೀರಿ ತಿರಗಿ ಕೊಟ್ಟಳು ? ನಿಮಗೂ ಬರಬ್ಯಾಡ ಅಂತಾಳ ಯಾನ ಇತ್ತ ? ಆಕಿ ಮಾತ ಕೇಳ ನಿಲ್ಲಾಕೆಲ್ಲ ನೀನು " ಎಂದು ಕೇಳಿದ.

" ಇಕ್ಯಾಕ್ಯನ ನಿಲ್ಲತಾಳು ? ಇಕ್ಕಿ ಬರಾಕೇ ಅಲ್ಲ. ಆಕಿಗಿ ಒಂದ ಬಿಡತೇತಿ ಅಂದರ ಈಕಿಗಿ ಹ್ಯಾಂಗ ಬಿಟ್ಬೋತು ?" ಮಗನ ಮಾತಿಗೆ ಅಮ್ಮವ್ವ ಮುದುಕಿ ಉತ್ತರ ಕೊಟ್ಟಳು.

"ಆಕಿಗಿರೇ ಯಾನ ಬಿಡ್ಡತೇತಿ ? ಹಾಂಗ ಮಾಡಾಕೇ ಅಲ್ಲ, ನಾಲ್ಕ ದಿನಾ ಇನರ ಯಾಕ ಇಷ್ಟ ಹಟಾ ಹಿಡೀಬೇಕು ? ಒಮ್ಮೆ ಹೋಗಿ ಬರಬಾರದು ಆಕಿ ಮನೀ ತನಕಾ ? " ಎಂದು ನಗೆಗೂಡಿದ ದನಿಯಿಂದ ತಾರಕ್ಕ ನುಡಿದಳು.

ತಾರಕ್ಕನ ಇಂಥಾ ಮಾತನ್ನು ಕೇಳಿದ್ದು, ಅವರತ್ತೆ ಇದೇ ಮೊದಲನೆಯ ಸಲ. ಆದುದರಿಂದ ಅವಳು ಸ್ವಲ್ಪ ಆಶ್ಚರ್ಯಚಕಿತಳಾದಳು. ತನ್ನ ಮಗ ನನ್ನುದ್ದೇಶಿಸಿ "ಯಾನ ಗಟ್ಟಿ ಇದಾಳ ಇಕ್ಕಿ ?" ಎಂದಳು. ಅಪ್ಪಣ್ಣ ಏನೂ ಹೇಳಲಿಲ್ಲ ; ಹೊರಟುಹೋದ.

"ಗಟ್ಟಿಯಾತರದ ಇದರಾಗ ? ಯಾರ್‍ಯಾರ ಹಣಿಬರದಾಗ ಯಾನ್ಯಾನ ಭೋಗಸೋದ ಏತಿ, ಭೋಗಸೋಕ ಬೇಕಲ್ಲ ! ಅದಕ್ಯಾಕ ಅಡ್ಡ ಆಗೋದಾ ?" ಎಂದಳು ತಾರಾ, ನಿರಾಶೆಯಿಂದ ಎಲ್ಲಿಯೋ ನೋಡುತ್ತ.

"ಈಗ ಎಲ್ಲಾ ನಾಲ್ಕ ದಿನಾ ಸುಖದಾಗ ಇದೀ ಅದನಾ ಬಿಟ್ಟ ಇಲ್ಲದ ಉಸಾಬರಗಿ ಬೀಳಬ್ಯಾಡ" ಎಂದು ಅಮ್ಮವ್ವ ಒಮ್ಮೆಲೇ ತಡೆದು....

"ಚಂಪಿ ಎಲ್ಲಿ ಇದಾಳು ?" ಎಂದು ಕೇಳಿದಳು.

"ಆಕಿ ಎಲ್ಲಿ ಅವನ ಬೆನ್ನ ಹತ್ತಿ ಎಲದೋಟದ ಕಡೆಗೆ ಹೋದಳ. ಯಾಕ ?" ಎಂದಳು ತಾರಾ.

ಅಮ್ಮವ್ವ ಮುಂದೆ ಹೇಳಲು ಆರಂಭಿಸಿದಳು. "ಗಂಡಸರ ಹೊರ ಛಂದಗಿ ಬಿದ್ದರ ಮನ್ಯಾಗ ಹ್ಯಾಂಗ ಛಲೂ ಇದ್ದಾರು ? ತನ್ನ ಕಾಲಲೇ ತಾನ ನಿಂತಿದಾಳ ಚಲೂ ಆಯ್ತಲ್ಲ. ಹೋಗು ಶನೀ ಕರದ ಮನ್ಯಾಗ ಇಟ್ಟಕೊಂಡರಂತ. ಆಕೀನಾ ಆದಷ್ಟ ದೂರ ಮಾಡತ ಹೋಗೋದ ಅಂದರ ನಿನ್ನ ಗಂಡ ನಿನ್ನ ಗೂಡಾ ಮಾಯೇಲೇ ಇರತಾ. ಹುಡಗೂರಾ ಹುಬಚೀ ಆದಾವ. ಸುಖದಾಗ ನೀ ಇದ್ದೀ" ಅಮ್ಮವ್ವ ಹೀಗೆ ಇನ್ನೂ ಎಷ್ಟೊತ್ತು ಹೇಳುತ್ತಿದ್ದಳೋ ? ಆದರೆ ತಾರಕ್ಕ ಅವಳನ್ನು ನಡುವೆಯೇ ತಡೆದು "ಸುಖಾ ಬೇಡಿ ಬರಕ ಬೇಕಲ್ಲ ? ಎಲ್ಲಾರಿಗಿ ಬಾ ಅಂದರ ಎಲ್ಲೇದ ಬಂದೋತ ಸುಖಾ" ಎಂದಳು.

ಹೀಗೆಯೇ ಇರುವಾಗ ಒಂದು ದಿನ ಐನಾಪುರದಿಂದ ತಾರಕ್ಕನ ಸೋದರ ಮಾವನಾದ ರಾಮಪ್ಪ ಸಕ್ಕರಿ ತಕ್ಕೊಂಡು ಬಂದ. ಅಪ್ಪಣ್ಣ ಹೊಲದ ರಾಶಿಯಿದೆ ಎಂದು ಬೇರೆ ಕಡೆಗೆ ಹೋಗಿದ್ದ. ತಾರಕ್ಕ ತೋಟದಲ್ಲಿದ್ದಳು. ಮಾವ ಬಂದೊಡನೆಯೇ ಹಿಗ್ಗಿ, ಕೈ ಕಾಲಿಗೆ ನೀರು ಕೊಟ್ಟು, ಕೂಡಲು ಜಮಖಾನೆ ಹಾಸಿಕೊಟ್ಟಳು. ರಾಮಪ್ಪ ಕುಳಿತ. ಅನಂತರ ತಾರಕ್ಕ ಕೇಳಿದಳು. "ಯಾನ ಮನೀ ನೋಡಿ ಹೋಂದಾವ ಇತ್ತ ಹಾಯಿಲ್ಲs ಇಲ್ಲ, ವರ್ಷ ಆಯ್ತು ! ಒಮ್ಮಿರೆ ಬರಬಾರದು ? ಎಲ್ಲ್ಯರ ಮಾಡಿಕೊಟ್ಟ ಮ್ಯಾಲ ನಿಮ್ಮ ಒಜ್ಜೆ ಇಳೀ

ತಂತ ಮಾಡಿರಿ ಹೋಂದ ? ” ಎಂದು ಸ್ವಲ್ಪ ಮನಸ್ಸಿಗೆ ಹತ್ತುವಂತೆಯೇ ಆಡಿದಳು ತಾರಕ್ಕ. ಐನಾಪುರದಿಂದ ಒಮ್ಮೆ ಅತ್ತೆಯಾಗಲಿ ಮಾವನಾಗಲಿ ಬಂದಾರೆಂದು ಅಂದಳು. ಆ ಆಶೆ ಬಹಳ ದಿನಗಳ ವರೆಗೆ ಸಿದ್ಧಿಸದಿದ್ದುದಕ್ಕೆ ಸಿಟ್ಟಿಗೆ ಬಂದು ಹೀಂಗೆ ನುಡಿದಳು.

“ ಹಾಂಗೇನ ಇಲ್ಲ ; ಬರಬೇಕ ಅನತ್ಯಾನು. ಆದರ ಮನೀ ಒಂದ ಬಿಡಬೇಕಲ್ಲ. ಅಂಗಡಿಯೊಳಗ ನಾ ಇಲ್ಲದ ನಡಿಯೂ ಹಂಗ ಇಲ್ಲ. ಯಾನ ಮಾಡೋದಾ ? ” ಎಂದು ತಾನು ಬಾರದಿದ್ದುದಕ್ಕೆ ಕಾರಣ ಹೇಳಿದ.

“ ಒಂದು ದಿನದ ಪೂರ್ತೆ ಅಂಗಡ್ಯಾಗ ಅನಂತನ ಕೂಡಿಸಿ ಬಂದರ ಬರುದುಲ್ಲ ಯಾನ ? ಯಾನರ ಒಂದ ನೆವನ ಹೇಳ್ತಾ ಮಾಮಾ ?” ಸಲಿಗೆ ಬೆರತ ಸಿಟ್ಟಿನಿಂದ ತಾರಕ್ಕ ಗೋಣುಹಾಕಿ ನುಡಿದಳು. ಅನಂತನ ಹೆಸರನ್ನು ಉಚ್ಚರಿಸಬೇಕಾದರೆ ಅವಳಿಗೆ ಹೇಗೋ ಹೇಗೋ ಆಯಿತು.

“ ಹೂಂ ! ಇನ್ನ ಅವನಾ ಕೂಡಸ ಅಂಗಡ್ಯಾಗ ” ಎಂದು ಬಿಸಿಯುಸಿರೊಂದನ್ನು ತೂರಿ ‘ ಅನಂತ ಛಲೂ ಆಗಲಿಲ್ಲವ್ವಾ, ತಾರಾ ! ಕೆಟ್ಟ ಹುಡುಗರ ಸಂಗತಿಗಿ ಬಿದ್ದೀದಾ. ಅಂಗಡಿ ಅವನ ಮ್ಯಾಲ ಬಿಡೂ ಸೋಯ ಇಲ್ಲ. ಯಾನ ಮಾಡೋದಾ ? ಇಷ್ಟ ದೊಡ್ಡಾಂವ ಆದ ಎಲ್ಲ್ಯಾರ ತಿರಗತಾ, ಎಲ್ಲ್ಯಾರ ಇರತಾ, ಪರೀಕ್ಷೇಕ ಹೋಗಲಿಲ್ಲ. ಮತ್ತೊಂದ ವರ್ಷ ಕಲಿ ಅಂದರ ಸಾಲಿಗೇ ಹೋಗಲಿಲ್ಲ, ಅಭ್ಯಾಸ ಮಾಡಲಿಲ್ಲ. ಮನ್ಯಾಗೂ ಕೆಲಸ ಇಲ್ಲಾ ಬೊಗಸೀ ಇಲ್ಲಾ ತನಗ ತಿಳೀದುಲ್ಲಾ ಮತ್ತೊಬ್ಬರ ಹೇಳಿರ ಕೇಳುದುಲ್ಲಾ ; ನಮ್ಮ ನಸೀಬ ಅನ್ನೋದ ಆಯ್ತು.

“ ಮೈಯಾಗರs ಎಲ್ಲಾ ನೆಟ್ಟಗ ಏತ್ಯಾನಾ ? ” ವಿಷಣ್ಣವದನದಿಂದ ತಾರಕ್ಕ ಕೇಳಿದಳು.

“ ಮೈಯಾಗ ನೆಟ್ಟಗ ಇರಕ ಅವನಿಗ್ಯಾನ ಆಗೇತಿ ? ಮೊದಲ ತಿನು ಹಂಗ ತಿನ್ನೂತಾನ ಎರಡ ಹೊತ್ತ. ಉಣ್ಣು ಹಂಗ ಉಣತಾನ. ಒಮ್ಮೊಮ್ಮಿ ಛಲೂ ಇದ್ದ ಅಂದರ—ಅದೂ ಲಹರ ತಿರಗಿತ ಅಂದರ—ಮನೀ ಅನ್ನತಾ, ಹೊಲಾ ಅನ್ನತಾ ; ಇಲ್ಲಾದರ ಇಲ್ಲs ಇಲ್ಲ, ನಡುವಿ ಒಮ್ಮಿ ಎಲ್ಲಿ ಹೋಗಿದ್ದೋ ಎರಡ ದಿನಾ ಪತ್ತೇನs ಇಲ್ಲ ; ಮೂರನೇ ದಿನಕ ತಾನs ಬಂದ. ಎಲ್ಲಿ ಹೋಗಿದ್ದೀ ಅಂತ ಕೇಳುಸೋಯೊಂದ ಇಲ್ಲ. ಕೂತ ಅಂದರ ಒಂದ ಮೂಲೀ

ಹಿಡಿದ ಸುಮ್ಮ, ಕೂಡತಾ ಎರಡೆರಡ ತಾಸ. ಅದ್ಯಾಕ ಸಿಟ್ಟ ಅಂತ ತಿಳ್ಯೊಲ್ಲಾ ಅವನ ಧರತೀ ಅಂತ ತಿಳ್ಯೊಲ್ಲ."

"ಯಾಕೋ ?" ಎಂದಳು ತಾರಾ ಏನೋ ಊಹಿಸುತ್ತ.

"ಯಾಕ ಯಾನ ಭಗವಂತಗ ಗೊತ್ತವ್ವ! ಹುಡುಗ ಯಾನ ಜನ್ಮಾ ಛಲೂ ಮಾಡುಹಂಗ ಕಾಣುದುಲ್ಲ. ಇವರ ಸಲುವಾಗಿ ನಾವ ಮಣ್ಣ ಕಚ್ಚಿ ಜನ್ಮಾ ಮಾಡಿದ್ಯು, ಸಾಲಿ ಕಲಿಸಿದ್ಯು."

"ನಮುಗ ಯಾನ ಹೇಳೀ ಹಚಕೊಟ್ಟಿಲ್ಲಲಾ ?"

"ಯಾನ ಅಂತ ಹೇಳಿ ಹಚಕುಡೂನು ? ಯಾನ ಬ್ಯಾನಿ ಬಿದ್ದಾನು, ಉರೀ ಬರತಾವು, ಹಾಸಿಗಿ ಹಿಡದೀದಾ ಅಂತ ಹೇಳೂನು ? ಯಾನ ಇಲ್ಲ : ಇರೂ ಹಂಗ ಇದಾನ. ಒಮ್ಮೊಮ್ಮಿ ಹೇಳಕ ಹತ್ತ ಅಂದರ ಎಂಥಾವ ಬುದ್ಧೀ ಮಾತ ಹೇಳತಾನ. ಎಲ್ಲಿರ ದೇವರಾ ದಿಂಡರಾ ಏತ್ಯಾನ ಕೇಳಕ ಹೋದರ ಅವರ ಅಂವಗ ಯಾನ ಆಗಿಲ್ಲ ಅಂತ ಹೇಳತಾರು. ಇನ್ನ ನೋಡಬೇಕವ್ವ ಹ್ಯಾಂತಿ ಮನ್ಯಾಗ ಬಂದ ಮ್ಯಾಲ ಯಾನರ ಹಾದಿಗಿ ಬರತಾನ ಯಾನ" ಎಂದ. ರಾಮಪ್ಪ, ತಲೆಯ ರುಮಾಲು ತೆಗೆದು ಮೊಳಕಾಲಿಗೆ ಹಾಕಿಕೊಂಡು.

"ಇಂದರಾನೂ ದೊಡ್ಡಾಕಿ ಆಗಿರಬೇಕಲ್ಲ ?" ಎಂದು ಕೇಳಿದಳು ತಾರಾ. ಆಗ ತನ್ನ ಆತ್ಮವನ್ನೇ ಯಾರೋ ಎಳದೊಯ್ಯುವಂತೆ ಅವಳಿಗೆ ಭಾಸವಾಯಿತು. ಒಮ್ಮೆಲೇ ಕೆಳಗೆ ಕುಳಿತಳು. ರಾಮಪ್ಪ ಬಹಳ ಹೊತ್ತಿನಿಂದ ನಿಂತಿದ್ದಾನೆ. ಇನ್ನು ಕೂತು ಮಾತಾಡುವಳೇನೋ ಎಂದು ಭಾವಿಸಿದನೇನೋ ! ತಾರಕ್ಕನ ಮನಸ್ಸಿನಲ್ಲಿ ಮಾತ್ರ ಅನಂತನ ಸ್ಥಿತಿ ಹಾಗಾದುದಕ್ಕೆ ಅದೇಕೊ ಒಮ್ಮೆ ಅಭಿಮಾನ ಅನ್ನಿಸುವದು. ಮತ್ತೊಮ್ಮೆ ಮರುಗುವಳು. "ಹಾಂಗ ಯಾಕ ಆಗೇತಿ ನನಗ ಗೊತ್ತ !" ಎಂದು ಮನದಲ್ಲಿಯೇ ಅಂದುಕೊಳ್ಳುವಳು ಕೂಡ.

"ಮೊನ್ನೆ ನೆರದಿದಾಳ; ಅದಕ್ಕ ನಾ ಈಗ ಸಕ್ಕರಿ ತಗೊಂಡ ಬಂದಿದ್ದಾನು ನಿಮುಗ" ಎಂದು ಪದರೊಳಗಿನ ಸಕ್ಕರೆಯ ಪುಡಿಯನ್ನು ಬಿಚ್ಚಿ ತಾರಕ್ಕನ ಕೈಗೆ ಕೊಟ್ಟ.

ಸಕ್ಕರೆಯ ಪುಡಿಯನ್ನು ಕೈಯಲ್ಲಿ ತಕ್ಕೊಳುತ್ತ "ಹಿಂಗ್ಯಾಕ ? ಅದಕ್ಕ ಬಂದಿದಿ ನೀ ?" ಎಂದು ಆರೋಪಿಸಿದಳು ತಾರಾ ಮತ್ತು "ಎಲ್ಲಿ ನೆರದಿದಾಳೊ ?" ವಿಕೃತ ನಗೆವೊಂದನ್ನು ಬಿಗಿ ಹಿಡಿದು ಕೇಳಿದಳು.

"ಅಲ್ಲೇ ತೇರದಾಳದಾಗs ನೆರದಿದಾಳ. ಕೂಡಸೋದಂತ ಮಾಡಿದೇವ. ಮೊನ್ನಿ ನಾನೂ ತೇರದಾಳಕ ಹೋಗಿ ಬಂದಿನು, ಅದರ ವಿಚಾರಕ್ಕ. ಆಗs ಬರತಾನs ಇಲ್ಲೇ ಇಳ್ಯಾಂವ. ಆದರ ರತ್ನಾನ ಕಡೆ ಮೊದಲ ಹೋಗಿ ಬರ ಬೇಕು, ಆಮ್ಯಾಲ ಈಕಡೆ ಬರಬೇಕಂತ ಹೋದಿನಿ ಹಾಂಗs" ಎಂದು ಹೇಳಿದ ರಾಮಪ್ಪ. ಅವನು ಚಂದೂರಿಗೆ ಮೊದಲು ಹೋಗಿಬರಲು ಕಾರಣವೂ ಒಂದಿತ್ತು. ತನ್ನ ಹೆಂಡತಿಯು ಕೊಟ್ಟ ಎಕ್ಕಸರ ಎಲ್ಲಿದೆ ಎಂಬುದನ್ನು ತಂಗಿ ಯನ್ನು ವಿಚಾರಿಸಬೇಕಾಗಿದ್ದಿತು. ಇಲ್ಲವಾದರೆ ಹೊಸ ಅತ್ತೆಯ ಮನೆಯಲ್ಲಿ ತಾರಕ್ಕನನ್ನು ಒಮ್ಮೆಲೇ ಹೇಗೆ ಕೇಳುವುದು ಎಂಬುದೇ ಅವನ ವಿಚಾರ.

"ಅವ್ವಾ ಅಪ್ಪಾ ಹ್ಯಾಂಗ ಇದಾರು! ಯಾರ ಬರತಾರ ಇಂದರೂನ ಉಡೀತುಂಬಕಾ ?" ತಾರಕ್ಕ ಸ್ವಲ್ಪ ಸಮಾಧಾನದ ಸ್ವರ ತಂದು ಕೇಳಿದಳು.

"ಎಲ್ಲಾ ನೆಟ್ಟಗ ಇದಾರು ; ರತ್ನಾನs ಬರತಾಳ, ನಾಳಿ ಐನಾಪುರಕ್ಕ. ಉಡೀ ತುಂಬಿ ಬರತಾ ನಿನ್ನಗೂಡಾ ಇಲ್ಲ್ಯಾ ಒಂದ ದಿನಾ ನಿಂತ ಹೋದ್ಯಾನ ಅಂತೀಳು. ನೀವ ಯಾರ್‍ಯಾರ ಬರತೀರಿ ?" ಎಂದು ಕೇಳುತ್ತ ಕೋಟು ತೆಗೆದು ಗೂಟಿಗೆ ಹಾಕಿ ಕುಳಿತ.

"ನೋಡುಣು ಇನ್ನs, ಅವರಾನ ಕೇಳದ ನಾ ಯಾನ ಹೇಳಲಿ ?"

"ಎಲ್ಲಿ ಹೋಗಿದಾ ಆಪ್ಪಾಸಾಬ ?"

"ಇಂದ ಸೋಮಾರ ಅಂತ ಮೊಟ್ಟ ಇಲ್ಲ. ಮ್ಯಾಲಿನ ಕೆಲಸೂ ಯಾನ ಇಲ್ಲ ಆಗಿತ್ತಂತ ಹೊಲಕ ಹೋಗಿದಾರು."

"ಇನ್ನ ಯಾವಾಗ ಬರತಾ ? ನನಗ ತಿರಿಗಿ ಸಂಜಿಕಿ ಹೋಗಬೇಕಾಗಿತ್ತು ; ಮನ್ಯಾಗ ಇನs ಕೆಲಸ ಭಾಳ ಏತಿ" ಎಂದ ರಾಮು.

"ಎಂದಿಲ್ಲದ ಇಂದ ಬಂದೀದಿ ! ಇಂದ ಒಂದ ದಿನಾ ನಿಂತ ಹೋಗು. ಅವರೂ ಸಂಜಿಗಿ ಬರತಾರು, ಭೆಟ್ಟಿ ಆಗತೇತಿ" ತಾರಕ್ಕ ಹೇಳಿದಳು.

"ಛೆ ! ನಿಂದಿರೋದ ಯಾನ ಆಗೂದುಲ್ಲಾ"

ಅಮ್ಮವ್ವ ಮುದುಕಿ ಹೊರಗಿಂದ ಮೆಲ್ಲಗೆ ಎದ್ದು ಒಳಗೆ ಬಂದು "ನಿಲ್ಲೂಲ್ಲದ ಹ್ಯಾಂಗ ಹೋಗತಿ ಅದಾ ? ನಾವೂ ನಿಮ್ಮ ಮನೀಗಿ ಬಂದರೂ ಹೀಂಗs ತಿರಗೋದs ಆಯ್ತಲ್ಲ ! ಇದ ಯಾನ ಹೊರಗಿನ ಮನೀ ಏತಿ ? ಸೋದರ ಸೊಸೀ ಮನೀನ ಏತಿ, ಸೋದರ ಸೊಸೀ ಯಾನ ಮಗಳ ಯಾನ" ಎಂದಳು.

"ಅದ್ಯಾಕ ಇಲ್ಲs ನಿಲ್ಲಲಾಕ ಯಾನಾ ? ಮನ್ಯಾಗ ಅಡಚಣಿ ಏತಿ ; ಅದಕ್ಕ ಹೋಗೋದ. ನಡೀ ಅಲ್ಲಾ ! ಸೊಸೀ ಉಡೀತುಂಬಕ, ನೀನೂ. ಗಾಡಿ ಗೋಳ ಹೀಂಗs ತೋಟದ ಮ್ಯಾಲಿಂದ ಬರತಾವು" ಎಂದ ರಾಮು.

"ಮುದಕಿ ಮನಸ್ಯಾಳ ಆಗಿ ನಾ ಯಾದಕ ಬರಲಿ ? ಕಣ್ಣ ನೆಟ್ಟಗ ಕಾಣಸುದುಲ್ಲ, ಅವರs ಬಂದಾರ ಬೇಕಾದರ ಗಂಡಾ ಹ್ಯಾಂತಿ. ಎಲ್ಲಿ ತುಂಬೋದ ಮಾಡಿದಿರಿ ಉಡೀ ? ಎಂದಾ ? " ಎಂದು ಮುದುಕಿ ಕೇಳಿತು.

"ಶುಕ್ರಾರ ತುಂಬೋದ. ಅಲ್ಲೇ ತವರಮನ್ಯಾಗs ನೆರದ್ದಾಳು. ತೇರದಾಳಕs ಅವರs ಕೂಡಸತಾರು."

"ಶುಕ್ರಾರ ಅಂದರ ಇನ್ನೆಲ್ಲಿ ದಿನಾ ಉಳದು ? ಕಾಲಾಗs ಬಂದೀತಿ ಅಲ್ಲಾ ? "

"ಅದಕ್ಕs ಇಂದ ಗಡಬಿಡೀಲೆ ಹೋಗಬೇಕ ಅಂತ್ಯಾನು. ಅಪ್ಪಾ ಸಾಬ ಗಂಟಬೀಳಲಿಲ್ಲ ಅಲ್ಲ ! "

"ಅಂವ್ಯಾನ ಗಂಟಿ ಬೀಳತಾ ಇನ್ನ, ತಾಸ ಎರಡ ತಾಸ ರಾತ್ರಿ ಆಗಾ ನಾನs ಬರತಾ. ನೀ ಅಂತೂ ಕಾಲಿಗಿ ಗೆಜ್ಜಿ ಕಟಕೊಂಡs ಬಂದೀದಿ. ತಾರಕ್ಕನ ಕಡೆಗೆ ಹೊರಳಿ "ಅಡಗಿ ಮಾಡವ್ವ ಲಗೂನ ; ಶಾಂವಗಿ ಇಷ್ಟ ಬಸೀ ಮತ್ತ. ಅನ್ನಕ ಇಡು, ಉಂಡ ಹೋಗಲಿ ನಿಮ್ಮ ಮಾವ. ಹೆಪ್ಪ ಹಾಕಿದಿ ಯಾನ ಮತ್ತ ? ಹಾಲ ಇದಾವ ಇಲ್ಲ ? " ಎಂದು ಕೇಳಿದಳು.

"ಇನ್ನs ಇಲ್ಲ ; ಹಾಲ ಇದಾವ. ಅಡಗಿಗಿ ಇಡತ್ಯಾನ" ಎಂದು ತಾರಕ್ಕ ಒಲೆಯ ಹತ್ತಿರ ಹೋದಳು.

ಅಮ್ಮಾವ್ವ ಎದ್ದು ಹೊರಗೆ ಹೋಗುತ್ತ "ನಾ ಯಾನ ಹೇಳಕs ಬೇಕ ಹಿಂಗ್ಯಾನ ಇಲ್ಲಪ್ಪ ? ಆಕೇ ಎಲ್ಲಾ ಮನೀ ಕಾರಭಾರತಿ. ಆದರ ಇನ್ನs ಯಾತಗಪ್ಪ ಕೂತಿದಾಳ ಅಂತ ಹೇಳಿನಿ, ಇಷ್ಟs" ಎಂದು ರಾಮುನಿಗೆ ಹೇಳಿ, ಹೊರಳಿ ಸ್ವಲ್ಪ ಬಂದು "ತಾರಾ ಆಚಿ ಕಡೆದವರಿಗೂ ರಾಮಪ್ಪನs ಕೊಟ್ಟ ಬರಲಿ ಅಲ್ಲಾ ಸಕ್ಕರೀ ? ಅವರ್ಯಾನ ಬರಾವರ ಇಲ್ಲಾ ಬಿಡಾವರ ಇಲ್ಲಾ. ಆದರ ನಮಗs ಅಷ್ಟ ಕೊಟ್ಟ ಹೋದ ಅಂದಾರಲ್ಲ, ಹಿಂದಿಂದ ? ನಾವ ಕುಡಕ ಹೋದರ ರೀತಿ ಅಲ್ಲ, ಇಲ್ಲಿ ತನಕಾ ಬಂದಿದಾ ಮತ್ತ ! " ಎಂದು ಮೆಲ್ಲಗೆ ಕೇಳಿದಳು.

"ಹೂಂ ! ಚಹಾ ಅಷ್ಟ ಮಾಡತ್ಯಾನ. ಕುಡದ ಹೋಗಿ ಕೊಟ್ಟ ಬರಲಿ ಅಲ್ಲಾ !" ರಾಮಪ್ಪ ಚಹ ಕುಡಿದು ಆದಮೇಲೆ ಅಜ್ಜಿಯ ಮನೆಗೆ ಹೋಗಿ, ಸಕ್ಕರೆ ಕೊಟ್ಟು, ಸೊಸೆಯ ಉಡಿ ತುಂಬಲಿಕ್ಕೆ ಬರಬೇಕೆಂದು ಹೇಳಿದ. ಅವರೂ ಚಹ ಮಾಡಿಕೊಡಲು ಬೇಡ ಬೇಡ ಅನ್ನುತ್ತ ಕುಡಿದು, ಸ್ವಲ್ಪ ಹೊತ್ತು ಕೂತು, ಆ ಮಾತು ಈ ಮಾತು ಆಡಿ, ಮತ್ತೊಮ್ಮೆ ಫಲ ಶೋಭನಕ್ಕೆ ಬರಲು ಆಗ್ರಹ ಮಾಡಿ ಹೇಳಿ, ತಾರಕ್ಕನ ಮನೆಗೆ ಬಂದ. ತಾರಕ್ಕನ ಮನೆಗೂ ಅವರ ಮನೆಗೂ ನಡುವೆ ಗೋಡೆಯೊಂದೇ ಮಾತ್ರ ಇದ್ದಿತು. ಅದೂ ಅಲ್ಲದೆ ಅಮ್ಮವ್ವ ರಾಮಪ್ಪ ಅವರ ಮನೆಯಿಂದ ಎದ್ದು ಬರುವ ವರೆಗೆ ಸ್ವಲ್ಪ ಅವರ ಬಾಗಿಲ ಕಡೆಗೇ ಸರಿದು ಕಿವಿಗೊಟ್ಟು ಬಂಕದಲ್ಲಿ ಕುಳಿತಿದ್ದಳು. ಆದುದರಿಂದ ಅವರೂ ರಾಮಪ್ಪನ ಗೂಡ ಹೆಚ್ಚಿಗೆ ಮಾತು ಬೆಳಿಸದೆ ಸಾಮೋಪಚಾರದ ನಾಲ್ಕು ಮಾತುಗಳನ್ನೇ ಆಡಿ ಮುಗಿಸಿದರು. ರಾಮಪ್ಪ ಬಂದವನೇ ಗಡಬಿಡಿಯಿಂದ ಊಟಕ್ಕೆ ಕುಳಿತ. ಊಟಕ್ಕೆ ಕುಳಿತಾಗ ಆ ಮಾತು ಈ ಮಾತು ಆಡುತ್ತ ಸೋದರ ಸೊಸೆಯ ಹತ್ತರ ಏಕಸರದ ಪ್ರಸ್ತಾಪವನ್ನೂ ಎತ್ತಿದ. "ಹೋಂದ ವರ್ಷ ಆಯ್ತು ಇಲ್ಲೆ ಏತಿ, ನಡುವ ನೀವೂ ಯಾರ ಬರಲಿಲ್ಲಾ, ಅವ್ವನೂ ಬಂದಿಲ್ಲಾ, ಹಾಂಗs ಉಳೀತು" ಎಂದು ಕಾರಣ ಹೇಳಿದಳು ತಾರಾ.

ಅದಕ್ಕೆ ರಾಮಪ್ಪ "ಉಳಿದರ ಯಾನಾಯ್ತು ? ಅಲ್ಲಿರ ಇನ್ಯಾರ ಹಾಕೊಳಾವರ ಇದಾರು ? ನಾಳಿ ಕಾರಣ ಬಂದೀತಿ ಅಂತs" ಎಂದು ಮೆರುಗಿನ ಮಾತುಗಳನ್ನಾಡಿ, ಊಟವಾದೊಡನೆ ಏಕಸರ ಬೇಡಿ ತಕ್ಕೊಂಡು ಕೋಟ ಕಿಸೆಯಲ್ಲಿ ಹಾಕಿಟ್ಟ. ಆಮೇಲೆ ಸ್ವಲ್ಪ ಹೊತ್ತು ಕುಳಿತು, ತಾಂಬೂಲ ಸೇವಿಸಿ ಹೊರಡಲು ಸಿದ್ಧನಾದ. ತಾರಕ್ಕ ಮಾವನನ್ನು ಕಳಿಸಲು ಯಾತದ ಕಟ್ಟೆಯ ವರೆಗೂ ಬಂದಳು. ರಾಮಪ್ಪ ಹಿಂದೆ ಹೊರಳಿ, ಅಮ್ಮಪ್ಪನಿಗೆ "ನಾ ಹೋಗಿ ಬರತ್ಯಾನ. ಇನ್ನ ಕಾರಣಕ ನಿಲ್ಲಬ್ಯಾಡಿರಿ. ಗಾಡಿಗೋಳ ಹೀಂಗs ತೋಟದ ಮ್ಯಾಲಿಂದನs ಬರತಾವು, ಬರ್ರಿ !" ಎಂದು ಹೇಳಿದ.

"ಗಾಡಿ ಹೀಂಗs ಬರತಾವ ಹೋಂದ ? ಹಾಗಂದರ ಜರಾ ಲಗೂನ ಬರ್ರಿ ! ಇಲ್ಲೆ ಊಟಾ ತೀರಿಸಿ ಬಿಸಲಗಳದ ಮುಂದ ಗಾಡಿ ಕೊಳ್ಳ ಕಟ್ಟಾಕಿರಿ ಅಂತ. ಲೈನದಕಿಂತ ಈ ಹಾದಿನೂ ಸನೇ ಆಗತೇತಿ."

"ಹೋಂದ ಆದಕs ಇತ್ತಿಂದ ಬರತೇವ. ನಾ ಹೊರಟ ನೀ ಹೊರಟ ಅಂತ ನಾಲ್ಕೆಂಟ ಮನೀ ಮಂದಿ ಹೊರಡಕ ಅಂದರ ವೇಳೇನs ಆಗೋದ. ನೀವ ತಯಾರದಾಗs ಇರ್ರಿ! ಅಪ್ಪಾಸಾಬಗೂ ಹೇಳರೀ" ಸ್ವಲ್ಪ ತಡೆದು, ಏನೋ ವಿಚಾರಿಸಿ "ಇತ್ತೂ ಒಂದು ಗಾಡೀನ ಕಳಸಾಂವ ಇದ್ದಿನ ಇಂದ. ಆದರ ಸುಗ್ಗಿ ದಿನಾ, ಅತ್ತ ಚಂದೂರಿಗಿ ಒಂದ ಗಾಡಿ ಬೇಕು. ನಾ ಒಬ್ಬೊಬ್ಬಂಟಿಗ್ಯಾ ಎಲ್ಲಾ ಕಡೆನೂ ನಾನ ನೋಡಬೇಕು."

ಅಮ್ಮವ್ವ ಅವನ ಮಾತನ್ನು ತಡೆದು "ಯಾತಕ ತಗೋ, ಇತ್ತ ಹೋಗ ತಾನs ಗಾಡಿ ತಕ್ಕೊಂಡ ಬರತೀರಿ ಆಯ್ತಲ್ಲಾ ! " ಎಂದಳು.

"ಎಲ್ಲಾ ತಾರಕ್ಕಗ ಹೇಳಿದ್ಯಾನೂ ಶುಕ್ರಾರ ಮಧ್ಯಾಹ್ನಕ್ಕಂದರ ತಯಾರ ದಾಗ ಇರ್ರಿ! ಅಪ್ಪಾಸಾಬಗ ಹೇಳರಿ, ನಾ ಹೇಳಿದ್ಯಾನಂತ" ಎಂದು ಹೇಳಿ ಹೊರಟುಹೋದ ರಾಮು.

ಸಂಜೆಗೆ ಗಂಡ ಹೊಲದಿಂದ ಬರಲು, ತಾರಕ್ಕ ಮಾವ ಕರೆಯಲಿಕ್ಕೆ ಬಂದು ದನ್ನು ಹೇಳಿದಳು. ಅವನು "ನಾ ಬರೂತನಕಾ ಇಟಕೋಬಾರದು ? " ಎಂದು ಕೇಳಿದ.

"ನಿಲ್ಲಲಿಲ್ಲ ; ಮನ್ಯಾಗ ಅಡಚಣಿ ಏತಿ ಅಂತಾ ಹೋದ."

ಅಪ್ಪಣ್ಣ ಲಹರಿಯ ಮನುಷ್ಯ. "ಸುಮ್ನ ಮನ್ಯಾಗ ಕಾರಣ ಏತೀ, ಸೋದರ ಸೊಸೀಗಿ ಹೇಳದ ಹ್ಯಾಂಗ ಇರೋದ ಅಂತ ನೆವಕ ಬಂದ ಹೋಗಿದಾ ಆಯ್ತು, ಹೀಂಗ. ಈಗ ಯಾರ ಹೋಗಕಾ ಕೂತಿದಾರ ತಗೊ ? " ಎಂದ. ಸ್ವಲ್ಪ ಕೊಂಕಾಗಿಯೇ ನುಡಿದ. ಧ್ವನಿಯೂ ಸ್ವಲ್ಪ ಬಿರುಸಾಗಿದ್ದಿತು.

ಮಾತು ಸ್ವಲ್ಪ ಏರಾಗಲು ಹೊರಗೆ ಇದ್ದ ಅಮ್ಮವ್ವನಿಗೆ ಕೇಳಿಸಿ ತೇನೋ ? "ಇಲ್ಲೋ ಭಾಳ ಆಗ್ರವಬಟ್ಟ, ಬಾಯಿ ತೆರೆದ ಹೇಳಿದಾ" ಎಂದಳು. ತಾರಕ್ಕನೂ "ಹಚಕುಡೋದ ಮನಸಿನ್ಯಾಗ ಇಲ್ಲಾಗಾನಾ, ಹೀಂಗ ಯಾನರ ಒಂದ ನೆವಕ ಹೇಳತೀರಿ ಏಳು ! " ಎಂದು ಕಿರುಮುನಿಸಿನಿಂದ ನುಡಿದಳು. ಅವಳ ಇಂಥ ಮುನಿಸೊಂದು ಗಂಡನ ಮೇಲೆ ಪ್ರಯೋಗಿಸುವ ವಿಶ್ವಾಸಿಕ ಅಸ್ತ್ರ. ಯಾವ ಸಮಯದಲ್ಲಿಯೂ ಈ ಅಸ್ತ್ರಕ್ಕೆ ಆತ ಮಿದುವಾಗಲೇಬೇಕು. ಈಗಲೂ ಹಾಗೇ ಆಯಿತು. ಅಪ್ಪಣ್ಣ ನುಡಿದ. "ಇಲ್ಲ; ನಾ ಯಾನ ಹೋಗಕ ಬ್ಯಾಡ

ಅನ್ನೂದುಲ್ಲ ; ಹೋಗಲ್ಲ. ನಾಳೆ ಸಿದ್ಯಾನ ತೇರದಾಳಕ ಹಚಕೊಟ್ಟೆ ಕುಬಸಾ ದೋತರಾ ರುಮಾಲಾ ತರಸತ್ಯಾನು, ತಗೊಂಡು ಹೋಗ ಮಾಡಿ ಬಾ. ಕಾರಣಕೂ ಬಂದ ಆ ಹುಡುಗ ಹಾಂಗs ಹೋಗಿದಾ, ಆಗೂ ಮಾಡಬೇಕಂದರ ನಿಲ್ಲಲಿಲ್ಲ!"

ತಾರಕ್ಕನ ಒಂದೇ ಏಟಿಗೆ ಎರಡು ಕಾಯಿಗಳು ಬಿದ್ದಂತಾಯಿತು. ಮರು ದಿನವೇ ಸಿದ್ದನ ಕಡೆಯಿಂದ ಉಡುಗೊರೆಯ ಅರಿವೆಗಳನೆಲ್ಲ ತರಿಸಿಯೂ ಆಯಿತು.

ಇಂದು ತಾರಕ್ಕ ಮಧ್ಯಾಹ್ನದಿಂದಲೂ ಐನಾಪುರದಿಂದ ಬರುವ ಗಾಡಿಗಳ ಹಾದಿಯನ್ನು ನೋಡುತ್ತಲಿದ್ದಾಳೆ. ಹೊರಗೆ ಒಮ್ಮೆ ಬಾವಿಗೆ ನೆರೆ ಹೊಲ ದೊಳಗಿನ ಗಾಡಿ ನೀರಿಗೆ ಬರಲು, ಆಪ್ತರ ಗಾಡಿಗಳೇ ಬಂದವೆಂದು ಓಡಿ ಹೊರಗೆ ಬಂದೂ ನೋಡಿದಳು ತಾರಕ್ಕ. ಹೊತ್ತು ಹೊರಳಿತು. ಗಾಡಿಗಳು ಬರಲಿಲ್ಲ. ಇನ್ನೂ ಬರಬಹುದೇ ಎಂದು ವಿಚಾರಿಸಿದಳು. ಇಲ್ಲಿಂದ ತೇರದಾಳ ಎರಡು ಮೂರು ತಾಸಿನ ಹಾದಿ, ಇನ್ನೂ ಬಂದರೂ ಬರಬಹುದೆಂದುಕೊಂಡಳು. ಹೊತ್ತು ಇಳಿದಂತೆ ಅವಳ ಆಶೆಯೂ ಇಳಿಯುತ್ತ ಹೋಯಿತು. ಅವಳು ಕೊನೆಗೊಂದು ನಿಟ್ಟುಸಿರುಬಿಟ್ಟು ಹಾದೀ ನೋಡಿ ಬೇಸತ್ತು ಕುಳಿತಳು. ಅಮ್ಮಣ್ಣನೂ ದಾರೀ ನೋಡಿ ನೋಡಿ ಬೇಸತ್ತು ಒಂದೆರಡು ಸಲ ತಾರಕ್ಕನಿಗೆ "ಇನ್ನs ಯಾಕ ಗಾಡಿಗೋಳ ಬರಲಿಲ್ಲ ಬೇ ? ಇನ್ನ ಬಂದರೂ ಅವರ್‍ಯಾನ ಗಾಡಿ ಕೊಳ್ಳ ಬಿಡಾವರ ಇಲ್ಲ. ಗಡಬಡೀಲೆ ಚಹಾ ಅಷ್ಟ ಮಾಡಿ ಕೊಡುನೂ ಅಂತ. ಒಲಿಮ್ಯಾಲ ಬಿಸಿನೀರ ಇಟ್ಟ ಇರು! ಆ ಮಂದಿ ಎಲ್ಲಾ ಬಾ ಅಂದರ ನಮ್ಮ ಮನೀತನಕಾ ಯಾತಕ ಬಂದಾರು ? ಯಾನೋ ಸಹಜ ಬರತಾರು ಚಹಾರ ಕುಡದ ಹೋಗಲಿ, ನಿಮ್ಮ ಸೋದರಮಾವಾ ಎಲ್ಲಾ ಬೇಕಾದಾಗ ಬಂದಾರ ಹೋದಾರ" ಎಂದೂ ಸೂಚಿಸಿದಳು. ಆಗ ತಾರಕ್ಕನಿಗೆ ಮತ್ತೆ ಆಶೆಯ ಕುಡಿಯೊಡೆಯುವುದು. ಹೊರಗೆ ಹೋಗಿ ಹುಬ್ಬಿಗೆ ಕೈ ಹಚ್ಚಿ ದೂರದ ವರೆಗೆ ನಿರೀಕ್ಷಿಸುವಳು ; ದೂರದಲ್ಲಿ ಧೂಳು ಏಳುವದೇನೊ ನೋಡುವಳು. ಆದರೂ ಅವಳ ಆಸೆ ಸಫಲವಾಗುವ ಚಿಹ್ನೆ ಕಾಣದು. ಸಂಜೆಯಾಗುತ್ತ ಬಂತು. ಕೇವಲ ಒಂದು ತಾಸು ಹೊತ್ತು ಉಳಿಯಿತು. ಆಗ ತಾರಕ್ಕ ಅತ್ತೆಗೆ "ಇನ್ಯಾನ

ಗಾಡಿಗೋಳ ಬರೂದುಲ್ಲ ತಾಯಿ ?" ಎಂದು ಒಳಗೆ ಹೊರಟಳು ಜಡವಾದ ಮನಸ್ಸಿನಿಂದ.

"ಇನ್ಯಾನ ಬರತಾವು ? ಸಂಜೆ ಆಯ್ತು ! ಇಷ್ಟೊತ್ತಿಗೆ ಗಾಡಿ ತೇರದಾಳ ಸನೇಕ ಹೋಗಕಬೇಕು ; ರಾಮು ಇಷ್ಟ ಹೇಳಿ ಹೋಗಿದಾ, ಮತ್ತ ಗಾಡಿ ಲೈನಲೆ ಹೋಗಿದ್ದಾವು ?" ಎಂದು ಕೇಳಿದಳು ಅಮ್ಮವ್ವ.

"ಹಾಂಗ ಗಾಡಿ ಹೋಗೀರ ನಮಗ ಹೇಳೀರ ಹಚಕೊಟ್ಟಿರೋರಲ್ಲ !" ಎಂದಳು ತಾರಕ್ಕ.

"ಹೋಂದ; ಹಾಂಗs ಹೆಂಗ ಹೋದಾರು ?" ಸ್ವಲ್ಪ ತಡೆದು ಅಮ್ಮವ್ವ ಅಂದಳು. "ಯಾನ ಉಡೀ ತುಂಬೋದ ನಿಂತಿತ ಯಾನೋ !"

ಅತ್ತೆಯ ಮಾತಿಗೆ ತಾರಕ್ಕ ಮನಸ್ಸು ಒಂದು ಕ್ಷಣ ಮಿಂಚಿತು. ತುಟಿಯಿಂದ "ಹಾಂಗ ಆದೋತು !" ಎಂಬ ಮಾತು ಹೊರಟಿತು.

## ೧೯

ಬಂಡಿಗಳು ತೇರದಾಳ ಕೆರೆಯ ಮೇಲೆ ಹೋಗಿ ನಿಂತಾಗ ರಾತ್ರಿ ಎಂಟು ಗಂಟೆಯಾಗಿದ್ದಿತು. ಮುಂಜಾವಿನಿಂದ ಗಾಡಿಯಲ್ಲಿ ಕುಳಿತು ಬೇಸತ್ತ ಜನ ಒಮ್ಮೆ ಕೆಳಗಿಳಿದರು. ಸುತ್ತಲೂ ಹಿಟ್ಟು ಚೆಲ್ಲಿದಂತೆ ಬೆಳದಿಂಗಳು, ಮನವನ್ನು ತಣಿಸಿತು. ಕೆಲ ಹೆಂಗಸರು ಕೆರೆಯಲ್ಲಿ ಇಳಿದು ಕೈಕಾಲು ತೊಳೆದುಕೊಂಡೂ ಬಂದರು. ಸುಂದರಾಬಾಯಿ ಗಾಡಿಯಿಂದ ಕೆಳಗಿಳಿದವಳೇ ಪಂಡಿತನನ್ನು ಮನೆಯಲ್ಲಿ ಮುಂದೆ ಹೇಳಿ ಬರಲು ಓಡಿಸಿದಳು. ಆಮೇಲೆ ಅತ್ತಿಗೆ ರತ್ನವ್ವನ ಕಡೆಗೆ ಬಂದು, 'ಗಂಡಸರ ಇದ್ದರ ಎಲ್ಲಾ ನೋಡಕೋತಾರು, ನಮ್ಮ ಮ್ಯಾಲ ಯಾನ ಜವಾಬುದಾರಿ ಇರೂದುಲ್ಲ. ಮನ್ಯಾಗ ನಿಂದರತ್ಯಾನ ಅಂದರ ಕೇಳಲಿಲ್ಲ. ತಾವs ನಿಂತರು. 'ನಿನ್ನ ತವರಮನೀ ನೀನs ಹೋಗಿ ತೀರಸಕೊಂಡ ಬಾ' ಅಂತ ನನ್ನ ಕೊಳ್ಳಾಗ ಹಾಕಿ ಒತ್ತಾಟಗಿ ಆದರು" ಎಂದಳು. ಈ ಸಂಗತಿ ರತ್ನವ್ವನಿಗೂ ಗೊತ್ತಿದ್ದುದೇ ಎಂಬುದು ಸುಂದರವ್ವನಿಗೆ ಗೊತ್ತಿದ್ದರೂ ತಾನು ಹೊತ್ತ

ಹೊಣೆಗಾರಿಕೆಯನ್ನು ನೀಗಿಸುವಾಗ ಜಡಹರಿಯುವಲ್ಲಿ ಅತ್ತಿಗೆಯ ಮೇಲೂ ಸುತ್ತಲಿದ್ದವರ ಮೇಲೂ ಸ್ವಲ್ಪ ಹೊಣೆಹಾಕುವ ನೆವದಿಂದ ಹೀಗೆ ಮಾತಾಡು ತ್ತಿದ್ದಳು.

ರತ್ನವ್ವ ಅದೇಕೋ ಬಿಗುವಿನಿಂದ "ಯಾರ ಬಂದರ ಯಾನ ಮಾಡಾವರ ತಗೊ! ಆಗೂ ಹಂಗs ಆಗತೇತೀ. ಹೋಗು ಹಂಗs ಹೋಗತೇತೀ" ಎಂದಳು.

ಅತ್ತಿಗೆಯ ಈ ಬಿಗುವಿನ ಮಾತು ಸುಂದರವ್ವನಿಗೆ ಹಿರಿತನದ ಹೊಣೆ ಗಾರಿಕೆಯನ್ನು ಮತ್ತಿಷ್ಟು ಅಳುಕಿನದಾಗಿ ತೋರಿಸಿತು. ನಿರಾಶೆಯಲ್ಲಿ ಮುಂದೆ ಮಾತಾಡದಿರುವಷ್ಟರಲ್ಲಿ ಊರಲ್ಲಿಂದ ಆಪ್ತರು ಕರೆದೊಯ್ಯಲು ಬಂದರು. ಕರೆಯಲು ಬಂದ ಆಪ್ತರಲ್ಲೊಬ್ಬ "ನೋಡವ್ವಾ, ಸುಂದರವ್ವ! ಬಾರಸತ ಕರೀಕ ಬರೂನು ಯಾನ ನಿನ್ನ ಮಗನಾ? ಈಗs ಹೇಳ ಮತ್ತ! ಹಿಂದಿಂದ ಹೆಸರ ಇಟ್ಟೀ ನೋಡ" ಎಂದ ಸಲಿಗೆಯಿಂದ. ಅವಳು ಹುಟ್ಟಿ ಬೆಳೆದ ಊರಲ್ಲವೇ ಅದು ?

"ಬಾರಸತ ಕರದ ಒಯ್ಯಲಾಕ, ಈಗೆಲ್ಲಿ ಊರ ಗೌಡನ ಅಳ್ಯಾ ಬಂದಿದಾ ನಡೀ" ಎಂದು ಅಷ್ಟೇ ಸಲಿಗೆಯಿಂದ ಸುಂದರವ್ವ ಉತ್ತರ ಕೊಟ್ಟಳು.

"ಗೌಡರ ಅಳ್ಯಾ ಗೌಡರಿಗಿ ದೊಡ್ಡಾಂವ. ಆದರ ನಮ್ಮ ಅಳ್ಯಾ ನಮಗ ದೊಡ್ಡಾಂವs ಅಲ್ಲ!" ಎಂದು ಆತ ನಗೆಯಲ್ಲಿ ಮಾತು ತೇಲಿಸಿದ.

ಎಲ್ಲರೂ ಕೂಡಿ ಊರಲ್ಲಿ ನಡೆದರು. ಕೆಲ ಹುಡುಗರು ಗಾಡಿಯಲ್ಲಿ ಕುಳಿತಿದ್ದರು. ಉಳಿದ ಜನರು ಗಾಡಿಗಳ ಬೆನ್ನುಹತ್ತಿದರು. ಹೆಂಗಸರದೊಂದು ಗುಂಪು; ಗಂಡಸರದೊಂದು ಗುಂಪು. ಬಂಡಿಗಳ ಮುಂದೆ ಆಗಾಗ ಐನಾಪುರ ದಿಂದ ಸಂಗಡ ಬಂದ ಕೊಂಬಿನವನೊಬ್ಬ ಮಾತ್ರ ಕಹಳೆ ಊದುತ್ತಿದ್ದ. ಮುಂದಿನ ಬಂಡಿ ಹೊಡೆಯುವವ "ನಿನಗ ಪಟಕ ಕೊಡೋದ ಪುಕ್ಕಟ ಯಾನ? ಊದಲ್ಲ ಬೀಗರ ಬಂದರ ಬೀಗರ ಬಂದರ ಅಂತ ಹೇಳ ಅದರಾಗ. ಹೋಗಾನಾ ನಿನಗ ಬೀಡಿ ಕಟ್ಟ ಇಸಕುಡತ್ಯಾನು" ಎಂದು ಹುರಿದುಂಬಿಸಿ ಲಂಚದ ಆಶೆ ಯನ್ನು ತೋರಿಸಿ ಆಗಾಗ ಕೊಂಬು ಹೊಡೆಯಲು ಹೇಳುತ್ತಿದ್ದ. ಬಂಡಿಗಳು ಬೆಳದಿಂಗಳಲ್ಲಿ ಮನೆಯತ್ತ ಸಾಗಿದ್ದವು.

ರಾಜಮಾರ್ಗದಿಂದ ಹೆಂಗಸರ ಗುಂಪಿನಲ್ಲಿ ಸಾಗುತ್ತ ಸುಂದರಾಬಾಯಿ ರತ್ನವ್ವನ ಕಡೆಗೆ ಹೊರಳಿ "ಇಂದ ಅನಂತನ ಮಾರೇ ಯಾಕ ಸಪ್ಪಗೆ ಆಗೀತೇ ?" ಎಂದಳು.

"ತಾಯಿಮಕ್ಕಳಿಗಿ ನಿಮಗs ಗೊತ್ತವ್ವ !" ಎಂದು ಮುಖದಿರುವಿದಳು, ರತ್ನಾ. ಅಷ್ಟರಲ್ಲಿ ಹಿಂದಿನಿಂದ ಬರುವ ಪಂಡಿತ ನಗೆಯು ಸ್ವರದಲ್ಲಿ "ನಾಳಿಗಿ ಅಂದರ ಅವನ ಮಾರಿ ಎಲ್ಲಾ ಟವಟವೀತ ಆಗತೇತಿ ತಗೋರಿ" ಎಂದ.

ಎಲ್ಲ ಹೆಂಗಸರೂ ನಕ್ಕರು. ಅವರಿಗೂ ಈ ಮಾತು ಸತ್ಯವೆನಿಸಿರಬೇಕು. ಮುಂದೆ ಸುಂದರಾಬಾಯಿ ಹೇಳಿದಳು "ನೋಡಪ್ಪಾ ಅಳ್ಯಾಗ ಸಿಟ್ಟಮಾಡಿ ಗೊತ್ತಿಲ್ಲಾ ; ಬಂಗಾರ ಹಾಕೂದರಾಗ ಹಾಂಗs ಎದ್ದಾ, ನೀನs ಎಲ್ಲಾ ಮುಂದಾಗಿ ಹೇಳಿ ಮಾಡು. ಅವನ ಅತ್ತೀ ಮಾವಗಾ."

"ಹೇಳೋದ ಯಾನ ಉಳದೇತಿ ? ಐನಾಪುರದವರ ಬೆರಕ್ಯಾವರ, ರಾಮು ಬಂದ ಮೊದಲ; ಠರಾವ ಮಾಡಕೊಂಡ ಹೋಗಿದಾನಲ್ಲ ! ಯಾನ ಹಾಕೋದ ಯಾನ ಬಿಡೋದ ಎಲ್ಲಾ" ಎಂದ ಪಂಡಿತ.

ಆಗಮಾತ್ರ ರತ್ನವ್ವ ಗಂಟಲು ಸಡಿಲಬಿಟ್ಟು "ಯಾತಕ ಸಿಟ್ಟಮಾಡುತಾ ತಗೋ. ಸಿಟ್ಟಮಾಡಿ ಇಲ್ಲದ ಮನಸ ನೂಸಕೋಳೋದ. ಅತ್ತೀ ಮಾವ ಯಾನ ಸಂತೋಸಲೆ ಹಾಕತಾರ ಅಷ್ಟ, ಹಾಕಿಸಿಕೊಂಡ ನಗತ ನಗತ ಇರೋದ ನೆಟ್ಟಗ. ಇಬ್ಬರಿಗೂ ಸುಖಾ" ಹೇಳಿದಳು, ತನ್ನ ಅನುಭವದ ನುಡಿ.

"ಅದೆಲ್ಲಾ ಖರೆ; ಯಾನ ಸಿಗೋದ ಅಲ್ಲಾ, ಅಳ್ಯಾಗ ?" ಎಂದು ಕೇಳಿದಳು ಸುಂದರಾ.

"ಯಾನ ಅವರ ಕೊಟ್ಟರ ನಿಮ್ಮ ಜನ್ಮ ದಂಡಿಗಿ ಹತ್ತಿತ್ಯಾನ ತಗೋ ! ಮನಸ್ಯಾ ಕೊಟ್ಟದ ಯಾನ ಸಾಕಾಗುದುಲ್ಲ, ಕೊಡಾಂವ ಕೊಟ್ಟ ಅಂದರ ನೆಟ್ಟಗ. ನಮ್ಮ ತಾರಕ್ಕಂದ ಹ್ಯಾಂಗಾಯ್ತು ನೋಡಲಿಲ್ಲ ?" ಎಂದಳು ರತ್ನಾ.

ಉಡಿಯು ತುಂಬುವ ಮುಹೂರ್ತ ಸಮೀಪಿಸಿತು. ಅನಂತ ಪಂಡಿತ ನನ್ನ ಕರೆದು "ನಾ ಬಹಳ ಹೊತ್ತ ಕೂಡೋದ ಬ್ಯಾಡ, ನಿನ್ನ ಕೆಲಸಾ ಎಲ್ಲಾ ತೀರಿಸಿಕೊಂಡ ಆಮ್ಯಾಲ ನನ್ನಾ ಒಯ್ದು ಕೂಡಸು" ಎಂದು ಹೇಳಿದ.

" ಧೋತರ ರುಮಾಲಾ ಮಾಡುಕೊಳ್ಳುತನಕಾರೇ ಬಂದ ಕೂಡತೀ ಇಲ್ಲಾ ? " ಎಂದು ಪಂಡಿತ ಕೇಳಿದ.

ಈ ಮಾತು ಸುಂದರವ್ವನ ಕಿವಿಗೆ ಬಿತ್ತು. " ಹೋಗಾಕೋ ಮಹಾರಾಯಾ, ಎಂಥಾ ಚಂದ ಮಕರಾ ಕಟ್ಟೇದಾರು. ಕೂಡೋಗಲ್ಲ ಒಂದ ತಾಸ. ಹುಟ್ಟಿ ಬಂದಮ್ಯಾಲ ಒಮ್ಮೆ ಕೂಡೋದ ಇರತೇತಿ. ಯ್ಯಾನ ಮ್ಯಾಲಿಂದ ಮ್ಯಾಲ ಕೂಡೋದ ಇರತೇತಿ ? " ಎಂದು ಮಗನಿಗೆ ಬೋಧಿಸಹೋದಳು.

ರತ್ನವ್ವ ನಡುವೆಯೇ ತಡೆದು " ಈಗ ಪಟಕೇರೆ ಸುತ್ತ್ರಕ ಒಪ್ಪಿದಾ, ಬಾ. ಮೊನ್ನಿ ಅದೂ ಸುತ್ತುಲ್ಲ ಅನತಿದ್ದ. ಈಗಿನ ಹುಡುಗರ ಯಾನಾ ? ಆದರಾಗ ಕಲತದ ಹುಡುಗುರುಗಿ ಇಂಥಾದ ಯಾನ ಮನಸಿಗಿ ಬರೂದುಲ್ಲ. ಏಳ ಅವನ ಮನಸಿಗಿ ತಿಳದಂಗ ಮಾಡಲಿ !" ಎಂದು ಅನಂತನ ಮಾತಿಗೆ ಬೆಲೆಕೊಟ್ಟಳು.

ಇಂದಿರೆಯುನ್ನು ಮೊದಲೇ ಸಿಂಗರಿಸಿ ಕೂಡಿಸಿದ್ದರು. ಅನಂತ ಹೋಗಿ ಮಂಚದ ಮೇಲೆ ಕುಳಿತೊಡನೆಯೇ ಅವನ ಹೇಳಿಕೆಯ ಪ್ರಕಾರ ಉಡುಗೊರೆ ಮಾಡಿತೀರಿಸಿದ, ಪಂಡಿತ. ಕೂಡಲೆ ಅನಂತ ಏಳುವುದರಲ್ಲಿದ್ದ. ಅಷ್ಟರಲ್ಲಿ ಐದು ಜನ ಪುರುಷರೂ ಇನ್ನೂ ಸೇಸೆ ಇಡಬೇಕೆಂದು ಪಂಡಿತ ಹೇಳಿದ. ಮನಸ್ಸಿಲ್ಲದಿದ್ದರೂ ಅನಂತ ಕುಳ್ಳಿರಬೇಕಾಯಿತು. ಎಲ್ಲರೂ ಸೇಸೆ ಇಡುವದಾಯಿತು. ಅನಂತ ಎದ್ದ, ಹೋಗಲೆಂದು. ಹೆಣ್ಣುಮಕ್ಕಳು ಹೆಂಡತಿಯ ಹೆಸರು ಹೇಳಲು ಆಗ್ರಹ ಮಾಡತೊಡಗಿದರು. ಅನಂತ ಸಿಡುಕಿನಿಂದ, " ಅದ್ಯಾನ ಮಾಡತೀರಿ ಬಿಡರಿ ! " ಎಂದು ಹೊರಗೆ ಬರುವವನಿದ್ದ. ಅಷ್ಟರಲ್ಲಿ ಬಾಗಿಲದಲ್ಲಿ ನಿಂತವರೊಬ್ಬರು ಹೇಳಿದರು. " ಇನ್ನೊಂದ ಜರಾ ತಡಿ. ಇದೊಂದ ಆಯಾರ ಮಾಡಕೊಂಡs ಹೊರಗ ಬಾ. "

" ಮತ್ಯಾರ ಆಯಾರ ? " ಎಂದು ಅನಂತ ಮನದಲ್ಲಿಯೇ ಅಂದುಕೊಂಡು ಬಾಗಿಲ ಕಡೆಗೆ ಹೊರಳಿ ನೋಡಿದ. ಆರಿವೆಯ ಗಂಟೊಂದು ಒಬ್ಬರ ಕೈಗೆ ಬರುತ್ತ ಒಳಗೆ ಬಂದು ತಲುಪಿತು. ಸುಂದರಾ ಮನದಲ್ಲಿ " ಮಗಗ ಮಾವಂದ ಒಂದs ಆಯಾರ ಆಗಿತ್ತು. ಮತ್ತೊಂದ ಆಯಾರ ಇಲ್ಲಾಗಿತ್ತ, ಮಂದಿ ಅಂದಿರೋರ ಬಳಗ ಇಲ್ಲ್ಯಾನಂತ, ಇವರಿಗಿ, ಇದ ಛಲೂ ಆಯ್ತು ತಾಯಿ ? " ಎಂದುಕೊಂಡು, ಅನಂತನ ಕಡೆಗೆ ನೋಡಿ " ಸುತ್ತ್ರಕೋ ಅಪ್ಪ, ಪಟಕೆ ಛಂದ ಹಾಂಗ " ಎಂದು ಹೇಳಿದಳು.

"ಯಾತಕ" ಕೈಹಚ್ಚಿ ಬಿಡವಲ್ಲ ಯಾಕ?" ಎಂದು ಅನಂತನ ಅತ್ತೆ—ರುಕ್ಕು ಅವಳ ಹೆಸರು—ಹೇಳಿದಳು.

"ಛಂದ ಹಂಗ ಹಾರೋಗೇರಿಂದ ಇಲ್ಲಿ ತನಕಾ ಹಚ್ಚಕೊಟ್ಟದಾರ, ಉಡೀ ತುಂಬು ವೇಳೇಕ ಮತ್ತ ಸುತಕೋಲಿ ಅಲ್ಲ" ಎಂದಳು ರತ್ನಾ ಸ್ವಲ್ಪ ಹೆಮ್ಮೆಯಿಂದ.

ಹಾರೋಗೇರಿ ಎಂಬ ಶಬ್ದ ಅನಂತನ ಕಿವಿಗೆ ಬೀಳುತ್ತಲೇ ಹೊರಳಿ "ತಾರಾ ಬರಲಿಲ್ಲಾ?" ಎಂದು ಕೇಳಿದ ಉದ್ವೇಗದಿಂದ.

ಬಾಗಿಲಲ್ಲಿ ನಿಂತ ಸಿದ್ದ ಹೇಳಿದ, ಹೇಳಿದ, "ಹ್ಯಾಂಗ ಬರತಾಳು? ಹೊತ್ತ ತಾಯಿ ಹೊಟ್ಯಾಗ ಹೋಗೂ ತನಕಾ ನಿಮ್ಮ ಗಾಡಿಗೋಳ ಹಾದಿ ನೋಡಿ ದಳು. ಆ ಮ್ಯಾಲಿ ನಿರ್ವಾಹ ಇಲ್ಲದಕ ನನ್ನಾ ಹಚಕೊಟ್ಟಳ, ನಾಳಿ ಶಬ್ದ ಬರಬಾರದಂತ."

"ಗಾಡಿ ಲೈನಲೇನs ಬಂದ್ರೂ, ಆ ಕಡೆ ಹಾದಿ ನೆಟ್ಟಗ ಇಲ್ಲಂತ. ಹೀಂಗ ಹೊಡದರು" ಎಂದಳು ಸುಂದರಾಬಾಯಿ.

"ರಾಮಣ್ಣ ತೋಟದ ಮ್ಯಾಲಿಂದs ಹೊಡೀರಿ ಅಂತ ಹೇಳಿದ್ದ ಖರೇ. ನೀವ ಎಲ್ಲಾ ಇತ್ತಿಂದ ಹೋಗುನು ಅಂದಿರಿ. ನಾ ಯಾತಕ ಅಂಯ್ದ ಹೇಳಕ ಹೋಗಲೆವ್ವ! ತನ್ನ ಮಗಳನಾ ಕರೀ ಸಲುವಾಗಿ ಅತ್ತ ಹೋಗುನು ಅಂತಾಳೂ ಅಂದೀರಿ ಅಂತ ನಾನೂ ಸುಮ್ಮ ಆದೀನು" ಎಂದು ರತ್ನವ್ವ ಸ್ವಲ್ಪ ಸಿಟ್ಟಿನಿಂದ ಅಂದಳು.

"ಅವ್ವ! ಅಕ್ಕಾ ನೀ ಹೇಳೋದವ್ವ! ನಾವ್ಯಾನ ಅಂತೇವು? ನಾಳಿ ಇನ್ನ ತಾರಕ್ಕ ಯಾನ ಅಂತಾಳ ಯಾನೋ ನಮಗ" ಎಂದು ಬೆರಗುದೋರಿ ದಳು, ಸುಂದರಾ. ಇಷ್ಟರಲ್ಲಿ ಅನಂತ ತಾನು ಮೊದಲು ಮಾಡಿಕೊಂಡ ಉಡು ಗೊರೆಗಳನ್ನೆಲ್ಲ ತೆಗೆದಿಟ್ಟು, ಆ ಉಡುಗೊರೆಗಳನ್ನು ಮಾಡಿಕೊಂಡ. ಅಲ್ಲೇ ಸಮೀಪದಲ್ಲಿ ಕುಳಿತ ಹೆಂಗಸೊಬ್ಬಳು "ಮಾವನ ಆಯಾರಕಿಂತ ಝುಕಾಸ ಐತಿ ಏಳ; ದ್ಯಾವರಿಗಿ ಹೋಗಿ ಬರೂ ತನಕಾ ಇದs ಇರಲಿ" ಎಂದಳು

ಅಲ್ಲೇ ನಿಂತ ಇಂದಿರೆಯ ತಾಯಿ "ನಾವರs ಯಾನ ಮಾಡೂಣು, ತಾಯಿ! ಅವರ ಹೇಳಿದಂಗs ಕೇಳಿದೇವ ನಾವೂ; ಛಲೂ ಒಂದ ಪಟಕ ತೊಗೊತೇವ ಅಂದರ ಅವರ ಅಪ್ಪ ಕೇಳಲಿಲ್ಲ. 'ಅರವೀ ತಗೊಂಡರ ಹೋಗಿ

ಪೆಟ್ಟಿಗ್ಯಾಗ ಬೀಳತಾವು; ಅವ್ಯಾನ ಸುತ್ತೂದುಲ್ಲಾ ಬಿಡೂದುಲ್ಲಾ ; ಅದಕ ಎತ್ತಿ ರೂಪಾಯ್ನ ಕೊಡರಿ ' ಅಂದ ಅದಕ ನಾವ ಸುಮ್ಮ ಆದೇವು. ಇದ ನೋಡಲಾ ಮಂದ್ಯಾಗ ಯಾರದ ಅಪರದಿಷ್ಟಿ ಆಯ್ತು ? ನಾವ ಖರ್ಚು ಮಾಡೋದ ಮಾಡಿ ? " ಎಂದು ತನ್ನ ಗಂಡನ ಕಡೆಗೆ ನೋಡಿ, ಒದರಿ ಹೇಳಿದಳು, ಜನರಿಗೆ ತಿಳಿಯಲೆಂದು.

" ಅಪರದಿಷ್ಟಿ ಆಗಲಾಕ ಯಾನ ತಗೋ ! ಯಾನ ಕೊಟ್ಟರೂ ಎಲ್ಲಾ ಅವರ ಮನೀಗೆ ಹೋಗೋದ ಏತಿ ಅಲ್ಲ ? " ಎಂದನಾತ.

"ಮುಚ್ಚಿದ ಕೊಟ್ಟದ, ಹ್ಯಾಂಗಾ ಜನರಾಗ ಕೊಟ್ಟದ ಹ್ಯಾಂಗಾ ?"

" ಇರಲೇಳ ತಾಯಿ ! ಯಾರ ಕೊಟ್ಟಿಲ್ಲ ಅಂತಾರು ? ಎರಡ ನೂರ ರೂಪಾಯ ಕೊಟ್ಟಿದೀರ್ಯಲ್ಲ ! " ಎಂದು ಸುಂದರವ್ವ ಎದ್ದು ನಿಂತು, ಜಾಹೀರ ಪಡಿಸಿ ಮಾತು ಮುಗಿಸಿದಳು.

ಅದೇ ದಿನ! ಪತಿಯಾದವನು ಸತಿಯ ಸನಿಯದ ಸಹವಾಸ ಸುಖವನ್ನು ಪಡೆಯುವ ದಿನ ! ಹೆಂಡತಿಯಾದವಳು ಗಂಡರ ಕೃಪಾಛತ್ರದಲ್ಲಿ ಹೊಸ ಬಾಳನ್ನು ಆರಂಭಿಸುವ ದಿನ ! ಅನಂತನದು ಎಂಥ ಹುಚ್ಚುತನ ! ಮದುವೆ ಯಾದ ಹೆಣ್ಣಿನಿಂದ ದೂರವಿರಲು ಎಷ್ಟುದಿನ ಸಾಧ್ಯವಾದೀತು ? ಜನರ ಗೊಂದಲವೆಲ್ಲ ಕಡಮೆಯಾಯಿತು. ಆಗ ರಾತ್ರಿಯೂ ಬಹಳವಾಗಿದ್ದಿತು : ಸುವಾಸಿನಿಯರು ಅನಂತ 'ಇಂದಿರೆಯರಿಬ್ಬರನ್ನೂ ಒಂದು ಕೋಣೆಯಲ್ಲಿ ಒಯ್ದು ಹಾಸಿಗೆಯ ಮೇಲೆ ಕೂಡಿಸಿ ಆರತಿಯೆತ್ತಿ ಆಶೀರ್ವದಿಸಿ ಅದೊಂದು ಬಗೆಯ ನಗುವಿನಿಂದ ಕೋಣೆಯ ಕದ ಇಕ್ಕಿಕೊಂಡು, ಇಬ್ಬರನ್ನೂ ಏಕಾಂತದಲ್ಲಿ ಬಿಟ್ಟು ಹೋದರು. ಒತ್ತಟ್ಟಿಗೆ ಸಮಯ ಉರಿಯುತ್ತಿದೆ. ಕೋಣೆಯೆಲ್ಲ ಸುಗಂಧ ಇಡುಗಿದೆ. ಎದುರಿಗೆ ತಾಂಬೂಲದ ತಾಟು. ಅದರ ಎರಡೂ ಮಗ್ಗಲ ಅನಂತ ಇಂದಿರೆಯರು ಕುಳಿತಿದ್ದರು.

ಅನಂತ ಇಂದಿರೆಯ ಕಡೆಗೊಮ್ಮೆ ಕಣ್ಣೆತ್ತಿ ನೋಡಿದ. ಅವನಿಗೆ ತನ್ನ ಆಯುಷ್ಯದಲ್ಲಿಯೇ ಅತ್ಯಂತ ಬೇಸರವೆನಿಸಿದ ಕ್ಷಣವದು. ಮುಗ್ಧಬಾಲೆ ಹತ್ತಿರ ಕುಳಿತಿದಾಳೆ. ಅವನಿಗೆ ಏನು ಮಾಡಬೇಕೆಂಬುದು ತೋಚದ ಮನಸ್ಥಿತಿ. ಒಲ್ಲದ ಹೆಂಡತಿ, ಒಪ್ಪದ ಹೆಂಡತಿ, ಕೋಣೆಯ ಬಾಗಿಲುಗಳನ್ನು ಎತ್ತಿಟ್ಟು ಒಮ್ಮೆ ಹೊರಗೆ ಹೋಗಲಾ ಎನ್ನಿಸಿತವನಿಗೆ. ಅವಳು ಕೂತಲ್ಲಿಯೇ ನೀರವ

ವಾಗಿ ಕುಳಿತಿದ್ದಳು. ಯಾಕೆ ? ಈ ಸಂದರ್ಭದಲ್ಲಿ ಪ್ರೀತಿಯಿಂದ ಗಂಡ ಮಾತಾಡಿಸಬೇಕೆಂದು, ಹೆಂಡತಿಯಾದವಳ ಆಶೆ. ಅನಂತನ ಮನಸ್ಸೂ ಮಾತಾಡಿಸಿ ನೋಡು, ಎಂದಿತೊಮ್ಮೆ. ಕೂಡಲೇ ಹಿಂಜರಿಯಿತು. ಕೊರಗಿತು. ಎದ್ದ ಅನಂತ. ಒಂದು ಬದಿಗೆ ಕಿಡಕಿಯ ಬಳಿಯಲ್ಲಿ ಹೋಗಿ ಹೊರಗೆ ನೋಡುತ್ತ ನಿಂತ. ಪಾಪ ! ಏನೆಂದುಕೊಂಡಳೊ ? ಹನ್ನೆರಡು ಹದಿಮೂರು ವಯಸ್ಸಿನ ಇಂದಿರೆಗೆ ಅನಂತನ ಮನಸ್ಥಿತಿಯನ್ನು ಅರಿಯುವ ಬುದ್ಧಿ ಎಲ್ಲಿಂದ ಬರಬೇಕು ? ಬೆಪ್ಪಾಗಿ ಕುಳಿತಳು, ಅನಂತನ ನಡತೆಯಿಂದ. ಕಿಡಕಿಯಿಂದ ಬಂದ ತಂಗಾಳಿ ಅನಂತನನ್ನು ಸಮಾಧಾನಗೊಳಿಸಲು ಯತ್ನಿಸಿತು. ಬೆಳದಿಂಗಳನ್ನು ನೋಡಿ ತಾನಿದ್ದ ಇರವನ್ನು ಮರೆತನೇನೋ ! ಆ ಮರವೆಂಥದು ? ಹಿಂದಿರುಗಿ ನೋಡಿದ. ಮರುಕ್ಷಣದಲ್ಲಿ ಇಂದಿರೆ ಎದ್ದು ನಿಂತಳು. ಹಾಸಿಗೆಯನ್ನು ಬಿಟ್ಟು ಒಂದೆರಡು ಹೆಜ್ಜೆ ಮುಂದೆ ಬಂದಿದ್ದಳು, ಅನಂತನ ಕಡೆಗೆ ! ಅವಳ ಬರುವಿಕೆ ನಿಲುವಿಕೆ ಅಸಹ್ಯವೆನಿಸಿತು, ಅನಂತನ ಕಣ್ಣಿಗೆ. ಅವಳ ಮುಖದ ಮೇಲೆ ಬೆವರೊಡೆದಿದ್ದಿತು. ಬಣ್ಣ : ಸಾಧಾರಣವಾಗಿ ಕಪ್ಪು. ಹಿಂದೆ ಒತ್ತಿದಂತಿದ್ದ ಮೂಗು. ದಪ್ಪ ತುಟಿಗಳು. ಸಣ್ಣಂದಿರುವಾಗ ಎಲ್ಲಿಯೋ ಬಿದ್ದು ಕಚ್ಚು ಬಿದ್ದಿದ್ದ ಹಣೆ, ನೋಡಿ ಮುಖದಿರುವಿದವ ಅನಂತ. ಒಂದು ನಿಟ್ಟುಸುರು ತನ್ನಿಂದ ತಾನೆ ಹೊರಬಿದ್ದು ಹೋಯಿತು. ಹಿಂದಿರುಗಿದಾಗ ಅದೇ ನಿಲುವು. ಅದೇ ಮೂರ್ತಿ, ಅದೇ ರೂಪು. ನೋಡಿ ಅದೇಕೋ "ತಲೆಶೂಲಿ !" ಎಂದ ಅನಂತ.

ಅದಾವಾಗಲೋ ಹಾಸಿಗೆಯ ಮೇಲೆ ಬಂದು ಉರುಳಿದ್ದ ಅನಂತ. ನೆರೆಯಲ್ಲಿ ನಡಗುವ ಕೈಯಲ್ಲಿ ವೀಳೆಯನ್ನು ಹಿಡಿದು, ತಡವರಿಸುತ್ತ ಕುಳಿತಿದ್ದಳಾಕೆ. ಅನಂತ ಕಿಡಕಿಯ ಹೊರಗೆ ದೃಷ್ಟಿಯನ್ನು ಬೀರಿದ. ಆಗ ಒಂದು ತುಣುಕು ಮೋಡ ಸರಿದು ಬಂದು ಚಂದ್ರನ ಮೋರೆಗೆ ಅಡ್ಡ ನಿಂತಿತು. ಚಂದ್ರ ನಿಸ್ತೇಜನಾದ. ಒಂದು ನೆನಹು ಅನಂತನ ಮನಃಪಟಲದಲ್ಲಿ ಮೂಡಿ ಮುಳುಗಿತು. ಆಗೊಂದು ಬೆಚ್ಚಗಿನ ಉಸಿರು ಮೂಗಿನ ಹೊಳ್ಳೆಗಳಿಂದ ತಡೆದು ತಡೆದು ಹೋಯಿತು. ಹಾಗೆಯೇ ಇಂದಿರೆಯ ಕಡೆಗೆ ನೋಡಿ " ತಲಿ ನೂಸತೇತಿ ಅನಲಿಲ್ಲಾ ? " ಎಂದ ಅನಂತ. ಆಗ ಅವಳು ನಡುಗುತ್ತ ಇದ್ದಳು. ಹೀಗೆ ಅದೆಷ್ಟು ಹೊತ್ತು ಹೋಯಿತೊ ! ಹೊರಗಿನ ನಗೆ, ಗೊಂದಲ, ಸದ್ದು, ಯಾವಾಗಲೋ

ಅಡಗಿವೆ. ಶಾಂತವಾದ ರಾತ್ರಿ, ಸುತ್ತಲೂ ನಿಶ್ಶಬ್ದ. ಇವರಿಬ್ಬರೂ ಉಸಿರಾಡಿಸುವ ಸಪ್ಪಳದ ಹೊರತು ಬೇರೆ ಸದ್ದಿಲ್ಲ. ದೂರದಲ್ಲಿ ಎಲ್ಲಿಯೋ ಒಂದು ಗೂಗೆ ಕೂಗಿತು. ಒಮ್ಮೆಲೇ ಇಬ್ಬರ ಹೃದಯಗಳೂ ಅದುರಿದವು. ಮೆಲ್ಲಗೆ ಅನಂತ ಹಾಸಿಗೆಯ ಒಂದಂಚಿಗೆ ಉರುಳಿದ. ಮರುಕ್ಷಣದಲ್ಲಿ ಅವಳ ಕಡೆಗೆ ಹೊರಳಿದ. ಮೈ ಮುರಿದುಕೊಂಡು, ಬಿಲ್ಲಿನಂತೆ ಬಾಗಿ ಅನಂತನ ತೀರ ಸಮೀಪದಲ್ಲಿ ಅವಳು ಮಲಗಿದ್ದಳು. ಕಣ್ಣಗಲಿಸಿ ಒಂದೇ ಸವನೆ ಅನಂತನ ಕಡೆಗೆ ಎವೆಯಿಕ್ಕದೆ ನೋಡುತ್ತಿದ್ದಾಳೆ. ಅವು ಶಾಂತಿ ತುಂಬಿದ ಕಣ್ಣುಗಳಾಗಿರವು. ಬೆರಗಾದ ಭಯಗೊಂಡ ನಯನ ಯುಗ್ಮಗಳವು! ಈಗ ಅನಂತನನ್ನು ಮಾತಾಡಿಸಲ್ಕ ಹವಣಿಸುತ್ತಿದ್ದಳೇನೋ ? ಕೆಂದುಟಿ ಅಲುಗಿದವು. ಅದುರಿದವು. ನಡುಗಿದವು. ಅನಂತ ಮುಖದಿರುವಿ ಶಾಲಿನಿಂದ ಮುಖ ಮುಚ್ಚಿಕೊಂಡ. ಮುಸುಕು ಹಾಕಿಕೊಂಡ. ಯಾವಾಗ ನಿದ್ರೆಬಂದಿತೋ ಇಲ್ಲೋ ದೇವರೇ ಬಲ್ಲ! ಬೆಳಗಿನಲ್ಲಿ ಅನಂತ ಎದ್ದು ನೋಡುತ್ತಾನೆ. ಅವಳು ಕೋಣೆಯಿಂದ ಅದಾವಾಗಲೋ ಎದ್ದು ಹೋಗಿದ್ದಾಳೆ! ಅತ್ತಿತ್ತ ನಿಟ್ಟಿಸಿದ. ಅವಳ ತಲೆದಿಂಬು ಹಸಿಯಾಗಿದ್ದಿತು. ಅನಂತನ ಮನಸ್ಸು ಒಳಗೊಳಗೇ ಮರುಗಿತು. ಅದೊಂದು ಕ್ಷಣ ಮಾತ್ರ. ಆಮೇಲೆ ತನ್ನ ಅತಿರೇಕದ ಹಾದಿಯನ್ನೇ ಹಿಡಿದು ಮುಂದೆ ಸಾಗಿತು.

ಅನಂತ ಕೋಣೆಯಿಂದ ಹೊರಗೆ ಬಂದೊಡನೆಯೇ ನೀರು ಎರೆಯಲಾಯಿತು. ಈ ಮೊದಲೇ ಅವನ ಹೆಂಡತಿ ಎರೆದುಕೊಂಡಿದ್ದಳು. ಸಮೀಪ ಸಮೀಪದಲ್ಲಿ ಮಣೆಹಾಕಿ ದಂಪತಿಗಳಿಬ್ಬರಿಗೂ ಶಾವಿಗೆ ಪಾಯಸ ಬಡಿಸಿದರು. ಹೇಗೋ ಉಂಡು ಅನಂತ ಹೊರಗೆ ಬಂದ. ಆ ದಿನ ಸಾಯಂಕಾಲದ ವರೆಗೆ ಊಟ ಉಡಿಗೆಗಳಲ್ಲಿ ಮನೆಯೇ ಆನಂದದಲ್ಲಿ ತೇಲುತ್ತಿದ್ದಿತು. ಅನಂತ ಮೇಲ್ಮಾಳಿಗೆಯ ಒಂದು ಮೂಲೆಯಲ್ಲಿ ಸುಮ್ಮನೆ ಬಿದ್ದುಬಿಟ್ಟಿದ್ದಾನೆ. ಗೆಳೆಯರು ಒಂದಿಬ್ಬರು ನಡುವೆ ನಗೆಯಾಡಲೆಂದು ಬಂದರು. ಅನಂತ ಸಿಡುಕಿನಿಂದ ಏನೇನೋ ಮಾತಾಡಲು, ನಿದ್ರೆಯಲ್ಲಿದ್ದಾನೆ ಎಂದುಕೊಂಡು ಕೆಳಗೆ ಹೋದರು. ಇನ್ನಾರ್‍ಯರೂ ಆ ದಿನ ಅವನ ಕಡೆಗೆ ಬರಲಿಲ್ಲ. ಇಂದಿರೆ ಗೊಂದಲದಲ್ಲಿ ಅದೆಲ್ಲಿಯೋ ಇದ್ದಳು. ಜನರ ಗೊಂದಲದಲ್ಲಿ ಊಟದ ಗಡಿಬಿಡಿಯಲ್ಲಿ ಅಲ್ಲಿ ಇಲ್ಲಿ ಸುಳಿದಾಡುತ್ತಿರಲಿಲ್ಲ. ಮಧ್ಯಾಹ್ನ ಅವಳ ಗೆಳತಿ ಹುಡುಕಿಕೊಂಡು ಬಂದು "ಮೊಟ್ಟಮೊದಲ ಹ್ಯಾಂಗ ಮಾತಾಡಿಸಿದ ?" ಎಂದು ಮೆಲುನಗೆಯೊಡನೆ

ಕೇಳಿದಳು.

ಹುಬ್ಬು ಗಂಟಿಕ್ಕಿ ಇಂದಿರೆ ಅಂದಳು " ಸಾಕ ಹೋಗತ್ತ ! "

ಗೆಳತಿ ಅಪ್ರತಿಭಳಾಗಿ " ಸಾಕ ಬಿಡ ತಾಯೀ! ಯಾರ ಮುಂದ ಮುಚ್ಚಿಡತಿ ? ಬಾಗಿಲ ಸುಳಕ್ಯಾಗ ನಿಂತ ಎಲ್ಲಾ ಕೇಳಿದೇವ " ಎಂದು ಹೇಳಿ ಹೋದಳು. ಏನು ಕೇಳಿದ್ದಳೋ ಯಾರಿಗೆ ಗೊತ್ತು, ಆ ಗೆಳತಿ.

ಶೋಭನ ತೀರಿಸಿಕೊಂಡು ಊರಿಗೆ ಮರಳಿದರು. ಸಂಗಡ ಇಂದಿರೆಯನ್ನೂ ಕರೆದು ತಂದಿದ್ದರು. ಹೊಸಬಳೆಂದು ಅವಳ ತಾಯಿ—ರುಕ್ಕು—ಸಂಗಡ ಬಂದಿದ್ದಳು. ಒಂದೆರಡು ದಿನಗಳು ಹಾದಿಯ ದಣಿವಾರಿಸಿಕೊಳ್ಳುವುದರಲ್ಲಿ ಕಳೆದವು. ಆ ಎರಡು ದಿನ ಅನಂತನ ಮುಖ ಮ್ಲಾನವಾಗಿಯೇ ಇದ್ದಿತು. ಈಗ ಅವನಲ್ಲಿ ಸ್ವಲ್ಪ ಉತ್ಸಾಹ ಒಡಮೂಡುತ್ತಲಿತ್ತು. ಅವನ ಹೆಂಡತಿ ಅತ್ತೆ ಏನೂ ವಿಶೇಷ ಸಂಗತಿ ಘಟಿಸದಂತೆ ಸಂತೋಷದಲ್ಲಿಯೇ ಇದ್ದಂತೆ ಇದ್ದರು. ಒಂದು ದಿನ ಮಧ್ಯಾಹ್ನ ತಾಯಿ ಮಗಳನ್ನು ಹತ್ತಿರ ಕರೆದು " ಅಂವ ಹಾಂಗs ಮಾಡಿದರೂ ನೀ ಒಳಗೆ ಹೋಗಿ ಹಾಸಿಗಿ ಮಾಡತ ಬಾ ; ಅಲ್ಲೇ ಮಲಗತ ಬಾ, ಅಂವನೆರs ಎಷ್ಟ ದಿನಾ ಮಾಡತಾ ? ಹರೇದ ಹುಡುಗ ! " ಎಂದು ಕಿವಿಮಾತು ಹೇಳಿದಳು.

" ಯಾನ ಮಾಡತಾರು ? ಒಂದ ಮಾತ ಇಲ್ಲಾ. ಒಂದ ಕತೀ ಇಲ್ಲಾ ! ಒಳಗ ಹೋಗಾನ ಹೊಡಬುರುಕ ಎತ್ತಿನಂಗ ನೋಡತಾ ಬರೀ ! " ಎಂದು ಬೇಸರದಿಂದ ನುಡಿದಳು ಇಂದಿರೆ.

" ನೋಡಲೇ, ನಾಲ್ಕ ದಿನದಾಗ ಎಲ್ಲಾ ಹಾದಿಗಿ ಬರತಾ. ನಿನ್ನ ನೀ ಜಳಕಕ ನೀರ ಕೊಡತ ಬಾ ; ಧೋತರಾ ತಂದ ಇಡತ ಬಾ ; ಅಂವ ಮಾತಾಡಸದಿದ್ದರೂ ನೀ ಮಾತಾಡಸತ ಬಾ ; ಮಾತಡತಿ ಯಾಕ ಅಂತ ಬಡೀತಾ ? ನೀನs ಮೊದಲ ಹಣಿಗಿ ಹದಿನಾರ ಗಂಟ ಹಾಕಿ ನಿಂತಿ ಅಂದರs ಅಂವಗ್ಯಾರ ಯಾನಾ ? ಹೋಗತಾ ಆಯ್ತು, ಅತ್ತ ಮಾರೀ ಮಾಡಿ " ಎಂದು ಸ್ವಲ್ಪ ಸಿಟ್ಟುಮಾಡಿಯೇ ಹೇಳಿದಳು, ಇಂದಿರೆಯ ತಾಯಿ. ಮುಂದೆ ಇಂದಿರೆಯು ಏನೂ ಹೇಳಲಿಲ್ಲ. ಎಲ್ಲವನ್ನೂ 'ಹೂಂ ! ಹೂಂ ! ' ಎಂದು ಕೇಳಿದಳು

ರುಕ್ಕವ್ವ ಊರಿಗೆ ಹೋಗುವಾಗಲೂ ಸುಂದರವ್ವನಿಗೆ " ಅನಂತನ ಸ್ವಭಾವ ಬ್ಯಾರೆ, ಹುಡಿಗಿಗಿ ಇನ್ನs ಗಂಡನ ಗೂಡಾ ಹ್ಯಾಂಗ ಇರಬೇಕ

ಅನ್ನೋದ ಗೊತ್ತಿಲ್ಲ. ಇನ್ನs ತಿಂದ ತಿರಗೂ ಪೋರಿಗೋಳ. ಅಷ್ಟ್ಯಾಕೆನ ಬಲ್ಲವು !" ಸ್ವಲ್ಪ ತಡೆದು ಸಂಕೋಚ ಬದಿಗೆ ಸರಿಸಿ "ಹೊರಗ ಮಲಕೋಕ ಆಕಿ ಹವಣಿಸಿದರೂ ನೀ ಒಳಗs ಹಾಸಿಗಿ ಮಾಡಕ ಹಚ್ಚತ ಬಾ. ಒತ್ತಿ ಹೇಳೋದs ನಾಲ್ಕ ದಿನಾ. ಮೊಮ್ಮಕ್ಕಳ ಆದಾವ ಮಾಡ್ಯಾವ ನೋಡುನು ಅಲಾ, ಒಮ್ಮಿ ನಮ್ಮ ಗನಸ ಮಕ್ಕಳಿಗಿ ಇನ್ನ ಆಗಿಲ್ಲ ಅನಕ" ಎಂದು ಹೇಳಿದಳು.

ಆಶ್ಚರ್ಯದಿಂದ ಎಲ್ಲವನ್ನೂ ಕೇಳಿಕೊಂಡು "ನಾ ಹೇಳಕ ಯಾನ ತಗೋ ! ತಾನs ಓಡಿಹೋಗಿ ಮಾಡತಾಳ! ಯಾರಿಗಿ ಯಾನ ಬ್ಯಾಡ ಆಗೀತಿ ಯಾನ ?" ಎಂದು ಹೇಳಿದಳು ಸುಂದರಾಬಾಯಿ. ಅದಕ್ಕೇನೂ ಹೇಳದೆ ರುಕ್ಕವ್ವ ಅಳಿಯನ ಕಡೆಗೆ ಹೋದಳು.

ಅನಂತ ಎಲ್ಲಿಯೋ ಹೊರಗೆ ಹೋಗುವ ಸಿದ್ಧತೆಯಲ್ಲಿದ್ದ. ರುಕ್ಕವ್ವ ಹೋಗಿ ಹೇಳಿದಳು. "ನಾನೂ ಹೋಗತ್ಯಾನ ಬಾಳಾ ಇನ್ನ. ಸಣ್ಣ ಸೋಮಾರದಾಗೊಮ್ಮಿ ನಮ್ಮೂರ ಜಾತ್ರಿಗಿ ಬಾ. ಈಗ್ಯಾನ ಬಂದರ ನಾಲ್ಕ ದಿನಾ ಗದ್ದಲದಾಗs ಹೋಯ್ತು. ಯಾನ ಕೂತ ಮಾತಾಡಲಿಲ್ಲ. ಉಣಲಿಲ್ಲ ಸವಿಸವಿ ಮಾಡಿ ತಿನಲಿಲ್ಲಾ !"

"ಆಗೂ ಜಾತ್ರಿ ಗದ್ದಲ ಇರೂದಲ್ಲ!" ಅನಂತ ಏನಾದರೂ ಹೇಳ ಬೇಕೆಂದು ಹೇಳಿದ.

ರುಕ್ಕವ್ವನ ಮನಸ್ಸಿಗೆ ಅಳಿಯನ ಮಾತಿನ ಅರ್ಥವೇ ಬೇರೆಯಾಗಿ ಹೊಳೆ ಯಿತು. ಮೊನ್ನೆ ಫಲಶೋಭನದೊಳಗಿನ ಆದರಾತಿಥ್ಯ ಅಳಿಯನ ಮನಸ್ಸಿಗೆ ಬರಲಿಲ್ಲ ಎಂದು ಭಾವಿಸಿಕೊಂಡು "ಆಗ ಜಾತ್ರಿ ಇದ್ದರ ಬ್ಯಾರೇ. ಊರಾಗ ಗದ್ದಲ, ನಮ್ಮ ಮನ್ಯಾಗ ಯಾನ ಏತಿ ? ಉಡೀ ತುಂಬೋದ ಅಂದರ ಮನೀಗಿ ಹೊರಗಿನ ನಾಲ್ಕ ಮಂದಿ ಬಂದದ್ದ. ಎಂದ ಅವರ ನಮ್ಮ ಮನೀಗಿ ಬರಾವರ ? ನಿಮಗ ಒಂದ ಹ್ಯಾಂಗ ಆದರೂ ಮತ್ತ ನಾಳಿ ಬಂದೀರಿ ಹೋದೀರಿ. ಆದರ ಬಂದ ಮುಂದಿಗಿ ಹ್ಯಾಂಗ ನಡದೋತು ? ಆದರಾಗ ನಮ್ಮ ಹುಡುಗರಿಗೆ ಇಂಥಾ ಕಾರಣಾ ಮಾಡಿ ಗೊತ್ತs ಇಲ್ಲ. ಯಾನ ಹೆಚ್ಚ ಕಡಿಮಿ ಆದರ ಹೇಳಸಕೋಬೇಕ; ಮಾಡಸಕೋಬೇಕ; ಯಾನ ಹೊರಗಿನ ಮನೀ ಏತಿ ?"

ಅನಂತ ಅವಳ ಮಾತಿನ ಕಡೆಗೆ ಅಷ್ಟು ಲಕ್ಷ್ಯ ಕೊಡದೆ ಟೊಪ್ಪಿಗೆ ಹಾಕಿಕೊಂಡು ಹೊರಗೆ ಹೋಗಿಬಿಟ್ಟ. ಇದರಿಂದ ರುಕ್ಕವ್ವ ಮತ್ತಿಷ್ಟು ಚಿಂತೆಗೀಡಾದಳು.

ಹೆಂಡತಿ ಬಂದಾಗಿನಿಂದ ಅನಂತ ಮನೆಯಲ್ಲಿ ಇರುವುದು ಕಡಮೆಯಾಯಿತು. ಅಂಗಡಿಯಲ್ಲಿ ಹೋಗಿ ಕೂಡಹತ್ತಿದ. ವ್ಯಾಪಾರದ ಕಡೆಗೂ ಸ್ವಲ್ಪ ಸ್ವಲ್ಪ ಮನಸ್ಸು ಹಾಕುತ್ತಿದ್ದ. ಇದನ್ನು ಕಂಡು ರಾಮಪ್ಪನಿಗೂ ಸ್ವಲ್ಪ ಆನಂದವಾಯಿತು, ಮಗನು ಇನ್ನು ಹಾದಿಗೆ ಬರಬಹುದೆಂದು. ಅವನೂ ಮಗನ ಮೇಲೆ ಅಂಗಡಿಯ ಕೆಲಸವನ್ನು ಒಪ್ಪಿಸಿ ಹೊಲಮನೆಯ ಕೆಲಸದತ್ತ ಮನಸ್ಸು ಹಾಕಹತ್ತಿದ. ಮನೆಯಲ್ಲಿ ಸುಂದರವ್ವನಿಗೂ ಸೊಸೆ ಕೆಲಸಕ್ಕೆ ಬಂದುದರಿಂದ ಸಮಯ ಸಿಕ್ಕಹತ್ತಿತು. ಅಲ್ಲಿ ಇಲ್ಲಿ ನೆರೆಮನೆಯಲ್ಲಿ ಕುಳಿತು ನಾಲ್ಕು ಮಾತು ಆಡುವುದು, ಏನಾದರೂ ಒಂದೆರಡು ಕೆಲಸಮಾಡುವದು, ಉಳಿದ ಚಿಕ್ಕಪುಟ್ಟ ಕೆಲಸ ಸೊಸೆಯಿಂದ ಮಾಡಿಸಿಕೊಳ್ಳುವುದು, ಹೀಗೆ ನಡೆಯಿತು. ಈಗ ಅನಂತ ಸಂಜೆಯವರೆಗೆ ಅಂಗಡಿ ಹಿಡಿಯಲೂ ಕಾರಣವಿಲ್ಲದಿರಲಿಲ್ಲ. ಅವನ ಗೆಳೆಯರ ಗುಂಪಿಗೆ ಹಗಲು ಕೂಡಲು ಸಮಯವಿರುತ್ತಿರಲಿಲ್ಲ. ಸಮೀಪದಲ್ಲಾದ ಕಿತ್ತೂರ ಸಕ್ಕರೆಯ ಕಾರಖಾನೆಯಲ್ಲಿ ಕೆಲಸಕ್ಕೆ ಸೇರಿದ್ದರು. ಮುಂಜಾನೆ ಹೋದವರು ಸಂಜೆಗೇನೇ ಮನೆಗೆ ಬರುವರು. ಆದುದರಿಂದ ಇವನು ಅಂಗಡಿ ಹಿಡಿದನು. ತಂದೆ ಸಂಜೆಗೆ ಅಂಗಡಿಗೆ ಬಂದು ಅನಂತನನ್ನು ಮನೆಗೆ ಕಳಿಹಿಸುವನು. ಅನಂತ ಒಂದು ಕಟ್ಟು ಬೀಡಿ ನಾಲ್ಕೆಂಟು ಅಡಿಕೆಗಳನ್ನು ಕಿಸೆಯಲ್ಲಿ ಹಾಕಿ ಹೊರಬೀಳುವನು. ಬರುವಾಗ ಪೋದ್ದಾರ ಬಾಳಪ್ಪನ ಅಂಗಡಿಯನ್ನು ಹೊಕ್ಕನೆಂದರೆ ತೀರಿತು. ರಾತ್ರಿ ಹನ್ನೊಂದೋ ಹನ್ನೆರಡರವರೆಗೆ ಇಸ್ಪೇಟು ಹೊಡೆಯುವುದು. ಅಲ್ಲಿ ಅವನ ಹಳೆಯ ಗೆಳೆಯರೆಲ್ಲ ಕೂಡುತ್ತಿದ್ದರು. ಬಾಳಪ್ಪನೂ ಅಂಗಡಿಯಲ್ಲಿ ಒಬ್ಬನೆ. ಅಲ್ಲಿ ಎಷ್ಟು ಹೊತ್ತು ಆಡಲೂ ಅಭ್ಯಂತರವಿರಲಿಲ್ಲ. ಹೀಗೆ ಆಟ ಮುಗಿಸಿ ಮನೆಗೆ ಹನ್ನೆರಡು ಒಂದು ಗಂಟೆಗೆ ಬಂದು ಮಲಗುವನು. ಒಂದೊಂದು ದಿನ ಗಂಡನು ಮನೆಗೆ ಬರುವವರೆಗೆ ಇಂದಿರೆ ಎಚ್ಚರಿರುತ್ತಿದ್ದಳು. ದೀಪ ಆರಿಸದೆ ಇಡುತ್ತಿದ್ದಳು. ಏನಾದರೂ ಮಾತನಾಡಬೇಕೆಂದು ಹಂಬಲಿಸುತ್ತಿದ್ದಳು. ಅನಂತ ಬಂದು ಏನಾದರೂ ಒಂದು ದಿನ ನಾಲ್ಕು ಮಾತು ಆಡಿದರೆ ಆಡಿದ ; ಇಲ್ಲವಾದರೆ ಇಲ್ಲ. ಮಲಗಿ

ಬಿಡುತ್ತಿದ್ದ. ನಿದ್ರೆ ಬಂದುಬಿಡುತ್ತಿತ್ತು. ಬರಬರುತ್ತ ಇಂದಿರೆ ಗಂಡನ ದಾರಿ ಕಾಯುವುದನ್ನು ಬಿಟ್ಟಳು. ತನ್ನ ಕೆಲಸ ತೀರಿದ ಮೇಲೆ ದೀಪ ತೆಗೆದು ಮಲಗಿ ಬಿಡುವಳು. ಅನಂತ ಬಂದು ನಾಲ್ಕಾರು ಸಲ ಕರೆದಾಗೊಮ್ಮೆ ಎದ್ದು ಬಾಗಲು ತೆರೆದು ಬಂದು, ಮಲಗಿದಳೆಂದರೆ ಅವಳ ಆ ದಿನದ ಕೆಲಸ ತೀರಿತು. ಅರನಿದ್ರೆ ಯಲ್ಲಿ ಗಂಡ ಒಳಗ ಬಂದು ಮಲಗಿದನೋ ಇಲ್ಲವೋ ಎಂಬುದರ ಅರಿವು ಅವಳಿಗೆ ಒಂದೊಂದು ದಿನ ಇರುತ್ತಿದ್ದಿತು, ಒಂದೊಂದು ದಿನ ಇಲ್ಲ. ಹೀಗೆ ದಿನ ದಿನಕ್ಕೆ ಇಂದಿರೆಯಲ್ಲಿ ಅನಂತನ ವಿಷಯಕ್ಕೆ ತಾತ್ಸಾರ ಬೆಳೆಯುತ್ತ ನಡೆಯಿತು. ಒಮ್ಮೆ ಗಂಡನನ್ನು ಒಲಿಸಲು ಯತ್ನಿಸಿದರೆ ಹತ್ತು ಸಲ ಸಿಡಿದು ದೂರ ಹೋಗು ವಳು. ತಾನೊಮ್ಮೆ ಮಾತಾಡಿಸಿದಾಗ ಅವನು ಮಾತಾಡದೆ ಇದ್ದರೆ ಅವನು ನಾಲ್ಕು ಸಲ ಮಾತಾಡಿಸಿದರೂ ಇವಳು ಮಾತಾಡುತ್ತಿರಲಿಲ್ಲ.

ಆದರೂ ನವತಾರುಣ್ಯದಲ್ಲಿ ಕೂಡಿ ವ್ಯವಹರಿಸುತ್ತಿರುವ ಗಂಡು ಹೆಣ್ಣು ಗಳು ಅದೆಷ್ಟು ಕಾಲ ದೇಹಸುಖವನ್ನುಳಿದು ದೂರ ನಿಲ್ಲ ಬಲ್ಲವು! ಕೆಲದಿನಗಳ ಮೇಲೆ ಮನಸ್ಸಿಲ್ಲದಿದ್ದರೂ ಇಂದಿರೆಯಲ್ಲಿ ತನ್ನ ಕಾಮತೃಪ್ತಿಯನ್ನು ಹೊಂದುತ್ತ ನಡೆದ ಅನಂತ. ಇಂದಿರೆಯೂ ಪತಿಯ ನಿಜವಾದ ಸಹವಾಸದ ಸುಖವನ್ನು ಪಡೆಯದಿದ್ದರೂ ಸ್ವಲ್ಪ ಮಟ್ಟಿನ ಸುಖವನ್ನು ಹೊಂದಿ, ಇದ್ದುದರಲ್ಲಿಯೇ ಸಮಾಧಾನದಿಂದ ಇದ್ದಳು. ಆದರೆ ಈ ಅಪೂರ್ಣ ದಾಂಪತ್ಯ ಜೀವನದ ಪರಿಣಾಮ ಇಬ್ಬರ ಮೇಲೂ ಆಗದಿರಲಿಲ್ಲ.

ಇಂದಿರೆ ಅಷ್ಟು ಸುಂದರ ಹುಡುಗಿಯಲ್ಲದಿದ್ದರೂ ಮನೆಗೆಲಸದಲ್ಲಿ ಒಳ್ಳೇ ಚುರುಕು ಹುಡಿಗೆ. ಅವಳಿಗೆ ಹುಟ್ಟಿನಿಂದಲೂ ಚುರುಕುತನ ಅಭಿಮಾನಗಳು ಬೆಳೆದು ಬಂದಿವೆ. ತಕ್ಕ ಮಟ್ಟಿಗೆ ಮಾತೂ ಕಡಿಮೆ. ಒಮ್ಮೊಮ್ಮೆ ಇಂದಿರೆಯಲ್ಲಿ ಈ ಅಭಿಮಾನ, ಮಾತಿನ ಕೊರತೆಯಿಲ್ಲದಿದ್ದರೆ ಅನಂತನ ಜೀವಿತ ಬೇರೆ ರೀತಿ ಆಗ ಬಹುದಿತ್ತೇನೋ ಎಂದೆನಿಸುವುದು. ಇವಳ ಬಿಗುವಿನ ನಡತೆಯು ಒಮ್ಮೊಮ್ಮೆ ಅನಂತನಿಗೆ ತಾರಕ್ಕನ ಮೃದುತನದೊಡನೆ ತೂಗಿ ನೋಡಲು ಹಚ್ಚುತ್ತಿದ್ದಿತು. ಕೊನೆಗೆ ಅವನ ಮನಸ್ಸು ವಿಫಲವಾಗುವುದು. ಆಗ ಅವನಿಗೆ ಜೀವನವೇ ಬೇಸರವೆನಿಸುವದು. ಹಿಂದೆ ತಾನು ಚಂದೂರಿನಲ್ಲಿ ತಾರಕ್ಕನೊಡನೆ ಕಳೆದ ದಿನಗಳು ಅವನ ಸ್ಮೃತಿಪಟಲದ ಮೇಲೆ ಒಂದೊಂದಾಗಿ ಮೂಡುವವು. ತಾರಕ್ಕನನ್ನು ತಾನು ಪ್ರೀತಿಸುತ್ತಿದ್ದುದೂ, ಅವಳು ಇವರ ಮನೆಯಲ್ಲಿ ಕೆಲ

ದಿನ ಇದ್ದುದೂ ನೆನಪಿಗೆ ಬರುವದು. ಆಮೇಲೆ ನಡೆದ ಘಟನೆಯ ನೆನಹಿನಿಂದ ಅವನ ಹೃದಯವು ಒಡೆದು ಚೂರು ಚೂರಾಗಿ ಕಣ್ಣಿನಿಂದ ನೀರಿನ ರೂಪದಿಂದ ಸುರಿಯ ತೊಡಗುವುವು ! ಆಗ ಅನಂತನು "ಕಳೆದುಕೊಂಡೆ! ನಾನೇ ಕಳೆದು ಕೊಂಡೆ ! ಆ ಸುಖವನ್ನು ಇನ್ನು ಸಂಪಾದಿಸುವುದು ಅಸಾಧ್ಯ !" ಎಂದು ತೀರ್ಮಾನಕ್ಕೂ ಬರುವನು. ಅಂತೂ ಅನಂತನು ಏನೋ ಒಂದು ತರದ ವಿಚಿತ್ರ ವ್ಯಕ್ತಿಯಾದನು.

ಸುಂದರಾಬಾಯಿಯು ಸೊಸೆ ಹೊಸದಾಗಿ ಬಂದಾಗ ಇತರರೊಡನೆ ತನ್ನ ಸೊಸೆಯನ್ನು ಹೊಗಳಿದ್ದೇ ಹೊಗಳಿದ್ದು. ಇಂದಿರೆಯಲ್ಲಿ ಏನಾದರೂ ಕುಂದು ತೋರಿದರೆ ಅದು ಅನಂತನಿಗೆ ತೋರದಂತೆ ಮುಚ್ಚಿ, ಮೃದುವಾಗಿ ಅವಳಿಗೆ ನಡವಳಿಕೆಯನ್ನು ಯಾವುದಾದರೊಂದು ರೀತಿಯಲ್ಲಿ ಹೇಳಿಕೊಡು ವಳು. ದಿನಗಳೆದಂತೆ ಅವಳು ಸೊಸೆಯನ್ನು ತಿದ್ದಲು ಯತ್ನಿಸುವುದೆಲ್ಲ ಹೊಳೆ ಯಲ್ಲಿ ಹುಣಸೆಹಣ್ಣು ತೊಳೆದಂತಾಗಹತ್ತಿತು. ಬರಬರುತ್ತ ಇಂದಿರೆ ಕೆಲಸ ದಲ್ಲಿ ಕಲ್ಲಾಗತೊಡಗಿದಳು. ಮನೆಯ ಕೆಲಸ ಅತ್ತೆ ಹೇಳದ ಹೊರತು ಮುಂದೆ ಸಾಗದಾದವು. ಅತ್ತೆ ಹೇಳಿದರೂ ಕೆಲಸಗಳೆಲ್ಲ ಮೊದಲಿನಂತೆ ಆಗುತ್ತಿರಲಿಲ್ಲ. ಅದಕ್ಕೆ ಸುಂದರವ್ವನೂ ಬರಬರುತ್ತ ಕೆಲಸದಲ್ಲಿ ತೊಡಗಬೇಕಾಯಿತು. ಸೊಸೆ ಯನ್ನು ಕಂಡರೆ ಆಗದಂತಾಯಿತು. ಯಾವಾಗಲೂ ಒಟಒಟ ಅನ್ನತೊಡಗಿ ದಳು. ಆದರೂ ಈ ಸಂಗತಿ ಅನಂತನಿಗೆ ಗೊತ್ತಾಗದಂತೆ ಎಚ್ಚರದಿಂದ ಇರು ತ್ತಿದ್ದಳು. ಅವಳ ದೃಷ್ಟಿಯಲ್ಲಿ ಮನೆಯ ಕೆಲಸ ಬೊಗಸೆಗಳಿಗಿಂತ ಮಗನ ಬಾಳು ಮುಖ್ಯ. ಆದರೂ ಒಮ್ಮೊಮ್ಮೆ ತಾಳಲಾರದುದಕ್ಕೆ ಸೊಸೆಗೆ ಬಾಯಿ ಮಾಡುವಳು.

"ಇಂದ್ರಾ ಇತ್ತಿತ್ತ ನೀ ಒಂದ ತರಾನ್ಸ ಆದಿ !"

"ಯಾನಾ ?"

"ನಿನಗ ಗೊತ್ತಿಲ್ಲ ಯಾನಾ, ಮೊದಲ ಹ್ಯಾಂಗ ಇದ್ದೀ ? ಈಗ ಯಾತ ರೊಳಗೆಲ್ಲಾ ಬ್ಯಾಸರ ! ಮೊದಲ ಇದ್ದಾಂಗ ಯಾಕ ಇಲ್ಲ ?"

"ಮೊದಲ ಹ್ಯಾಂಗ ಇದ್ದಿನು ?"

"ಚಟಚಟ ಕೆಲಸ ಮಾಡತಿದ್ದಿ ; ನನ್ನ ಮನೀ ನನ್ನ ಬದಕಾ ಅಂತ ತಿಳಿದ ನಡೀತಿದ್ದಿ ; ನನ್ನ ಭಾರ ಇನ್ನ ಕಡಿಮಿ ಆಯ್ತಂತ ತಿಳದಿನ್ನ ನಾ."

"ಈಗ್ಯಾನ ಆಯ್ತು ?"

"ನನ್ನ ಸೊಸಿ ಎಷ್ಟ ಛಲೂ ಅಂತ ಮುಂದಿಗೆ ಹೇಳತಿನ್ನ ನಾ. ಆದರೆ ನೀ ಈಗ ಮನೀ ಯಾರದೋ ಯಾನೋ ಅನ್ನೂ ಹಂಗ ಮಾಡತಿ. ಅಲ್ಲೇ ಬಿದ್ದರ ಬಿತ್ತು, ಇಲ್ಲೇ ಬಿದ್ದಿರ ಬಿತ್ತು, ಉಕ್ಕಿರ ಉಕ್ಕಿತು. ಮಾವ ಬಂದರ ಬಂದಾ, ಗಂಡ ಹೋದರ ಹೋದ. ಚಟ್ಟನ ಏಳೂ ಹಂಗಿಲ್ಲಾ ಮುಂದಿನ ಕೆಲಸಕ ಧಾವಸು ಹಂಗಿಲ್ಲಾ !"

"ನಾ ಹ್ಯಾಂಗ ಇದ್ದರ್ಯಾನಾ ! ಹೋಂದ ; ನಾ ಕೆಟ್ಟ. ಸೊಕ್ಕಿನಾಕಿ, ನನ್ನಾ ಮಾಡಿ ಯಾಕ ಸೂಲಾ ಮಾಡಿಕೊಂಡಿ ನೀ ?"

"ಛೇ ! ಇನ್ನ ಮುಂದ್ಯಾನ ಮಾತಾಡೋದು ?" ಎಂದು ಸುಂದರಾ ಬಾಯಿ ಬಹಳ ತುಚ್ಛತೆಯಿಂದ ಮಾತು ನಿಲ್ಲಿಸುವಳು.

x x x x x

ಅತ್ತೆ ಸೊಸೆಯರ ಮನಸ್ತಾಪವಿರಲಿ ಇಲ್ಲದಿರಲಿ, ಮನೆಗೆಲಸ ಆಗಲಿ ಆಗದಿರಲಿ, ಅದು ಸರಿಗೊಳ್ಳಲೆಂದು ನಿಸರ್ಗ ದಾರಿಕಾಯುತ್ತ ನಿಲ್ಲಲಾರದು. ಅದು ತನ್ನ ನಿಯಮದಂತೆ ನಡೆಯತಕ್ಕದ್ದೇ. ಈಗ ಇಂದಿರೆ ಗರ್ಭವತಿಯಾಗಿ ತವರುಮನೆಗೆ ಹೆರಿಗೆಯ ಸಲುವಾಗಿ ಹೋದಳು. ಈಗ ಮನೆಗೆಲಸವನ್ನೆಲ್ಲ ಸುಂದರವ್ವನೇ ಸಂತೋಷದಿಂದ ನೋಡಿಕೊಳ್ಳಬೇಕಾಯಿತು. ಅನಂತ ಅಂಗಡಿ ಯಿಂದ ಒಂದು ದಿನ ಮನೆಗೆ ಮಲಗಲು ಬಂದರೆ ಬಂದ, ಇಲ್ಲದಿದ್ದರೆ ಇಲ್ಲ. ಅಂಗಡಿಯಿಂದ ಹೊರಟು ಸರಿಹೊತ್ತಿನ ವರೆಗೆ ಬಾಳಪ್ಪನ ಅಂಗಡಿಯಲ್ಲಿ ಇಸ್ಪೇಟು ಹೊಡೆದು, ಅಲ್ಲೇ ಮಲಗಿ, ಮುಂಜಾನೆ ಚಹಾ ಕುಡಿಯಲು ಮನೆಗೆ ಎದ್ದು ಬಂದರೆ ಬಂದ.

ಒಂದು ದಿನ ಮಧ್ಯಾಹ್ನ ಸುಂದರವ್ವ ಮನೆಗೆಲಸವನ್ನೆಲ್ಲ ತೀರಿಸಿ, ಇದೀಗ ಪಡಸಾಲೆಗೆ ಬರುತ್ತಿದ್ದಳು. ಅಷ್ಟರಲ್ಲಿ ಒಬ್ಬ ಮುದುಕಿ,

"ಯಾನ ಮಾಡಕ ಹತ್ತೀದಿ ಸುಂದರಾ ?" ಎಂದು ಕೇಳುತ್ತ ಬಂದಳು.

"ಬಾ ; ಜೀಜಾ, ದೂರ ಬಂದೀ ?" ಎಂದು ಸ್ವಾಗತಿಸಿದಳು, ಸುಂದರಾ. ಆಮೇಲೆ ಹೇಳಿದಳು "ಈಗ ಎಲ್ಲಾ ಆಯ್ತು ನೋಡ. ಅಡಗಿನ ಮನ್ಯಾಗಿಂದ ಗನಸರ ಊಟಾಮಾಡಿ ಹೋದರ ಅಂಗಡಿ ಕಡೆ ಈಗ."

"ಯಾಕ ವ್ಯಾಳೆ ಆಯ್ತಲ್ಲ?" ಎಂದು ಕೇಳುತ್ತ ಮುದುಕಿ ಒಳಗೆ ಬಂದು ಕುಳಿತಳು.

"ಹರಿವತ್ತ ಎದ್ದ ಹೊಲದ ಕಡೆ ಹೋಗಿರು ; ಬರಕ ಅಂದರ ಜರಾ ಬಿಸಲ್ಕ ಆಯ್ತು. ಅಂಗಡಿಕಡೇಗೆ ಹೋಗುಲ್ಲದ ಎಲ್ಲಿ ಆಗತೇತಿ ? "

"ಬೇಕಲವ್ವ! ಬರೀ ಹುಡುಗೂರ ಮ್ಯಾಲೇ ಬಿಟ್ಟರ ಹ್ಯಾಂಗ ನಡದೋತು ? ಅವರ ಮ್ಯಾಲೂ ಒಂದ ಕಣ್ಣ ಬೇಕಲ್ಲ ?" ಸ್ವಲ್ಪ ಸುಮ್ಮನೆ ಕುಳಿತು ಅಡಗಿನ ಮನೆಯತ್ತ ನಿಟ್ಟಿಸಿ ನೋಡಿದಂತೆ ಮಾಡಿ," ಸೊಸಿ ಎಲ್ಲಿ ಕಾಣಸುದುಲ್ಲಾ ? ಹಡೀಕ ಹೋದಳ ಕಾಣಸತೇತಿ ?" ಎಂದು ಮಾತು ಮುಂದುವರಿಸಿದಳು.

ಸ್ವಲ್ಪ ಹೊತ್ತು ಆ ಮಾತು ಈ ಮಾತು ಆಡಿದ ನಂತರ ಜೀಜಾ ಕೇಳಿದಳು "ನಿಮ್ಮ ಅಂತೂ ಮನಿಗಿ ಮಲಗಕ ಬರೂದುಲ್ಲಾ ? "

"ಯಾಕ ? ಬರತಾನಲ್ಲ ! "

"ಯಾಕಿಲ್ಲಾsss ದಿನಾ ಬೆಳಗ ಆದರ ಆ ಬಾಳಪ್ಪನ ಅಂಗಡ್ಯಾಗs ಇರತಾ ; ಆದಕ್ಕ ಅಂದಿನು" ಮುದುಕಿಗೆ ಮುಂದೆ ಏನೋ ಹೇಳಬೇಕಾಗಿದೆಯೆಂದು ಸುಂದರವ್ವ ತಿಳಿದುಕೊಂಡಳು. ಮುದಿಕೆ ಮಾತ್ರ ಮುಂದೆ ಹೇಳದೆ ಸುಮ್ಮನೆ ಕುಳಿತಳು.

ಸ್ವಲ್ಪ ತಡೆದು ಸುಂದರವ್ವ "ಅಲ್ಲಿ ಯಾನ ರಾತ್ರಿ ನಾಲ್ಕ ಹುಡುಗರ ಕೂಡಿ ಇಸ್ಪೇಟು ಪಗಡಿ ಆಡತಾವ ಕಾಣಸ್ತೇತಿ. ಒಂದೊಂದ ದಿನಾ ಮಲಗಿದರೂ ಮಲಗತಾ ಅಲ್ಲೇ, ಈಗ್ಯಾನ ಮನ್ಯಾಗ ಹ್ಯಾಂತಿಯು ಇಲ್ಲಾ ಯಾನ ಇಲ್ಲ. ಎಲ್ಲಿ ಮಲಗಿರ ಯಾನ ಮೋಕಳೀಕ ಇದಾ ಅಲ್ಲ" ಎಂದಳು.

"ಗನಸ ಮನಸ್ಯಾ ಎಲ್ಲಿ ಮಲಗಿರಿ ಯಾನ ಬಿಡ ತಾಯಿ ? ಆದರ ನೆರೀಹೊರಿ, ಮದಿವ್ಯಾಗುಲದ ಪೋರಿಗೋಳ ಒಂದೊಂದ ಕೂತಿದಾವು. ನೆರದ ನಾಕ ನಾಕ ವರ್ಷ ಆಯ್ತು."

ಅನಂತನ ನಡತೆಯ ವಿಷಯಕ್ಕೆ ಸ್ವಲ್ಪ ಸಂಶಯ ಬಂದಿತು, ಸುಂದರವ್ವನಿಗೆ. ಅವಳ ಹೃದಯವೂ ನಡುಗಿತು. ಆದರೂ "ಮದವಿ ಆಗುಲ್ಲದ ಕೂತರ ಯಾನ ಮಾಡ ಅನ್ನತಾರು ? ಆ ಓಣ್ಯಾಗ ಯಾನ ಮುಡುಗರ ಹಾಯೋದಾ

ಬರೋದಾ ಯಾನ ಬ್ಯಾಡ ಅಂತಾರ ಯಾನಾ? ಇಲ್ಲದ ಒಂದ ಹೆಚ್ಚಿಂದ ಆಯ್ತಲ್ಲ! ಊರಾಗ ಯಾನ ಮದವಿ ಇಲ್ಲದ ಪೋರಿಗೋಳ ಇರತಾವ ಇಲ್ಲ?" ಎಂದು ಬಿರುಸಿನಿಂದ ಉತ್ತರಕೊಟ್ಟಳು. ಎಷ್ಟಾದರೂ ಅನಂತ ಅವಳ ಮಗ ನಲ್ಲವೆ!

ಸುಂದರವ್ವನ ಬಿರುಸಿನ ಉತ್ತರಕ್ಕೆ ಜೀಜಾ ಹೆದರಿದಳು. "ಹಾಂಗ್ಯಾರ ನಿಮ್ಮ ಹುಡುಗಗ ಅನ್ನಾವರ ಬಿಡ ತಾಯಿ!" ಎಂದು ಸ್ವಲ್ಪ ತಡೆದು, ಏನೋ ಧೇನಿಸುತ್ತ "ಅವರರ್ಸ ತಾವ ದಿನಾ ಒಬ್ಬರಲ್ಲೆ ಕೂಲಿಗಿ ಹೋಗಾವರ ಆಗೀ ಪೋರಿನಾ ಯಾಕ ಹಾಕಬೇಕವ್ವ ಸಾಲಿಗೀ? ಇನ್ನ್ಯಾನ ಅದ ಹೊಲದ ಕೆಲಸ ಮಾಡತೇತಿ?" ಎಂದು ತುದಿ ಮೊದಲಿಲ್ಲದೆ ಏನೋ ಆಡಿದಳು.

"ಯಾರ? ಯಾವಾಕಿ? ಜರಾ ಬೊಡ್ಡೀ ಹಿಡಿದರ್ಸ ನೆಟ್ಟಗ ಹೇಳಲ್ಲಾ?"

"ಸಿಂಧ್ಯಾ ಸಾತಪನ ಮಗಳ್ಸ, ಎಲ್ಲ ಹಾರೋನ ಮಗಳ ಆಗೀದಾಳು. ಹುಟ್ಟಾ ಇಷ್ಟ ಕೆಂಪ ತೊಗಲ ಏತಿ, ಅದರಾಗ ಇಷ್ಟ ಕಲತಾಕಿ; ವಾಿಹಿಕ್ಕಿ ಕಿವಿ ಮ್ಯಾಲಿ ಬೈತಲಾ ತಗದಳ ಅಂದರ ಎಲ್ಲೀ ಕಸಬಿನೇರ ಪೋರಿ ಹಂಗ ಕಾಣಸ್ತೇತಿ ಜೋಡಿಗೋಳ! ಅವ್ವಾ ಅಪ್ಪಾ ಮನೀ ನೋಡಿ ಮಾಡಿಕೊಡ ಬಾರದು? ಇನ್ನs ಎದೀ ಉದ್ದ ಮಗಳನಾ ಮನ್ಯಾಗ ಇಟಗೊಂಡ ಕೂತಿದಾವು!"

"ಕೂಡವಾರ, ಯಾರದ ಯಾನ ಹೋಗೋದ ಅದರಾಗ?" ಮುಂದಿನ ವಿಷಯ ಹೊರಬೀಳಲೆಂದು, ಹಾರುವ ಹೃದಯದಿಂದ ಸುಂದರವ್ವ ಅಂದಳು.

"ತಾವ ಎಲ್ಲಾ ಕೂತಾರ ಖರೇ ಹುಡುಗೂರನಾ ಹಾಳಿಗಿ ಹಚ್ಚಿ ಇಡ ತಾರಲ್ಲ; ಅವರದ ಯಾನರ್ಸ ಆದೋತು, ಊರಾಗ ಮುಂದೇದ ಮಾರಿಗಿರಿ ದಾನ ಆಗೋವಾ. ಆರೇರ ಹುಡುಗೂರ ಎಲ್ಲಾ ಕೂಡಿ...." ಮುಂದೆ ಹೇಳಲು ಅನುಮಾನಿಸಿದಳು ಆ ಮುದುಕಿ.

ಆದರೂ ಅವಳ ಮಾತಿನ ಭಾವ ಸುಂದರವ್ವನಿಗೆ ಹೊಳೆಯಿತು. ಅವಳ ತಾಯಿ ಕರುಳು ಗಾಬರಿಗೊಂಡಿತು. ಆದರೂ ತೋರಗೊಡದೆ ಧೈರ್ಯ ತಂದು ಕೊಂಡು ಹೇಳಿದಳು. "ಯಾನ ಮಾಡತಾರು? ಇಕಡ್ಯಾವರ ಕೈಯಾನ

ಕಿರದ ಇದಾವ ಯಾನಾ ? ತಮ್ಮ ಪೋರಿನಾ ತಾವ ಬಿಗುವಿನ್ಯಾಗ ಇಟಕೋ ಬೇಕು ? ತಿಳಿದುಲ್ಲ ಯಾನ ಇವರಿಗಿ ? "

## ೨೦

ಹೊತ್ತು ಮುಳುಗಿ ಒಂದು ತಾಸು ಕಳೆದಿರಬೇಕು. ಅಪ್ಪಣ್ಣ ಹೊಲದಿಂದ ಬಂದ. ತಲೆಯಮೇಲೆ ಮೇವಿನ ಹೊರೆಯಿದ್ದಿತು. ಬಂಕದಲ್ಲಿ ಹೊರಿ ಇಳುಹುತ್ತಲೇ ಅಮ್ಮವ್ವನಿಗೆ ಕೇಳಿದ. "ಅವ್ವಾ, ನಿನ್ನ ಊಟ ಆಗೀತಿ ಅಲ್ಲ ? "

"ಯಾರ, ಅಪ್ಪೂ ? " ಎಂದು ಕೇಳಿ " ಇನ್ನೂ ಇಲ್ಲ ; ನಿನ್ನ ಗೂಡಾನ ಉಣಬೇಕಂತ ಕೂತಿದ್ದ್ಯಾನು " ಎಂದು ಹೇಳಿದಳು ಅಮ್ಮವ್ವ.

"ಈಗ ಎಮ್ಮೀ ಅಷ್ಟ ಹಿಂಡಕೋತ್ಯಾನು, ಆ ವ್ಯಾಲಿ ನಿಂಗೂ ಕೊಡ ತ್ಯಾನು, ನಾನೂ ಉಣತ್ಯಾನು ಯಾವಾಗ ಹೋದಳ ಆಕಿ ? "

" ಇಲ್ಲ ; ಇದಾಳಲ್ಲ. ಆಕೆಲ್ಲಿ ಹೋಗಿದಾಳು ? "

"ಆಂ! ಯಾಕ ಯಾಕ ಹೋಗಲಿಲ್ಲ ಆಕೀ ? "

"ಹ್ಯಾಂಗ ಹೋಗತಾಳು ? ಗಾಡಿಗೋಳ ಬಂದರ್ರ ಅಲ್ಲಾ ಹೋಗೋದ ? ಮಗಳ ಸಂಜೀತನಕಾ ಗುಬ್ಬಿ ಮರೀ ಹಾಂಗ ಹಾದಿ ನೋಡಿ ನೋಡಿ ದಣೀತ. ಈಗ ಹೊತ್ತ ತಾಯಿ ಹೊಟ್ಯಾಗ ಹೋಗಾನ ಸಿದ್ದ್ಯಾನ ಕೈಯಾಗ ಆಯಾರ ಕೊಟ್ಟ. ಹಚಕೊಟ್ಟ್ಯಾಳು."

" ಆಯಾರ ಯಾತಕ ಕಳಿಸತಿದ್ದಳ ಮತ್ತ ! ಅವರಿಗೇ ಅಷ್ಟ ಆಗಾತಿ ಇಲ್ಲಾ, ಮತ್ತ ! ಕರೀದವರ ಮನಿಗಿ ಕಳಸಗಿತಿ ಆಗಿ ಹೋದರಂತ "

"ಹಿಂದಿಂದ ಮಾತ ಬರಬಾರದಪ್ಪ ಮತ್ತ ! ಒಮ್ಮಿ ಸಿಟ್ಟಿನ ಮನಿ ಸೇರಿ, ನಿಂತಿತ ಅಂದರ ನಾಳಿ ರತ್ನಾರ್ರ ಯಾನ ಅಂದಾಳು ? ಅವ್ಯಾಲಿ ಒಡ್ಲಾ ಮುರಕೊಂಡರ ಯಾನ ಆಗೋದಾ ? "

"ಅಷ್ಟ್ಯಾಕ ಅದಕ ಕಿಮ್ಮತ್ತ ಕೊಡೋದಾ ? ಅಂವ ಯಾನ ಸರಳ ಕರೀಕ ಬಂದಿದ್ದ ಯಾನ ? ಸುಮ್ಮ ಇತ್ತ ಯಾತಕರ ಹೋಗಿದ್ದ. ಅದಾ

ಹೋಗತಾ ಹೋಗತಾ ಇತ್ತ ಬಂದಿದ್ದ ಆಯ್ತು. ಕರೀಕ ಬಂದಾವ ಸಂಜಿತನಕಾ ನಿಂತ ನನಗೆ ಹೇಳಿ ಕೇಳಿ ಹೋಗವಲ್ಯಾನ? ಸುಮ್ನ ಹುಚ್ಚ ಹೆಂಗಸಾ ಹೋಗತ್ಯಾನಂತ ಕುಣೀತಿತ್ತ! ವರ್ಷ ಆಗಿ ಹೋಯ್ತು ಈಕಿನಾ ಇಲ್ಲಿ ಕೊಟ್ಟ, ಒಮ್ಮೇರೆ ಹ್ಯಾಂಗ ಇದಾಳಂತ ಬಂದೀದಾ ಯಾನ? ಈಗ ಕರೀಕ ಬಂದಾ?" ಅಪ್ಪಣ್ಣ ಆಪ್ತರ ಮೇಲೆ ಸಿಟ್ಟಾಗಿದ್ದ. ಅದರಲ್ಲಿ ಸ್ವಲ್ಪ ಭಾಗ ತಾರಕ್ಕನ ಮೇಲೂ ಇತ್ತು, ಉಡುಗೊರೆ ಹಿಂದಿನಿಂದ ಕಳಿಸಿಕೊಟ್ಟದ್ದಕ್ಕಾಗಿ. ಹಾಗೇ ಒಳಗೆ ಬರುತ್ತ "ಹ್ಯಾಂಗ ಆಯ್ತು ನಿನ್ನ ಮಾವನ ಮಗನ ಕಾರಣ?" ಎಂದ ಕೆಣಕುವ ಸ್ವರದಲ್ಲಿ.

ತಾರಕ್ಕ ಒಲೆಯಮೇಲೆ ಕೈಕಾಲಿಗೆ ನೀರು ಇಟ್ಟು, ಉರಿ ಹಚ್ಚುತ ಕುಳಿತಿದ್ದಳು. ಮನದಲ್ಲಿ "ಗಾಡಿ ಯಾಕ ಬರಲಿಲ್ಲೋ; ಉಡೀ ತುಂಬೋದ ನಿಂತಿರಬೇಕ್ಯಾನ? ಇಲ್ಲಾದರ ಹೀಂಗ ಮಾಡಾಂವ ಅಲ್ಲ ಮಾವ" ಅದೇ ವಿಚಾರದ ಸೆಳವಿನಲ್ಲಿ "ಅನಂತಗ ಯಾನರ ಆಯ್ತೋ? ಇಲ್ಲಾದರ ತನಗ ಆಕಿ ಬ್ಯಾಡಂತ ಜಗಳಾ ತಗದೀರ" ಎಂದೂ ವಿಚಾರ ತೇಲುತಿದ್ದಿತು. ಈ ವಿಚಾರದ ತೆರೆಗಳ ಜೊತೆಗೆ ಕಣ್ಣೀರೂ ಧಾರೆಯಾಗಿ ಸುರಿಯು:ತ್ತಿದ್ದವು. ಈ ಸ್ಥಿತಿಯಲ್ಲಿದ್ದ ಆಕೆಗೆ ಗಂಡನ ಮಾತುಗಳು ಕೇಳಿಸಲಿಲ್ಲ.

"ಯಾಕ ಮಾತಾಡವಲ್ಲಿ? ಅವರ ಕರೀಕ ಬರದಿದ್ದರ ನನ್ನ ಮ್ಯಾಲಿ ಯಾಕ ಸಿಟ್ಟನಿಂದ?" ಕೊಂಕುಸ್ವರದಲ್ಲಿ ಕೇಳಿದ ಅಪ್ಪಣ್ಣ ಮತ್ತೆ.

ತಾರಕ್ಕ ಕೂಡಲೇ ಚಮಕಿತಳಾದಳು. ಒಮ್ಮೆಲೆ ನಿದ್ರೆಯಿಂದ ಎಚ್ಚತ್ತ ವರಂತೆ ಕಣ್ಣೀರು ಒರಸಿಕೊಳ್ಳುತ್ತ "ನಿಮ್ಮ ಮ್ಯಾಲ ಸಿಟ್ಟ ಆಗಲಾಕ ನೀವ್ಯಾರ ನನಗ?" ತನ್ನ ವಿಚಾರದ ಗುಂಗಿನಲ್ಲಿಯೇ ವೈಮನಸ್ಸಿನಿಂದ ನುಡಿದಳು. ಆ ಮಂದ ಬೆಳಕಿನಲ್ಲಿ ಅವಳ ಕಣ್ಣೀರು ಅಪ್ಪಣ್ಣನಿಗೆ ಕಾಣಿಸಲಿಲ್ಲವೆಂತಲೇ ಒಳಿತಾಯಿತು.

"ಯಾಕ? ನಾ ಯಾರ ಅಲ್ಲ ನಿನಗ?" ಎಂದ ಅಪ್ಪಣ್ಣ. ದನಿ ಬಿರುಸಾಗಿದ್ದಿತು. ಸ್ವಲ್ಪ ತಡೆದು "ಹಾಂಗಾರ ನನ್ನ ಮನ್ಯಾಗ ಯಾಕ ಇದೀ ನೀ?" ಎಂದು ಜಬರಿಸಿದ.

ತಾರಕ್ಕನಿಗೆ ಈಗ ತಾನು ಏನು ಮಾತಾಡಿದಳೆಂಬುದರ ಅರಿವು ಬಂದಿತು. ಕೂಡಲೆ ಹುಸಿ ಮಮತೆಯಿಂದ "ಇಲ್ಲದ ಒಂದ ಅಂದ ಹೊಲದಿಂದ

ಬಂದ ಕೂಡ್ಲೆ ಮನಸಿಗಿ ಹುರ ಹುರ ಹಚ್ಚಬ್ಯಾಡಿರಿ ತಾಯಿ ನೀವ. ನಾಲ್ಕ ದಿನಾ ಎಂಥಾ ಛಲೂ ಇರತೀರಿ, ಒಂದೊಂದ ದಿನಾ ಹಿಂಗ್ಯಾಕ ಮಾಡತೀರ್ಯೋ ಯಾನೋ! ಗಾಡಿ ತಗೊಂಡ ಕರೀಕ ಬರಲಾಕ ಅವರ್ಯಾರ ನನಗ ? ಅಂದರ ನಿಮದ್ಯಾನ ಹೋಯ್ತು ? " ಎಂದಳು. ಆದಷ್ಟು ಬೆಡಗಿನಿಂದ ಕೈ ಕಾಲಿಗೆ ನೀರುಕೊಡುತ್ತ, ಅಪ್ಪನ ಮುನಿಸು ಎಲ್ಲಿಯೋ ಮಾಯವಾಯಿತು. "ಅವರ ಕರೀಕ ಬರದಿರ ಬಿಡವಾರ ಯಾಕ ತಗೊ! ಈಗ ಎಲ್ಲೀ ಸೋದರಮಾವಾ, ಎಲ್ಲೇದ ಯಾನ ? ಯಾರ ಒಬ್ಬರ ಒಬ್ಬರ ಗುರುತಾ ಕುಡುಲ್ಲ. ಅವರ ಆಶಾ ಮಾಡಲಾಕ ನಮ್ಮ ಮನ್ಯಾಗ ಯಾನ ಕೊರತಿ ಆಗೀತಿ ? "

" ಯಾನ ಇಲ್ಲ ?" ಎಂದಳು ತಾರಾ. ಹೃದಯವೆಲ್ಲ ತೆರವಾಗುವಂತೆ ಕಾಯ್ದ ಉಸಿರೊಂದು ಅವಳ ಮುಖದಿಂದ ತನ್ನಿಂದ ತಾನೇ ಹೋಯಿತು.

ಹೊರಗಿನಿಂದ ಅಮ್ಮವ್ವ ಮೆಲ್ಲನೆ ಒಳಗೆ ಬಂದು " ನಮಗ್ಯಾನ ಕಡಿಮಿ ಇಲ್ಲ ಖರೇ. ಹೀಂಗ ಮಾಡೋದ ಅವರ ರೀತಿ ಯಾನಾ ? " ಎಂದು ಸ್ವಲ್ಪ ತಡೆದು " ಅಂವ ತಾರಾನ ಯಾನ ಕರೀಕ ಅಂತ ಬಂದಿಲ್ಲಾ ಯಾನ ಇಲ್ಲಾ. ಬರೀ ಕೊಳ್ಳಾಗಿನ ಏಕಸರಾ ಒಯ್ಯಾಕ ಬಂದಿದ್ದ ನೋಡು " ಎಂದು ಮಾತು ಮುಂದುವರಿಸಿದಳು.

"ಏಕಸರ ಎಲ್ಲೇದ ? " ಬೆರಗಿನ ಸ್ವರದಿಂದ ಕೇಳಿದ ಅಪ್ಪಣ್ಣ.

" ಹಿಂದಕ ಕಾರಣದಾಗ ಹಾಕೋಕ ಅಂತ ಕೊಟ್ಟಿದ್ದರು, ಅದ ಇನ್ನs ನಮ್ಮಲ್ಲೇನs ಇತ್ತು. ಎಷ್ಟು ದಿನಾ ಅಂತ ಇಟಗೊಂಡ ಕೂಡೋದಾ ಅಂತ, ಮೊನ್ನಿ ಬಂದಾಗ ನಾನs ಉಚ್ಚಿಕೊಟ್ಟೆನಿ, ಅವರದ ಅವರಿಗಿ " ಕೆರಳಿದ ಜೆಂಕಿಗೆ ನೀರು ಹೊಯ್ಯುತ್ತ ನುಡಿದಳು ತಾರಾ.

" ಅದಕ್ಕs ಕಾಣಸುದಲ್ಲ ಕೊಳ್ಳಾಗ ನಾಲ್ಕ ದಿನಾ ಎಲ್ಲೇರೆ ಹರದಿರ ಬೇಕು, ತಗದ ಇಟ್ಟಿದಾಳ ಅಂತ್ಯಾನ ನಾ. "

"ಎಲ್ಲೇದ ಹರೀತೇತಿ ? ಬಂದ ಇಸಗೊಂಡ ಹೋದ. ಪೋರಿ ಬಟ್ಟ ಗೊಳ್ಳಲೆ ಕೂತೇತಿ ಮೊನ್ನಿಂದು " ಎಂದು ಅಮ್ಮವ್ವ ಉರಿಗೆ ಊದಿದಳು.

"ನಿಮ್ಮ ತವರಮನ್ಯಾವರಿಗಿ ಅಷ್ಟ ಗತಿ ಇಲ್ಲಾಗಿತ್ತ್ಯಾನ ? ಮಂದೇದ ತಂದ ಹಾಕೋಲಾಕ ? " ಸಿಟ್ಟಿನಿಂದ ಕೇಳಿದ ಅಪ್ಪಣ್ಣ.

"ಇತ್ತ ಅವರದ್ಯ ಮನೇದ್ಯ ಇದ್ದಾಂಗ, ಈಗ ಇನ್ನ ಅವ್ವಾ ಮಾಡಿಸಿ ಕೊಟ್ಟ್ಯಾಳಲ್ಲ! ನಾವ್ಯಾನ ಅವರ ಗುಂಡಸರದ ಮ್ಯಾಲ್ಯ ಕೂತಿದೇವ ಯಾನ ?"

"ಇಲ್ಲ ; ನಿಮ್ಮ ಅವ್ವ ಮಾಡಿಸಿ ಕೊಡದಿದ್ದರೂ ನಾ ಮಾಡಸತ್ಯಾನ. ಅದ ಹೇಳಲಿಲ್ಲ ನಾ. ನಿಮ್ಮ ಮಾವ ಕೊಳ್ಳಾಗಿಂದ ಉಚಕೊಂಡ ಒಯ್ಯು ಹಾಂಗ ನಾವ ಯಾನ ಪತ್ರಗೇಡಿ ಇದ್ದ್ಯ ಯಾನಾ?" ಅವ್ವನ ಕಡೆಗೆ ಹೊರಳಿ "ನೋಡಲಾ, ಸೊಸೀನಾ ಉಡೀ ತುಂಬೋದ ಏತಿ ಅಂತ ಹೇಳೂ ನೆವನ ಯಾನ ಮಾಡಿದಾ, ಬಂದ ಏಕಸರಾ ಹ್ಯಾಂಗ ಓದಿದಾ, ಎಲ್ಲಾ ತುಡಗತನ ಬರಲಿ ಇನ್ನೊಮ್ಮಿ ಎಂಥಾವ ಇದಾ ನೋಡೂನು ?"

ಅವನ ಮಾತನ್ನು ನಡುವೆಯೇ ತಡೆದು "ಇನ್ಯಾತಕ ಏರತಾ ನಮ್ಮ ಕಟ್ಟಿ ಕಲ್ಲ ? ಅವರ ನಮ್ಮ ಮನೀಗಿ ಬರೋದ ಇಲ್ಲ, ನಾವ ಅವರ ಮನೀಗಿ ಅಂತೂ ಹೋಗೂದ ಇಲ್ಲ. ಯಾವಾಗ ಗಾಡಿ ಬರಲಿಲ್ಲಾ ಆಗ್ಯ ನಮ್ಮದಾ ಅವರದಾ ನೆಂಟತನ ಕಡದಂಗ ಆಯ್ತು" ಎಂದು ಅಂದಳು ಅಮ್ಮವ್ವ, ಮಧ್ಯಾಹ್ನದಿಂದಲೂ ನುಂಗಿಕೊಂಡ ಸಿಟ್ಟನ್ನು ಹೊರಗೆಡಹುತ್ತ.

ಇಷ್ಟೆಲ್ಲ ಮಾತುಗಳಲ್ಲಿ ಅತ್ತೆಯು ಈ ಕೊನೆಯ ಮಾತೇ ತಾರಕ್ಕನ ಹೃದಯವನ್ನು ನಡುಗಿಸಿತು. ಇಷ್ಟೇ ಅಲ್ಲ ; ಆ ದಿನ ರಾತ್ರಿ ಚೆನ್ನಾಗಿ ಊಟ ಮಾಡಲಿಲ್ಲ ಸಹಿತ. 'ತಾಯಿ ಲಗಮವ್ವ ನನಗ ಅನಂತನ ಮಾರಿ ಸುದ್ದಾ ನೋಡಬಾರದಂಗ ಮಾಡಿ ಇಡತಿ ಯಾನಾ ?' ಎಂದು ತಮ್ಮೂರ ದೇವಿಗೆ ಅರಿಕೆ ಮಾಡಿಕೊಳ್ಳದೆ ಇರಲಿಲ್ಲ, ಮನದಲ್ಲಿಯೇ.

ಮುಂದೆ ಕೆಲದಿನಗಳಲ್ಲಿ ರತ್ನವ್ವ ಮಗಳನ್ನು ನೋಡಿಕೊಂಡು ಹೋಗ ಲೆಂದು ಬಂದಳು. ಆಗ "ನೀನೂ ಇಂದಿರಾನ ಉಡೀ ತುಂಬಕ ಬರತೀ, ಇಬ್ಬರೂ ಅಲ್ಲೇ ಕೂಡೇವ ಅಂತ ಮಾಡಿದರ್ಯ ಅವರ ಗಾಡಿಗೋಳ ಲೈನಲೇನ್ಯ ಹೊಡೆದರ ತಾಯಿ ! ಈಗ ಮತ್ತೊಮ್ಮಿ ನಾ ಬರಬೇಕಾಯ್ತು" ಎಂದು ತಾನು ಇಷ್ಟು ದಿನ ತಡೆದು ಈಗ ಬಂದ ಕಾರಣವನ್ನು ಹೇಳಿದಳು ರತ್ನಾ.

"ಅವರ ಯಾನ್ಯಾನ ಮಾಡಿದರ ಅನಂತಗ ? ಇಂದಿರಾನ ಉಡೀ ತುಂಬಕ ಬಂದಾಗ ಎಷ್ಟು ದಿನಾ ನಿಂತಿದ್ದಿ ? ಕಾರಣ ಎಲ್ಲಾ ಛಲೂ ಆಯ್ತು? ಊರಾಗ ಅಪ್ಪಾ ಎಲ್ಲಾ ಛಲೂ ಇದಾ ?" ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆ ಗಳನ್ನು ಮಾಡಿದಳು, ತಾರಾ.

"ಇವರ ಯಾನ ರೂಪಾಯಿನ ಆಗಾವ ತಗೊಂಡೀರಂತ. ಅದಕ್ಕ ಆಯಾರ ಎಲ್ಲಾ ಸಾದಾನ ತಗೊಂಡೀರ. ಅವರಕ್ಕಿಂತ ನಿನ್ನ ಆಯಾರ್ಕ ನೆಟ್ಟಗ ಇತ್ತ ಇನ್ನ. ನಿನ್ನಾ ಇತ್ತ ಕರೀಕ ಬಂದ ದಿನಾನ್ಕ ನಾ ಅತ್ತ ಚಂದೂರಿನಿಂದ ಬಂದಿನ್ನೂ ; ಎಂಟ ದಿನಾ ನಿಂತ ಹೋದಿನಿ ಆಯ್ತು."

"ಎಂಥಾದ ಕರೀಕ ಬಂದಿದ್ದ ಏಳವ್ವ ! ಹಾದೀಲೆ ಹೋಗಾವರನ್ನ ಕರ ದಂಗ. ಕರೀಕ ಬರಾವರ ಹಾಂಗ ಬರತಾರು ? ಬಂದರ ಒಂದ ಮನಸದಿಂದ ಕರೀಕ ಬರಬೇಕ ಇಲ್ಲ, ಆದರ ತನ್ನ ಮನ್ಯಾಗ ಸುಮ್ನ ಇದ್ದಾರಾತ. ಯಾರದರ ಮಾರಿ ಒಡಿಸಿ ಇಡಾವರ " ಸಿಡುಕಿನಿಂದ ಅಂದಳು ತಾರಾ.

"ಅವನರ ಯಾನ ಮಾಡ್ಯಾನ ? ಎಲ್ಲಾರಿಗೂ ಒಂದೊಂದ ಬಂಡಿ ಎಲ್ಲಿಂದ ತಂದಾನು ? ನನಗೊಂದ ಬಂಡಿ ಹಚಗೊಟ್ಟಿದ್ದ. ನಿನಗ ಸಕ್ಕರಿ ಕೊಟ್ಟ ಹೇಳಿಹೋದರ ಹೋಗತಾ ಕರಕೊಂಡ ಹೋಗಕ ಬರತೇತಿ ಅಂತ ಮಾಡಿದ್ದ. ಆದರ ಅಂವ್ಕ ಹೇಳಾಂವ ಕೇಳಾವ್ಕ ಮನ್ಯಾಗ ನಿಂತ. ಹಾದ್ಯಾಗ ನಮ್ಮ ಹೆಂಗಸರ ಮಾತ ಯಾರ ಕೇಳತಾರು ? ಹುಯ್ಯ ! ಹುಯ್ಯ ! ಅಂತ ಮಾಡಿ ಗಾಡಿ ಓಡಿಸಿದು. ಎರಡ ಗಾಡಿ ಹೋದ್ವು, ಲೈನಲೆ ಮುಂದ. ನಮ್ಮ ಗಾಡಿ ಉಳೀತ ಹಿಂದ. ಸುಂದರವ್ವ ಒಂದೆರಡು ಸಾರೆ ಹೇಳಿ ಸುಮ್ಮನಾದಳು. ಸುಮ್ನ ಒಬ್ಬರಿಗಿ ಹೆಸರ ಇಡಬಾರದು. ಅನಂತ ಒಂದ ಮಾತ್ರ ಹೇಳಿ ಹೇಳಿ ಹಲ್ಲನುಚ್ಚ ಮಾಡಕೋತ. ಆದರ ಮುಂದಿನ ಗಾಡಿಗೋಳ ಮುಂದ್ಕ, ಹಿಂದ ಉಳದದ ಒಂದ್ಕ ಗಾಡಿ ಹ್ಯಾಂಗ ಬರೋದ ಅಡ್ನಾಡ ಹಾದೀಲೆ ?" ಎಂದು ರತ್ನವ್ವ ನಿಜಸ್ಥಿತಿಯನ್ನು ಹೇಳಿದಳು.

"ಎಲ್ಲಾರು ಶಾಣ್ಯಾರ ?" ಎಂದಳು ತಾರಾ.

ಇದೆಲ್ಲವನ್ನೂ ಕೇಳಿ ಆದೇಕೋ ಅಮ್ಮವ್ವ ಹೊರಗೆ ಎದ್ದು ನಡೆದಳು. ಹೋಗುವಾಗ "ಭಾಳ ದಿನಕ ಬಂದೀದಾಳ ರತ್ನಾ. ಅವ್ವಾ ಮಗಳಾ ಮಾತಾಡಿರವ್ವ ; ನಾ ಹೊರಗ ಹೋಗತ್ಯಾನು " ಎಂದಳು.

"ಆದ್ಯಾಕ, ಕೂಡಾಕ್ಕ ನಾವ್ಯಾನ ಅಂಥಾದ ಮಾತಾಡಾವರ ಇದೇವು?" ಎಂದು ರತ್ನವ್ವ ಕರೆದಳು.

ಆದಕ್ಕೆ ತಾರಕ್ಕ ಹೇಳಿದಳು : " ನಮ್ಮ ಅತ್ತಿ ಭಾಳ ಛಲೂ. ನಮ್ಮ ಕಡೆದವರ ಯಾರರ ಬರಾನ ಹೀಂಗ್ಕ ಬರೂತ ಕೈಲೆ ಬರತಾಳ. ನಾಲ್ಕ

ಮಾತ ಮಾತಾಡಿ ಉಣಕ ಮಾಡ ಅಂತ ಹೇಳಿ, ಹೊರಗs ಹೋಗತಾಳ. ಯಾನರ ಮಾತಾಡಕೋಲಿ ಅಂತ. ಹಿಂದಕ ಅಪ್ಪಾ ಬಂದಾಗೂ ಹೀಂಗs. ಅಪ್ಪಾ ಛಲೂ ಇದಾ ? ಅಂವಗ ನಾಲ್ಕ ದಿನಾ ರೊಟ್ಟಿ ?? ”

“ನೆರಮನ್ಯಾವರಿಗಿ ಮಾಡಿಕೊಡಕ ಹೇಳಿದ್ಯಾನು. ಸಂಜಿಕಿ ಅಕ್ಕಿಕಾಳ ಇಷ್ಟ ಹಾಕೋತಾ ತಾನs. ನೀನರ ಬಂಗಾರದಂಗ ಇದೀ ಅಲ್ಲ! ನಿಮ್ಮ ಅತ್ತಿ ಛಲೂ ಇದಾಳ ಹಾಂಗಾರ. ಯಾನ ಕಾಳಜಿ ಇಲ್ಲ.” ಸ್ವಲ್ಪ ಮಗಳನ್ನು ನಿರೀಕ್ಷಿಸಿ ನೋಡಿ “ಗಂಡ ಹ್ಯಾಂಗ ಇದಾನ ಬೇ ನಿನ್ನ ಗೂಡಾ ? ಛಲೂ ಇಲ್ಲಾ ? ಹೀಂಗ್ಯಾಕ ಆಗೀದೀ ಬೇ ಪೋರಿ ? ಮಾರಿ ಒಣಗಿದ ಭೆಂಡಿಕಾಯಿ ಆಗೀತಿ. ಮಾರಿಮ್ಯಾಲ ದೆಸೀನs ಇಲ್ಲ ! ಎಂಥಾ ಗಜ್ಜರಿ ತುಂಬಿನ್ಹಾಂಗ ಇರಾಕಿ ! ” ಎಂದು ಅಮ್ಮವ್ವ ಹೊರಗೆ ಹೋದಮೇಲೆ ಮರುಕದಿಂದ ಕೇಳಿದಳು ರತ್ನಾ.

“ಯಾನ ಇಲ್ಲs” ಎಂದು ಹೇಳಿ, ತಾರಕ್ಕ ಅವ್ವನಿಗೆ ಚಹಾ ಮಾಡಿಕೊಡ ಲೆಂದು ಎದ್ದು, ಮುಖ ಮರೆಮಾಡಿ ಕಣ್ಣೀರು ಒರೆಸಿಕೊಂಡಳು, ತಾಯಿಗೆ ಗೊತ್ತಾಗಬಾರದೆಂದು.

ರತ್ನವ್ವನೂ ಎದ್ದು ಮುಂದೆ ಬರುತ್ತ ಅಂದಳು: “ಅಂಥಾ ಕತ್ತರ್ಯಾಗ ಅಂದರ ಅಲ್ಲಿ ಹ್ಯಾಂಗ ಇದ್ದಿ ; ಇಲ್ಯಾನ ಆಗೀತಿ ಹೇಳಾಕ ಬೇ ? ಹೇಳಲ್ಲ ! ಆ ಚಹಾ ಯಾನ ಸುಡತಿ ಈಗ ಬಿಸಲಾಗ ! ” ಧ್ವನಿಯಲ್ಲಿ ಪ್ರಾರ್ಥನೆಯ ರೀತಿ ಯಿತ್ತು.

“ಕುಡೀ ಅಲ್ಲಾ ; ಮಾಡತ್ಯಾನು. ನಮ್ಮದೂ ಕುಡಿ ವ್ಯಾಳಿ ಆಗೀತಿ” ಎಂದು ಎಸರಿಡಲು ಹೋದಳೇ ವಿನಹಾ ಹೆಚ್ಚಿಗೇನೂ ಹೇಳಲಿಲ್ಲ.

ರತ್ನವ್ವ ಬಂದುದಕ್ಕೆ ತಾರವ್ವನಿಗೆ ಹಿಡಿಸಲಾರದಷ್ಟು ಹಿಗ್ಗು. ಅಪ್ಪಣ್ಣ ನಿಗೂ ಸಂತೋಷ. ಸಂಜೆಗೆ ಅತ್ತೆ ಬಂದಿದಾಳೆಂದು ಏನಾದರೂ ಸವಿ ಸವಿ ಅಡಿಗೆಮಾಡಲು ಹೆಂಡತಿಗೆ ಆಜ್ಞಾಪಿಸಿದ. ಆದರೆ ಅದೊಂದು ದಿನ ಅತ್ತೆ ತಂದ ಉಂಡಿ ಕೋಡಬಳೆ ಚಕ್ಕುಲಿ ಬುತ್ತಿರೊಟ್ಟಿ ಮೊದಲಾದವುಗಳು ಮನೆ ಮಂದಿಯೆಲ್ಲ ಎರಡು ಸಲ ತಿಂದರೂ ತೀರುವಂತಿರಲಿಲ್ಲ. ಆದುದರಿಂದ ಬಿಸಿ ಅನ್ನದ ಹೊರತಾಗಿ ಹೆಚ್ಚಿಗೇನೂ ಮಾಡಲಿಲ್ಲ ತಾರಾ. ಅತ್ತೆ ಹೇಳಿದ ಪ್ರಕಾರ ಆಚೆ ಈಚೆಯವರಿಗೂ ರತ್ನವ್ವ ತಂದ ಬುತ್ತಿರೊಟ್ಟಿಯನ್ನು ಸ್ವಲ್ಪ ಸ್ವಲ್ಪ

ಕೊಟ್ಟು ಬಂದಳು. ಬಹಳ ದಿವಸಕ್ಕೆ ಅತ್ತೆ ಬಂದವಳೆಂದು ಅಳಿಯ ನಾಲ್ಕು ದಿನ ನಿಲ್ಲಲು ಆಗ್ರಹಮಾಡಿದ. ರತ್ನವ್ವನೂ ಅಳಿಯನ ಮಾತು ಮೀರಿ ಹೋಗುವದೆಂತು ಎಂದು ನಿಂತಳು. ನಿಂತ ಮೇಲೆ ಸುಮ್ಮನೆ ಇರುವುದೇನು? ಮಗಳಿಗೆ ನೀರೆರೆಯಬೇಕು. ಬಹಳ ದಿನಗಳಿಂದ ನೀರೆರೆದಿಲ್ಲ; ಬೆನ್ನು ತಿಕ್ಕಿಲ್ಲ ಎಂದುಕೊಂಡು ಒಂದು ದಿನ ನೀರಿನ ವ್ಯವಸ್ಥೆಗೆ ತೊಡಗಿದಳು. ಅದನ್ನು ಕಂಡು ಅಮ್ಮವ್ವನು "ರತ್ನಾ, ನೀನೂ ಒಂದು ನಾಲ್ಕ ತಂಬಿಗಿ ಹಾಕ್ಕೊ, ಅಲ್ಲಿ ನಿನಗರs ಯಾರ ಹಾಕತಾರು ?" ಎಂದಳು.

"ನನಗ್ಯಾನ ಅಲ್ಲಿ, ಯಾರ ಬೇಕಾದವರ ಹಾಕತಾರ" ಸ್ವಲ್ಪ ತಡೆದು "ಊರಾಗಿನವರ ಆದಾರ ಹೋದಾರ ಅಂತ ಮಾಡಕ ಹೋದರ...." ಎಂದು ಮುಂದೆ ಮಾತಾಡಲು ಅನುಮಾನಿಸಿ ಅರ್ಧಕ್ಕೆಯೇ ತಡೆದಳು ರತ್ನಾ.

ಆದರೂ ಮುದುಕಿ ಅರ್ಥವನ್ನು ಗ್ರಹಿಸಿ, "ಈಗರ ಎಲ್ಲಿ ದೂರ ಇದಾಳ ತಗೋ ತಾಯಿ! ಊರಾಗ ಇದ್ದಾಂಗs ಅಂತ ತಿಳಕೋ ನಿನ್ನ ಮಗಳ. ನೀನs ಬರೋದ ಹೋಗೋದ ಜರಾ ಕಡಿಮಿ" ಎಂದು ಏನೋ ಧೇನಿಸಿ "ಹೋಂದs ರತ್ನಾ, ನಿನ್ನ ಅತ್ತಿಗಿ ಈಗ ಹ್ಯಾಂಗ ಇದಾಳ ಆ ಸೊಸೀಗೂಡಾ?" ಎಂದು ಕುತೂಹಲದಿಂದ ಕೇಳಿದಳು.

"ಸುಡ, ಆ ಅತಗೀನಾ ಓದ, ಮದವಿ ಆದ ನಾಲ್ಕ ತಿಂಗಳ ಛಲೂ ಇದ್ದಾಂಗ ಮಾಡಿಳು ಮತ್ತ ಏತೆದ ಏತ್ಯಲ್ಲ. ಮೊಂಡಗ್ಯಾಲೆ ಮೊಳಾ ಹಾಕೋದ ಆಕೀ ಸ್ವಭಾವ."

"ಹಿಂಗ್ಯಾಕ ಮಾಡತಿದ್ದಾದೋತು ?"

"ಯಾನ ತಿಳೀದುಲ್ಲವ್ವ ಆಕೇದ. ಮನ್ಯಾಗ ಯಾರ ಬ್ಯಾಡ ನೋಡ ಆಕೀಗಿ! ತಾನs ತಾ, ಮಗಾನs ಮಗಾ, ಇರಕಬೇಕ."

"ಹಾಂಗಾರ ಮಗ್ಗ ಮದವಿ ಯಾಕ ಮಾಡಬೇಕ ?"

"ಯಾರ ಕೇಳವರವ್ವ ಆಕಿಗಿ ?" ಎಂದಳು ತಾರಾ.

"ಕೇಳ್ಯಾರ ತಗೋ ಇನ್ನ! ನಾವ ಒಳಗಿನಕ್ಕಿ ಅಂತ ಎಲ್ಲಾ ನುಂಗಿ ಕೊಂಡ ಸುಮ್ಮ ಇದ್ದ್ವಿ; ಅವರ ಯಾಕ ಸುಮ್ಮ ಇದಾರು? ಈಗs ನೋಡ. ಮೊನ್ನಿ ಹಾಲ ಹಾಕೊಂಡ ತಿಂದಳಂತ ಸೊಸೀ, ಜರಾ ವಾಸ್ಯಾಡಿದಳ,

ಚಿಮ್ಮಾ: ಹಬ್ಬಕ ಅಂತ ತವರಮನೀಗಿ ಹೋದಾಕಿ ತಿರಗಿ ಬಂದಿಲ್ಲ. ಆಕೀ ಮಗದುಮರ ಹತ್ತಿದಾರ ಆಕ್ಕೋ ಅಲ್ಲಿ? ಮೂರ ಮೂರ ಸಾರೆ ಕರೀಕ ಹೋದರ ಅವರ್ಾ್ಯನ ಹಚಕುಡವಾರು. ಮ್ಯಾಲಿ ಈಕಿ ಮಗಳಿಗಿ ಹೆಜ್ಜೆಗೊಮ್ಮಿ ಹಂಗಸತಾರು. ಹಂಗಣಿ ತಾಳಲಿ ಅಲ್ಲಾ ಇಕ್ಕಿ ಮಗಳ!"

"ಭೀಮ್ಯಾಗ ಹೋಗಿ ಡೊಗ್ಗ ಅನ್ನಲಾ ಅಲ್ಲಿ?" ಎಂದಳು ತಾರಾ.

"ನಾವ್ಯಾದಕ ಅನಕಬೇಕು? ಊರಾಗ ಮಂದೇ ಛೀ ಹಾಕತಾರ ಸಾಕಲ್ಲ; ಈಗ ಚಿಮ್ಮಾಗಾ ಅಂವಗಾನೂ ನೆಟ್ಟಗಿಲ್ಲ."

"ಪೋರಿನಾ ಹಚಕುಡಕ ಯಾನ ಅಂತಾರಂತ ಅವರಾ?" ಅಮ್ಮವ್ವ ನಡುವೆಯೇ ಪ್ರಶ್ನೆ ಮಾಡಿದಳು.

"ಬ್ಯಾರೇ ನಿಂತರ ಹಚಕುಡತೇವು; ಇಲ್ಲಾದರ ನೀನ್ಯ ಇಲ್ಲಿ ಬಂದ ಹೋಗಿ ಇರ ಅಂತಾರಂತ ಅಳ್ಯಾಗ."

"ಹುಡಗ್ಗ ಎಲ್ಲಾ ಬಿರೀನ ಅಲಾ?"

"ಯಾತರ ಬಿರೀ! ಹೋಗಿ ನಿಲ್ಲಬೇಕು; ಇಲ್ಲಾದರ ಅವ್ವನ ಬ್ಯಾರಿ ಇಡಬೇಕು. ಎರಡೂ ಬ್ಯಾಡಾಗಿರ ಹ್ಯಾಂತಿ ಒಲ್ಲಿ ಅಂತ ಬಿಟ್ಟಕೊಡಬೇಕು! ತಿಳೀದುಲ್ಲ ಇಂವಗಾ? ಇನ್ನ ಯಾನ ಸಣ್ಣಾವ?"

ರತ್ನವ್ವನ ಈ ಮಾತು ಅಮ್ಮವ್ವನಿಗೆ ಸೇರಲಿಲ್ಲ. ಒಂದು ಕ್ಷಣ ಅವಳ ವಿಚಾರಸರಣಿಯೇ ಬೇರಾಯಿತು. "ನಾಳಿ ರತ್ನವ್ವ ನನಗೂ ಹಿಂಗ್ಯ ಅಂದರ?" ಎಂಬ ಪ್ರಶ್ನೆಯೊಂದು ಮೂಡಿ ಮೊಳಗಹತ್ತಿತು, ಆ ಬಡಕಾದ ಹೃದಯುದ ಗೂಡಿನಲ್ಲಿ.

"ನಿನಗೂ ಒಂದ ಯಾಡ ತಂಬಿಗಿ ನೀರ ಹಾಕತ್ಯಾನಲಾ?" ಎಂಬ ರತ್ನವ್ವನ ಮಾತು ಅದನ್ನು ನಿಲ್ಲಿಸಿತು.

"ನನಗ ಯಾತಕ ತಗೋ! ನಿನ್ನ ಮಗಳಿಗೇ ಹಾಕ. ಎಂದ ಬರೂದುಲ್ಲ ನೀ!" ಎಂದು ಸ್ವಲ್ಪ ಬಿಗುವಿನಿಂದಲೇ ಅಮ್ಮವ್ವನ ಬಾಯಿಂದ ಮಾತು ಹೊರಬಿತ್ತು.

"ಬರಬೇಕ ಬರಬೇಕ ಅಂತ್ಯಾನ ಖರೇ. ಮನೀ ಬಿಟ್ಟ ಎಲ್ಲಿ ಬರಲಾಕ ಆಗತೇತೀ?"

"ಅದಕ್ಕs ನಿಮಗ ಆಗೂದುಲ್ಲ ಅಂತ ನಾನs ತಾರಕ್ಕನ ಮೈಯಾ ಬೆನ್ನಾ ತಿಕ್ಕಿ ಜ್ವರ ಹೊರಗ ಆದಾಗ ನೀರ ಹಾಕತ್ಯಾನ. ನೀರ ಕಾಸಿ ಎಲ್ಲಾ ಆಕಿ ಗಂಡ ತಯಾರ ಮಾಡಿ ಬಚ್ಚಲ ಹತ್ರ್ಯಾಕ ತಂದ ಇಡತಾ ಅಂದರ, ನಾ ಎರಿತ್ಯಾನ. ಕೇಳಕೋ ಬೇಕಾದರ ನಿನ್ನ ಮಗಳಿಗಿ" ಎಂದಳು ಹಳೆಯ ಕಾಲದ ಮುದುಕಿ ಅಮ್ಮವ್ವ.

"ಅಯ್ಯ! ಕೇಳಲಾಕ ಯಾನ? ನಿನಗ ಮಗಳ ಅಂದರೂ ಆಕೆ, ಸೊಸೀ ಅಂದರೂ ಆಕೇ. ಬ್ಯಾರೆ ಯಾರ ಇದಾರು?" ತಾರಕ್ಕನ ಕಡೆಗೆ ಹೊರಳಿ "ನೀನೂ ತಿಂಗಳಿಗಿ ಮೂರೆಂಟ ದಿನಕಾ ನಿಮ್ಮ ಅತ್ತಿಗಿ ನೀರ ಹಾಕತಾ ಬಾ. ಹಣ್ಣ ಮುದಿಕೀ ಸೇವಾ ಮಾಡೋದ ಅಂದರ ದೇವರ ಸೇವಾ ಮಾಡಿದಂಗ. ಆಕಿ ಪುಣ್ಯೇಲೆ ನಿನಗ ನಾಲ್ಕ ಮಕ್ಕಳಾ ಮರೀ ಆದಾವ!" ಎಂದು ಉಪದೇಶಿಸಿ ದಳು ರತ್ನಾ.

"ಅದs ಬೇಡಕೋತ್ಯಾನ ತಾಯಿ, ದ್ಯಾವರ ಹತ್ರ್ಯಾಕ!" ಎಂದು ಮುಗಿಲ ಕಡೆಗೆ ನೋಡಿ ಮುದಿಕೆ ಕೈಮುಗಿದು, "ಹಿಂದಕ ಎರಡ ತಿಂಗಳ ಆದಾಗಾ ಹಿರಿಹೊಳೀ ಏರಿದಂಗ ಹಿಗ್ಗಿ ಹಿಂದಕ ಬಿದ್ದಿನವ್ವ! ಆದರ ಸುಳ್ಳಾಯ್ತು! ಈಗರ ಯಾನ ಆಗತೇತಿ ನೋಡಬೇಕು! ದೇವರ ದಯಾನs, ನನಗ್ವರ ವಿಶ್ವಾಸ ಹತ್ತೂದಲ್ಲ. ನಮ್ಮ ಮನ್ಯಾಗ ಬಂದಾಗಿಂದೂ ಪೋರೀ ಮೈಯ್ಯs ಒಣಗಲಾಕ ಹತ್ತೇತಿ. ಮನ್ಯಾಗ ತಿನಕಾ ಉಣಕಾ ಯಾನ ಕಡಿಮಿ ಇಲ್ಲ. ಬೇಕಾದಷ್ಟ ಏತಿ. ಅದರಾಗ ಆಕಿನs ಹಾಕಾಕಿ ತಗ್ಯಾಕಿ, ಎಲ್ಲಾ ಆಕಿ ಕೈಯಾಗ ಕಾರಭಾರ. ಬೇಕಾದ ತಿನ್ನಲಿ ಬೇಕಾದ ತೊಟಕೋಲಿ!"

"ನಿಮ್ಮ ಪುಣ್ಣೇದಿಂದ ಎಲ್ಲಾ ಛಲೂ ಏತೀ, ಹುಡುಗುರ ಅಪ್ಪ ಲಗೂ ಆದರ ಆಯ್ತು ಕಾಲಾಗ ಕೈಯಾಗ."

ಆ ದಿನ ರತ್ನವ್ವ ಮಗಳಿಗೂ ಬೀಗತಿಗೂ ಎಣ್ಣೆ ಹೂಸಿ ನೀರೆರೆದಳು. ಮರುದಿನ ಬೇಡಬೇಡವೆಂದರೂ ತಾರಕ್ಕ ಕೇಳದೆ ನೀರಿಟ್ಟು ತಾಯಿಗೆ ಎರೆದಳು. ನೀರೆರೆದುಕೊಂಡವರೆಂದು ತಾಯಿ ಮಗಳು ಒಳಗೆ ಮಲಗಿದರು. ಅತ್ತೆ ಬಂದಾಗಿನಿಂದ ನಾಲ್ಕು ದಿನ ಅಪ್ಪಣ್ಣ ಹೊರಗೆ ಯಾತದ ಬಾರಿಯ ಮೇಲೆ ಮಲಗುತ್ತಿದ್ದ. ರಾತ್ರಿ ಬಹಳ ಹೊತ್ತಿನವರೆಗೆ ತಾಯಿ ಮಕ್ಕಳು ಮಾತಾಡು ತ್ತಲೇ ಇರುತ್ತಿದ್ದರು. ಹೊರಗೆ ಮಲಗಿದ ಅಮ್ಮವ್ವನಿಗೆ ಕೇಳಬರುತ್ತಿತ್ತಾದರೂ

ಮಾತು ಸ್ಪಷ್ಟ ತಿಳಿಯುವಂತಿರಲಿಲ್ಲ. "ಅವ್ವಾ, ಮಗಳಾ ಭಾಳ ದಿನಕ ಕೂಡಿದಾರು, ಯಾನರ ಮಾತಾಡತಿರಬೇಕು" ಎಂದುಕೊಂಡು ಅವಳೂ ಬೇಗ ನಿದ್ದೆ ಹೋಗುವಳು. ತಿರುಗಿ ಎಚ್ಚರಾದರೂ ಇವರ ಮಾತು ಮುಗಿಯುತ್ತಿರಲಿಲ್ಲ. ಒಂದು ದಿನ ಬೆಳತನಕ ತಾಯಿ ಮಕ್ಕಳಿಗೆ ನಿದ್ದೆಯೇ ಇಲ್ಲ. ಆ ಮಾತು ಈ ಮಾತು ಆಡುತ್ತ ಕೊನೆಗೆ ರತ್ನವ್ವ ಕೇಳಿದಳು: "ಈಗ ನಿನ್ನ ಗಂಡ ಊರಾಗ ಹೋಗತಾ ಯಾನ ಯಾವಾಗರೆ?"

"ಹೋಗುದುಲ್ಲಾ, ಬಿಡೂದುಲ್ಲಾ. ಆದರ......."

"ಹೀಂಗ ಏತಿ ಅಂತ ನಮಗ ಮೊದಲ ಗೊತ್ತ ಆಗಲಿಲ್ಲ ತಾಯೀ! ಕೆಸರದಾಗಿನಿಂದ ಜಾರಿ ಬಚ್ಚಲಾಗ ಬಿದ್ದಾಂಗ ಆಯ್ತು! ಎಷ್ಟ ಆದರು ಹೊರ ಛಂದಿನ ಮನಸ್ಯಾ ಅಂದರ ಬ್ಯಾಡೇನ!"

"ಮನಸಿಗಿ ಬಂದದ ಗಂಡ ದೊರೀಲಾಕ ದೇವರ ಹತ್ತ್ಯಾಕ ಬೇಡಿ ಬರಕ ಬೇಕಲ್ಲ!" ಎಂದಳು ತಾರಾ.

ಮಗಳ ಈ ಮಾತು ರತ್ನವ್ವನ ಎದೆಗೆ ಬರೆಕೊಟ್ಟಂತಾಯಿತು. ಇದಕ್ಕೆ ಹೇಳಬೇಕೇನೆಂಬುದು ಅವಳಿಗೆ ಹೊಳೆಯಲಿಲ್ಲ. ಕೆಲಹೊತ್ತು ಇಬ್ಬರೂ ಮೌನವಾಗಿ ಮಲಗಿದ್ದರು. ತಾರಕ್ಕನ ಕಣ್ಣುಗಳಿಂದ ಎರಡು ಹನಿಗಳು ಅವಳ ಗಲ್ಲದ ಮೇಲೆ ಉರುಳಿದುವು. ರತ್ನವ್ವ ಅವುಗಳನ್ನು ಒರೆಸಿ, ಬಿಗಿದು ಬಂದ ಕಂಠದಿಂದ "ಯಾಕ? ಮನಸ್ಯಾರಽ ನೆಟ್ಟಗ ಇದ್ದಾಂಗ ಕಾಣಸತಾನಲ್ಲ! ಮತ್ತ ಹತ್ತ ಮಂದಿ ಇರವಲ್ಲರು. ನಿನ್ನ ಗೂಡಾ ಛಲೂ ಇದ್ದರ ಸಾಕಲ್ಲ. ಗನಸಗ ಯಾನ ಕಟ್ಟಾ ಕಾವಲಾ ಏತಿ?" ಎಂದಳು ರತ್ನಾ, ಮಗಳ ನಿಜಮನವನ್ನರಿಯದೆ.

"ಗಂಡಸರಿಗಿ ಕಟ್ಟಾ ಕಾವಲಾ ಇಲ್ಲಂತಽ ಹೀಂಗ ಆಯ್ತಲ್ಲ!"

"ಯಾನಾಯ್ತು? ಆಕಿನಾ ಸಂಬಾಳಿಸಿಕೊಂಡಽ ಇರೋದ ನೋಡ ನೀ. ಬರಾನ ಬಾರವ್ವ, ಯಾಕವ್ವ ಅಂದರ ಆಯ್ತು. ನಿಂದ್ಯಾನ ಆಕಿ ತಗೊಂಡ ಹೋಗೂದುಲ್ಲ. ಅಂವಗಽ ಬೇಕಾಗಿದಾಳ ಅಂದ ಮ್ಯಾಲ, ನಿನಗೂ ಬೇಕಽ ಅಲ್ಲ?"

"ಬೇಕಲ್ಲ! ಕರಿಕ ಕಳಿಸಿದ್ರೂ, ಆಕಿನ ಬರಲಿಲ್ಲ. ಆದಕ ನಾವ್ಯಾನ ಮಾಡೂಣು? ಪೋರೀ ಒಂದ ಬರತೇತಿ; ಈಗ ನಾಲ್ಕ ದಿನಾ ಆಯ್ತ ಬಂದಿಲ್ಲ. ಎಲ್ಲಿ ಊರಿಗಿ ಹೋಗಿತಿ ಅಂತ."

"ಹ್ಯಾಂಗ ಏತಿ ಪೋರೀ ? ಯಾನ ಛಲಊ ಏತ್ತ್ಯಾನ ?"

"ಛಲಊನ ಇದಾಳಲ್ಲ, ಒಳ್ಳೇ ಬೆರಕಿ ಏತಿ. ಹುರದ ಬಿತ್ತಿರ ತರದ ನಾಟೂ ಅಂಥಾದ! ನಾ ಮೊದಲ ಯಾನರ ಕೊಟ್ಟರೂ ತಿನತಿರಲಿಲ್ಲ. ಈಗೀಗ ಎಲ್ಲಾ ತಿನತೇತಿ. ಯಾನರ ಬೇಕಾದರ ಹಟಾಮಾಡಿ ಹಡ್ಡಾಬಡದ ತಗೋತೇತಿ. ಒಂದ ದಿನಾ ಬರದಿದ್ದರ ನಮಗೂ ಹೋಗುದುಲ್ಲ ಹೊತ್ತ. ಬುಲು ಬುಲು ಯಾನ ಛಂದ ಮಾತಾಡತೇತಿ ಅಂತೀ!"

"ನಮಗೂ ಕಾಲಾಗ ಕೈಯಾಗ ಹುಡಗೂರ ಇಲ್ಲ ಆಗಿದಾವ ತಾಯೀ!"

"ಹುಡುಗುರ ಹುಟ್ಟಿ ಅವ್ವ್ಯಾನ ಸುಖಾ ಬಳಕೋಳೋವ ಇದಾವ ತಗೊ!" ಈ ವಿಷಯದಲ್ಲಿಯೂ ಮಗಳ ನಿರಾಶೆಯನ್ನು ಕಂಡು ರತ್ನವ್ವ ಬಹಳ ಕೊರಗಿದಳು. ಅವಳ ಬಗೆಗಣ್ಣಿನೆದುರಿಗೆ "ನಮಗ ಇಕ್ಕಿ ಒಬ್ಬಾಕೀ ಹುಟ್ಟಿದಳು. ಇಕೀಗಿರ ನಾಲ್ಕ ಮಕ್ಕಳ ಆದಾವು. ನಾವೊಂದ ಓದ ಇಟಗೊಂಡೇವ. ಅವರಲ್ಲೆ ಒಂದೆರಡ ಇದ್ದಾವ ಅಂದರ ಮಕ್ಕಳ್ಕ ಲಗೂನ ಆಗವಲ್ಲು, ಒಂದ ಮನೀ ಬಿಟ್ಟ ಎರಡನೆ ಮನ್ಯಾಗ ಕೊಟ್ಟರೂ" ಎಂದು ತಾರಕ್ಕನ ಮೊದಲಿನ ಮದಿವೆ ಹಿಡಿದು, ಇಲ್ಲಿಯವರೆಗಿನ ತಮ್ಮ ಬಯಕೆ ಅವಳ ಬಾಳು ಎಲ್ಲ ಚಿತ್ರಿತವಾಯಿತು. ಕೊನೆಗೆ "ಎಲ್ಲೀರೆ ಕೇಳ್ಯರ ನೋಡತ್ಯಾನ ತಾಯೀ! ನಿನ್ನ ವಾರಿಗ್ಯಾವರ ಎಲ್ಲಾ ನಾಲ್ಕ ನಾಲ್ಕ-ಹಡದರು ಮತ್ತ. ನೀ ಹಾಂಗs ಕೂತಿದಿ" ಎಂದಳು.

"ಯಾರನ ಕೇಳಕ ಯಾತಕಬೇಕು? ಇಲ್ಲಿ ತಾನs ಓ ಅನತೇತಿ ಅಲ್ಲಾ!"

"ಯಾನ ಓ ಅನತೇತಿ?" ತಾರಕ್ಕನ ಮುಖದ ಕಡೆಗೆ ಆತುರದಿಂದ ನೋಡುತ್ತ ಕೇಳಿದಳು ರತ್ನಾ.

"ನಿನಗ ತಿಳಿದುಲ್ಲಾ ?"

"ಇಲ್ಲ; ನನಗ್ಯಾನ ತಿಳ್ಯೋದ ?"

"ಈಗ ಮತ್ತ ದೀಡ ತಿಂಗಳ ಆಯ್ತು, ಮುಡಚೋಟ ಆಗಿಲ್ಲಾ!"

ರತ್ನವ್ವ ಸ್ವಲ್ಪ ಪುಳಕಿತಳಾದಳು. ತಾರಕ್ಕನನ್ನು ತಬ್ಬಿ "ಸುಳ್ಳs ಹೇಳತಿ ಯಾನ ಜೇ ? ಖರೇನ ಯಾನ ದೀಡ ತಿಂಗಳ ಆದು ?" ಎಂದಳು. ಧ್ವನಿಯಲ್ಲಿ ಸಂತಸ ಜೆರೆತಿತ್ತು.

"ಸುಳ್ಳಲ್ಲ ; ಮುಡಚೋಟ ಆಗಿಲ್ಲ ಇದ ಖರೇನ" ತಾಯಿಯ ಸಂತಸದಲ್ಲಿ ವಿಷ ಬೆರಿಸಬೇಕಾಗುವದೇನೋ ! ಹೇಳಲೋ ಬೇಡೋ ಅನ್ನುತ್ತಿರುವಲ್ಲಿ ಮಾತು ಅವಳ ಬಾಯಿಂದ ಹೊರಬಿತ್ತು.

"ಅದ್ಯಾನ ಮುಚ್ಚತೇತಿ ಯಾನ ಬೇ? ಅದರ ಚಿನ್ಹ ಯಾನ ತಿಳಿದುಲ್ಲ?" ಸ್ವಲ್ಪ ಹೊತ್ತು ಸುಮ್ಮನಿದ್ದು "ತಿಳೀತೇತಿ ಅಲ್ಲ ; ಇನ್ನೊಂದ ತಿಂಗಳ ಹದನದಿನದಾಗ ಮುಡಚೋಟ ಆಗಾನಾ" ನೊಂದು ಅನುಮಾನಿಸುತ್ತ ನುಡಿದಳು, ತಾರಾ.

"ತಾರಾ !"

"ಯಾನಾ ?"

"ಎಲ್ಲಾ ಬಿಚ್ಚಿ ಹೇಳೂದುಲ್ಲ ಯಾಕ ? ನಿಂದ ಯಾನೂ ನನಗ ತಿಳಿದುಲ್ಲ ನೋಡ ತಾಯಿ ! ಮಕ್ಕಳ ಆದಾವ ಅಂತ ನಾವ ಮುಗಿಲ ನೀರಿಗಿ ಬಾಯಿ ತೆರಕೊಂಡ ನಿಂತಿದೇವು ; ಹನ್ನಾ್ಯಡ ದೇವರಿಗಿ ಹರಕಿ ಹೊತ್ತಿದೇವು ; ಯಾನರ ಒಂದ ಕೇಳಕ ಬರಾನ ನೀ ಹೇಳೂದುಲ್ಲ."

"ಯಾನ ಹೇಳಲಿ ?"

"ನಿನಗs ಗೊತ್ತ ತಾಯಿ !"

"ನನಗ ಗೊತ್ತ ಆದರ...." ಎಂದು ತಾರಕ್ಕ ಮುಖದಿರುವಿ ಮಲಗಿದಳು. ತಾರಕ್ಕ, ತಾನು ನೊಂದುಕೊಳ್ಳುವೆನೆಂದು ಏನೋ ಮುಚ್ಚಿಡುತ್ತಿದ್ದಾಳೆಂದು ರತ್ನವ್ವ ಅರಿತುಕೊಂಡಳು. ಆಗ ಅವಳಿಗೆ ಬಹಳ ದುಃಖವಾಯಿತು. ಇದ್ದ ಒಬ್ಬಳೇ ಮಗಳ ಗತಿ ಹೀಗೆ. "ಮೊದಲ ಒಳಗಿನವರ ಅಂತ ಅಲ್ಲಿ ಕೊಟ್ಟಿರ ಸುಖಾ ಆಗಲಿಲ್ಲ. ಇದೂ ಇಂಥಾದ ಗಂಟಬಿತ್ತು !" ಎಂಬ ಮರುಕದಲ್ಲಿ ಬೆಳತನಕ ಕಣ್ಣಿಗೆ ಕಣ್ಣೇ ಹತ್ತಲಿಲ್ಲ ಅವಳಿಗೆ.

ಮರುದಿನ ಮುಂಜಾನೆ ರತ್ನವ್ವ ಅಳಿಯನನ್ನು ಕರೆದು "ಬಂದ ನಾಲ್ಕೈದ ದಿನ ಆಯ್ತು ; ನಾ ಇನ್ನ ಊರಿಗಿ ಹೋಗತ್ಯಾನು" ಎಂದು ಹೇಳಿದಳು.

"ಇನ್ನೊಂದ ಎರಡ ದಿನಾ ನಿಂತ ಹೋಗಲ್ಲ !" ಎಂದ ಅಪ್ಪಣ್ಣ.

"ಬ್ಯಾಡ ; ಮನ್ಯಾಗ ಎಮ್ಮಿ ಏತಿ, ಹಾಲ ಕುಡೋದ. ಧಾರೀ ತಗೀಕೂ ಬೇಕ. ಹೊಲಕ ಹೋಗಕೂ ಬೇಕ. ಮನ್ಯಾಗ ಒಬ್ಬs ಯಾನ ಮಾಡಾಂವ ? ಮಳಗ್ಯಾಗ ತಂಬಾಕ ಕೊಯೀಕ ಬಂದೇತಿ. 'ನಿಸಿದ್ದಿ' ಹೊಲದ

ತೆನೀ ತಂದ ಒಗದಿದೇವು. ಇನ್ನಽ ರಾಶೀಮಾಡಬೇಕು. ಎತ್ತಗೋಳ ಸಿಗುದುಲ್ಲ. ಆನಕ ನಾಲ್ಕ ದಿನಾ ಇತ್ತ ಬಂದರ ಹೋಗಬೇಕಂತ ಬಂದೀನು. ಸುಗ್ಗೀ ದಿನದಾಗ ನಿಲ್ಲಕ ಹ್ಯಾಂಗ ಆದೋತು?" ಎಂದು ಅಳಿಯನನ್ನು ಸಮಾಧಾನ ಪಡಿಸಲು ಯತ್ನಿಸಿದಳು.

"ಹಾಂಗಾದರ ನಾನಽ ಬರತ್ಯಾನ ನಡೀ ನಾಲ್ಕ ದಿನಾ, ಎತ್ತಾ ಗಾಡಿ ತಗೊಂಡ ರಾಶಿಮಾಡಿಕೊಟ್ಟಬರತ್ಯಾನು."

ರತ್ನವ್ವ ಸ್ವಲ್ಪ ಬೆರಗುಗೊಂಡಳು. ಇನ್ನೂ ಅಳಿಯ ಹೊಸದಾಗಿ ಮನೆಗೆ ಬಂದು ಹೋಗಿಲ್ಲ. ಖರ್ಚಿಗೇನು ಮಾಡಬೇಕು ? ಎಂಬ ವಿಚಾರವೂ ಅವಳ ಮನದಲ್ಲಿ ಬಂದಿತು. ಆದರೆ ಅಳಿಯನೇ ಬರುವೆನೆಂದ ಮೇಲೆ ಬೇಡ ಅನ್ನುವುದು ಹೇಗೆ ಎಂದುಕೊಂಡು "ನಡೀ ಎರಡ ದಿನಾ ನಿಂತ ಬರಾಕೇ ಅಂತ. ನಮಗ್ಯಾನ ಯಾರರ ಮಾಡಿಕೊಟ್ಟರ ಸಾಕಾಗೇತಿ. ಆದರ ನಿಮಗ ಹ್ಯಾಂಗ ಬರಾಕ ಆದೋತು, ಮಳಾ ಮಟ್ಟ ಬಿಟ್ಟ ?" ಎಂದಳು.

"ಈಗ ಇಲ್ಲಿರ ಯಾನ ಏತಿ ? ಅಡವಿ ಕೆಲಸಾ ಸಿದ್ದ ನೋಡಕೋತಾ. ನಮದ ಮಟ್ಟ ನಾಲ್ಕ ದಿನಾ ಇಲ್ಲ. ಸಿನ್ನೇರೆ ಬಾಳಿ ಗಿಡಕ ನೀರ ಬಿಟ್ಟದೇವು. ಅಲ್ಲಿ ತನಕಾ ಮತ್ತ ತಿರುಗಿ ಬರತ್ಯಾನು."

ಈಗ ರತ್ನವ್ವನ ಮನದಲ್ಲಿ ಮತ್ತೊಂದು ವಿಚಾರದ ತೆರೆಯೆದ್ದಿತು. 'ಊರಾಗಿನವರ ಆದಾರ ಹೋದಾರ ಅಂತ ಮಗಳನ ಕೊಟ್ಟರ ಆಕಿ ಹಾಂಗ ಮಾಡಿಳು. ಇಂವ ತಾನ ಬಂದ ಮಾಡತ್ಯಾನ ಅಂತಾ, ಬರಲಿ ಅಲ್ಲಾ. ಅವರ ಮೂಗಿನ ಮ್ಯಾಲ ಕಟಿಯೂ ಹಂಗ' ಎಂದು. ಅದಕ್ಕಂತಲೇ "ಹಾಂಗಾರ ಇಂದಽ ಹೋಗುಣು ನಡಿ" ಎಂದು ಮನ ಸಡಿಲು ಬಿಟ್ಟು ಹೇಳಿದಳು ರತ್ನಾ.

ಊಟ ಆದನಂತರ ಅಪ್ಪಣ್ಣ ಪೆಟ್ಟಿಗೆಯೊಳಗಿಂದ ಹೊಸ ಸೀರೆಯೊಂದನ್ನು ತೆಗೆದಿಟ್ಟ. ಮುದುಕಿ ಅಮ್ಮವ್ವ "ಸಂತಿಗಿ ಹೋಗಲಾಕ ಆಗಲಿಲ್ಲಾ ; ಮಳದಾಗ ಇದೇವು. ಊರಾಗ ಅರಿವಿ ಅಂಗಡಿಗೋಳ ಇಲ್ಲ. ಮನ್ಯಾಗ ಏತಿ ಇದಽ ; ಉಟಗೊಂಡ ಹೋಗು" ಎಂದು ಹೇಳಿದಳು.

"ಯಾತಕ ಈಗ ; ಮತ್ತ ಯಾವಾಗರ ಬಂದಾಗ ಉಟಕೊಂಡು ಹೋದ್ಯಾನಂತೆ."

"ಮತ್ತ ಬಂದರ ಮತ್ತ ಉಟಕೊಂಡ ಹೋಗೋದಾ, ಈಗ್ಯಾನ ಆದಕ" ಎಂದು ಅಪ್ಪಣ್ಣ ಒದರಿ ಹೇಳುತ್ತ ಒಳಗೆ ಬಂದ.

"ನಿಮ್ಮ ಪುಣ್ಣೇದಿಂದ ಯಾನ ಕಡಿಮಿ ಇಲ್ಲ. ಕಾರಣಕ ಬಂದಾಗನೂ ಉಟಗೊಂಡ ಹೋಗಿಲ್ಲ. ಆಗಲಿ ಒಮ್ಮಿ ಹೊಸಾದ ಹಳೇದ" ಎಂದು ಆಗ್ರಹ ದಿಂದ ಅಮ್ಮವ್ವ ಉಡಿಸಿಯೇಬಿಟ್ಟಳು.

ರತ್ನವ್ವನೂ ಆನಂದದಿಂದ ಸೀರೆ ಉಟ್ಟು ಸಿದ್ಧಳಾದಳು. ಹೊರಗೆ ಸಿದ್ದ ಬಂಡೀ ಹೂಡಿ ಸಿದ್ಧಪಡಿಸಿದ್ದ. ಅಪ್ಪಣ್ಣನೂ ಹೊಸ ಅಂಗಿ ಪಟಕೆ ಹಾಕಿಕೊಂಡು ಸಿದ್ಧನಾಗಿ ಬಂಡಿಯಲ್ಲಿ ಬಣ್ಣದ ಬಾರಕೋಲು ತಕ್ಕೊಂಡು ಕುಳಿತ. ತಾರಕ್ಕ ಗಂಟು ತಂದು ಬಂಡಿಯಲ್ಲಿ ಇಟ್ಟಳು. ರತ್ನವ್ವ ಹೋಗಿ ಬರುವೆನೆಂದು ಹೇಳಿ ಗಾಡಿ ಏರಿದಳು. ತಾಯಿಮಕ್ಕಳ ಕಣ್ಣಲ್ಲಿ ನೀರೂರಿದುವು. ಅಪ್ಪಣ್ಣ ಹೊರಳಿ "ನಾಲ್ಕ ದಿನದಾಗ ಬರತ್ಯಾನು" ಎಂದು ನಗುತ್ತ ಹೆಂಡತಿಗೆ ಹೇಳಿದ. ಆಗಿನ ಅವನ ನಗೆಮಾತುಗಳನ್ನು ಕಂಡು ರತ್ನವ್ವ ತನ್ನ ಜನ್ಮ ಧನ್ಯವೆಂದೆನ್ನಿಸಿಕೊಂಡಿರಬೇಕು. ಎತ್ತುಗಳ ಕೊರಳೊಳಗಿನ ಗೆಜ್ಜೆ ಘೋಳ್ಳೆಂದುವು. ಗಾಡಿ ಕಣ್ಮರೆಯಾಗುವವರೆಗೂ ಅತ್ತೆ ಸೊಸೆಯರಿಬ್ಬರೂ ನೋಡುತ್ತ ನಿಂತು ಮರಳಿ ಮನೆಯಲ್ಲಿ ಹೋದರು.

ಮಾವನ ಮನೆಗೆ ಅಳಿಯತನಕ್ಕೆ—ಅಲ್ಲ—ರಾಶಿಗೆ ಹೋದ ಅಪ್ಪಣ್ಣ. ಚಂದೂರಿನ ಜನವೆಲ್ಲ "ಮಗದುಮರಿಗೆ ನಡತನ ಛಲೂ ಗಂಟ ಬಿತ್ತು. ಹುಡು ಕಾಡತ ಹೋದರ ಇಂಥಾ ಮನಿ ಸಿಗೋದ ಇಲ್ಲ" ಎಂದಿತು. ಮತ್ತೆ ಕೆಲವರು "ಇವರಿಗೇರ ಯಾರ ಇದಾರು ? ಅಂವs ಬಂದ ಮಾಡಾಂವ ಮಟ್ಯಾಂವ. ಯಾವಾಗಾದರೂ ಅಂವಗ ಏತಿ ಅಲ್ಲ" ಎಂದರು. ಈ ಮಾತುಗಳು ಅಪ್ಪಣ್ಣನ ಕಿವಿಯ ಮೇಲೂ ಬೀಳದಿರಲಿಲ್ಲ. ಅಪ್ಪಣ್ಣ ಹಿಗ್ಗಿನಿಂದ ಓಡ್ಯಾಡಿ ರಾಶಿಯನ್ನೆಲ್ಲ ಮಾಡಿ, ನಾಲ್ಕು ದಿನಗಳಲ್ಲಿ ಒಂದು ತೊಲಿಯ ಉಂಗುರ, ಧೋತರ, ರುಮಾಲ, ಉಡುಗೊರೆ ಮಾಡಿಸಿಕೊಂಡು ಮರಳಿದ. ಬರುವಾಗ "ಯಾವಾಗಾದರು ಅತ್ತೀ ಮಾವನ ಹೊಲಾ ಮನಿ ನನಗs ಏತಿ" ಎಂದು ಮನದಲ್ಲಿ ನಿಶ್ಚಯಿಸಿಕೊಂಡು ಇಮ್ಮಡಿ ಹರುಷದಿಂದಲೇ ಬಂದು ತಾರಕ್ಕಸಿಗೆ ಹೇಳಿದ.

"ನೋಡ ನಿಮ್ಮ ಊರಾಗ ಗಾಡಿ ಹೋದರ, ಹುಚ್ಚ ನಿಮ್ಮತ್ತಿ. ಗೆಜ್ಜಿ ಸಪ್ಪಳ ಕೇಳಿ ಹೊರಗ ಓಡಿ ಬಂತು, ನಮ್ಮ ಗಾಡಿ ನೋಡಿ ತೆಲಿ ಕೆಳಗ ಮಾಡಿ ಒಳಗ ಓಡೇ ಹೋಯ್ತು."

"ಹೀಂಗಾಯ್ತು !" ತಾರಕ್ಕನ ಮನಸ್ಸಿಗೆ ಸ್ವಲ್ಪ ಸಂತೋಷ ವಾದಂತಿತ್ತು.

"ನೀವ ಯಾವ ವೇಳೇಕ ಅಲ್ಲಿ ಹೋದಿರಿ ? ಅವರ ಮನೀ ಕಡೆ ಯಾಕ ನಿಮ್ಮ ಗಾಡಿ ?" ಕೆಲ ಕಾಲ ತಡೆದು ಕೇಳಿದಳು.

"ಒಂದ ತಾಸ ರಾತ್ರಿ ಆಗಿತ್ತಲ್ಲ ! ಎತಗೋಳ ಲಗೂನ ಹೋದು. ಅತ್ತೀ ಗಾಡ್ಯಾಗಾ ಹೇಳಿಳು, ಆ ಅಗಸೀಲೆ ಗಾಡಿ ಹೊಡೀ ಅಂತ. ಹಾಂಗs ಹೊಡದಿನಿ. ಆಕಿ ಗಾಡಿ ನೋಡಿ ಒಳಗ ಹೋಗಾನಾ ಆಕೆ ಚಿಮ್ಮಾ ಅಂತ ಹಿಂದಿಂದ ಅತ್ತಿ ಹೇಳಿದಳು."

"ನೀವ ನೋಡಿಲ್ಲ, ಆಕಿನಾ ಇನ್ನ ?"

"ನಾ ಯಾದಕ ನೋಡಕ ಹೋಗಲಿ ಸುಡಲಾಕ ಆಕೀನಾ ? ನಿನ್ನಾ ಮಾಡಕೊಂಡ ಮ್ಯಾಲಿ, ನಿಮ್ಮ ಊರಿಗಿ ಎಲ್ಲಿ ಹೋಗಿದ್ಯಾನ ನಾ ? ಆ ಸೊಸಿ ನಾನೂ ನಾಳಿ ತರತಾರ ಅಂತ."

"ಯಾನ ತರತಾರು ? ಅವರ ಹಚಕೊಡೂಲ ಅಂತಲ್ಲ !"

"ಇನ್ನ ಹಚಕೊಡದ ಯಾತಕ ಇಟಕೊಂಡಾರು ? ಮೂರ ದಿನ ಆಯ್ತು. ಚಿಮ್ಮಾನಾs ಹೊರಗ ಹಾಕಿದಾ ಮಗಾ ! ಆಳತ ಊರೆಲ್ಲಾ ತಿರಗಕ ಹತ್ತೀ ದಾಳ. ಯಾನ ಅವ್ವಾ ಮಗಗ ಜಗಳ ಆಯ್ತಂತ !"

ಹೀಗೆ ಹಲವು ಸಂಗತಿಗಳನ್ನು ಹೇಳಿದನಂತರ ತಾರಕ್ಕನಿಗೆ ಮತ್ತೊಂದು ಸಂಗತಿಯನ್ನು ಹೇಳಿದ ಅಪ್ಪಣ್ಣ. "ಹೊಳೀ ಹಾದಿಗಿ ಮಳಗ್ಯಾಗ ಮೆಟ್ಟನಲ್ಲೆ ಮ್ಯಾಲ ನಿಂತ ತೂರಕ ಹತ್ತಿದರ ಹೊಳೀಗಿ ನೀರಿಗಿ ಹೋಗೂ ನಿಮ್ಮೂರ ಹೆಣ್ಣಗೋಳ ಹೊರಳಿ ಹೊರಳಿ ನೋಡತಿದ್ದು ನನ್ನಾ ! ಒಂದ ಪೋರಿ ಅಂತೂ ನನ್ನಾ ನೋಡಕ ಹೋಗಿ ಕೊಡಾನs ಒಗೀತು."

ಗಂಡನ ಈ ಮಾತು ಕೇಳಿ ತಾರಕ್ಕನ ತುಟಿಗಳ ಕುಡಿಯಲ್ಲಿ ನಗೆ ಮುಗುಳೊಂದರಳಿತು. "ಹೆಂಗಸರೆಲ್ಲ ಹೊರಳಿ ನೋಡೂಹಂಗ ಇದೀರಿ ಖರೇ !"

ಎಂದು ಏನೇನೋ ಮನದಲ್ಲಿಯೇ ಅಂದುಕೊಂಡಳು. ಆದರೆ ಅವನ ಮಾತಿಗೇನೂ ಉತ್ತ್ರರ ಹೇಳಲಿಲ್ಲ.

ಹೀಗೆಯೇ ಐದಾರು ವರ್ಷಗಳು ಉರುಳಿದುವು. ತಾರಕ್ಕನಿಗೆ ಮಕ್ಕಳಾಗಲಿಲ್ಲ. ಅವಳ ಮನಸ್ಸಿಗೂ ಶಾಂತಿಯಿಲ್ಲ. ಪ್ರಕೃತಿಯು ದಿನದಿನಕ್ಕೆ ಕೆಡುತ್ತ ನಡೆಯಿತು. ಆಗಾಗ ಕಡೆಗಾಗುವದು ತಡೆಯುವದು. ಹೊಟ್ಟೆ ಕಡಿತ ಏಳುವದು. ಒಂದೆರಡು ಕಡೆಗೆ ತೋರಿಸಿಯೂ ಆಯಿತು. ಅವರು ಒಂದೆರಡು ತಿಂಗಳು ಆಸ್ಪತ್ರೆಯಲ್ಲಿ ನಿಂತು ಉಪಚಾರ ಹೊಂದಬೇಕೆಂದು ಅಭಿಪ್ರಾಯಪಟ್ಟರು. ಅದು ಇವರಿಂದ ಆಗಲಿಲ್ಲ. ತವರುಮನೆಯವರು ಮಾಡಿಸುತ್ತೇವೆಂದರೂ ತಾರಕ್ಕನಿಗೆ ಮನೆ ಬಿಡುತ್ತಿರಲಿಲ್ಲ. ದಿನದಿನಕ್ಕೆ ಮನೆಯ ಹೊಣೆಗಾರಿಕೆಯಲ್ಲ ಅವರ ಮೇಲೆ ಬೀಳುತ್ತ ಹೋಗಿತ್ತು. ಮನೆಯ ಕೊಡಕೊಳ್ಳುವಿಕೆಯಲ್ಲಿಯೂ ಇವಳದೇ ಕೈವಾಡ. ಇದರಲ್ಲಿ ಅವಳ ಉದಾರಹಸ್ತದಿಂದ ಎಷ್ಟೋ ಕುಟುಂಬಗಳು ಸುಖದಲ್ಲಿ ಬದುಕಿದ್ದವು. ಜನರೂ ಆಳು ಹೋಳುಗಳೂ "ಒಳ್ಳೆಯ ಹೆಂಗಸು" ಅನ್ನುವರು, ತಾರಕ್ಕನಿಗೆ. ಅವಳೂ ಯಾವ ಚಿಂತೆಯನ್ನೂ ಹಚ್ಚಿಕೊಳ್ಳದೆ ನಗುನಗುತ್ತ ಕಾಲಕಳೆಯುತ್ತಿದ್ದಳು.

ಅಪ್ಪಣ್ಣನ ಮನಸ್ಥಿತಿಯೇ ಬೇರೆ. ಅತ್ತೆಯ ಮನೆಗೆ ಅಳಿಯತನಕ್ಕೆ ಹೋಗಿ ಬಂದಾಗಿನಿಂದ ಮೇಲಿಂದ ಮೇಲೆ ಚಂದೂರಿಗೆ ಹೋಗುವ, ಒಮ್ಮೊಮ್ಮೆ ಹೆಂಡತಿಯನ್ನು ಕರೆದುಕೊಂಡೂ ಹೋಗುವ. ಬೇಸಿಗೆಯಲ್ಲಿ ಅಲ್ಲೇ ಒಂದು ತಿಂಗಳು ನಿಂತು ಮಾವನ ಹೊಲಗಳ ರೆಂಟೆ ಕುಂಟೆ ಹೊಡೆದು ಬರುವನು. ಸುಗ್ಗಿಯಲ್ಲಿ ಆಳನ್ನು ಕಳಿಸುವ. ರತ್ನವ್ವನನ್ನೂ ತಮ್ಮೂರಿಗೆ ಕರೆದುತರುವ. ಹಾಗೇ ಮಲ್ಲನ ಮನವನ್ನೂ ಒಲಿಸಿಕೊಳ್ಳುತ್ತಿದ್ದ. ತನ್ನ ಮನೆ ಮಾವನ ಮನೆಗಳೆಂದರೆ ಬೇರೆ ಬೇರೆ ಮನೆಗಳಲ್ಲವೆಂದೇ ತಿಳಿದ, ತೋರಿಸಿದ. ತನ್ನತ್ತೆಯ ಮನಸ್ಸು ತವರಮನೆಯ ಕಡೆಗೆ ತಮ್ಮನ ಮಕ್ಕಳ ಕಡೆಗೆ ಹರಿಯದಂತೆ ಯತ್ನಿಸಹತ್ತಿದ. ಒಮ್ಮೆ ರತ್ನವ್ವ ಹಾರೋಗೇರಿಗೆ ಬಂದಾಗ ತಾರಕ್ಕ ಅನಂತನ ನೆನಪು ತೆಗೆದದ್ದಕ್ಕೆ ಅಪ್ಪಣ್ಣ ದೊಡ್ಡ ಜಗಳವನ್ನೇ ಮಾಡಿಬಿಟ್ಟ. "ಅವರ ಮನೆಯ ಕಟ್ಟೆಯ ಕಲ್ಲು ಏರಗೊಡುವುದಿಲ್ಲ. ಅವರ ಹೆಸರ ನಮ್ಮ ಮನ್ಯಾಗ ತಗೀಬ್ಯಾಡರಿ. ಅವರ ಬೇಕಾಗಿದ್ದರ ನೀವಾ ಅವರಾ ಅತ್ರಿ" ಎಂದು ಸಿಟ್ಟಿನಿಂದ ಹೇಳಿದ. ರತ್ನವ್ವ ಗಾಬರಿಯಾದಳು. ಅಳಿಯನಿಗೆ

ಸಮಾಧಾನ ಹೇಳಿದಳು. ಇಷ್ಟೇ ಅಲ್ಲ, ಅವಳು ಅಂದಿನಿಂದ ಅಳಿಯನ ಮನ ನೋಯಿಸಿದ್ದಕ್ಕೆ ತನ್ನ ತವರುಮನೆಯ ಹಂಬಲವನ್ನು ತೊರೆಯಲು ಯತ್ನಿಸ ಬೇಕಾಯಿತು, ತೊರೆದಳು.

ಅಪ್ಪಣ್ಣನಿಗೆ ಒಮ್ಮೊಮ್ಮೆ ಸಂಸಾರದಲ್ಲಿ ಮಕ್ಕಳಿಲ್ಲದ್ದಕ್ಕೆ ನಿರಾಶೆಯೆನಿಸು ವದು. ಏರಿಳಿತವಿಲ್ಲದ ಸಂಸಾರದಲ್ಲಿ ಬೇಸರವೆನಿಸುವದು. ಯಂತ್ರದಂತೆ ದುಡಿಯುವ ಜೀವಿತ ಅಸಹ್ಯವಾಯಿತು. ಮಕ್ಕಳ ಸಲುವಾಗಿ ಮತ್ತೊಂದು ಮದಿವೆ ಮಾಡಿಕೊಳ್ಳಬೇಕೆಂದೂ ಯೋಚಿಸುವ. ಈ ವಯಸ್ಸಿನೊಳಗೆ ಮನೆ ಯಲ್ಲಿ ಹೆಂಡತಿ ಇರಲಿಕ್ಕಾಗಿ ಮತ್ತೊಂದು ಹೆಣ್ಣು ಯಾರೂ ಕೊಡುವಂತಿರ ಲಿಲ್ಲವೇನೊ! ಅತ್ತೆಯ ಉತ್ಪನ್ನದ ನೆನಹು ಬಂದಾಗ ಮತ್ತೊಂದು ಮದಿವೆಯ ವಿಚಾರವನ್ನು ಅಲ್ಲಿಯೇ ಬಿಡುವನು. ಅವನು ಎಷ್ಟು ಒತ್ತಿಟ್ಟರೂ ಮುಚ್ಚಿ ಟ್ಟರೂ ಅವನ ಮನಸ್ಥಿತಿ ತಾರಕ್ಕನಿಗೆ ಹೊಳೆಯದಿರಲಿಲ್ಲ. ಆ ವಿಷಯ ಅವಳಿಗೆ ಗೊತ್ತಾಗಿಯೂ ಕೂಡ ಅವಳಿಗೆ ವಿಷಾದವೂ ಆಗಲಿಲ್ಲ; ಆನಂದವೂ ಆಗಲಿಲ್ಲ. ತಿರುಗಿ ಅವಳೇ ಮೇಲಿಂದ ಮೇಲೆ ಗಂಡನಿಗೆ ಹೇಳಹತ್ತಿದಳು. " ನೀವ ಮತ್ತೊಬ್ಬಾಕಿನಾ ಮಾಡಕೋರಿ ಬೇಕಾದರ. ಆಕೀಗಿ ಮಕ್ಕಳ ಆಗಲಿ."

"ನಮಗ ಯಾತಕ ಮಕ್ಕಳ ಬೇಕು ? ಇಬ್ಬರೂ ಸುಖದಾಗ ಇದೇವ ಸಾಕಲ್ಲ. ನಮದ್ಯಾನ ಅಂಥಾ ದೊಡ್ಡ ಉತ್ಪನ್ನ ಏತಿ ?" ಎನ್ನುವ. ಅವನು ಆ ಮಾತಿನಲ್ಲಿ ಮಕ್ಕಳ ಬಯಕೆಯಿಲ್ಲೆಂಬ ಭಾವವನ್ನು ಎಷ್ಟು ಸ್ಪಷ್ಟವಾಗಿ ಒಡಮೂಡಿಸಬಯಸಿದರೂ ಸಫಲವಾಗುತ್ತಿರಲಿಲ್ಲ ಅವನ ಮಾತು.

ಅದನ್ನರಿತೇ ತಾರಕ್ಕ ಮತ್ತೂ ಹೇಳುವಳು : "ಯಾವಾಗ ಮಾಡ ಕೊಂಡಾಗ ಮಾಡಕೋರಿ, ಇಲ್ಲದಿರ ಬಿಡವಾರಿ ಯಾಕ ? ನಿಮ್ಮ ಮೈಯಾಗರ ನೆಟ್ಟಗ ಮಾಡಕೋರಿ, ಡಾಕ್ತರಿಗಿ ತೋರಿಸಿ. ಒಂದ ಹುಣ್ಣ ಆದರೂ ಲಗೂ ಮುಗೀದುಲ್ಲ. ಮೊನ್ನೆ ಅತ್ತಿ ಹೇಳತಿದ್ದಳು, ನಿಮ್ಮ ಮೈಯಾಗ ರಕ್ತ ಕೆಟ್ಟೇ ತಂತ" ಹೀಗೆ ಅತ್ತೆಯ ಮೇಲೆ ಹವಾಲಿ ಹಾಕುವಳು.

" ಎಂಥಾ ಕಲ್ಲಿನಂಥಾ ಮನಸ್ಸಾ. ಆಕೇ ಹಾಳ ಮಾಡಿ ಇಟ್ಟಳ ನನ್ನಾ" ಎಂದು ಮನದಲ್ಲಿಯೇ ಅಪ್ಪಣ್ಣ ಅಂದುಕೊಂಡು ಹೆಂಡತಿಗೆ ಕಾಣದಂತೆ ಒಂದು ನಿಟ್ಟುಸಿರನ್ನು ಬಿಡುವನು.

ಅಪ್ಪಣ್ಣನ ಅಣ್ಣನ (ಚಿಕ್ಕಪ್ಪನ ಮಗ) ಮಗಳನ್ನು ಐನಾಪುರದಲ್ಲಿ ಕೊಟ್ಟು ಮದುವೆಯ ನಿಶ್ಚಯವಾಯಿತು. ಮನೆಯಲ್ಲೆಲ್ಲ ಮದುವೆಯ ಸಿದ್ಧತೆ ನಡೆಯಿತು. ತಾರಕ್ಕನ ಚಿಕ್ಕತ್ತೆ ಬಂದು "ನೀವ ಗಂಡಾ ಹ್ಯಾಂತಿ ಇಬ್ಬರೂ ಬರಬೇಕು. ನಂದ ಒಂದs ಮೊಮ್ಮಗಳ ಮದಿವಿ ಏತಿ" ಎಂದು ಆಗ್ರಹ ಮಾಡಿ ಹೇಳಿ ಹೋದಳು. ಅಪ್ಪಣ್ಣನೂ ಮದುವೆಗೆ ಹೋಗಲು ಒಪ್ಪಿಕೊಂಡ. ತಾರಕ್ಕನಿಗೆ ಹೇಳಿದ "ನಡೀ ನಾವಿಬ್ಬರೂ ಹೋಗಿ ಎರಡ ದಿನಾ ಮದಿವಿ ಮಾಡಿ ಬರೂನು, ನಮ್ಮ ಕಾರಣದಾಗೂ ಅವರ ಎರಡ ದಿನಾ ದುಡದಿದಾರ."

"ನಾ ಒಲ್ಲಿ; ನೀವs ಹೋಗಿಬರ್ರಿ!" ಎಂದಳು ತಾರಾ.

"ನಾ ಒಲ್ಲಿ ಅಂದರ ಅಲ್ಲಿ ಥಾರೀ ಎರ್‍ಯಾವರ ಯಾರಾ ? ಅವರ ಹೇಳ ದಾರ ಹೌಸಲಿ ; ನಾ ಒಬ್ಬs ಹೋಗಿ ಯಾನ ಮಾಡಲಿ ಅಲ್ಲಿ? ಸೀರಿ ಒಂದ ಬರತೇತಿ ಯಾಕ ಬಿಡತಿ ? ನನ್ನ ಮೊದಲಿನ ಮದಿವ್ಯಾಗ ಅವರ ಕಳಸಗಿತ್ತಿ ಆಗಿ ಒಂದ ಸೀರಿ ಉಟಗೊಂಡ ಹೋಗಿದಾರ. ಅದs ಈಗ ಕಳೀಬೇಕ ಅಂತ ಮಾಡಿದಾರ ಕಾಣಸ್ತೇತಿ. ಯಾವಾಗಾದರೂ ಕೂಳ ಕಡ್ನ, ಅರಿವಿ ಮುಯ್ಯ ; ಅವರ ಹ್ಯಾಂಗ ಬಿಟ್ಟಾರು ?"

"ಅದೆಲ್ಲಾ ಆಯ್ತು ಖರೇ. ಈ ಮಾರಿ ಕಟಗೊಂಡ ನನಗ ಐನಾಪುರಕ ಹೋಗೋದ ಬ್ಯಾಡಾಗೀತಿ."

"ಅದಕ್ಯಾನ ಆಗತೇತಿ ? ನಾವ್ಯಾನ ಅವರ ಅಪ್ಪಂದ ಯಾನ ಗಂಟ ತಿಂದಿದೇವ ಯಾನ ? ಯಾನ ಅವರ ಮನೀಗಿ ಹೊಂಟದೇವು ?"

"ಊರಾಗ ಹೋಗಿ ಮನೀಗಿ ಹೋಗದ ಬರೋದ ಅಂದರs ಯಾನ ಅಂದಾರ ಮಂದೀ ?"

"ಯಾನ ಅನ್ನೂದುಲ್ಲ; ಯಾರ ಅಂದಾವರಿಗಿ ನಾ ಹೇಳತ್ಯಾನ ನಡೀ ?"

"ಹುಡುಗನ ಮದಿವಿ ಆದರs ಹಚಕುಡಲಿಲ್ಲ. ಅದ ಬ್ಯಾಡಾ ಮಾಮಾ ಸತ್ತರೂ ಹೋಗಗೊಡಲಿಲ್ಲ ನೀವ !"

ತಾರಕ್ಕನ ಮಾತನ್ನು ನಡುವೆಯೇ ತಡೆದು "ಮಾವಗ ತಿಳಿಲ್ಲ ಆಗಿತ್ತ್ಯಾನ ? ಕೊಳ್ಯಾಗಿನ ಏಕಸರಾ ಉಚಕೊಂಡ ಹೋಗಲಾಕ. ನಾವ್ಯಾನ ಅಪ್ಪ ಸತ್ತಗೇಡಿ ಇದ್ದsಯ ಯಾನ ? ಎಲ್ಲೀದ ಮಾವ, ಎಲ್ಲೀದ ಯಾನ ?

ಈಗಿನ ದಿನದಾಗ ಯಾರ ನೋಡುದುಲ್ಲ, ನಿಮ್ಮಪ್ಪನ ಅಣ್ಣ ಅಂತ ಒಂದ ದಿನಾ ಓದ ಸೀರಿ ಉಡಸಲಿಲ್ಲಾ. ಛಂದ ಹಂಗ ಇನ್ನ ಅಣ್ಣನ ಮಕ್ಕಳ ಯಾರಿಗಿ ಯಾರ ನೋಡತಾರು? ಅವರ ತಮ್ಮ ಹೆಂಡರ ಮಕ್ಕಳ ಒಳಗ ನೀವ ಇದೀರಿ ಅನ್ನೂ ನೆನಪ ಸುದ್ದಾ ತಗೀದುಲ್ಲ. ಇಲ್ಲದ್ರ ಒಂದ ತನಗ ಕುಣ್ಯೋದ ಬ್ಯಾಡ ಆಗಾನಾ ಅಂಗಳ ಡೊಂಕ ಏತಿ ಅಂತ ಹೇಳತ ಕೂತಿದಾಳ. ಇನ್ನೊಮ್ಮಿ ಅವರ ನೆನಪರ್ರ ತಗೀ ಹೇಳತ್ಯಾನ" ಎಂದು ಕೆರಳಿ ನುಡಿದ.

ಅಪ್ಪಣ್ಣನ 'ಮಾವನ ಮಕ್ಕಳು ತಮ್ಮ ಹೆಂಡರ ಮಕ್ಕಳದಾಗ ನಿಮ್ಮ ನೆನಪ ತಗೀದುಲ್ಲ' ಅನ್ನೂ ಮಾತ ತಾರಕ್ಕನ ಹೃದಯದಲ್ಲಿ ಒಂದು ಅಸಹ್ಯ ವೇದನೆಯನ್ನುಂಟುಮಾಡಿತು. 'ಮನದಲ್ಲಿ ಐನಾಪುರಕರ್ರ ಹೋಗೂನು. ಒಮ್ಮಿ ಅನಂತನ ಮಾರೀರ ನೋಡಕ ಸಿಕ್ಯೋತಲ್ಲ?' ಎಂದುಕೊಂಡಳು. ಅದಕ್ಕೆ ದಾರಿ ಮಾಡಿಕೊಳ್ಳಬೇಕೆಂದೋ ಏನೋ ತಾರಕ್ಕ ನುಡಿದಳು. "ಹೀಂಗ ಹೋದರ ಬಂದರ ಹೊಲಾ ಮನೀ ಅವರಿಗೇ ಮಾಡತಾರ ಯಾನ? ಯಾರರ? ಇಲ್ಲದ ಒಂದ ತಿಳವಳಿಕಿ. ಇಲ್ಲದ ಮಾತಾಡತೀರಿ!"

ತಾರಕ್ಕನ ಈ ಮಾತು ಉರಿಯುವ ಬೆಂಕಿಗೆ ಎಣ್ಣೆ ಎರಚಿದಂತಾಯಿತು. ಅಪ್ಪಣ್ಣನ ಸಿಟ್ಟು ಭುಗಿಲ್ಲೆಂದು ನೆಗೆದೆದ್ದಿತು. ಆದರೂ ಆ ಸಿಟ್ಟಿನಲ್ಲಿ ಅವನ ಬಾಯಿಂದ ಯಾವ ಮಾತುಗಳೂ ಹೊರಡಲಿಲ್ಲ. ಇನ್ನು ಮಾತು ಮುಂದೊರಿದರೆ ಜಗಳವಾಗುವದೆಂದು ಅಪ್ಪಣ್ಣ ಹೊರಗೆ ಹೋದ, ಬೆಂಕಿಯು ಕೆಂಡದಂತಾಗಿ.

ಮುಂಜಾನೆ ಅನಂತ ಈಗ ಎದ್ದು ಹೊರಗೆ ಬಂದಿದ್ದ, ತಂಬಿಗೆ ತಕ್ಕೊಂಡು. ನೆರೆಮನೆಯ ಹೆಂಗಸೊಬ್ಬಳು ಕೇಳಿದಳು. "ರಾತ್ರಿ ತಾರಾ ನಿಮ್ಮ ಮನೀಗಿ ಬಂದಿಳ ಯಾನಾ?"

"ಇಲ್ಲ; ಎಲ್ಲಿ ಇದಾಳು?" ಆಶ್ಚರ್ಯದಿಂದ ಕೇಳಿದ ಅನಂತ.

"ಅವರ ಪೋರಿನಾನ್ರ ವನಕುದರ್ರಾ ಗೋಳ ಮನ್ಯಾಗ ಕೊಟ್ಟೇತಿ, ಗಂಡಾ ಹ್ಯಾಂತಿ ಇಬ್ಬರೂ ಬಂದಾರಲ್ಲ! ಈ ಗಂಡೂ ಛಲೂ ಇದಾ."

ಅನಂತ ವಿಷಣ್ಣವದನದಿಂದ ದೂರದಲ್ಲಿರುವ ಒಂದು ಗಿಡದ ತುದಿಯನ್ನು ನೋಡುತ್ತ "ಕತ್ತಲಿ ಆಗಿರಬೇಕು, ಇಂದ ಬಂದರ ಬಂದಾರು" ಎಂದು

ನುಡಿದು ಹೊರಗೆ ಹೋಗುವವರಲ್ಲಿದ್ದ. ಆಚೆಯ ಮನೆಯಿಂದ ಅವರವ್ವನ ಮಾತು ಕೇಳಿಸಿತು :

"ನಮ್ಮ ಮನೀ ಕಟ್ಟೀಕಲ್ಲ ಯಾತಕ ಏರತಾಳು ? ಅವರ ಸತ್ತರೂ ಮನೀ ತನಕಾ ಬಂದಿಲ್ಲ. ತಿಳಿದುಲ್ಲ ಆಕೀಗಿ ? ಅಂಥಾದ ಯಾನ ಮಾಡಿದ್ದುದ್ಧಿಶಿ ನಾವ. ಈಕಿ ಘಾತ ಪಾತ ? ಸಣ್ಣಾಗಿರತಾ ಎಂಥಾದ ಬರಕ್ಕಿ ಹೋಗಕ್ಕಿ. ಈಗ ಭಲೂ ಗಂಡನ ಮನೀ ಸಿಕ್ಕಿತಂತ ಇಕಡ್ಯಾವರ ಎಲ್ಲಾ ಕಾಲಕಸಾ ಅಂತ ತಿಳದಳ ಯಾನ ?" ಮಾತು ತುಂಬಿ ಬಂದ ಸಿಟ್ಟಿನ ರಭಸದಲ್ಲಿ ತುಂಡು ತುಂಡಾಗಿ ಹೊರಬಿದ್ದಿತು.

ಅನಂತ ಏನೂ ಮಾತಾಡಲಿಲ್ಲ. ತಂಬಿಗೆ ತಕ್ಕೊಂಡು ಹಾಗೇ ಹೋಗಿ ಬಿಟ್ಟ. ತಿರುಗಿ ಬರುವಾಗ ಸ್ವಾಭಾವಿಕವಾಗಿ ಅವನ ಕಾಲುಗಳು ವನ ಕುದುರೆಯವರು ಜನವಾಸ ಕೊಟ್ಟ ಮನೆಯತ್ತ ಎಳದೊಯ್ದುವು. ನಿಬ್ಬಣದ ಜನ ರಾತ್ರಿ ತಡವಾಗಿ ಮಲಗಿದುದರಿಂದ ಈಗ ಒಬ್ಬಿಬ್ಬರು ಎದ್ದಿದ್ದರು, ಏಳು ತ್ತಿದ್ದರು. ಮನೆಯ ಒಳಭಾಗದಲ್ಲಿ ಒಂದು ಗುಡಾರದ ಮೇಲೆ ಹತ್ತೆಂಟು ಹೆಂಗ ಸರು ಮಲಗಿದ್ದರು. ಅನಂತ ಅಲ್ಲಿ ಹೋಗಲು ಸಂಕೋಚಪಟ್ಟ. ಹೊರಗೆ ಕುಳಿತ ಒಬ್ಬನಿಗೆ "ನಮ್ಮ ತಾರಾ ಎಲ್ಲಿ ಇದಾಳು?" ಎಂದು ಕೇಳಿದ. ಅನಂತನ ದನಿ ಕೇಳಿ ತಾರಕ್ಕ ಹೊರಗೆ ಬಂದಳು. ಆದರೂ ಅನಂತನಿಗೆ ಒಮ್ಮೆಲೇ ತಾರಕ್ಕನ ಗುರುತು ಸಿಕ್ಕಲಿಲ್ಲ. ತಾರಕ್ಕ ಅವನ ಮುಖದ ಕಡೆಗೆ ನೋಡಿದಳು. ಅನಂತನ ನಿಸ್ತೇಜವಾದ ಮುಖವನ್ನು ಕಂಡು ಅವಳಿಗೆ ಕಳವಳವಾಯಿತು, ಸಂಕಟವಾಯಿತು. ಅನಂತ ಸ್ವಲ್ಪ ಮುಂದೆ ಸರಿದು "ಯಾವಾಗ ಬಂದಿ ತಾರಾ ?" ಎಂದ. ಧ್ವನಿಯು ಗಂಭೀರವಾಗಿತ್ತು.

ಆ ಧ್ವನಿಯು ತಾರಕ್ಕನ ಕಿವಿಯಲ್ಲಿ ಸೇರಿ, ಹೃದಯದಲ್ಲಿಳಿದು ಅವಳನ್ನು ಎಲ್ಲಿಯೋ ಹಿಂದಿನ ದಿನಗಳಲ್ಲಿ ಒಯ್ದು ನಿಲ್ಲಿಸಿತು. "ನಿನ್ನಿ ರಾತ್ರೀನ ಬಂದಿ ದೇವು" ಎಂದಳು, ತಲೆ ತಗ್ಗಿಸಿಕೊಂಡು.

"ನಿನ್ನ ನೋಡಿ ಭಾಳ ದಿನಾ ಆಯ್ತು ; ಹಿಂಗ್ಯಾಕ ಆಗೀದಿ ?"

ತಾರಕ್ಕ ಏನೂ ಹೇಳಲಿಲ್ಲ. ಸುಮ್ಮನೆ ತಲೆ ಕೆಳಗೆ ಮಾಡಿಕೊಂಡು ನಿಂತಿದ್ದಳು. ಹೀಗೆ ಅನಂತನೇ ಕೇಳಿದ್ದಕ್ಕೆ ಬಹಳ ಸಂಕೋಚಪಟ್ಟುಕೊಂಡ ಳೇನೊ !

"ಅಪ್ಪೂ ಅಣ್ಣಾ ಎಲ್ಲಿ ಇದಾನು? ಅವನೂ ಬಂದಾನಲ್ಲ?"

"ಬಂದಿದಾರು; ಈಗ ಮದುವಿಮನಿ ಕಡೆ ಹೋಗಿದಾರು; ಈಗ ಬಂದಾರು ಕೂಡಲ. ಚಹಾ ಮಾಡತೇವ ಕುಡದ ಹೋಗಾಕೆ ಅಂತ" ಎಂದು ಅನಂತನ ಮುಖದ ಕಡೆಗೆ ನೋಡಿದಳು. "ನೀ ಯಾಕ ಹೀಂಗ ಆಗೀದಿ?" ಎಂದು ಅವಳಿಂದ ಕೇಳುವದಾಗಲಿಲ್ಲ, ಮಾತ್ರ.

"ಒಲ್ಲಿ; ತಂಬಿಗಿ ತಗೊಂಡ ಹೋಗಿದ್ನಿ. ಹಾಂಗ ಇತ್ತs ಬಂದಿದ್ಯಾನು. ಮತ್ತೆ ಬಂದ ಹೋಗತ್ಯಾನಲ್ಲ."

"ಬಂದ ಹೋಗಲಾಕ ಯಾನ? ಇಲ್ಲೇ ಮದಿವ್ಯಾಗ ಎರಡ ದಿನಾ ಬಾ."

"ನಾ ಯಾನ ಬರತ್ಯಾನ ಹೋಗತ್ಯಾನ, ನೀ ಬಾ ಅಲ್ಲಾ; ಮನೀ ಕಡೆ!"

"ನೋಡುಣು! ಸವಡ ಆದರs....ಮದಿವಿ ಮನಿ...." ಎಂದು ಅನುಮಾನ ದಲ್ಲಿ ಒಂದೊಂದೇ ನುಡಿಗಳು ಬಾಯಿಂದ ಹೊರಬಿದ್ದುವು.

"ಸವಡ ಆಗಲಾಕ ಯಾನಾ? ಮದಿನದಾಗ ಬಾ" ಎಂದು ಹೇಳಿ ಅನಂತ ಹೋದ.

ಮದುವೆಯು ಸಮಾರಂಭವೆಲ್ಲ ಸಾಂಗವಾಗಿ ನಡೆಯಿತು. ಅದರಲ್ಲಿ ತಾರಕ್ಕ ಮತ್ತು ಅವಳ ಗಂಡ ಕೂಡಿ ಧಾರೆ ಎರೆದರು. ಆಗ ತಾರಕ್ಕ ಅಪ್ಪಣ್ಣ ನಿಗೆ ಕೂಡಿಸಿ ಮತ್ತೊಮ್ಮೆ ಗಂಟು ಹಾಕಿದರು. ಪಂಡಿತನು ಗಂಡನ ಹೆಸರು ಹೇಳಿದರೆ ಗಂಟು ಬಿಚ್ಚುವೆನೆಂದ, ತಾರಕ್ಕನಿಗೆ. ಅಪ್ಪಣ್ಣ ನಗುನಗುತ್ತ ಹೆಂಡತಿಯ ಹೆಸರು ಹೇಳಿದ. ತಾರಕ್ಕ ಮುರುಕು ಮಾಡುತ್ತ "ನಾ ಒಲ್ಲಿ, ಹೇಳಕ ಬಾರದ ಹೆಸರ" ಎಂದಳು. ಹೆಂಗಸರು "ಆ ಹೆಸರ ಬರದಿರ ನಿನ್ನ ಮನಸಿಗಿ ಬಂದದ ದೇವರ ಹೆಸರು ಹೇಳು" ಎಂದರು. ತಾರಕ್ಕ ಸ್ವಲ್ಪ ತಡೆದು ಸುಂದರ ವಾದ ಒಗಟೊಂದನ್ನು ಹಾಕಿ "ಅನಂತನಾಥ" ಎಂದು ಗಂಡನ ಹೆಸರು ಹೇಳಿದಳು. ಜನರೆಲ್ಲ ತೀರ್ಥಂಕರರ ಹೆಸರು ಹೇಳಿದಳೆಂದುಕೊಂಡರೇನೊ!

ಐನಾಪೂರು ಧಾರ್ಮಿಕರ ಊರು. ಊರಲ್ಲಿ ನಾಲ್ಕೈದು ಜಿನಮಂದಿರ ಗಳಿವೆ. ನಗ್ನ ಮುನಿಗಳೂ ಬಂದು ಧರ್ಮಪ್ರಚಾರ ಮಾಡಿದ ಸ್ಥಳ. ಯಾವಳೋ ಒಬ್ಬ ಧರ್ಮಿಷ್ಟ ವಿಧವೆ "ಉಡಿಕ್ಯಾವರ ಅಲ್ಯಾನ ಇವರ? ಧಾರಿ ಹ್ಯಾಂಗ ಎರದರು?" ಎಂದು ವಿಚಾರ ಎತ್ತಿದಳು. ಅದು ಹೆಂಗಸರಲ್ಲಿಯೇ ನಿಲ್ಲದೆ ಅಪ್ತರ

ಗಂಡಸರವರೆಗೂ ತಲುಪಿತು. ಇದಕ್ಕಾಗಿ ಬೀಗಬೀಗರಲ್ಲಿ ದೊಡ್ಡ ಜಗಳವೇ ಆಯಿತು. ಆದರೆ ಇದಾವುದರ ಕಡೆಗೆ ತಾರಕ್ಕನ ಲಕ್ಷ್ಯವಿರಲಿಲ್ಲ. ಅವಳು ಅದೇ ಊರ ಮುದುಕಿಯೊಬ್ಬಳನ್ನು ಬೇರೆ ಕಡೆಗೆ ಕರೆದುಕೊಂಡು ಹೋಗಿ, ಕುಳ್ಳಿರಿಸಿಕೊಂಡು ಕೇಳಿದಳು :

"ಹೊಸಮನ್ಯಾವರ ಎಲ್ಲಾ ಹ್ಯಾಂಗ ಇದಾರು? ರಾಮು ಮಾಮಾ ಸತ್ತ ಮ್ಯಾಲ ಅಂಗಡಿ ಎಲ್ಲಾ ಹ್ಯಾಂಗ ನಡದೇತಿ ?"

"ಯಾರ? ಹೊಸಮನಿ ರಾಮನ ಮಕ್ಕಳ ಅಂತೂ ನಾಭೂ ಹೋಂದ? ಆವರ ನಿನಗ ಯಾನ ಆಗಬೇಕು ?"

"ನ....ನ....ಗ? ನಮ್ಮವ್ವನ ತವರುಮನೀನ ಅದಲ್ಲ!"

"ಹೀಂಗ? ನೀ ರತ್ನಾನ ಮಗಳ ಹೋಂದ? ಅಯ್ಯ! ನನಗs ಗುರತ ಹತ್ತಲಿಲ್ಲವಾ ನಿನ್ನಿಂದೂ? ನಮುಗ್ಯಾನ ಹೊರಗಿನಕ್ಕಿ ಯಾನ ನೀ? ನನ್ನ ನೆಗೆಣ್ಣಿ ಅಣ್ಣನ ಮಗಾನs ಆ ರಾಮು!"

ನಿಡಿದಾದ ಉಸಿರುಗರೆದು ಹೇಳಿದಳು ತಾರಾ "ನಮ್ಮ ಸೋದರಮಾವs ಅಲ್ಲ! ಆದರ ಈಗ ಅಂವ ಸತ್ತಹೋದಾ."

"ಹೋಂದ ತಾಯಿ, ಬಂಗಾರದಂಥಾ ಮನಸ್ಯಾ. ರಾಮು ಅಂದರ ಅಂವ ಸತ್ತಮ್ಯಾಲಿ ಮನೀ ಐಸಿರಿ ಎಲ್ಲಾ ಹೋದಂಗ ಆಯ್ತು. ಹುಡುಗುರ ನಾಲ್ಕ ದಿನದಾಗ ಬ್ಯಾರೆ ಆದು ; ಸಣ್ಣವನ ಹ್ಯಾಂತಿ ಬರೂತ ಕೈಲೆ ದೊಡ್ಡಾಂವಗ ಯಾನ ತಿಳೀದುಲ್ಲಾ, ಹೊಳೀದುಲ್ಲಾ. ಸುಂದರಾನು ಜಗಳಾಡಿ ಸಣ್ಣ ಮಗನ ಹತ್ತ್ಯಾಕ ನಿಂತಿದಾಳು. ಈಗ ದಿನಾ ಮನ್ಯಾಗ ಗಂಡಾ ಹ್ಯಾಂತಿ ಜಗಳ! ಅದೂ ತೇರದಾಳ ಹೆಣ್ಣಾ! ಬಾಯಿಗಿ ಹತ್ತತೇತಿ ಕೇಳೂ ಹಂಗಿಲ್ಲ!" ಎಂದು ಸ್ವಲ್ಪ ತಡೆದು "ಆಕಿರ ಯಾನ ಮಾಡ್ಯಾಳು? ಮನ್ಯಾಗ ಹ್ಯಾಂತಿ ಗೂಡಾ ಅಂವ ಛಲೂ ಇರೂದುಲ್ಲ. ಇನ್ನs ಇಂದ್ರಾ ಛಲೂ ಬಾ. ಅಂಗಡಿ ವಾಟೋಳಿ ಹಚ್ಚಿಟ್ಟ, ಬ್ಯಾರೆ ಆಗಾನಾ ಪಾಲಿಗಿ ಬಂದದ ಒಂದೊಂದ ಹೊಲಾನೂ ಕೊಟ್ಟಾ. ಆದರ ಇನ್ನs ಬುದ್ಧಿ ಇಲ್ಲ, ಅಂವಗ ಎರಡ ಹುಡುಗರ ಆದಾರೂ ಯಾನ ಹೇಳೋದ ತಾಯಿ!" ಎಂದು ಸುಮ್ಮನಾದಳು. ಆದರೂ ಅವಳ ಮುಖದ ಮೇಲಿಂದ ಇನ್ನೂ ಏನಾದರೂ ಹೇಳಬೇಕೆಂದಿದ್ದಾಳೆಂದು ಭಾವಿಸುವಂತಿತ್ತು.

"ಒಮ್ಮೆ ಕೆಟ್ಟ ಕಾಲ ಹತ್ತಿತಂದರ ಹೀಂಗs ನೋಡ ತಾಯೀ !" ಎಂಬ ಉದ್ಗಾರ ಹೊರಟಿತು, ತಾರಕ್ಕನ ಮುಖದಿಂದ.

"ಯಾತರ ಕೆಟ್ಟ ಕಾಲ ! ಸೊಕ್ಕ ಬಂದ ಹಾಳ ಮಾಡಕೊಂಡ. ಇಂದ ಮ್ಯಾಲ ಹಾಳ ಆಗದ ಯಾನ ಮಾಡೇತು ?" ಮುದುಕಿ ಸುತ್ತೆಲ್ಲ ಒಮ್ಮೆ ನೋಡಿ "ಆ ಆರೇರ ಪೋರಿ ಬೆನ್ನ ಹತ್ತಿದಾ. ಅವರ ಎಲ್ಲಾ ಬಡಿಕ ಎದ್ದರ ಇವನಾ !" ತಾರಕ್ಕನಿಗಷ್ಟೇ ಕೇಳಿಸುವಂತೆ ದನಿ ತಗ್ಗಿಸಿ "ಎಬ್ಬಿಸಿಕೊಂಡು ಓಡಿ ಹೋದಾ. ಎಲ್ಲಿ ಓದ್ಯ, ಕೊಲ್ಹಾಪುರದ ಕಡೆ ದೂರ ಓದ. ಹಳ್ಳ್ಯಾಗ ಇಟೆದಾ ಅಂತವ್ವ ! ಆಮ್ಯಾಲಿ ಆಕೀ ಖರ್ಚ ಹಿಡೀಕ ಬ್ಯಾಡಾ ? ಅವ್ವ ಅಪ್ಪನ ಬಿಟ್ಟ ಇವನ ಬೆನ್ನ ಹತ್ತೀದಾಳ ಆಕಿ. ಅಲ್ಲೀ ಖರ್ಚ ಇಲ್ಲೀ ಖರ್ಚ ಅಂದರ ಹಾಳ ಆಗಿ ಹೋಯ್ತು ಎಲ್ಲಾ !" ಎಂದು ಕೈಮಾಡಿ ಮುದುಕಿ ಹೇಳಿದಳು.

ಈ ಮಾತುಗಳನ್ನು ಕೇಳಿ ತಾರಕ್ಕನಿಗೆ ಅತ್ಯಂತ ಕ್ಲೇಶವಾಯಿತು. ಕಣ್ಣಿಗೆ ಕತ್ತಲುಗವಿಯಿತು. ತಲೆ ಹಿಡಿದುಕೊಂಡು ಸುಮ್ಮನೆ ಕೆಲಕಾಲ ಕುಳಿತಳು. ಆಯಿ ಅಜ್ಜನ ಮನೆಯ ಸ್ಥಿತಿ ಕೇಳಿ ಹೀಗೆ ಕುಳಿತಳೆಂದು ಮುದುಕಿ ಭಾವಿಸಿದ ಳೇನೊ ! ಅಷ್ಟರಲ್ಲಿ ತಾರಕ್ಕನ ಬಾಯಿಂದ ಮಾತು ಹೊರಬಿದ್ದಿತು. "ಎಂಥಾಕಿ ಇದಾಳ ಆ ಪುಣ್ಯವತಿ !" ಧ್ವನಿಯಲ್ಲಿ ಮಾತ್ಸರ್ಯವಿತ್ತೋ ಸಂತಸವಿತ್ತೋ ಎಂಬುದು ನಮ್ಮ ಊಹೆಗೆ ನಿಲುಕದ ವಿಷಯ !

"ಚೆಲುವ ಬಟಗಡಲಿ ಕಾಳ ಆಗಿದಾಳು. ಮಾರಿ ಮ್ಯಾಲ ಇಷ್ಟ ಬಟಾ ಬಟಾ ಕಣ್ಣು, ಹಣಿ ಮ್ಯಾಲ ಸಣ್ಣ ಕುಂಕುಮ. ಸುದ್ದ ನಿನ್ನ ಹಂಗ ಎಲ್ಲಾ ಥಾಟಮಾಟ ! ನೀ ಇಷ್ಟ ಸೊರಗಿದೀ ? ಆಕಿ ಇಷ್ಟ ಮೈಕೈಲೆ ತುಂಬಿದಾಕಿ ಇದಾಳು...." ಸ್ವಲ್ಪ ತಡೆದು "ಯಾನ ಆದರ ಯಾನ ಆಯ್ತು. ಆರೇರ ಪೋರಿ ತಾಯೀ ಚಲುವ ಇದ್ದರ ಯಾನಾಯ್ತು ? ಸಾಲಿ ಕಲತಾಕಿ ಅಂತ ಆಕಿರ ಹೀಂಗ ಮಾಡಬೇಕು ? ಆಕಿ ಚಲುವಿಕಿ ಓದ ಯಾನ ಸುಡೋದಾ ?"

"ಚಲುವ ಇರಬೇಕ ಆವಾಗ ?" ಎಂದು ತಾರಕ್ಕ ಮನದಲ್ಲಿಯೇ ಅಂದುಕೊಂಡಳು. ತಣ್ಣಗಿನ ಉಸಿರೊಂದು ಮಾತ್ರ ಹೊರಗೆ ಬಂದಿತು, ಅವಳ ಮುಖದಿಂದ. ಮುದುಕಿ ಮುಂದೆ ಹೇಳಹತ್ತಿದಳು : "ಅಂವ ಹಂಗ ಮಾಡಾನಾ ಮನ್ಯಾಗ ಹ್ಯಾಂತಿರ ಯಾನಾ ? ಆಕೀ ಮೈಯೂ ಉರ್ಕ್ಯೇದ ಅಲ್ಲ ?

ಆಕಿಯೂ ಅವನ ಉಸಾಬರಿ ಬಿಟ್ಟಳು. ಮುಂದ ಮುಂದ ಅವ್ರೂ ತಿಂಗತಿಂಗಳ ಮನೀಗೆ ಬರೋದ ಬಿಡಕಹತ್ತಿದಾ. ಬಂದರನೂ ಅಲ್ಲಿ ತಿನ್ನ, ಇಲ್ಲಿ ತಿನ್ನ; ವೇಳೇಕ ಊಟ ಇಲ್ಲ. ಕಣ್ಣಿಗಿ ನಿದ್ದಿ ಇಲ್ಲ. ಸುಗ್ಗ್ಯಾಗ ಹೊಲದಾಗ ಬಿದ್ದರ ಬಿದ್ದ. ರೈತರ ಯಾನ? ತಮ್ಮ ಕೆಲಸದ ಪುರತೇದವರು! ಊರಾಗ ಮನೀ ಏತಿ, ಅವರರ ಉಣಕ ಹ್ಯಾಂಗ ಕರದಾರು? ಹೀಂಗಾಗಿ ಒಮ್ಮಿ ಉರೀ ಬರಲಾಕ ಹತ್ತಿದೂ. ನಿರ್ವಾಹಿಲ್ಲದ ಹೋದ ಊರ ಬಿಟ್ಟ, ಹಾಂಗs ಆಕೀ ಕಡೆ. ಈಗ ಬಂದೀದಾ ಹದನ ದಿನಾ ಆಯ್ತು, ಹ್ಯಾಂಗ ಆಗೀದಾ ನೋಡ ಬೆಳ್ಳಗ ಹಂಜಿ ಹಾಂಗ!"

"ಅದಕs ತಾಯಿ ಇಷ್ಟ ಸೊರಗಿದಾ. ಮೊನ್ನಿ ನನಗ ಗುರುತ ಹತ್ತ ಲಿಲ್ಲಾ!" ಧ್ವನಿಯಲ್ಲಿ ಮರುಕವಿತ್ತು.

"ಸೊರಗಕ ಅವನ ಮೈಯಾಗ ಉಳದೀತಿ ಯಾನ ಈಗ? ಸುಮ್ಮ ಗೊಂಬಿ ಹಾಂಗ ತಿರಗಾಡತಾ. ಇನ್ನ್ಯಾನ ಭಾಳ ದಿನಾ ತಾಳೂಹಂಗಿಲ್ಲ."

ತಾರಕ್ಕನ ಮುಖದ ಮೇಲೆ ಒಮ್ಮೆಲೇ ಹೆಣದ ಕಳೆ ಬಂದಿತು. "ಯಾನ ಹೇಳತೀನ?" ಕಂಪಿಸುವ ಕಂಠದಿಂದ ಮಾತು ಹೊರಬಿದ್ದಿತು ಅವಳ ಮುಖ ದಿಂದ.

"ಮೊನ್ನಿ ಯಾರೋ ಹೇಳತಿರ ತಾಯಿ, ಮಿರಜಿ ದವಾಖಾನೇದಾಗ ಎದೀ ಫೋಟೋ ತಗದ ನೋಡಿದಾರಂತ. ದೊಡ್ಡ ಬ್ಯಾನಿ ಹತ್ತೇತಿ, ಹಿಂಗs ಸಣ್ಣ ಆಗತs ಹೋಗಾಂವ ಅಂತ."

"ನಮ್ಮ ಮಾವ ಎಂಥಾ ಪುಣ್ಣೇದಾಂವ ಇದ್ದಲ್ಲ! ಅವಂದರ ಪುಣ್ಣಿ ಇಂವಗ ಹತ್ತಬಾರದ ಯಾನ?" ಎಂದಳು ತಾರಕ್ಕ ನೊಂದು.

ಮುದುಕಿ ಮುಂದೆ ಹೇಳಹತ್ತಿದಳು "ಇಂಥಾ ರೋಗ ಹತ್ತೇತಿ, ಹ್ಯಾಂತಿ ಹುಡುಗೂರನಾ ಸಹಿತ ಹತ್ರ್ಯಾಕ ಬಿಡೂದುಲ್ಲ. ಮನ್ಯಾಗರ ಸಮಾಧಾನ ಇರತಾಳು? ಅದೂ ಇಲ್ಲ. ಹುಡುಗ ಬಂದ ಅಂದರ ನಾಲ್ಕ ದಿನಾ ಹೊರಗಿನ ಬೋಲೇದಾಗs ಇರತಾ."

ತಾರಕ್ಕ ಎದ್ದು ನಡೆದಳು. ಎದುರಿಗೆ ಮುದುಕಿ ಇನ್ನೂ ಕುಳಿತಿರುವಳೆಂಬ ಅರಿವು ಅವಳಿಗೆ ಉಳಿದಿರಲಿಲ್ಲ. ಈಗ ಅನಂತನ ಸ್ಥಿತಿ ಹೀಗೇಕಾಯಿತೆಂದು

ಯೋಚಿಸುತ್ತಿದ್ದಳಾಕೆ. ತಾವಿಬ್ಬರೂ ಕೂಡಿ ಇದ್ದಿದ್ದರೆ ಅವನು ಹೀಗಾಗು ತ್ತಿದ್ದನೇ ಎಂಬ ಪ್ರಶ್ನೆ ಅವಳ ಮನಸ್ಸಿನಲ್ಲಿ ತಿರುತಿರುಗಿ ಬರುತ್ತಿತ್ತು. ಇಂಥ ಪರಿಸ್ಥಿತಿಯಲ್ಲಿ ಅವನನ್ನು ಕಂಡು ಮಾತಾಡದೆ ಇರುವುದು ಒಳಿತಲ್ಲ. ನನ್ನ ಮಾತನ್ನು ಕೇಳದ್ದಕ್ಕೆ ಹಾಳು ಮಾಡಿಕೊಂಡ ಎಂದುಕೊಂಡಳೇನೊ! ಇನ್ನು ಅವನನ್ನು ಕಾಣುವದೆಂತು? ಎಂದು ವಿಚಾರಿಸುತ್ತಿದ್ದಳು. ಗಂಡನನ್ನು ಕೇಳಿದರೆ ಬಿಡುವನೇ? ಹತ್ತು ಜನರಲ್ಲಿ ಬಾಯಿ ಮಾಡುತ್ತ ನಿಂತರೆ? ಎಂದು ಯೋಚಿ ಸುತ್ತ ಕಂಬಕ್ಕೆ ಆನಿಸಿ ನಿಂತಿದ್ದಳು, ಒಂಟಿಗಾಲಿನ ಮೇಲೆ.

ಮದುವೆಗೆ ಬಂದ ಹೆಂಗಸರ ಗುಂಪೊಂದು ಊರು ನೋಡಲಿಕ್ಕೆ ನಡೆ ದಿದ್ದಿತು. ಹಳ್ಳಿಯ ಹೆಂಗಸರವರು. ಸ್ವಲ್ಪ ದೊಡ್ಡ ಊರಿಗೆ ಬಂದಮೇಲೆ ಅಲ್ಲಿಯ ಪೇಟೆ ಗುಡಿಗಳನ್ನೆಲ್ಲ ನೋಡಲು ಬಯಸುವದು ಸ್ವಾಭಾವಿಕ. ಅದ ರಿಂದ ಅವರು ಹೊರಗೆ ಹೊರಟದ್ದರು. ತಾರಕ್ಕನಿಗೆ ಏನೋ ಹೊಳೆಯಿತು. ಒಮ್ಮೆಲೆ "ನಾನು ಬರತ್ಯಾನು" ಎಂದು ಹೊರಟಳು. ಆ ಹೆಂಗಸರ ಗುಂಪಿಗೂ ಹರುಷವಾಯಿತು. "ಬಾ ನೀ ಇಲ್ಲಿ ಇದ್ದಾಕೇ ಇದೀ, ನಮಗರ್‍ಯ ಎಲ್ಲಾ ತೋರಿಸ ಬಾ" ಎಂದು ಕರೆದರು. "ಹೂಂ!" ಎಂದು ಮುಂದಾಗಿ ನಡೆದಳು ತಾರಕ್ಕ.

ಹಾದಿ ತೋರಿಸುವ ಹೊಣೆ ತಾರಕ್ಕನ ಮೇಲೆ ಬಿತ್ತು. ಅವಳಿಗೆ ಬೇಕಾದ ಹಾದಿಯೇ ಬೇರೆ. ಆದುದರಿಂದ ಅವಳು ಅವರನ್ನು ಹೊಸಮನೆಯವರ ಮನೆಯ ಮುಂದಿನ ಹಾದಿಯಿಂದಲೇ ಕರೆದೊಯ್ದಳು. ಅನಂತ ಬೀದಿಗೆ ಹೊಂದಿರುವ ಕೋಣೆಯಲ್ಲಿಯೇ ಕುಳಿತಿದ್ದ. ದೂರದಲ್ಲಿ ಹೆಂಗಸರ ಗುಂಪನ್ನು ಕಂಡೊಡನೆ ತಮ್ಮ ಮನೆಗೆ ಬಂದರೇನೋ ಎಂದು ಭಾವಿಸಿ ಎದ್ದು ಹೊರಗೆ ಬಂದ. ತಾರಕ್ಕ ಅನಂತನ ಕಡೆಗೆ ನೋಡಿದಳು. ಸಂಗಡ ಉಳಿದ ಹೆಂಗಸರಿರುವ ರೆಂದು ಒಂದು ಕ್ಷಣ ಮರೆತಳೇನೊ! ಅವಳ ಮನಸ್ಸು ತೀವ್ರವಾಗಿ ಅವನತ್ತ ಹರಿಯಿತು. ಮುಂದಾಗಿ ಅನಂತನಿಗೆ ಕೇಳಿದಳು:

"ಸಿದರಾಯಾನ ಗುಡಿ ತೋರಸಲಾಕ ಯಾರರ ಇದಾರು?"

"ಯಾಕ? ಯಾರ ಹೋಗಾವರ ಇದಾರು?"

"ಮದವಿಗಿ ಬಂದ ಹೆಂಗಸರೆಲ್ಲ ಹೋಗಾವರ ಇದಾರು. ಯಾರನ್ನರ ಹಚಕೂಡಲ್ಲ."

"ನೀ ನೋಡಿಲ್ಲ ಯಾನ?" ಗುಂಪಿನೊಳಗಿನ ಹೆಂಗಸೊಬ್ಬಳು ಕೇಳಿದಳು. "ನಾ ನೋಡಿದ್ಯಾನು; ಆದರ ನಾ ನಮ್ಮ ಅತ್ತಿಗಿಷ್ಟ ಗಂಟ ಬಿದ್ದ ಬರತ್ಯಾನು. ಅಲ್ಲಿ ತನಕ ನೀವ ಮುಂದ ಆಗರಿ ಅಂತ. ನಿಮ್ಮ ಸಂಗಾಟ ಯಾರನಾರೇ ಹಚಕುಡತ್ಯಾನಲ್ಲ" ಎಂದು ಹೇಳಿದಳು.

ಅನಂತ ಓಣಿಯಲ್ಲಿ ಆಡುವ ಒಬ್ಬ ಹುಡುಗನನ್ನು ಕರೆದು ಗುಡಿ ತೋರಿಸಲು ಹೆಂಗಸರ ಸಂಗಡ ಕಳುಹಿಸಿದನು. ಹೆಂಗಸರೆಲ್ಲ ಮುಂದೆ ಸಾಗಿದರು ತಾರಕ್ಕ "ಬರುವಾಗ ಇಲ್ಲೇ ಕರಕೊಂಡ ಬಾ" ಎಂದು ಹುಡುಗನಿಗೆ ಸೂಚಿಸಿ, ತಾನು ಅನಂತನ ಕೋಣೆಯನ್ನು ಹೊಕ್ಕಳು.

ಅನಂತನ ಮುಖ ನಿಸ್ತೇಜವಾಗಿದ್ದಿತಾದರೂ ಶಾಂತವಾಗಿದ್ದಿತು. ತಾರಕ್ಕ, ನನ್ನು ನೋಡಿ ನಕ್ಕ. ಆ ನಗೆ ನಿರ್ಮಲವಾಗಿದ್ದಿತು. ಆದರೂ ಚೇಷ್ಟೆಯ ಸ್ವರದಲ್ಲಿ ಕೇಳಿದ "ಈಗ ಎಲ್ಲಿ ಆದರು ಹೋಗುಣು ಬರತೀ ಯಾನಾ?"

ತಾರಕ್ಕ ಅನಂತನ ಮುಖವನ್ನೊಮ್ಮೆ ನಿರೀಕ್ಷಿಸಿದಳು. ಮುಗುಳು ನಗೆಯೊಂದನ್ನು ಬೀರಿ ಮತ್ತೆ ತಲೆ ಕೆಳಗೆ ಹಾಕಿದಳು ಆ ನಗೆ ಎಂಥದಿತ್ತೊ? ಏನೊ! ಆದರೂ ಆ ನಗೆಯಲ್ಲಿ, ನಿನ್ನ ಮಾತಿನಿಂದ ನಿನ್ನ ಅಂತರಂಗವನ್ನೆಲ್ಲಾ ಗ್ರಹಿಸಿದೆನೆಂಬ ಭಾವ ತುಂಬಿ ಹೊರಬಂದಿದ್ದಿತು. ಅನಂತನ ಪ್ರಕೃತಿ ಸ್ಥಿತಿ ಗತಿ ಅವಳ ಸಂಗತಿಗಳನ್ನೆಲ್ಲಾ ಕೇಳಬೇಕೆಂದು ಬಂದಿದ್ದಳು. ಆದರೂ ಒಂದೂ ಮಾತನ್ನಾಡಲು ಅವಳಿಂದ ಆಗಲಿಲ್ಲ. ನಾಲಿಗೆ ಎತ್ತಲಿಲ್ಲ.

ಅನಂತನೇ ಕೇಳಿದ "ಜನರ ಯಾನಾದರ ಅಂದಾರಂತ ಅಂಜತಿ ಅಲ್ಲ!" ಈಗಲೂ ತಾರಕ್ಕ ಏನೂ ಹೇಳಲಿಲ್ಲ. ಮತ್ತೆ ಅನಂತನೇ ಮಾತಾಡಹತ್ತಿದ: "ಇದಕ್ಯಾಕ ಅಂಜಬೇಕು? ನಾ ಅಪ್ಪ ಸತ್ತಾಗಿಂದೂ ಎಲ್ಲಾ ಅಂಜಿಕಿ ಬಿಟ್ಟ ಬಿಟ್ಟಿನು. ನೀ ಆಗ ಬರಕ ತಯಾರ ಇದ್ದಿ. ನಾ ಬರಲಿಲ್ಲ. ನಿನ್ನಾ ಮತ್ತೊಬ್ಬರಿಗಿ ಮಾಡಿಕೊಟ್ಟರು. ಮುಂದ ನಾ...." ಏನೋ ಹೇಳಬೇಕೆಂದಿದ್ದವ ಅಷ್ಟಕ್ಕೇ ಬಿಟ್ಟ "ಹೀಂಗ ಆದಿನು. ನೀನೂ ಹೀಂಗ ಆದಿ."

ಅನಂತನ ಮಾತಿನಲ್ಲಿ ಸರಳತೆ ಇದ್ದಿತು. ಹಿಂದಿನ ಸಂಗತಿಯನ್ನು ನಗು ನಗುತ್ತಲೇ ಹೇಳಿದ. ತಾರಕ್ಕನಿಗೆ ಬಹಳ ನೋವಾಗುತ್ತಲಿದ್ದಿತು. ಮನದಲ್ಲಿ

"ಹ್ಯಾಂಗ ಆದರ ಇನ್ಯಾನ ? ಹ್ಯಾಂಗೂ ಹೋಗೋದ ಅಲ್ಲಾ, ಒಂದ ದಿನಾ ?" ಎಂದುಕೊಂಡಳು. ಸ್ವಲ್ಪ ತಡೆದು "ನೀ ಎಲ್ಲಿರ ಹೋಗೂನು ಅಂದರ ನನಗ ಕೆಟ್ಟ ಅನುಸೂದುಲ್ಲ ಆದರ ಬದಲ ಇನ್ನs ನನ್ನ ಮ್ಯಾಲಿ ಮಾಯೇ ಏತಿ ಅಂತ ಹಿಗ್ಗ ತ್ಯಾನು" ಎಂದಳು.

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು.

"ಅನಂತಾ !"

ಅವಳ ಮುಖದ ಮೇಲಿನ ದೃಷ್ಟಿಯನ್ನು ಕೀಳದೆ "ಯಾಕ ?" ಅಂದ ಅನಂತ.

"ನಿನ್ನಾ ನೋಡಿದರ ಭಾಳ ಕೆಟ್ಟ ಅನಸತೇತಿ ! ಹೀಂಗ್ಯಾಕ ಮಾಡಿದಿ?" ಅವಳ ಕಂಠದ ಅಧಿಕಾರವಾಣಿಯಿದು.

"ಯಾನ ಮಾಡಿದಿನು ?"

"ನಾನs ಹೇಳಲಿ" ಎಂದು ಮುಖ ಮುಚ್ಚಿಕೊಂಡು ಅಳಹತ್ತಿದಳು ತಾರಾ. ಅನಂತನ ಮುಖ ಲಜ್ಜೆಯಿಂದ ಬಿಳುಪಾಯಿತು. ತಲೆಬಾಗಿ ಮನದಲ್ಲಿಯೇ ಅಂದುಕೊಂಡ : "ನನ್ನ ಕಡೆ ತಪ್ಪಾಯ್ತು. ನೀ ಇಲ್ಲ ಆದರ ನಾ ಯಾನ ಮಾಡಲಿ ?" ತಾರಕ್ಕನ ಕಡೆಗೆ ನೋಡಿ "ನೀನರ ಛಲೂ ಇದೀ ಅಲ್ಲಾ ?"

"ಛಲೂ ಇದ್ಯಾನ ; ಯಾರ ಹತ್ತರಾ ?"

"ಎಲ್ಲಿರ ಇರವಲ್ಲಿ ; ನಿನ್ನ ಪ್ರಕೃತಿ ಹಿಂಗ್ಯಾಕ ಆಗೀತಿ ? ಹೇಳತಿ ?"

ತಾರಕ್ಕ ಅನಂತನ ಮುಂದೆ ಮುಚ್ಚಿಡಲಿಲ್ಲ. "ಅವರ ಮೈಯಾಗ ನೆಟ್ಟಗ ಇಲ್ಲ. ಕೆಟ್ಟ ರೋಗ ಏತಿ. ಮಾಡಿಕೊಂಡ ಗಂಡನ ಗೂಡಾ ಜನ್ಮಾ ಮಾಡಾಕ ಬ್ಯಾಡಾ ?"

"ಹಾಂಗ ಅಂತ ಹಾಳಾದಿನಲ್ಲ !" ಅದೇಕೊ ಅನಂತ ಅವಡುಗಚ್ಚಿದ.

"ಹುಡುಗುರ ಹ್ಯಾಂಗ ಇದಾವು ? ನಿನ್ನ ಹ್ಯಾಂತಿನಾ ನನಗ ತೋರಸುದುಲ್ಲಾ ?"

ಹೆಂಡತಿಯ ಮಾತು ಅವನಿಗೆ ತಲೆ ಬೇಸರ ಹಿಡಿಸುವಂತಹದು. ಬೇಸರದಿಂದ ಹೇಳಿದ. "ಇದಾಳ ಯಾನ ನೋಡತಿ ಆಕೀನಾ ? ಬ್ಯಾಡ ಆದ ಹ್ಯಾಂತಿ

ಹೊಟ್ಟೀಲೆ ಹುಟ್ಟಿದ ಹುಡುಗೂರು ಎಂಥಾವ ಇದ್ದಾವು ?"

"ಆಕಿ ಮ್ಯಾಲ ಯಾಕ ಇಷ್ಟ ಬ್ಯಾಸರ ?"

"ಯಾಕ ಹೇಳ ನೀನs...."

"...................."

ತಾರಕ್ಕ ಅಳುತ್ತ ಕೂತಲ್ಲಿಯೇ ಹೊರಳಿ ಬಿದ್ದಳು. ಸುತ್ತಲೂ ಕತ್ತಲೆ ಕವಿದಿದ್ದಿತು. ಗುಡಿಗೆ ಹೋದ ಹೆಂಗಸರು ದೂರದಲ್ಲಿ ಬರುತ್ತಿದ್ದರು. ಅನಂತ ಅವಳ ಹತ್ತಿರ ಹೋಗಿ ಕುಳಿತು ನೀರಸವಾದ ಕೈಗಳಿಂದ ಕುರುಳು ತೀಡುತ್ತ "ನಿಮ್ಮೂರ ಹೆಂಗಸರು ಬಂದರು!" ಎಂದು ಎಚ್ಚರಿಸಿದ.

"ಬರಲಿ."

"ಅವರ ಗೂಡಾ ನೀ ಹೋಗುದುಲ್ಲ ಯಾನಾ ?"

"ಇಲ್ಲ ; ನಾ ಇಲ್ಲೇ ಇರತ್ಯಾನು."

"ಹುಚ್ಚs ಯಾನ ನಿನಗ....?"

"ಈಗ ಬ್ಯಾಡ. ಆ ದಿನ ಯಾನ ನಾ....ನಿನಗ....?"

ಅನಂತನ ನಯನಗಳಿಂದ ಪಶ್ಚಾತ್ತಾಪದ ಎರಡು ದೊಡ್ಡ ಹನಿಗಳು ತಾರಕ್ಕನ ಮುಖದ ಮೇಲೆ ಉರುಳಿದುವು.

ತಾರಕ್ಕ ಎದ್ದು ಕುಳಿತು ಅವನ ಕಣ್ಣೀರು ಒರಿಸುತ್ತ "ನನಗ ಸಂಕ್ಟ ಆಯ್ತು ಹೊಟ್ಯಾಗ, ಅದಕ ಅಂದಿನು."

"ಅದ ನನಗೂ ಗೊತ್ತ ಏತಿ" ಕಣ್ಣೀರು ತಡೆದು ನುಡಿದ ಅನಂತ.

"ಹಾಂಗಾರ ನನ್ನಾ ಯಾಕ ಹಚಕುಡತಿ ?"

"ಇಲ್ಲೇ ಇರಬೇಕ ಅಂತಿ ಯಾನ ಹಾಂಗಾದರ....?"

"...................."

ಅನಂತ ಬಿಕ್ಕಿ ಬಿಕ್ಕಿ ಅಳಹತ್ತಿದ. ಈ ಸಲ ಅವನಿಗೆ ದುಃಖ ತಾಳದಾಯಿತು. ಹಾಗೆಯೇ ಬಿಗಿಹಿಡಿದು "ನನ್ನಾ ಮಂತಿ ಯಾನೆ ಇನ್ನಾ ?"

"ನೀ ನನ್ನಾ ಮರತರ....?" ಅನಂತನ ಮುಖವನ್ನೇ ನಿರೀಕ್ಷಿಸಿದಳು.

"......................"

ಅಷ್ಟರಲ್ಲಿ ಹೆಂಗಸರ ಗುಂಪು ಬಂದಿತು. ತಾರಕ್ಕ ಎದ್ದು ನಿಂತಳು, ಅನಂತನನ್ನು ಬಿಟ್ಟು.

## ೨೧

ಅನಂತನ ಹೊಲಗಳೆಲ್ಲ ಹೋಗಿದ್ದುವು. ಎರಡು ಕೂರಿಗೆಯ ದೋಣಿಯ ಹೊಲವೊಂದು ಮಾತ್ರ ಉಳಿದಿದ್ದಿತು. ಮನೆಯಲ್ಲಿ ಸಾಕಷ್ಟು ಕಾಳುಕಡ್ಡಿಗಳಿಲ್ಲ. ಇನ್ನೂ ಸುಗ್ಗಿ ದೂರ ಇದ್ದಿತು. ಎರಡು ಹೊತ್ತು ಒಳಗೆ ಬಂದು ಹೆಂಡತಿ ತಾಟಿನಲ್ಲಿ ಹಾಕಿದಷ್ಟು ತಿಂದು ಹೊರಗಿನ ಕೋಣೆಯಲ್ಲಿ ಹೋಗಿ ಕೂಡುವನು. ಹೀಗಾಗಿ ಅವನಿಗೆ ದಿನದಿನಕ್ಕೆ ಬೇಸರ ಬರಹತ್ತಿತು. ಉಳಿದ ಹೊಲವನ್ನೂ ಎಲ್ಲಿಯಾದರೂ ಮಾರಬಹುದೆಂದು ಹೆಂಡತಿ ಮೇಲಿಂದ ಮೇಲೆ ಗಂಡನಿಗೆ ಮಾರಕೂಡದೆಂದು ಆಜ್ಞಾಪಿಸುತ್ತಿದ್ದಳು. ಆದುದರಿಂದಲೇ ಅದು ಇನ್ನೂ ಉಳಿದಿದ್ದಿತು. ತೇರದಾಳದಿಂದ ಆಗಾಗ ಅನಂತನ ಬೀಗ ಬಂದು ಹೋಗುತ್ತಿದ್ದ. ಬಂದಾಗ ತಂಗಿಗೆಂದು ಏನಾದರೂ ಕಾಳುಕಡ್ಡಿ ಕಟ್ಟಿ ತರುವನು. ಅವುಗಳ ಮೇಲೆಯೇ ಹುಡುಗರು ಅನಂತ ಇಂದಿರೆ ಎಲ್ಲರೂ ಉಪಜೀವಿಸಬೇಕು. ತಂಗಿಯ ಈ ಕಷ್ಟದ ಸಂಸಾರವನ್ನು ಕಾಣಲಾರದೆ ಒಮ್ಮೆ ಅವಳನ್ನು ತವರು ಮನೆಗೆ ಕರೆದೊಯ್ಯುವುದೆಂದು ನಿಶ್ಚಯಿಸಿದ. ಅನಂತನಿಗೆ ಕೇಳಿದ. ಅದಕ್ಕೆ ಪ್ರತಿಯಾಗಿ ಅನಂತ ಏನೂ ಹೇಳಲಿಲ್ಲ. ಹೋಗುವಾಗ ಅವನ ಹೆಂಡತಿಯೇ ಹೇಳಿದಳು.

"ನಾಲ್ಕ ದಿನಾ ಹೋಗಿ ಬರತ್ಯಾನು ; ಅತ್ತಿ ಹತ್ತರ ಊಟಾ ಮಾಡರಿ!"

"ಹೂಂ!" ಎಂದ ಅನಂತ; ಮತ್ತೇನೂ ಹೇಳಲಿಲ್ಲ.

ಹೆಂಡತಿ ಊರಿಗೆ ಹೋದಳು, ಎರಡು ಹೊತ್ತು ಹೋಗಿ ಅನಂತ ತಮ್ಮನ ಮನೆಯಲ್ಲಿ ಊಟಮಾಡಿ ಬರುತ್ತಿದ್ದ. ತಮ್ಮನ ಹೆಂಡತಿ ಹತ್ತು ಮಾತಾಡಿ ಒಂದು ರೊಟ್ಟಿ ಹಾಕುತ್ತಿದ್ದಳು. ಅನಂತನಿಗೆ ಊಟಕ್ಕೆ ಹೋಗಬೇಕೆಂದರೆ ಜೀವ ಹೋದಂತಾಗುವದು. ಆದರೂ ನಿರ್ವಾಹವಿಲ್ಲದೆ ಎರಡು

ಹೊತ್ತು ಹೋಗಿ ನಾಲ್ಕು ತುತ್ತು ತಿಂದುಬರುತ್ತಿದ್ದ. ಅವನ ತಾಯಿ ಅವನ ಗೂಡ ಮಾತಾಡುತ್ತಿರಲೇ ಇಲ್ಲ. ಅವಳು ಅನಂತನ ಮೇಲೆ ಅವನ ನಡತೆಗಾಗಿ ಸಿಟ್ಟಾಗಿದ್ದಳು. ಒಂದು ದಿನ ಮಧ್ಯಾಹ್ನದಲ್ಲಿ ಅನಂತ ಇದೀಗ ಊಟ ಮಾಡಿ ಬಂದು ತನ್ನ ಕೋಣೆಯಲ್ಲಿ ಕುಳಿತಿದ್ದ. ಅಂಚೆಯವನು ಒಂದು ಕವರು ತಂದುಕೊಟ್ಟು ಹೋದ. ಅನಂತ ನೋಡಿದ. ಪರಿಚಿತ ಅಕ್ಷರಗಳು. ಕೈಯಲ್ಲಿ ತಕ್ಕೊಂಡು ನಡುಗುವ ಕೈಗಳಿಂದ ಒಡೆದು ಓದಹತ್ತಿದ. ಕಾಗದ ಹೀಗಿದೆ:

"ಕ್ಷೇಮ ಅಂತ ಹೇಗೆ ಬರೆಯಲಿ ?

"ನೀವು ಪ್ರಕೃತಿ ತೋರಿಸಿಕೊಂಡು ಲಗೂನ ತಿರಗಿ ಬರತೇನಂತ ಹೇಳಿ ಹೋದವರು ಇನ್ನೂ ಬರಲಿಲ್ಲ. ನಿಮ್ಮ ಶಕ್ತಿ ದಿನಕದಿನಕ ಕಡಿಮೆ ಆಗಲಿಕ್ಕೆ ಹತ್ತಿದೆ ಅಂತ ಸುದ್ದೀ ಕೇಳಿ ನನ್ನ ಕೈಕಾಲೇ ತಣ್ಣಗಾದವು. ಡಾಕ್ಟರರಿಗೆ ಪ್ರಕೃತಿಯನ್ನು ತೋರಿಸಿದಿರಾ ? ಅವರು ಏನೆಂದು ಹೇಳಿದರು ? ಮಿರಜಿಯ ಹಾಸ್ಪಿಟಲಿನಲ್ಲಿ ಕೆಲವು ದಿವಸ ನಿಲ್ಲು ಅಂದಿದ್ದರೆ ನಾನು ನಿಮ್ಮ ಉಸಾಬರಿಗೆ ಬರುವೆ. ಅಲ್ಲಿ ನಿಂತು ನೆಟ್ಟಗೆ ಆಗಿರಿ. ಮನೆಯವರು ಯಾರಾದರೂ ಉಸಾಬರಿಗೆ ಬಂದರೆ ಬರಲಿ. ನಾನು ಹೊರಗಿನ ಕೆಲಸವನ್ನಾದರೂ ಮಾಡಲು ಬರುವೆ. ಹೇಗಾದರೂ ಹೊರಗಿನ ಕೆಲಸಕ್ಕೆ ಹೆಂಗಸೊಬ್ಬಳು ಬೇಕಾಗುವಳಲ್ಲ ! ನೀವು ಖರ್ಚಿನ ಸಲುವಾಗಿ ಚಿಂತೆ ಮಾಡಬೇಡಿರಿ. ಸದ್ಯಕ್ಕೆ ನನ್ನ ಆಭರಣಗಳನ್ನು ಮಾರಿ ಖರ್ಚು ಮಾಡೋಣ. ನಾನು ನೀವಿಲ್ಲಿರುವಾಗ ಒಂದೆರಡು ಸಾರೆ ಈ ಮಾತೆತ್ತಿದಾಗ ಏನೂ ಮಾತಾಡಲಿಲ್ಲ. ನೀವು ನನ್ನ ಆಭರಣ ತೆಗೆದುಕೊಳ್ಳಲು ಸಂಕೋಚಪಟ್ಟುಕೊಳ್ಳುವಿರೆಂದು ನಾನು ತಿಳಿದುಕೊಂಡೆ. ಖರೇ ಅಂದರೆ ಹಾಗೆ ತಿಳಿಯಬೇಕಾಗಿಲ್ಲ, ನೀವು ಮಾಡಿಸಿಕೊಟ್ಟ ಆಭರಣಗಳು—ಅದರಲ್ಲಿ ನನ್ನವು ಕೆಲವು ಇದ್ದರೂ—ನಿಮಗೆ ಕೊಡದ ಆಭರಣಗಳು ನನಗೆ ಯಾತಕ್ಕೆ ಬೇಕು ? ನಿಮ್ಮ ಪ್ರಕೃತಿ ಸುಧಾರಿಸಿದರೆ ಸಾಕು. ನೀವೊಬ್ಬರೇ ನನ್ನೆಲ್ಲ ಆಭರಣ, ಶೃಂಗಾರ.

"ಇಲ್ಲಿ ಮನೆಯಲ್ಲಿ ಕಿಡಕೆಯೊಳಗಿಂದ ನೋಡಿದರೆ ಉಗಿಬಂಡಿ ಬರುಹೋಗುವುದು ಕಾಣಿಸುವುದೆಂಬುದು ನೀವು ತಿಳಿದ ಸಂಗತಿ. ಪ್ರತಿಯೊಂದು ಗಾಡಿಗೂ ತಮ್ಮ ದಾರೀ ಕಾಯುತ್ತಿರುವೆ. ಒಂದು ಗಾಡಿ ಬಂದು ತಾವು ಬಾರದೆ ಹೋದಲ್ಲಿ ಮತ್ತೊಂದು ಗಾಡಿ ಬರುವವರೆಗಿನ ಅವಕಾಶವೆಂದರೆ ಒಂದು

ಯುಗದಂತೆ ಭಾಸವಾಗುವುದು ನನಗೆ ! ನಿಮ್ಮನ್ನು ಕರಕೊಂಡು ಬಾರದ ಗಾಡಿ ಯಾತಕ್ಕೆ ಬರುತ್ತಿರುವದೋ ಎನ್ನುವೆ ನಾನು. ಈ ಕಾಗದ ಬರೆಯು ವಾಗಲೂ ಸಂಜೆಯ ಗಾಡಿಗೆ ಬಂದಾರಲ್ಲ ಎಂಬ ಸಂಶಯವೂ ಬರುತ್ತಿದೆ! ಮನಸ್ಸು ತನಗೆ ಬೇಕಾದುದನ್ನೆಲ್ಲ ಬಯಸುವುದಲ್ಲವೆ ?

"ಇಂದು ಮುಂಜಾನೆ ಒಂದು ಸಂಗತಿ ನಡೆಯಿತು. ನೀವು ನನ್ನನ್ನು ಬಂದು ಕೂಗಿ ಕರೆದಂತೆಯೂ ನಾನು ಬಹಳ ನಿದ್ರೆಯಲ್ಲಿದ್ದು ಎಚ್ಚರಾಗದೆ ಬಹಳ ವೇಳೆಯ ವರೆಗೆ ಬಾಗಿಲ ತೆಗೆಯದ ಹಾಗೆ ಮಲಗಿಕೊಂಡಂತೆಯೂ ಅನ್ನಿಸಿತು. ಬೆಳಗಿನ ಗಾಡಿಯ ಕೂಗು ಕೇಳಿ ಒಮ್ಮೆಲೇ ಎಚ್ಚತ್ತು ಧಡಪಡಿಸಿ ಓಡಿಬಂದು, ಬಾಗಿಲ ತೆರೆದು "ಬರ್ರಿ !" ಎಂದೆನು. ಎದುರಿಗೆ ಹಾಲಿನವ ನಿಂತಿದ್ದ. ಮನದಲ್ಲಿ "ಛೀ !" ಎಂದುಕೊಂಡು ನಾಚಿ ಮರಳಿದೆ. ಆಮೇಲೆ ತಾವು ಕೂಗಿದಂತಾದುದು ಕನಸಿನಲ್ಲಿ ಎಂದರಿವಾಯಿತು.

"ಹಾಲಿನವ ಹಾಲು ತಂದುಕೊಡುತ್ತಾನೆ. ನೀರಿನವ ನೀರು ತಂದು ಹಾಕುತ್ತಿದ್ದಾನೆ. ಉಪಾಯವಿಲ್ಲದೆ ಅಡಿಗೆ ಮಾಡಿ ಊಟಮಾಡುತ್ತಿದ್ದೇನೆ. ಗಾಡಿಗಳು ಬರುತ್ತಿವೆ. ಹೋಗುತ್ತಿವೆ. ಮೊದಲಿನಂತೆ. ಆದರೂ ನೀವೂ ಇಲ್ಲ ದಾಗ ನಾನು ಜೀವ ಇಲ್ಲದ ಒಂದು ಯಂತ್ರದಂತಾಗಿರುವೆ. ಯಾವಾಗಲೂ ನಿಮ್ಮ ನೆರಳೆನಂತಿರುವ ಈ ಬಡ 'ಭಂಗಾರಿ'ಯನ್ನು ಮರೆಯಬೇಡಿರೆಂದು ಕೈ ಮುಗಿದು ಬೇಡಿಕೊಳ್ಳುವೆ."

ಈ ಕಾಗದ ಬಂದ ಮೇಲೆ ಅನಂತ ಮೂರು ನಾಲ್ಕು ದಿನ ತಮ್ಮನ ಮನೆಗೆ ಊಟಕ್ಕೆ ಹೋಗಲಿಲ್ಲ. ಮೊದಲನೆಯ ದಿನ ಆವನು ಊಟಕ್ಕೆ ಬಾರದಿದ್ದು ದಕ್ಕೆ ಯಾರೂ ವಿಚಾರಿಸಲಿಲ್ಲ. ಮರುದಿನ ಎಷ್ಟಾದರೂ ತಾಯಿಯ ಕರುಳು ಕೇಳಲಿಲ್ಲ. "ಯಾಕೋ ಎರಡ ದಿನಾ ಅನಂತ ಊಟ್ಕ್ಯಾಕ ಬಂದಾಂಗ ಕಾಣುಸುದುಲ್ಲ !" ಎಂದೇ ಸುಂದರವ್ವ ಸೊಸೆಯ ಮುಂದೆ ಮಾತೆತ್ತಿದಳು.

"ಅತ್ತೀ ಮನೀಗಿ ಹೋದರ ಹೋದ ಆದಾ, ಹ್ಯಾಂತಿನೂ ಅಲ್ಲೇ ಇದಾಳು. ಅಂಪದ ಯಾನಾ ? ಅಲ್ಲಿ ನಾಲ್ಕ ದಿನಾ, ಇಲ್ಲಿ ನಾಲ್ಕ ದಿನಾ ನಿಂತ ಉಳದ ದಿನಾ ಕಳ್ಯಾಂಪ" ತುಚ್ಛತೆಯಿಂದ ನುಡಿದಳು.

ಸೊಸೆಯ ಈ ಮಾತು ಸುಂದರಾಬಾಯಿಯ ಕರುಳನ್ನು ಹಿಚುಕದಿರಲಿಲ್ಲ.

"ಒಳ್ಳೇ ಆಗ ಅಂದ್ರ ಅಂವ ಹೋಗಿಲ್ಲ. ಈಗ್ಯಾನ ಹೋಗ್ತಾ ಮೈಯಾಗ ನೆಟ್ಟಗಿಲ್ಲಾ ?" ಎಂದಳು.

ಸೊಸೆ ಏನೂ ಹೇಳಲಿಲ್ಲ. ಅತ್ತೆಯೂ ಹೆಚ್ಚಿಗೆ ಮಾತಾಡಲಿಲ್ಲ. ಮನದಲ್ಲಿ ಮಾತ್ರ 'ಆ ಭಂಗಾರಿ ಕಡೆ ಹೋದ ಯಾನೊ!' ಎಂದುಕೊಂಡಳು.

ಮಧ್ಯಾಹ್ನ ನೆರೆಮನೆಯ ಹೆಂಗಸೊಬ್ಬಳು ಬಂದು ಹೇಳಿದಳು, "ಅನಂತ ಆದೂ ಡೋಣಿ ಹೊಲಾ ಕೊಟ್ಟಲ್ಲ! ಹೀಂಗ ಕೊಟ್ಟ ಮುಂದ ಯಾನ ಮಾಡಾಂವ?" ಎಂದು ಸುಂದರಾಬಾಯಿಗೆ ಕೇಳಿದಳು.

"ಮುಂದ ಯಾನ ಮಾಡತಾ? ಮಕ್ಕಳ ಕೈಯಾಗ ಬಿಕ್ಕೇದ ಪರಟಿ ಕೊಟ್ಟ ಆಯ್ತು! ಪಾಪ! ಅವ ಇವನ ಹೊಟ್ಟಿಗಿ ಹುಟ್ಟಿದ ತಪ್ಪ!" ಎಂದು ಸ್ವಲ್ಪ ಕಾಲ ಸುಮ್ಮನಾದಳು. ಆಮೇಲೆ ಬಿಸಿಯುಸಿರಿನೊಂದಿಗೆ ಕೇಳಿದಳು "ಯಾರ ತಗೊಂಡರು ?"

"ಅಂವs ಸಾವಕಾರಲ್ಲ, ಮೂರಸಾವಿರಕ ತಗೊಂಡ ಅಂತs."

"ಎಷ್ಟಕ ತಗೊಂಡದ ಬಗ್ಗೆ ಯಾನ ಏತಿ? ಹೊಲಾ ಪದರಾಗಿಂದ ಹೋಯ್ತಲ್ಲ, ಆಣಿ ಕಾಲಿನಂಥಾದ್ದು. ನಮ್ಮಾವರ ಇರೂ ತನಕಾ ಆ ಒಂದ ಹೊಲದಮ್ಯಾಲೇ ನಮ್ಮ ಎಲ್ಲಾ ಕುಟುಂಬ ಸಾಗತಿತ್ತ" ಎಂದು ಕಣ್ಣೀರು ತಂದಳು.

"ನಿಮ್ಮಾದ ಇರೂ ತನಕಾ ಇತ್ತಲ್ಲ. ಸತ್ತ ಎಮ್ಮಿಗ್ಗಿ ಸೇರ ತುಪ್ಪ ಅಂದರ ಯಾನ ಆಗೋದಾ? ಕೊಡೋಗ ನಮಗರ ಒಂದ ಮಾತ ತಿಳಿಸಬಾರದಿತ್ತ? ಹಿರೆ ರ ಹೊಲಾ ಯಾನರ ಮಾಡಿ ಜೀವಾ ಒತ್ತಿ ಇಟ್ಟ ನಾವರ ತಗೋತಿದ್ದೇವಲ್ಲ" ಎಂದಳು. ಸಣ್ಣ ಸೊಸೆ ಒಳಗಿನಿಂದ ಬಂದು, "ಹೂಂ! ತಿಳಿಸತಾನ! ಯಾವದ ಮಾರೋಗ ತಿಳಿಸಿದ್ದಾ? ಇಲ್ಲೇ ಊಟಕ ಬರತಾ. ಹತ್ತ್ಯಾಕಿಂದ ಹೋದರೂ ಒಂದ ಮಾತ ಮಾತಾಡಸುದುಲ್ಲ"

"ನಿನ್ನ ಗೂಡಾ ಮಾತಾಡುದುಲ್ಲಾ ?" ಬೆರಗಿನಿಂದ ಕೇಳಿದಳು ನೆರೆಮನೆಯವಳು.

"ಅವ್ವಾ! ಮಾತಿಗಿ ಹೋದಿ ನೀ! ದಿನ್ನಾ ಇಲ್ಲೇದು ಹೋಗತಾ, ನೀ ಸತ್ತೀದೀನೋ ಇದಿನೋ ಅಂತ ಕಣ್ಣ ಎತ್ತಿ ನೋಡುದುಲ್ಲ ತಾಯಿ! ಮಾತ ಆನಕಾ ದೂರ ಇರಲಿ"

"ಅಯ್ಯ ! ಇಂಥಾದ ಏತಿ ? ನನಗ ಯಾನ ಗೊತ್ತ ಇಲ್ಲ ತಾಯಿ ! ನಮ್ಮ ಹುಡಗರ ಹೊಲದಿಂದ ಬಂದು ಅಂದರ ಇನ ಬಾಗಿಲಾಗ ಇರತಾನ್ಯ "ಅವ್ವಾ ! " ಎಂದ ಕರೀದ ಒಂದ ದಿನಾ ಇಲ್ಲ."

"ನಮ್ಮ ಹುಡಗರ ಯಾನ ? ಮೊದಲ ಅಂಥಾಂವ್ಯ ಇದ್ದ. ಈ ತೇರ ದಾಳ ಪೋರಿ ನೆರದ ಮನೀಗಿ ಬಂದಾಗಿನಿಂದೂನ ಹೀಂಗ ಆದ. ನನ್ನ ತಮ್ಮನ ಮಗಳ ಆದರೂ ಆಕೀ ಕಾಲಗುಣಾನ್ಯ ಛಲೂ ಹತ್ತಲಿಲ್ಲ."

"ಆಕೀ ಕಾಲಗುಣಾ ಯಾನ ಮಾಡೇತು ? ಇವಂಗ ಯಾನ ಭಂಗಾರಿ ಬೆನ್ನ ಹತ್ತಿ ಹಾಳಮಾಡ ಅಂದೀತ್ಯಾನ ? " ಎಂದು ಚಿಕ್ಕ ಸೊಸೆ ಸಿಡುಕಿನಿಂದ ಒಳಗೆ ಹೋಗುತ್ತ ನುಡಿದಳು.

ಅವಳು ಹೋದನಂತರ ಸುಂದರಾಬಾಯಿ ಸ್ವಲ್ಪ ದನಿಯನ್ನು ತಗ್ಗಿಸಿ "ಯಾನ ಹೇಳತಾಳ ಇಕ್ಕೀ ? ಇಕ್ಕಿ ಬಂದಳು ; ಬಂದ ವರ್ಷದಾಗ್ಯ ನಮ್ಮಾವ ರನ್ನ ಮಣ್ಣಾಗ ಹಾಕಿದಳು. ತಂದೂ ಹೊಂಟತೇತಿ ಅಂತ ಹೀಂಗ ಸೆಟಗೊಂಡ ಹೋಗತಾಳ ! ಇಕೀಗಿ ಅಂದ ನಾ ಎಲ್ಲಿ ಇರಲಿ ತಾಯೀ ? ಮಗಾ ಬರಾನಾ ಈಗ ಹೇಳಿ ಜಗಳಾ ಹಚ್ಚಿ ಇಡತಾಳ" ಎಂದು ಅನ್ನುವದನ್ನು ಅಂದೇ ಸುಮ್ಮ ನಾದಳು.

"ಯಾಕ ? ಇಕಿಗಿ ಯಾನ ಅಂಜತಿ ಯಾನ ನೀ ? " ವಿಷ ಬೆರಿಸಿದಳು ನೆರೆಮನೆಯವಳು.

ಇದನ್ನರಿತೇ "ಯಾರ ಹೇಳಿದರು, ಅನಂತಾ ಹೊಲಾ ಕೊಟ್ಟ ಅಂತಾ ?" ಸುಂದರಾಬಾಯಿ ವಿಷಯ ಬದಲಿಸಿದಳು.

"ಈಗ ಹೇಳಿದ ತಾಯೀ ಆ ಹಳಬರ ಯಮುನು. ನಿನ್ನಿ ಚಾವಡ್ಯಾಗ ಯಾನ ನೋಡಕ ಬಂದೀರಂತ. ಇನ್ನ್ಯ ಖರೀದಿ ಆಗಿತ್ಯೋ ಇಲ್ಲೋ ಯಾರಿಗಿ ಗೊತ್ತ ? "

"ಆಗಿದ್ದರ ಆಗಿದ್ದಾದೋತ ಏಳ ; ತಗೋಳಾಂವ ಅಂದ ಮ್ಯಾಲಿ ಹಿಂಗ್ಯಾಕ ಊರೆಲ್ಲಾ ತಿಳೀಗೊಟ್ಟಾ ಸಾವಕಾರ. ಪತ್ತೆ ಇಲ್ಲದ ಹೋಗಿ ಮಾಡಕೊಂಡ ಬಂದ ಆದಾ" ಎಂದಳು ಸುಂದರಾಬಾಯಿ.

ಅನಂತ ಹೊಲ ಕೊಟ್ಟ ದಿವಸವೇ ಭಂಗಾರಿಗೆ ರೂಪಾಯಿ ಕಳುಹಿ, ಒಂದು ಕಾಗದ ಬರೆದ. 'ನನಗೆ ಡಾಕ್ಟರು ಟಿ.ಬಿ. ಆಗಿದೆ ಎಂದು ಅಭಿಪ್ರಾಯ

ಪಡುತ್ತಾರೆ. ಇನ್ನು ನಾನು ನಿನ್ನ ಸಹವಾಸದಲ್ಲಿದ್ದು, ನಿನಗೂ ತೊಂದರೆ ಕೊಟ್ಟು, ಪಾಪ ಕಟ್ಟಿಕೊಳ್ಳಲಾರೆ, ಮುಂದೆ ನನ್ನಿಂದೇನೂ ಆಶಿಸಬೇಡ' ಇಷ್ಟು ಬರೆಯುವಷ್ಟರಲ್ಲಿ ಕಾಗದದ ಮೇಲೆ ನಾಲ್ಕಾರು ದೊಡ್ಡ ದೊಡ್ಡ ಕಣ್ಣೀರ ಹನಿಗಳು ಬಿದ್ದು ಹೊಲಸಾಯಿತು. ಈಗ ಅವನೆಲ್ಲಿಯೂ ಹೋಗುವದಿಲ್ಲ, ತಮ್ಮನ ಮನೆಗೂ ಊಟಕ್ಕೆ ಹೋಗಲಿಲ್ಲ, ಅನಂತ ಮನೆಯಲ್ಲಿ ಬಂದಿರುವ ನೆಂದು ತಿಳಿದೂ ಸುಂದರವ್ವ ಕರೆಯಿಸಲಿಲ್ಲ. ಸಂಜೆಗೆ ನಾಭಿರಾಜನೇ ಮನೆಗೆ ಬಂದಾಗ ಹೇಳಿದ. "ಅಣ್ಣಾ ಮನೀ ಮುಂದ ನಿಂತಿದ್ದ. ಹೊಲಾ ಕೊಟ್ಟೆದ ಖರೇ ಅಂತ. ಎಲ್ಲೇರೆ ಡಾಕ್ಟರರಿಗೆ ಪ್ರಕೃತಿ ತೋರಸತಾನಂತ; ಮೊನ್ನೆ ಡಾಕ್ಟರರೂ ಹೇಳಿದ್ದರು. ಬದಕಿ ಉಳಿದರ ಮುಂದ ಬೇಕಾದ್ದ ಆದೋತ ಅಂತ. ಅದಕ್ಕs ಕೊಟ್ಟ ಹೊಲಾ. ಊಟಕ ಬಾ ಅಂದರೂ ಬರಲಿಲ್ಲ."

"ಕರೀಮಾರಿ ಇಲ್ಲ್ಯಾಽದಕ ತೋರಸಕ ಬರತಾನ ಇನ್ನ ?" ಎಂದಳು, ಬಿರುಸುದನಿಯಿಂದ, ಮುಖದಿರುವಿ ಸುಂದರಾಬಾಯಿ.

"ಅದೂ ಅಷ್ಟ, ಹೊಲಾ ಮಾರಿದಾ. ಯಾರದ ಸೂರದ ನೆಳ್ಳಾಗರಬಿದ್ದ ಸಾಯಾಂವ ಆಯ್ತು" ಅವನ ಹೆಂಡತಿ ಅಂದಳು.

"ಯಾರದ ನೆರಳಾಗ ಯಾಕ ? ಅವನ ಮನಿ ಇಲ್ಲೋ, ಯಾನ ನಾವ ಇಲ್ಲೋ ? ಹಾಂಗ ಇಳಿಸಿ ಮಾತಾಡತಿ ನೀ! ಅಂವಗ ಒಂದ ವ್ಯಾಳೇ ಬಂತಂದರ ನಾವ್ಯಾನ ನೋಡೋದ ಇಲ್ಲ ಯಾನ ? ಯಾತಕ ಇರಬೇಕ ಆಂಯ್ದ ಅಣ್ಣ ತಮ್ಮರ."

ಸುಂದರಾಬಾಯಿಯೂ ಅನಂತನ ಮೇಲೆ ಎಷ್ಟು ಸಿಟ್ಟಾಗಿದ್ದರೂ ಸಣ್ಣ ಮಗನ ಈ ಮಾತು ಕೇಳಿ ಒಳಗೊಳಗೇ ಆನಂದಿಸದಿರಲಿಲ್ಲ.

"ತಂದ ಇಟ್ಟಗೊಳ್ಳರಿ ಮನ್ಯಾಗs ನಾ ಯಾನ ಬ್ಯಾಡ ಅಂತ್ಯಾನ ಯಾನ ?" ಎಂದು ಸೊಕ್ಕಿನಿಂದ ಮಾತಾಡಿ ಒಳಗೆ ಹೋದಳು, ನಾಭಿರಾಜನ ಹೆಂಡತಿ.

ಸುಂದರಾಬಾಯಿಯು ಮನಸ್ಸು ಕೇಳಲಿಲ್ಲ. ಮರುದಿನವೇ ನಾಭಿರಾಜ ನಿಂದ ತೀರದಾಳಕ್ಕೆ ಅನಂತ ಹೊಲ ಕೊಟ್ಟನೆಂದು ಪತ್ರ ಬರೆಯಿಸಿದಳು. ಪತ್ರ ತಲಪಿದ ದಿನವೇ ಅನಂತನ ಬೀಗ ಹಾಗೂ ಹೆಂಡತಿ ಹುಡುಗರನ್ನು

ಕರೆದುಕೊಂಡು ಊರಿಗೆ ಬಂದರು. ಅನಂತನು 'ಯಾಕೆ ಬಂದರು ? ಯಾವಾಗ ಬಂದರು ?' ಎಂಬ ವಿಚಾರವನ್ನು ಮಾಡಲಿಲ್ಲ. ಹೆಂಡತಿ ಎದುರಿಗೆ ಬಂದಾಗ "ಬಂದರಿ !" ಎಂದಿಷ್ಟೇ ಅಂದು ಸುಮ್ಮನಾದ. ಇಂದಿರೆಯು ತನರುಮನೆಯಿಂದ ಬರುವಾಗ ಹತ್ತೆಂಟು ದಿನ ಸಾಲುವಷ್ಟು ಧಾನ್ಯವನ್ನು ತಂದಿದ್ದಳು. ಅಣ್ಣ ಅಂಗಡಿಗೆ ಹೋಗಿ ಕೆಲವು ಚಿಕ್ಕಪುಟ್ಟ ಸಾಮಾನುಗಳನ್ನು ತಂದುಕೊಟ್ಟ. ಸದ್ಯಕ್ಕೆ ಸಂಸಾರ ಸಾಗಿತು. ಅನಂತ ಮನೆಗೆ ಊಟಕ್ಕೆ ಬರಹತ್ತಿದ. ಬೀಗ ಮೆಲ್ಲಮೆಲ್ಲನೆ ಅವನಿಂದ ಒಂದೊಂದು ಸಂಗತಿಯನ್ನು ಕೇಳಿದ. ಸುಂದರಾಬಾಯಿಯ ಹತ್ತರ ಹೋಗಿಯೂ ಎಲ್ಲ ವಿಚಾರಿಸಿ ತಿಳಿದುಕೊಂಡ. ಇನ್ನೂ ಸಾವುಕಾರ ಕೆಲವು ರೂಪಾಯಿಗಳನ್ನು ಕೊಟ್ಟಿಲ್ಲವೆಂದೂ ಗೊತ್ತಾಯಿತು. ಆಮೇಲೆ ಸಾವುಕಾರನಿಗೂ ಭೆಟ್ಟಿಯಾಗಿ ಹೇಳಿಕೊಂಡ. ಸುಂದರಪ್ಪನೂ ಹೋಗಿ ಸಾವುಕಾರನ ಕಾಲಮೇಲೆ ಬಿದ್ದು "ಅಂವ್ಯಾನ ಹಾದಿಗೇ ಹತ್ತೀದಾನು. ಈ ಹುಡುಗರನ್ನು ನಿರಾಧಾರ ಮಾಡಬ್ಯಾಡರಿ" ಎಂದು ಅಂಗಲಾಚಿದಳು. ಕೊನೆಗೆ ಸಾವುಕಾರ ಅನಂತನ ಸಮಕ್ಷಮ ಅವರಿಗೆ ಉಳಿದ ಹಣ ಕೊಡುವದಾಗಿ ಹೇಳಿದ. ಅನಂತ ಒಯ್ದು ಉಳಿದ ಹಣ ಒಂಭತ್ತುನೂರು ಮಾತ್ರ ಎಂದೂ ಹೇಳಿದ. ಅಣ್ಣತಂಗಿಯರಿಬ್ಬರೂ ಬೆಕ್ಕಸಬೆರಗಾದರು. ಮೂರು ಸಾವಿರ ರೂಪಾಯಿಗಳಲ್ಲಿ ಇಷ್ಟೇ ಹಣ ಉಳಿದಿರಬಹುದೆಂದು ಅವರು ಎಣಿಸಿರಲಿಲ್ಲ. ಹೆಚ್ಚಿಗೆ ಹಣವಿರಬಹುದು, ಮತ್ತೆಲ್ಲಿಯಾದರೂ ಹುಡುಗರಿಗೆ ಹೊಲ ಕೊಳ್ಳಬೇಕೆಂದು ಯೋಚಿಸಿದ್ದರವರು ! ಕೊನೆಗೆ ಇದ್ದಷ್ಟೇ ಕೈಗೆ ಬರಲೆಂದು ಅನಂತನನ್ನು ಕರೆದೊಯ್ದು ಅವನ ಸಮಕ್ಷಮ ಹಣ ಸಾವುಕಾರನ ಕಡೆಯಿಂದ ಇಸುಗೊಂಡರು. ಬೀಗ ಹಣ ತಕ್ಕೊಂಡ. ಕೊಂಚ ಹಣವನ್ನು ತಂಗಿಯ ಕೈಯಲ್ಲಿ ಖರ್ಚಿಗೆ ಕೊಟ್ಟ. ಊರಿಗೆ ಹೋದ. ಹೋಗುವಾಗ ಸುಂದರಾಬಾಯಿಯ ಹತ್ತರ ಹೋಗಿ "ನಿಮ್ಮ ಆಧಾರ ಮ್ಯಾಲೇ ಇಂದ್ರಾನಾ ಇಲ್ಲಿ ಇಟ್ಟ ಹೊಂಟೆದ್ಯಾನು. ನೀವು ತಡೀತಪ್ಪಡಿ ನೋಡತ ಬರ್ರಿ ! ನಾ ಮತ್ತ ಬರತ್ಯಾನಂತ" ಎಂದು ಹೇಳಿ ಹೋದ.

ಒಂದು ತಿಂಗಳು ಕಳೆದಿರಬೇಕು. ಅನಂತ ಈಗ ಮನೆಗೆ ಊಟಕ್ಕೆ ಬಂದು ಯಾರೊಡನೆಯೂ ಹೆಚ್ಚಿಗೆ ಮಾತಾಡದೆ ತಾಟಿನಲ್ಲಿ ಹಾಕಿದಷ್ಟನ್ನು ತಿಂದು ಹೋಗುತ್ತಿದ್ದ. ಉಳಿದ ವೇಳೆಯಲ್ಲಿ ಮನೆಯಲ್ಲಿ ಬರುತ್ತಿರಲಿಲ್ಲ. ಹುಡುಗರನ್ನು

ಹತ್ತರ ಕರೆದುಕೊಳ್ಳುತ್ತಿರಲಿಲ್ಲ. ಒಂದು ದಿನ ಊಟಕ್ಕೆ ಕುಳಿತಾಗ ಹೆಂಡತಿ ಹೇಳಿದಳು.

"ಹೀಂಗ ಬರೀ ತಿಂದ ತಿಂದ ಕೂತರ ಇಷ್ಟ ದುಡ್ಡ ಎಷ್ಟ ದಿನಾ ಸಾಕಾದಾವು ? ಯಾನರ ಮಾಡಬೇಕಲ್ಲ ? ಇಂದ ಮನ್ಯಾಗಿನ ಕಾಳ ಎಲ್ಲಾ ಆದು. ಹುಡುಗರ ಮ್ಯಾನ್ಯಾಲ ಅರಿವಿ ಇಲ್ಲ" ಎಂದು ಉಳಿದ ಹಣದ ಬಗ್ಗೆ ತಿಳಿದುಕೊಳ್ಳಬೇಕೆಂದು ಮಾತೆತ್ತಿದಳು.

"ಉಳಿದ ರೂಪಾಯಿ ಅಷ್ಟ ನಿನ್ನ ತಮ್ಮನ ಕೈಯಾಗ ಕೊಡಸಿದಿ. ನಾ ಬೇಡಕ ಹೋದರ ಸಾವಕಾರಗ ಕೊಡಬ್ಯಾಡಂತ ಹೇಳಿದಿ, ನನ್ನ ಕೈಯಾಗ. ಎಲ್ಲೀರs ಇಷ್ಟ ಔಷಧ ತಗೊಂಡ ನೆಟ್ಟಗ ಆಗಬೇಕೆಂದರೆ ನನ್ನಾ ಇಷ್ಟ ಆಗಮಾಡಿ ಆ ಮ್ಯಾಲ ನೀ ಸುಖದಿಂದ ಇರಬೇಕ ಅಂತಿ ?" ಅನಂತ ಕಣ್ಣು ಕೆಂಪಗೆ ಮಾಡಿ ಕೇಳಿದ.

"ಬೆಂಕಿ ಹಚ್ಚರಿ, ಆ ರೂಪಾಯಿಗಿ ಓದ! ಇಂಥ ಮಾತ ಮಾತಾಡಬ್ಯಾಡ. ಆ ರೂಪಾಯಿ ಹಾಳಿಗಿ ಹಚ್ಚಿ ಇಟ್ಟೆ, ಇವೂ ಇಷ್ಟ ಮಣ್ಣಾಗ ಹಾಕಿ ತಣ್ಣಗ ಕೂಡಬೇಕ ಅಂತೀಯೋನೋ! ಮನೀಗಿ ತಿನಕ ಬರತಿ, ಆದರ ಯಾನ್ಯಾನ ಬೇಕಾಗುತೇತಿ ಗೊತ್ತ ಆಗುದುಲ್ಲಾ ?" ಅವಳೂ ಅಷ್ಟೇ ಕೆರಳಿ ಕೇಳಿದಳು.

ಮುಂದಿನ ತಾಟು ಬೀಸಾಡಿದ ಅನಂತ ತಾಟನೊಳಗಿನ ರೊಟ್ಟಿ ಕಾಯಿ ಪಲ್ಲೆಗಳೆಲ್ಲ ಮನೆ ತುಂಬ ಆದುವು. "ಇಷ್ಟ ಹಂಗಸಿ ಹಾಕಲಾಕ ಯಾರ ರೂಪಾಯಿನ ಅವು ? ಹುಚ್ಚ ಭೋ...." ಎಂದು ಎದ್ದು ಬಾಯಿಗೆ ಬಂದಂತೆ ಆಡುತ್ತ ಹೊರಗೆ ಹೋದ. ಆಮೇಲೆ ಅವಳೂ ಊಟ ಮಾಡಲಿಲ್ಲ. ನೆರೆಮನೆಯಲ್ಲಿದ್ದ ಅತ್ತೆಗೂ ಹೇಳಲಿಲ್ಲ. ಹೋಗಿ ಹಾಸಿಗೆ ಹಾಕಿ ಮಲಗಿದಳು. ಹೊರಗೆ ಆಡುತ್ತಿದ್ದ ಮಕ್ಕಳು ಬಂದು ಎಬ್ಬಿಸಿದವು. ಎದ್ದು ಅವರಿಗೆ ರೊಟ್ಟಿ ಕೊಟ್ಟು, ತಾನು ಹೋಗಿ ಮಲಗಿಕೊಂಡಳು. ಆ ದಿನ ಸಂಜೆ ಅನಂತ ಮನೆಗೆ ಊಟಕ್ಕೆ ಬರಲಿಲ್ಲ. ಇಂದಿರವ್ವ ಮರುದಿನ ಮುಂಜಾನೆ ಎದ್ದಳು. ಅಡಿಗೆ ಮಾಡಿದಳು. ಮಕ್ಕಳಿಗಾದರೂ ಮಾಡಬೇಕಲ್ಲವೆ ? ಮಾಡಿ ಹಾಕಿದಳು. ಎರಡು ದಿನ ಸಿಟ್ಟಾರಿತು. ಹುಡುಗರು ಕರೆಯ ಹೋಗಲು ಅನಂತ

ಮತ್ತೆ ಮನೆಗೆ ಬರಹತ್ತಿದ. ಮಾತಿಲ್ಲ. ಹೇಗೋ ಸಾಗಿತು ನಾಲ್ಕು ದಿನ. ಮನೆಯೊಳಗಿನ ಜೀನಸುಗಳೆಲ್ಲ ತೀರುತ್ತ ಬಂದವು. ಇಂದಿರೆಯ ಕೈಯೊಳಗಿನ ದುಡ್ಡೂ ಆದವು. ಅದರಲ್ಲಿ ಅವಳಿಗೂ ಈಗ ಕೆಲ ದಿನಗಳಿಂದ ಸಣ್ಣಾಗಿ ಜ್ವರ ಬರುತ್ತಿದ್ದವು. ಗಂಡನ ಬೇನೆ ತನಗೂ ಹತ್ತುವದೇನೋ ಎಂಬ ಚಿಂತೆ ಅವಳನ್ನು ಒಳಗೊಳಗೇ ಕೊರೆಯುತ್ತಿದ್ದಿತು. ಇಂದು ಎಲ್ಲ ಕಡೆಯಿಂದಲೂ ನಿರುಪಾಯಳಾಗಿ ಹಾಸಿಗೆ ಹಿಡಿದಳು. ಅನಂತ ಸಂಜೆಗೆ ಮನೆಯೊಳಗೆ ಬಂದ. ಹೆಂಡತಿ ಹಾಸಿಗೆ ಹಿಡಿದದ್ದನ್ನು ನೋಡಿ "ಯಾಕ ? ಮಲಗಿದಿ ?" ಎಂದು ಕೇಳಿದ.

"ಮೈಯಾಗ ನೆಟ್ಟಗಿಲ್ಲಾ. ಎದ್ಯಾಗ ನೂಸತೇತಿ. ಬೆನ್ನ ಬಿಗದೇತಿ" ಎಂದು ಗುಸುಗುಸು ಕೆಮ್ಮುತ್ತ ಹೇಳಿದಳು ಇಂದಿರಾ.

ಹುಡುಗರಿಬ್ಬರೂ ಹತ್ತರ ಬಂದು ನಿಂತು "ಅಪ್ಪಾ, ಅವ್ವೂ ಹರಿವತ್ತೂ ಉಂಡಿಲ್ಲ !" ಎಂದು ಹೇಳಿದರು.

ಮಕ್ಕಳ ಮಾತಿಗೆ ಅನಂತನ ಹೃದಯ ಕರಗಿತು. ಉಸುರುಗರೆದು ಎದ್ದ. ಹೆಂಡತಿಗೆ ಒಂದು ಕಪ್ಪು ಚಹವನ್ನಾದರೂ ಮಾಡಿಕೊಡಬೇಕೆಂದು ಒಳಗೆ ಹೋಗಿ ಡಬ್ಬಿಗಳನ್ನೆಲ್ಲ ಹುಡುಕಿದ. ಸಕ್ಕರಿ ಇರಲಿಲ್ಲ. ಮುಂಜಾನೆ ಕೊಂಡ ಒಂದು ಮಾಪು ಹಾಲನ್ನು ಹುಡುಗರು ರೊಟ್ಟಿಯ ಗೂಡ ತಿಂದಿದ್ದರು. ಮತ್ತೊಂದು ಚಿಕ್ಕ ಡಬ್ಬಿಯನ್ನು ತೆರೆದು ಓರೆ ಮಾಡಿದ. ಚಹದ ಪುಡಿಯುಪ್ಪು ಇಣಿಕಿ ನೋಡಿತು. ಅನಂತನ ಸಹವಾಸ ಬೇಡೆಂದಿತೇನೋ ! ಆದರ ಭಾವ ಅರಿತು ಬಾಯಿ ಮುಚ್ಚಿದ ಅನಂತ. ಅವನ ಮುಖವೂ ಅದರ ಬಣ್ಣವನ್ನೇ ತಳೆದಿತು. ಆದರೂ ಸ್ವಲ್ಪ ಸಕ್ಕರೆ ತರಿಸಬೇಕೆಂದು ಮತ್ತೊಂದು ದೊಡ್ಡ ಡಬ್ಬಿಯಲ್ಲಿ ಜೋಳ ಹುಡುಕಿದ. ಅವೂ ಇರಲಿಲ್ಲ. 'ಯಾರ ಅಂಗಡಿಯಲ್ಲಿ ನಾಯಿ ತಿನ್ನಬಾರದಷ್ಟು ಸಕ್ಕರಿ ಇತ್ತೋ ಅವರಲ್ಲಿ ಒಂದು ಸಿಂಪಿ ಸಕ್ಕರೆಗೆ ಗತಿ ಇಲ್ಲದಾಯಿತೆ'ಂದು ಕಣ್ಣೀರುಗರೆದ. ಹಿಂದಿನ ದಿನಗಳ ನೆನಪೂ ಬಂದಿರಬೇಕವನಿಗೆ. ಹುಚ್ಚನಂತೆ ಅಡಗಿನ ಮನೆಯಲ್ಲಿ ಅಲೆದಾಡಿದ. ಪಶ್ಚಿಮದ ಕಿಡಕಿಯೊಳಗಿಂದ ಭರ್ರೆಂದು ಗಾಳಿ ಬೀಸುತ್ತಲಿದ್ದಿತು. ಆದರೊಡನೆ ಕತ್ತಲೆಯೂ ಒಳನುಗ್ಗುತ್ತಲಿತ್ತು.

ಹುಡುಗರು ಹೊರಗೆ ಅಂಗಳದಲ್ಲಿದ್ದವು. ಕಕ್ಕ ಹೊಲದಿಂದ ಬಂದ.

ಹೋಗಹೋಗುತ್ತ "ನಿಮ್ಮಪ್ಪ ಉಂಡ ಹೋದ ಯಾನೋ ?" ಎಂದು ಕೇಳಿದ, ಹುಡುಗರಿಗೆ.

"ಇಲ್ಲ; ಅವೂ ಮಲಗಿದಾಳು. ಅಡಗಿ ಮಾಡಿಲ್ಲ" ಎಂದವು ಹುಡುಗರು.

"ಮಲಗಿದಾಳು ?" ಎಂದು ಉದ್ಗಾರ ತೆಗೆದು ನಾಭಿರಾಜ ಮನೆಗೆ ಹೋದ. ಮೇವಿನ ಹೊರೆ ಒಗೆದು ಕೈಕಾಲು ತೊಳೆದುಕೊಂಡವನೇ ಅಣ್ಣನ ಮನೆಗೆ ಬಂದ.

"ಎಲ್ಲಿ ಮಲಗಿದಾಳೋ ಇಂದರಕ್ಕ ?" ಎಂದು ಬಾಗಿಲಲ್ಲಿರುವಾಗಲೇ ಹುಡುಗರಿಗೆ ಕೇಳಿದ.

"ಅವ್ವ ಖೋಲೇದಾಗ ಮಲಗಿದಾಳು, ಅಪ್ಪಾ...."

ತಮ್ಮನ ದನಿ ಕೇಳಿ ಅನಂತ ಹೊರಗೆ ಬಂದ. ಇಬ್ಬರೂ ಕೂಡಿ ಕೋಣೆಯಲ್ಲಿ ಹೋದರು. ಮುಖ ತೆರೆದು ಇಂದಿರವ್ವನು ಭಾವನನ್ನು 'ಬಾ' ಎಂದು ಕರೆದಳು. ನಾಭಿರಾಜ ಹಾಸಿಗೆ ಹತ್ತರ ಕುಳಿತು ಮೈಗೆ ಕೈ ಹಚ್ಚಿ ನೋಡಿದ. ಸ್ವಲ್ಪ ಮೈ ಕಾಯ್ದಿದ್ದಿತು. ಸ್ವಲ್ಪ ಯೋಚಿಸಿ ನಾಭಿರಾಜ ಹೇಳಿದ "ನಾಳಿ ಮಿರಜಿಗೆ ಹೋಗುಣು; ಇಬ್ಬರುನೂ ಡಾಕ್ಟರರ ನೆದರಿಗಿ ಹಾಕೂಣು" ಅಣ್ಣನ ಕಡೆಗೆ ಹೊರಳಿ "ನೀನೂ ತೋರಸತ್ಯಾನ ಅಂತಿದ್ದಿ; ಇನ್ನs ಹೋಗಿಲ್ಲ ಕಾಣಸತೇತಿ" ಎಂದ.

"ಎಲ್ಲೇದ ತೋರಸತಾರು ? ಅಣ್ಣಾ ರೂಪಾಯಿ ಓದಾ. ಕೈಯಾಗ ದುಡ್ಡ ಬ್ಯಾಡಾ ?" ಎಂದಳು ಕಣ್ಣೀರು ತಂದು.

"ಬದಕಿದ ಮ್ಯಾಲ ದುಡ್ಡು ಎಲ್ಲೇದರ ಬಂದಾವ ಬಿಡು. ದುಡ್ಡ ಯಾನ ಮನಸ್ಯಾನ ಹುಟ್ಟಿಸತೇತಿ ? ನಾವs ಹುಟ್ಟಿಸಿದ ದುಡ್ಡಲ್ಲಾ ?" ಎಂದ ನಾಭಿರಾಜ.

ಅನಂತನ ಊಟ ಆಗಿಲ್ಲವೆಂದು ಅರಿತುಕೊಂಡ. ಮನೆಗೆ ಊಟಕ್ಕೆ ಬರಲು ಹೇಳಿದ. ಅನಂತ ಅದಕ್ಕೆ ಏನೂ ಹೇಳಲಿಲ್ಲ. ಕೊನೆಗೆ ಹುಡುಗರನ್ನಷ್ಟೇ ಕರದೊಯ್ದು ಊಟ ಮಾಡಿಸಿದ. ಅವರನ್ನು ತಿರುಗಿ ಕಳಿಸುವಾಗ ಒಂದು ತಾಟಿನಲ್ಲಿ ರೊಟ್ಟಿ ಕಾಯಿಪಲ್ಲೆ ಅನ್ನ ಹಾಕಿ ಕಳಿಸಿದ. ಇಂದಿರೆಗೂ ನಾಲ್ಕು ತುತ್ತು ಬಿಸಿ ಅನ್ನ ಹಾಲು ತಿಂದು ಮಲಗಲು ಬಂದು ಹೇಳಿಹೋದ

ತನ್ನ ಹೆಂಡತಿಗೆ "ಹೋಗಿ ನೋಡಿಕೊಂಡು ಬಾ" ಎಂದು ಹೇಳಿದ. ಅವಳು ಹೋಗಲಿಲ್ಲ. ಅವ್ವನೂ "ಅವರ ಮಾರಿಗಿ ಓದ ಬೆಂಕಿ ಹಚ್ಚೂದುಲ್ಲ ನಾ! ಒಂದು ದಿನ ನನ್ನ ಕಡೆ ಬರಲಿಲ್ಲ ಆಕೀ ! ನಾ ಯಾತಕ ಹೋಗಲಿ ಆಕೀ ಕಡೆ ?" ಎಂದು ಬಿರುಸುಡಿಬಿಟ್ಟಳು.

"ಹ್ಯಾಂಗ ಬಂದಾಳು, ಆಕಿ? ಮುಂದ್ಯಾಗ ಮಾರಿ ತೋರಸು ಹಂಗರ ಏತ್ಯಾನ? ಒಳ್ಳೇ ಜನ್ಮಾ ಮಾಡಿತೋರಸಾಕೇ ಇದಾಳ ಖರೇ" ಎಂದ ನಾಭಿರಾಜ.

"ಅಂಥಾ ಜನ್ಮಾ ಮಾಡಾಕಿ ಆಗೆಲ್ಲಿ ಹೋಗೀಳು ?" ಎಂದಳು ಅವನ ಹೆಂಡತಿ.

ಮರುದಿನ ನಾಭಿರಾಜನು ಅಣ್ಣ ಅತ್ತಿಗೆಯರನ್ನು ಕರೆದುಕೊಂಡು ಮಿರಜಿಗೆ ಒಯ್ದನು. ಡಾಕ್ಟರರು ಬಹಳ ಹೊತ್ತಿನವರೆಗೆ ಪರೀಕ್ಷೆ ಮಾಡಿ ಇಬ್ಬರಿಗೂ ಒಂದೇ ಬೇನೆ ಎಂದು ಅಭಿಪ್ರಾಯಪಟ್ಟರು. ನಾಭಿರಾಜ ರೋಗಿಗಳಿಬ್ಬರನ್ನೂ ಹೊರಗೆ ಕಳುಹಿ ಡಾಕ್ಟರರ ಹತ್ತರ ವಿವರವಾಗಿ ಕೇಳಿದ. ಅವರು "ಹೆಣ್ಣುಮಗಳ ಹೃದಯದ ಫೋಟೋ ತೆಗೆದುನೋಡಬೇಕೆಂದೂ, ಇನ್ನೂ ಸ್ವಲ್ಪ ಸಂಶಯ ಬರುತ್ತದೆಂದೂ ಹೇಳಿದರು. ಅನಂತನ ರೋಗ ಕೈಮೀರಿ ಹೋಗಿದೆಯೆಂದೂ ಕೆಲವು ದಿನ ಹಾಸಿಗಿಯಲ್ಲಿ ಮಲಗಿ ಇದ್ದರೆ ಮಾತ್ರ ಬದುಕುವ; ಇಲ್ಲವಾದರೆ ಅತಿರೇಕಕ್ಕೆ ಹೋಗುವದೆಂದೂ ಸೂಚಿಸಿದರು ಇಬ್ಬರನ್ನೂ ಸಂಜೆಗೆ ಊರಿಗೆ ಕರೆದುಕೊಂಡು ಬಂದ. ಅವನ ಮುಖದ ಮೇಲೆಯೂ ಕಳೆಯಿರಲಿಲ್ಲ. ಅದೇ ದಿನ ಮಿರಜಿಯಿಂದಲೇ ತೇರದಾಳಕ್ಕೊಂದು ಕಾಗದ ಬರೆದು ಹಾಕಿದ. ಸಂಜೆ ಮನೆಗೆ ಬಂದ ಮೇಲೆ ಅವ್ವನ ಮುಂದೆ ಕಣ್ಣೀರು ತಂದು "ಅಣ್ಣಾ ಒಬ್ಬ ಕೈಬಿಡುತಾನ ಅವ್ವ !" ಎಂದ. ಸುಂದರಾ ಬಾಯಿ ಸುಮ್ಮನಿದ್ದಳು. "ರಾಮ ಲಕ್ಷ್ಮಣರಂಗ ಜೋಡ ಇದ್ದೇವು" ಎಂದು ದನಿ ತೆಗದು, ಹುಡುಗರಂತೆ ಅಳಹತ್ತಿದ ನಾಭಿರಾಜ. ಸುಂದರವ್ವನೂ ಅಳಹತ್ತಿದಳು. ದುಃಖದ ಆವೇಗ ಇಳಿದನಂತರ ಒಂದೊಂದಾಗಿ ಎಲ್ಲವನ್ನೂ ತಾಯಿಗೆ ಹೇಳಿದ.

ಈ ಸುದ್ದಿ ಒಬ್ಬರಿಂದ ಒಬ್ಬರಿಗೆ ತಿಳಿಯುತ್ತ, ಅನಂತ ಹಾಗೂ ಇಂದಿರೆಯ ಕಿವಿಯನ್ನೂ ಸೇರದೆ ಇರಲಿಲ್ಲ. ಅಸಾಧ್ಯ ರೋಗವೆಂದೂ, ಗಂಡನ

ರೋಗವೇ ಹೆಂಡತಿಗೂ ಹತ್ತಿತೆಂದೂ ಊರ ಜನ ಮಾತಾಡತೊಡಗಿದರು. ಇದು ಸಾಂಸರ್ಗಿಕ ರೋಗವೆಂದು ಜನರು ದೂರು ದೂರಕ್ಕೆಯೇ ಸರಿಯ ಹತ್ತಿದರು. ಇದನ್ನು ಕಂಡು ಇಂದಿರವ್ವ, ಇನ್ನು ಜೀವವಿಟ್ಟು ಉಪಯೋಗ ವೇನೆಂದು ಉಪವಾಸ ಮಲಗಿದಳು ಅನಂತನೂ ಉಪವಾಸ. ಯಾರೂ ಇಲ್ಲದಾಗ ಇಬ್ಬರೂ ಒಬ್ಬರಿಗೊಬ್ಬರು ಕೊರಳಿಗೆ ಬಿದ್ದು ಅತ್ತರು. ಈಗ ಗಂಡ ಹೆಂಡರಿಬ್ಬರೂ ಹಸುಮಕ್ಕಳಂತಾಗಿದ್ದರು. ನಾಭಿರಾಜ ಬಂದು ಧೈರ್ಯ ಹೇಳಿ ಅಣ್ಣನಿಗೆ ಊಟ ಮಾಡಿಸಿದ. ಇಂದಿರವ್ವ ಏನು ಹೇಳಿದರೂ ಊಟ ಮಾಡ ಲಿಲ್ಲ, ಹಾಸಿಗೆಯನ್ನೇ ಹಾಕಿದಳು. ಅತ್ತೆ ಬಂದು ಹೇಳಿದರೂ ಅವಳು ಕೇಳ ಲಿಲ್ಲ. ಇನ್ನೇನು ಅವಳು ಜೀವಹಿಡಿಯಲಾರಳೆಂದು ಊರ ಜನವೆಲ್ಲ ಮಾತಾಡ ಹತ್ತಿತು. ಓಣಿಯೋಣಿಯಿಂದ ನೋಡಲು ಜನ ಬರಹತ್ತಿತು. ಬಂದವರ ಮುಂದೆಲ್ಲ "ನಮಗೇನ ಧಾಡಿ, ಎರಡು ಹುಡುಗರ ಪರದೇಶಿ ಆದು" ಎಂದು ಹೇಳಿ ಅಳುತ್ತಿದ್ದಳು ಇಂದಿರಾ. ನಡುಮನೆಯಲ್ಲಿ ಹಾಸಿಗೆ ಹಾಕಿದ ಅನಂತ ಏಳಲಿಲ್ಲ. ಏಳುವ ಹಾಗೆ ಮೈಯಲ್ಲಿ ಉತ್ಸಾಹವೂ ಇರಲಿಲ್ಲ. ತಮ್ಮ ಬಂದು ಹಾಕಿದಾಗ ಎರಡು ತುತ್ತು ತಿಂದು ಬೀಳುತ್ತಿದ್ದನಷ್ಟೇ.

ಎರಡು ದಿನಗಳಲ್ಲಿ ತೇರದಾಳದಿಂದ ಅನಂತನ ಬೀಗ ಮತ್ತು ಅತ್ತೆ ಬಂದರು. ಜೊತೆಯಲ್ಲಿ ಒಬ್ಬ ವೈದ್ಯನನ್ನೂ ತಂದಿದ್ದರು. ಬಂದ ಕೂಡಲೆ ಆ ವೈದ್ಯನು ಇಬ್ಬರ ಪ್ರಕೃತಿಗಳನ್ನೂ ನೋಡಿದ. ತನ್ನ ಹತ್ತರ ಔಷಧ ತಕ್ಕೊಂಡರೆ ತಿಂಗಳೊಪ್ಪತ್ತಿನಲ್ಲಿ ನೆಟ್ಟಗೆ ಮಾಡುವೆನೆಂದು ಅಭಿಪ್ರಾಯಪಟ್ಟ. ದೊಡ್ಡ ಡಾಕ್ಟರರು ದುಡ್ಡು ಸೆಳೆಯಲೆಂದು ಏನಾದರೂ ಹೇಳಿ ಹೆದರಿಕೆ ಹಾಕು ವರೆಂದೂ ತಾನು ಎಂಥೆಂಥ ರೋಗಿಗಳನ್ನು ನೆಟ್ಟಗೆ ಮಾಡಿರುವೆನೆಂದೂ ವಿವ ರಿಸಿ ಹೇಳಿದ, ಉದಾಹರಣೆ ಸಹಿತ. ಈ ವೈದ್ಯನ ಮಾತಿನಲ್ಲಿ ಅನಂತನಿಗೆ ವಿಶ್ವಾಸ ಹುಟ್ಟಲಿಲ್ಲ. ಇಂದಿರವ್ವನಿಗೆ ಮಾತ್ರ ಇನ್ನೂ ಬದುಕಿದ್ದರೆ ನಾಲ್ಕು ವರ್ಷ ಮಕ್ಕಳಿಗೆ ತಾಯಿಯಾಗಿರಬಹುದೆಂದು ಎನಿಸಿತು. ಈಗ ಅಣ್ಣ ಅವ್ವ ಬಂದುದರಿಂದ ಸ್ವಲ್ಪ ಧೈರ್ಯವು ಬಂದಿತು. ಅಂದೊಂದು ದಿನ ವಿಚಾರ ವಿನಿಮಯವಾಗಿ ಅನಂತ ಹಾಗೂ ಅವನ ಹೆಂಡತಿ ತೇರದಾಳದಲ್ಲಿ ಕೆಲವು ದಿನ ಔಷಧ ತಕ್ಕೊಳ್ಳಲು ಹೋಗುವದೆಂದೂ, ಹಿರಿಯ ಹುಡುಗ ಸಾಲೆಗೆ ಹೋಗು ತ್ತಾನೆ, ಆದುದರಿಂದ ಇಲ್ಲಿಯೇ ಸುಂದರವ್ವನ ಹತ್ತರ ಇರುವದೆಂದೂ ಗೊತ್ತಾ

ಯಿತು. ಸಣ್ಣ ಹುಡುಗನೊಬ್ಬ ಸಂಗಡ ಬರಲೆಂದು ನಿಶ್ಚಯಿಸಿದರು. ನಾಭಿರಾಜನು ಅಣ್ಣ ಅತ್ತಿಗೆಯರು ತೀರದಾಳಕ್ಕೆ ಹೋಗುವುದು ಬೇಡವೆಂದೂ ತನ್ನ ಮನೆಯಲ್ಲಿಯೇ ನಿಂತು ಉಪಚಾರ ಹೊಂದಬೇಕೆಂದೂ ಬಹಳ ಹೇಳಿದ. ಆದರೂ ಅದರ ಪ್ರಯೋಜನವಾಗಲಿಲ್ಲ. ಅವರು ಕುಡಚಿಯ ಸ್ಟೇಷನದ ವರೆಗೆ ಹೋಗಲು ಗಾಡಿಯ ವ್ಯವಸ್ಥೆಗೇನೇ ತೊಡಗಿದರು. ಆಗ ನಿರುಪಾಯನಾಗಿ “ ನನ್ನ ಗಾಡಿ ಏತಿ, ಹೋಗಿ ಹಚಕೊಟ್ಟ ಬರತ್ಯಾನ ನಡಿರಿ !” ಎಂದ. ಅದರಂತೆ ಮರುದಿನ ಮುಂಜಾನೆ ಬಂಡಿಯನ್ನು ಹೂಡಿ ಸಿದ್ಧಪಡಿಸಿದ. ಎಲ್ಲರೂ ಗಾಡಿಯಲ್ಲಿ ಕುಳಿತು ನಡೆದರು. ಸುಂದರವ್ವನೂ ಊರುದಾಟುವವರೆಗೆ ಕಳಿಸಲು ಬಂದಿದ್ದಳು. ಸಂಗಡ ಅನಂತನ ಹಿರಿಯ ಹುಡುಗನೂ ಇದ್ದ. ಊರ ಹೊರಗೆ ಹೋಗಲು “ ನಾನು ಸ್ಟೇಷನ್ ತನಕ ಹೋಗಿ ಬರತ್ಯಾನ ಗಾಡ್ಯಾಗ ಕಾಕಾನ ಗೂಡಾ ” ಎಂದು ಅದೂ ಹುಡುಗ ಹೇಳಿತು. ಇಂದಿರವ್ವ ಗಾಡಿ ನಿಲ್ಲಿಸ ಹೇಳಿ ಕರೆದುಕೊಂಡಳು. ಗಾಡಿ ಮುಂದೆ ಸಾಗಿತು.

ನಿಲ್ದಾಣದ ಮೇಲೆ ಬಂಡಿಯಿಂದ ಇಳಿದೊಡನೆಯೇ ಇಂದಿರವ್ವ ತನ್ನ ಮಗನನ್ನು ಅಪ್ಪಿಕೊಂಡು ಅಳಹತ್ತಿದಳು. ಹುಡುಗನೂ ಅತ್ತ. “ ತಿರುಗಿ ಬಂದ ಹುಡುಗನ ಮಾರಿ ಇನ್ಯಾನ ನೋಡತ್ಯಾನು ! ” ಎಂದಳು ಇಂದಿರವ್ವ.

“ ಹಾಂಗ್ಯಾಕ ಅನತಿ ನಡಿ ; ಹದನದಿನದಾಗ ನೆಟ್ಟಗಮಾಡಿಸಿ ಕಳಿಸತ್ಯಾನು ” ಎಂದು ಅಣ್ಣ ಧೈರ್ಯ ಹೇಳಿದ.

ರುಕ್ಕವ್ವನ—ಅನಂತನ ಅತ್ತೆ—ಕಣ್ಣಲ್ಲೂ ನೀರೂರಿದ್ದವು. ಅನಂತ ಮಾತ್ರ ಹುಡುಗನ ಕಡೆಗೊಮ್ಮೆ ಅವರ ಕಡೆಗೊಮ್ಮೆ ನೋಡುತ್ತಿದ್ದ. ಅವನ ಕಣ್ಣುಗಳು ಒಣಗಿದ್ದವು. ಅದರಲ್ಲಿ ನೀರಾಗಲಿ ಮತ್ತೇನಾಗಲಿ ಇರಲಿಲ್ಲ. ಮೋಟಾರಿನೊಳಗೆ ಕೂಡುವಾಗ ಇಂದಿರವ್ವ ಮತ್ತೊಮ್ಮೆ ಮಗನನ್ನು ಹತ್ತರ ಕರೆದು, ಮೈ ಸವರಿ ಅತ್ತಳು. “ ಬಾಳಾ ಹೋಗಿ ಬರಲಿ ?” ಎಂದು ಕೇಳಿದಳು, ಕಣ್ಣೀರು ಸುರಿಯುತ್ತಿರಲು.

“ ಅಳಬ್ಯಾಡವ್ವ ! ಹುಡುಗನ ನಿಮಕಿಂತಾ ನಾ ಹೂವಿನಂಗ ಜೋಕಿ ಮಾಡತ್ಯಾನು. ಅವನ ಚಿಂತೀನ್ಯ ಬಿಡ ನೀ ” ಎಂದು ನಾಭಿರಾಜ ಹತ್ತರ ಬಂದು ಅತ್ತಿಗೆಗೆ ಹೇಳಿದ.

"ಎಷ್ಟ ಅದರ ಅವ್ವನ ಹಾಂಗ ಬಂದೋತ ಯಾನಾ? ಆಕಿ ಒಂದ ಬಡದ ರೊಟ್ಟಿ ಕೊಟ್ಟಿದಾ ನೀವ ಕರದ ಕೊಟ್ಟಿದಾ ಸರೀ ಬರೂದುಲ್ಲ ಅಪ್ಪ!" ಎಂದು ರುಕ್ಕವ್ವ ಅಳಹತ್ತಿದಳು.

"ಸಾಕ ಸುಮ್ಮ ಆಗರಿ!" ಎಂದು ಮೋಟಾರಿನಲ್ಲಿ ಏರಿಸಿದರೊಬ್ಬರು.

ತೇರದಾಳದಲ್ಲಿ ಕೆಲವು ದಿನಗಳವರೆಗೆ ಇದ್ದರು. ಆಗ ಭಂಗಾರಿಯಿಂದ ಅನಂತನಿಗೆ ಎರಡು ಕಾಗದಗಳು ಬಂದುವು. ಅದರಲ್ಲಿ ಒಂದರ ಭಾವ ಹೀಗಿದ್ದಿತು. "ಅನಂತಾ, ಈಗ ನನ್ನ ಹೃದಯದೊಳಗಿಂದ ಪ್ರೇಮವೆಂಬ ಭಾವವನ್ನೇ ಕಿತ್ತುಹಾಕಲು ನಿಶ್ಚಯಿಸಿದ್ದೇನೆ. ಪ್ರೇಮಕ್ಕಾಗಿ ಸಮಾಜ, ಬಂಧು ಬಳಗವನ್ನೆಲ್ಲಾ ಲೆಕ್ಕಿಸದೆ ಯಾರ ಸಲುವಾಗಿ ಬಂದೆನೋ ಅವರೇ ದೂರಾಗುವದೆಂದರೆ ಇದಕ್ಕಿಂತ ಹೆಚ್ಚಿನ ವಿಡಂಬನೆಯು ಜಗತ್ತಿನಲ್ಲಿ ಇನ್ನೊಂದಿಲ್ಲ."

ಇದಕ್ಕೆ ಅನಂತ ಏನು ಉತ್ತರ ಬರೆದನೋ ಏನೋ! ಆದರೂ ಒಮ್ಮೊಮ್ಮೆ ತಾರಾ ಹೇಗಿರುವಳೋ? ಎಂದು ನೆನೆದುಕೊಳ್ಳುವನು. ಹೀಗೆ ಅವನ ಹೃದಯದಲ್ಲಿ ಒಮ್ಮೆ ಭಂಗಾರಿ, ಒಮ್ಮೆ ತಾರಾ, ಸುಳಿಯುತ್ತಿದ್ದರು. ಒಮ್ಮೊಮ್ಮೆ ಇಬ್ಬರೂ ಕೂಡಿಯೇ ಅವನ ಬಗೆಗಣ್ಣಿನೆದುರಿಗೆ ಬಂದು ನಿಲ್ಲುತ್ತಿದ್ದರು. ಅವನಿಗೆ ಇಬ್ಬರಲ್ಲೂ ಅನನ್ಯ ಸಾಧಾರಣವಾದ ಪ್ರೇಮವಿದೆಯೋ ಏನೋ ಅನ್ನಿಸುತ್ತಿತ್ತು. ಒಮ್ಮೊಮ್ಮೆ ಇಬ್ಬರೂ ಹತ್ತರ ಇರುವರೆಂದೇ ಭಾವಿಸುವನಾತ. ಈಗಲೂ ಅವನ ಮನದಾಳದಲ್ಲಿ ಯಾವದೋ ಒಂದು ಸಣ್ಣದೊಂದು ಅತೃಪ್ತಿಯ ದನಿ ಏಳುವದು. ಇತ್ತಿತ್ತಲಾಗಿ ಅವನ ಅಶಕ್ತತೆ ಹೆಚ್ಚುತ್ತಲಿದೆ.

ಇಂದಿರೆ ಸ್ವಲ್ಪ ಸುಧಾರಿಸುತ್ತಿದ್ದಾಳೆ. ಆಕೆಗೆ ನಾಲ್ಕೈದು ಜನ ಅಣ್ಣ ತಮ್ಮಂದಿರು. ಎಲ್ಲರೂ ಬೇರೆಬೇರೆಯಾಗಿದ್ದರೂ ದಿನಾ ಬಂದು ನೋಡಿಕೊಂಡು ಹೋಗುತ್ತಿದ್ದರು. ಸ್ವತಃ ರುಕ್ಕವ್ವನೇ ಮಗಳ ಉಸಾಬರಿಗೆ ನಿಂತಿದ್ದಳು. ಒಬ್ಬ ಅಣ್ಣನ ಮೇಲೆ ಭಾರವೇಕೆ? ಎಲ್ಲರೂ ಸ್ವಲ್ಪ ಸ್ವಲ್ಪ ಹೊರೋಣ, ಎಂಬ ವ್ಯವಹಾರದ ವಿವೇಕ ಹುಟ್ಟಿ ಇಂದಿರಕ್ಕನ ಮತ್ತೊಬ್ಬ ಅಣ್ಣ "ತಮ್ಮ ಮನೆಯಲ್ಲಿ ನಾಲ್ಕು ದಿನ ಬಾ, ಸ್ಥಳ ಬದಲಾಯಿಸಿದಂತಾಗುವದು" ಎಂದು ಹೇಳಿ ತನ್ನಲ್ಲಿ ಒಯ್ದ. ಅನಂತ ಈಗ ತಿರುಗಾಡುತ್ತಿದ್ದ. "ನಾಲ್ಕೈದು ಜನರಲ್ಲಿ ನಮಗ್ಯಾನ ನಮ್ಮ ತಂಗಿ ಭಾರ ಅಲ್ಲ!" ಎಂದು ಆಡಿಕೊಳ್ಳುತ್ತಿರುವದೂ

ಅವನ ಕಿವಿಗೆ ಬಿದ್ದಿತು. ಅತ್ತೆಯು ಹೆಣ್ಣುಸ್ವಭಾವಕ್ಕನುಸರಿಸಿ "ಅಳಿಯ ಜನ್ಮ ಛಲೋ ಮಾಡಲಿಲ್ಲೆಂದು ಸ್ವಲ್ಪ ಅನಂತನನ್ನು ಅಸಡ್ಡೆಯಿಂದಲೇ ಕಾಣತೊಡಗಿದಳು. ಇದೆಲ್ಲ ಅನಂತನಿಗೆ ಸಹನವಾಗಲಿಲ್ಲ. ಒಂದು ದಿನ ಮನೆಯಲ್ಲಿ ಯಾರೂ ಇಲ್ಲದುದನ್ನು ಕಂಡು ಹೆಂಡತಿಯ ಹತ್ತರ ಹೋಗಿ, "ನಾವು ಅಲ್ಲೇ ಇದ್ದರ ನೆಟ್ಟಗ ಆಗತಿತ್ತು. ಇಲ್ಯಾನ ಈ ವೈದ್ಯನ ಕೈಯಿಂದ ನೆಟ್ಟಗ ಆಗತೇತಿ? ನಮ್ಮದ ಮನೀ ಅಂದರ ಬ್ಯಾರೆ; ವೇಳಕ್ಕ ಇಷ್ಟ ಯಾನರ ಮಾಡಿ ತಿನಕರ ಬರತೇತಿ" ಎಂದ.

"ಈಗ್ಯಾನ ಇಲ್ಲಿ ವ್ಯಾಳೇಕ್ಕ ಆಗುದುಲ್ಲ ಯಾನಾ? ಎಲ್ಲಾ ನೆಟ್ಟಗ ಆಗತೇತಿ, ಇಲ್ಲದ ಒಂದ ನೀ ತಗೀಬ್ಯಾಡಾ. ಇನ್ನs ನನ್ನ ಅಣ್ಣಾರ ಹೆಂಡರ ನೆಟ್ಟಗ. ನಿನ್ನ ತಮ್ಮನ ಹ್ಯಾಂತಿ ಹಾಂಗ ಆಗಿದ್ದರ ಹ್ಯಾಂಗ ಮಾಡತಿದ್ದಿ?"

"ಇದ್ದಿದ್ದಾದಾರ ನಿನ್ನ ತಮ್ಮನ ಹೆಂಡರು ನಿನಗೆ ಛಲೋ! ನಾಲ್ಕ ದಿನಾ ನಿಂತಿದ್ದಕ್ಕs ಒಬ್ಬೊಬ್ಬರ ಮನೀಗಿ ಪಾಳಿ ಹಚ್ಚಿದಾರು ಮತ್ತ?"

"ಹ್ಯಾಂಗರ ಮಾಡವಲ್ಲರವರು? ಇಬ್ಬರೂನೂ ಈಗ ಅನಕಾ ಹಿಡದೀದಾರೋ ಇಲ್ಲೋ? ಪಾಳೀರ ಹಚ್ಚಲಿ, ಯಾನರ ಮಾಡಲಿ. ಇಲ್ಲದ ಒಂದ ನೀ ಸಂಶಯ ತಗೀ ಬ್ಯಾಡ" ಎಂದು ನಿಟ್ಟುಸುರೊಂದನ್ನು ಬಿಟ್ಟಳು. ಅದರಲ್ಲಿ ಅವಳ ಹೃದಯವೇ ಕರಗಿ ಬಂದಂತಿತ್ತು

"ಅದ್ಯಾನ ಬ್ಯಾಡ. ಹೋಗುಣು ನಡೀ ನಮ್ಮ ಮನೀಗಿ. ಇವರ ಹೀಂಗ ನಮ್ಮ ಉಸಾಬರಿ ಮಾಡೋದs ಬ್ಯಾಡ. ಹೀಂಗ ಮಾಡಕ ನಾವ್ಯಾನ ಕರೀಕ ಬಾ ಅಂದಿದ್ದೇವ ಇವರಿಗೆ?"

"ಮಿರಜಿಯಿಂದ ನಿನ್ನ ತಮ್ಮ ಪತ್ರಾ ಬರ್ಯಾನ ಅವರು ಬಂದರು. ನೀವ ಹೀಂಗ ಅನ್ನಾವರ ಇದ್ದರ ಇಲ್ಲಿ ಯಾಕ ಬರತಿದ್ದಿರಿ? ಈಗರ ಇಲ್ಲಿ ಬಂದೀದೇವು. ಹೀಂಗ ಹೋದರ ಮುಂದಿ ಯಾನ ಅಂದಾರು ನನ್ನ ತಮ್ಮಂದೇರಿಗಿ? ನಿಮ್ಮ ಮೈಯಾಗ ಜರಾ ಶಕ್ತಿ ಬರಲಿ. ನಾ ಕೆರೀಗಿ ಹೋಗಿ ಒಂದ ಬಿಂದಿಗಿ ತುಂಬಿ ತರೂ ಹಂಗ ಆಗಲಿ. ಅಂದರ ಹೋಗೂಣು ಅಲ್ಲ. ಅಲ್ಲಿ ಹೋಗಿ ನೀರಿಗಿ ಗತಿಯಿಲ್ಲದ ಕೂಡೋದ ಆದೋತು" ಎಂದು ಎಲ್ಲ ತೊಂದರೆಗಳನ್ನೂ ತಿಳಿಸಿದಳು.

"ಯಾನ ಬೇಕಾದ ಆಗಲಿ, ಈಗ್ಯಾಂಗೆ ಬೇಕಾಗೇತಿ ಬದಕೋದ? ಇಂದs ಸತ್ತರೂ ಸಂತೋಷದಿಂದ ಸಾಯೂನು ಮನ್ಯಾಗ. ಇಲ್ಲಿ ನಿಂತ ಇನ್ನ

ಬಾಯೊಳಗ ನೀರ ಹಾಕಾಂವ ಇಲ್ಲ ನಾ. ಮುಂದಿ ಅಂತಾರಂತ" ಎಂದ. ಅವನ ಕಣ್ಣೆದುರಿಗೆ ಹಿಂದಿನ ಬಾಳಿನ ಸೂತ್ರವೆಲ್ಲ ಸುಳಿದಿರಬೇಕು.

ಗಂಡನ ಈ ಮಾತು ಕೇಳಿ ಇಂದಿರವ್ವನ ಹೃದಯ ತುಂಬಿ ಬಂದಿರಬೇಕು. ಅದು ಧಾರೆಯಾಗಿ ಕಣ್ಣುಗಳಿಂದ ಸುರಿದು ತೆರವಾಗತೊಡಗಿತು. ಕಣ್ಣೀರು ಒರಿಸಿಕೊಂಡು ಅನಂತನ ಮುಖವನ್ನೊಮ್ಮೆ ನೋಡಿ "ನಿಮ್ಮ ಕಾಲ ಆದರ ಬೀಳತ್ಯಾನು. ಕಡೀಕ ಸಾಯುಕಾಲಕ ಅಗಲೂನು ಬ್ಯಾಡಾ. ಯಾವ ಜನ್ಮದ ಕರ್ಮ, ಇಬ್ಬರೂನು ಈ ಜನ್ಮದಾಗ ಗಂಡಹೆಂಡರನಾ ಮಾಡೇತಿ. ನಾಲ್ಕ ಒಪ್ಪತ್ತ ಹ್ಯಾಂಗರ್‍ಯ ಕೂಡಿ ಬಾಳ್ವಿ ಮಾಡೀದೇವು. ನೀ ಎಲ್ಲೀರ ಹೋಗಿ ಬಿದ್ದ ಸಾಯೋದಾ, ನಾ ಎಲ್ಲ್ಯಾರ ಇರೋದಾ, ಹೀಂಗ ಆಗೋದ ಬ್ಯಾಡ. ನಿನ್ನ ಮೈಯಾಗ ಸಿಂಪಿ ರಕ್ತ ಇಲ್ಲ. ನನಗ ಇನ್ನ್ಯ ಎದ್ದ ತಿರಗಾಡಕ ಆಗೂದುಲ್ಲ. ನಿನಗರ ಇದ ಛಂದ ಕಾಣಸತೇತಿ ಯಾನ ನೋಡು ?" ಎಂದು ನಡುಗುವ ಕೈಯಿಂದ ಗಂಡನ ಕೈಹಿಡಿದು ಕರುಣದಿಂದ ಕೇಳಿದಳು.

"ಛಂದ ಯಾನ ಮಣ್ಣು !" ನಿರ್ಧಾರದ ಸ್ವರದಲ್ಲಿ ನುಡಿದ ಅನಂತ. ಆದರೆ ಅವನ ಕಣ್ಣುಗಳಿಂದಲೂ ನೀರು ಧಾರೆಯಾಗಿ ಸುರಿಯುತ್ತಿದ್ದುವು.

ಅದೇ ದಿನ ಸಂಜೆಗೆ ಇಂದಿರವ್ವನ ಹಾಸಿಗೆಯ ಹತ್ತರ ಅಣ್ಣತಮ್ಮಂದಿರೂ ರುಕ್ಕವ್ವನೂ ಅಷ್ಟೇ ಕುಳಿತಾಗ ರುಕ್ಕವ್ವ ಹೇಳಿದಳು. "ಬ್ಯಾನೇಕಿ ಸುತ್ತ ಹೀಂಗ ಹಗಲೀ ರಾತ್ರಿ ಕಟ್ಟಿಗಿಗಿ ಹುಳಾ ಹತ್ತಿದಂಗ ಕಿಟೀಕಿಟೀ ಹತ್ತಿದರ ಹ್ಯಾಂಗ ಆಗೋದಾ ? ಮನೀ ಅಂಬೋದ ಏತಿ, ಒಂದ ಅನ್ನೋದ, ಒಂದ ಆಡೋದ. ಯಾರಿಗಾದರೂ ಬ್ಯಾಸರಿಕಿ ಅಂಬೋದ ಇರತೇತಿ. ಒಮ್ಮಿ ಅಂದರ ಹೀಂಗ ನೂಡತಾರ ಯಾನ ಯಾರರ? ಇವನ ಬೆನ್ನಿಗೆ ಬಿದ್ದಾಂವನ ಹ್ಯಾಂತಿನ್ಯ ಛಲೂ ಇದ್ದಾಗ ನಾಲ್ಕ ದಿನಾ ಮಾಡಿ ಹಾಕಬೇಕಾದರ ಹನ್ನೆರಡ ಹೆಟ್ಟಿ ಒಂದ ರೊಟ್ಟಿ ಒಗೀತೀಳಲ್ಲ, ನಾಯಿಗಿ ಒಗದಂಗ. ಅದೆಲ್ಲಿ ಹೋಯ್ತು ? ಇಲ್ಲಿ ನಮ್ಮದ ಸೇರಬರವಲ್ತ ಇಂವಗ ?"

ಇಂದಿರಕ್ಕ ನಡುಗುವ ಸ್ವರದಿಂದ "ಮತ್ತ ಹೀಂಗ ಅನಬ್ಯಾಡ್ಯ ನಮ್ಮವ್ವಾ, ಹೀಂಗ ಮಾತಾಡೇ ಅವರ್‍ನಾ ಬಿರಸ ಮಾಡಿ ಇಟ್ಟೇದೇರಿ. ನೀವ ಹಳೇ ಹಳೇ ಮಂದಿ, ನಿಮುಗ ಯಾನ ತಿಳೀದುಲ್ಲ. ಈಗಿನವರಿಗಿ ಹಾಂಗ ಅಂದರ ನಡೀದುಲ್ಲ.

ಅವರ ಥಾದಂತ ಅವ್ವ ಅಪ್ಪನ ಪರಿವೆ ಮಾಡಿಲ್ಲ. ನಿನ್ನ ಕೈಲೆ ಹ್ಯಾಂಗ ಅನಸ ಕೊಂಡಾರು?" ಎಂದಳು ಮರುಕದಲ್ಲಿ.

"ಅನಸಕೋದಿರ ಹೋಗವಲ್ಲ ಯಾಕ? ಅಂಥಾ ಮಾನವಂತ ಇಂವ ಕೊಳಿಗಿ ಗತಿ ಇಲ್ಲದಂಗ ಆಗಿದಾನ ಯಾಕ? ಎಲ್ಲಾ ಹಾಳ ಮಾಡಿ ಇಟ್ಟದಾ ಇನ್ನೂ ತಿಳೀಬಾರದು?"

"ಯಾನರ ಆಗಲಿ ನಮಗ? ನೀನs ಹೀಂಗ ಅನತೀ ಅಂದ ಮ್ಯಾಲಿ, ನಾದಿನಿದೇರ ಯಾನ ಅಂದಾರು? ನಾವ ಇನ್ನ ಇಲ್ಲಿ ಇರೂದs ಇಲ್ಲ. ನಾಳಿಗೇ ನಾವ ನಮ್ಮ ಮನಿಗೀ ಹೋಗತೇವ." ಅಣ್ಣನ ಕಡೆಗೆ ತಿರುಗಿ "ಅಣ್ಣಾ ಖರ್ಚ ಆಗಿ ಉಳದ ರೂಪಾಯಿ ಅಷ್ಟ ಕೊಡರಿ, ನಾವ ಹೋಗತೇವ" ಎಂದು ಇಂದಿರೆ ಅಳಹತ್ತಿದಳು.

"ಸಾಕ ಸುಮ್ನ ಆಗು, ಎಲ್ಲಾರು ಶಾಣೇರ? ಏಳ ನೀ ಇಲ್ಲಿಂದ" ರುಕ್ಕವ್ವನನ್ನು ಎಬ್ಬಿಸಿ ಒಳಗೆ ಕಳಿಸಿದ ಅಣ್ಣ. ಆಮೇಲೆ "ಇಂದಿರಾ, ನಿನಗ ಒಮ್ಮೇ ಹೇಳಿಲ್ಲ ನಾ? ಮುದುಕೀ ಮಾತ ಜಮಾದಾಗ ಹಿಡಿಯೂ ಹಂಗಿಲ್ಲ ಅಂತ" ಎಂದು ಹೇಳಿದ.

"ನಾ ಒಂದ ಹಿಡೀದಿದ್ದರ ಅವರ್ಯಾಕ ಬಿಟ್ಟಾರು?"

"ಅಂವಗೂ ಹಾಂಗ ಹೇಳೋದ ಅಲ್ಲ?"

"ಯಾನ ಹೇಳತೀರಿ ನೀವs ಹೇಳರೆಪ್ಪಾ, ಅವರ ಅಂತೂ ಹೊರಟ ನಿಂತಿ ದಾರ. ಇಂದ ಸಂಜಿಗಿ ನಿಮ್ಮನಾ ಕೇಳತ್ಯಾನ ಅನ್ನಾನ ನಿಂತಿದಾರ?" ಎಂದು ಬಿಕ್ಕಿಬಿಕ್ಕಿ ಅಳುತ್ತ ಕೇಳಿಕೊಂಡಳು, ಇಂದಿರಾ.

ಅನಂತನಿಗೆ ಎಲ್ಲರೂ ಹೇಳಿ ನೋಡಿದರು. ಆದರೂ ಅವನು ತನ್ನ ನಿಶ್ಚಯವನ್ನು ಕದಲಿಸಲಿಲ್ಲ. ಕೊನೆಗೆ ಇಂದಿರೆಯ ಹಿರಿ ಅಣ್ಣ ಸಿಟ್ಟನಿಂದ ಒಳಗಿನ ರೂಪಾಯಿಗಳನ್ನು ತಂದು ಕೊಡುತ್ತ "ಅಲ್ಲೀ ಇಪ್ಪತ್ತ ರೂಪಾಯಿ ಖರ್ಚ ಆಗಿದಾವ. ಇವ ನಿನ್ನ ಉಳದ ಎಂಟನೂರಾ ಎಂಭತ್ತ ರೂಪಾಯಿ ಇದಾವ ತಗೋ. ನಮ್ಮ ತಂಗಿ ಯಾನ ನಮಗಿ ಭಾರ ಅಲ್ಲ, ನಾವ ಹಿಡೀ ತೇವ, ಇರೂತನಕಾ. ಸತ್ತರ ಮಣ್ಣ ಕೊಡತೇವ; ನೆಟ್ಟಗಾದರ ನಿನ್ನ ಕಡೆ ಬಂದಾಳಂತ. ನಿನಗ ಇಲ್ಲಿ ಒಲ್ಲಿ ಆದರ ಹೋಗ. ನಾವೇನೋ ನೆಟ್ಟಗ ಮಾಡಬೇಕಂತ ಇಲ್ಲಿಗಿ ತಂದಿದ್ದೆವು. ಆದರ ನಿನಗೂ ಬ್ಯಾನಿ ಹೆಚ್ಚs ಆಗತ

ನಡದೀತಿ. ಇನ್ನ ನೀ ಹೋಗು, ನಿನ್ನ ಅಣ್ಣ ತಮ್ಮರ ಬಳಗದೊಳಗ ಇರೋಗ. ನಿನಗೂ ಅವ್ವ ಇದಾಳ ಇನ್ನs. ತಮ್ಮ ಇದಾ, ತಮ್ಮನ ಹ್ಯಾಂತಿ ಇದಾಳ" ಎಂದು ಹೇಳಿದ.

ಅನಂತ ಸ್ವಲ್ಪ ಹೊತ್ತು ವಿಚಾರಿಸಿ, ಅದರೊಳಗಿನ ಐದು ರೂಪಾಯಿ ಗಳನ್ನು ಮಾತ್ರ ತಕ್ಕೊಂಡು, ಕೋಟು ತೊಟ್ಟು ಹೊರಡಲು ಸಿದ್ಧನಾಗಿ ನಿಂತ. ಇಂದಿರಕ್ಕ ಹಾಸಿಗೆಯಲ್ಲಿ ಮಲಗಿಕೊಂಡೇ "ಈಗ ಹೊತ್ತ ಏರೇತಿ, ಊರಿಗಿ ಯಾವಾಗ ಹೋಗಿ ಹತ್ತತಿಯಾನೋ, ಜರಾ ಯಾನರ ಬಿಸಿ ಅನ್ನಾ ಮಾಡತಾರು ತಗೊಂಡ ಹೋಗರಿ. ಇನ್ನs ಮೋಟಾರಕ ವ್ಯಾಳೇ ಏತಿ" ಎಂದು ಕುಂದಿದ ಕಂಠದಿಂದ ಗಂಡನ ಹತ್ತರ ಬೇಡಿಕೊಂಡಳು.

"ಈಗ್ಯಾನ ಒಲ್ಲಿ, ಉಂಡಮ್ಯಾಲ ಊರಿಗಿ ಹೊರಡೋದ ಅಂದರ ಎತ್ತsರ ಆಗತೇತಿ. ಬರೀ ಹೊಟ್ಟೀಲೆ ಇದ್ದಷ್ಟs ನೆಟ್ಟಗ."

"ವ್ಯಾಳೇ ಆಗತೇತಿ ಅಲ್ಲ?"

"ಹಾದ್ಯಾಗ ಬೇಕಾದರ ಹಾರೋಗೇರಿಗಿ ಇಳಿತ್ಯಾನು. ಈಗs ಒಮ್ಮೆ ತಾರಾನಾ ನೋಡಕೊಂಡs ಮುಂದ ಹೋಗತ್ಯಾನು, ಸಂಜಿಗಿ!"

"ಅಲ್ಲ್ಯಾದಕ ಇಳೀತೀರಿ, ಮತ್ತ? ಆಕಿ ಗಂಡ ಯಾನ ಸುದ್ದ ಇದಾ? ಮಾವ ಸತ್ತಾಗ ಮನೀತನಕಾ ಬರೂಗೊಟ್ಟಿಲ್ಲ ಆಕೀಗಿ. ಇಲ್ಲದs ಆಕೀಗಿ ಸೂಲಾ ಮಾಡಬ್ಯಾಡರಿ ನೀವ ಹೋಗಿ!"

ಅನಂತ ಆ ಮಾತಿಗೆ ಏನೂ ಹೇಳಲಿಲ್ಲ. ಹೊರಗೆ ಹೊರಟ, ಜಡವಾದ ಹೆಜ್ಜೆಗಳಿಂದ. ಈಗ ಮೊದಲಿನ ಕಳೆಯೂ ಅವನ ಮುಖದ ಮೇಲೆ ಉಳಿಯ ಲಿಲ್ಲ.

"ಚಹಾರs ಅಷ್ಟು ತಗೊಂಡ ಹೋಗರಿ, ಮಾಡಕ ಇಟ್ಟಿದಾನು." ನಡು ಮನೆಯ ಬಾಗಿಲಿನಿಂದ ಬೀಗನ ಹೆಂಡತಿ ಹೇಳಿದಳು.

"ಈಗ ಯಾನ ಬ್ಯಾಡ. ವೇಳೆ ಇದ್ದರ ಮೋಟರ ಸ್ಟ್ಯಾಂಡಿನ ಮ್ಯಾಲs ತಗೋತ್ಯಾನಂತ. ಈ ಮೋಟಾರ ತಪ್ಪಿದರ ಸಂಜೀತನಕಾ ಮೋಟಾರ ಇಲ್ಲ!" ಎಂದು ತಪ್ಪಡಿಗಳನ್ನು ಇಡುತ್ತ ನಡೆದ, ಅನಂತ.

ಅನಂತ ಬಾಗಿಲ ದಾಟಿ ಹೋದನಂತರ "ರೂಪಾಯಿರ ಒಯ್ಯಿರಲ್ಲ; ಹೆಚ್ಚಿಗಿ ಹತ್ತ್ಯಾಕ ಇರಲಿ!" ಎಂದು ಇಂದಿರವ್ವ ಒದರಿ ಹೇಳಿದಳು.

ಅನಂತನಿಗೆ ಕೇಳಿಸಿತೊ ಇಲ್ಲೋ ಏನೊ ! ಅವನು ಹೊರಳಿ ನೋಡ ದೆಯೇ ಮುಂದೆ ಸಾಗಿದ.

ಇಂದಿರವ್ವ ಅನಂತ ಮರೆಯಾಗುವವರೆಗೆ ಬಾಗಿಲ ಕಡೆಗೇನೇ ನೋಡುತ್ತ ಕುಳಿತು ಆಮೇಲೆ ಒಂದು ದೀರ್ಘಶ್ವಾಸವನ್ನು ಹೊರದೂಡಿ "ಮೋಟಾರದಾಗರ್‍ಯ ಕೂಡಿಸಿ ಬರೋಗರೆಲ್ಲ" ಎಂದು ಹೇಳಿ ಹಾಸಿಗೆಯಲ್ಲಿ ಹೊರಳಿದಳು.

## ೨೨

ತಾರಕ್ಕನಿಗೆ ಇನ್ನೂ ಮಕ್ಕಳಾಗಲಿಲ್ಲ. ಮಕ್ಕಳಾಗದಿದ್ದುದಕ್ಕೆ ಅವಳಿಗೆ ಚಿಂತೆಯೂ ಇಲ್ಲ. ಅವಳ ದೇಹ ದಿನದಿನಕ್ಕೆ ಕೃಶವಾಗುತ್ತ ನಡೆದಿದೆ. ಆದರೂ ಮನೆಗೆಲಸವನ್ನೆಲ್ಲ ಲಕ್ಷ್ಯಗೊಟ್ಟು ನೋಡುತ್ತಾಳೆ. ಗಂಡನ ಊಟ ಉಪ ಚಾರಗಳ ಕಡೆಗೂ ಮನಸ್ಸುಗೊಡುತ್ತಾಳೆ. ಆದರೂ ಅವಳ ಮನಸ್ಸು ಈಗೀಗ ವಿರಕ್ತಿಯನ್ನು ತಳೆದಿದೆ. ಈಗ ಕೆಲವು ದಿನಗಳ ಹಿಂದೆ ಊರೊಳಗಿನ ಕೆಲ ಜನರು ಯಾತ್ರೆಗೆ ಹೊರಟದ್ದನ್ನು ನೋಡಿ ತಾನು ಗಂಡನಿಗೂ ಅತ್ತೆಗೂ ಆಗ್ರಹಮಾಡಿ, ತಾಯಿ ತಂದೆಯಂದಿರನ್ನೂ ಸಂಗಡ ಕರೆದುಕೊಂಡು ಬೆಳ್ಗೊಳ, ಕಾರಕಳ, ಮೂಡಬಿದುರೆ ಮೊದಲಾದ ಯಾತ್ರಾಸ್ಥಳಗಳಿಗೆ ಹೋಗಿ ಬಂದಳು. ಅನಂತರ ತೋಟದಲ್ಲಿ ಒಂದು ಚಿಕ್ಕ ಬಸದಿಯನ್ನು ಕಟ್ಟಿಸಿ ಅಲ್ಲಿ ದೇವರನ್ನು ಕೂಡಿಸಿದಳು. ದಿನಾಲು ಸಂಜೆ ಮುಂಜಾವುಗಳಲ್ಲಿ ಆ ಮಂದಿರಕ್ಕೆ ಹೋಗಿ ಒಂದೊಂದು ತಾಸಿನ ವರೆಗೆ ಮನೆಯ ಚಿಂತೆಯನ್ನೆಲ್ಲ ತೊರೆದು ದೇವರ ಧ್ಯಾನ ದಲ್ಲಿ ಮಗ್ನಳಾಗುವಳು. ತಾನು ಸಣ್ಣಂದಿರುವಾಗ ಕಲಿತ ಆರತಿಯ ಪದಗಳನ್ನು ಅನ್ನುವಳು. ದೇವರಿಗೆ ಆರತಿಯೆತ್ತುವಳು. ಕೊನೆಗೆ "ಲಗೂನ ಕಣ್ಣ ಮುಚ್ಚಪ್ಪ ಇನ್ನ !" ಎಂದು ಉಸಿರುಗರೆದು ಏಳುವಳು. ಇದಲ್ಲದೆ ಅವಳ ಮನಸ್ಸು ಇನ್ನೊಂದರ ಕಡೆಗೆ ಹೆಚ್ಚು ಹರಿಯುತ್ತಲಿದೆ. ತೋಟದಲ್ಲಿ ಆಳು ಮಕ್ಕಳಾಗಲಿ, ಹಾದಿಕಾರರು, ಬಡವರು ಬಗ್ಗರು ಯಾರಾದರೂ ಬಂದರೆ ಅವರಿಗಾಗಲಿ, ರೊಟ್ಟಿ ನೀರು ಹಾಕಿ ಸಮಾಧಾನ ಪಡಿಸುವಳು. ಆದರಲ್ಲಿ

ಆಲಸ್ಯವಿಲ್ಲದೆ ಒಂದೇ ಸವನೆ ದುಡಿಯುವಳು. ಅತ್ತೆಯ ಆರಯಿಕೆಯನ್ನು ಚೆನ್ನಾಗಿಯೇ ಮಾಡುವಳು. ಒಮ್ಮೊಮ್ಮೆ ಅವಳಿಗೆ ಹೊಟ್ಟೆ ಕಡಿತವೇಳುವುದು. ಅದರಿಂದ ಅವಳಿಗೆ ಬಹಳ ನೋವಾಗುತ್ತಲಿದ್ದಿತು. ಆಗ ಮೈಮೇಲೆ ಎಚ್ಚರ ವಿಲ್ಲದೆ ಮನೆ ತುಂಬ ಉರುಳಾಡುವಳು, ಒದರಾಡುವಳು. ಆದರೂ ಮನೆ ಯವರು ಡಾಕ್ಟರಿಗಾಗಲಿ ವೈದ್ಯರಿಗಾಗಲಿ ತೋರಿಸಲು ಎಷ್ಟು ಆಗ್ರಹ ಮಾಡಿ ದರೂ ಅವಳು ತೋರಿಸುತ್ತಿರಲಿಲ್ಲ.

ಹೀಗೆಯೇ ಒಂದು ದಿನಸ ತಾರಕ್ಕ ಹೊಟ್ಟೆ ಕಡಿದು ಉರುಳಾಡುತ್ತಿದ್ದಳು. ಮನೆಯಲ್ಲಿ ಅಡಿಗೆ ಮಾಡಲಿಕ್ಕಾಗಲಿಲ್ಲ. ಆಚೆ ಮನೆಯ ಬಂಧುಗಳ ಹುಡಿಗೆ ಯೊಬ್ಬಳನ್ನು ಅಡಿಗೆಗೆ ಕರೆದು ತಂದು ಹಚ್ಚಿದ್ದಳು, ಗಂಡ ಈಗ ಹೊರಗಿನಿಂದ ಬಂದರೆ ಊಟಕ್ಕೆ ಬೇಕೆಂದು. ಇತ್ತಿತ್ತಲಾಗಿ ತಾರಕ್ಕನ ತಿಳಿ ಮನದ ವರ್ತನೆ ಯಿಂದ ಬಂಧುಬಳಗದವರೆಲ್ಲರೂ ಇವರ ಮನೆಯುವರೊಡನೆ ಚನ್ನಾಗಿ ನಡೆಯು ತ್ತಿದ್ದರು. ಆದುದರಿಂದ ಅನುವು ಆಪತ್ತುಗಳಲ್ಲಿ ಅವರೂ ಬಂದು ನೆರವಾಗು ತ್ತಿದ್ದರು. ತಾರಕ್ಕ ಒಂದು ಜಮುಖಾನೆ ಹಾಸಿಕೊಂಡು ಹೊರಳಾಡುತ್ತಿದ್ದಳು. ತಲೆಯ ಕೂದಲು ಅಸ್ತವ್ಯಸ್ತವಾಗಿವೆ. ಉರುಳಾಡಿ ಉರುಳಾಡಿ ಅವಳ ಉಟ್ಟ ಸೀರೆಯೂ ಅಸ್ತವ್ಯಸ್ತವಾಗಿದೆ. ಹೊಟ್ಟೆ ಕಡಿತ ಇನ್ನೂ ಕಡಿಮೆಯಾದಂತಿಲ್ಲ. ಹಾಗೆಯೇ ಮೋರೆಯನ್ನು ಕಿವುಚುತ್ತ ಹಾಗೇ ಆ ಹುಡುಗೆಗೆ ಅಡಿಗೆಮಾಡಲು ಸಲಹೆ ಕೊಡುತ್ತ ಮಲಗಿದ್ದಳು—ಅಲ್ಲ—ಬಿದ್ದಿದ್ದಳು. ಅಮ್ಮಣ್ಣ ಮುದುಕಿ ಒತ್ತಟ್ಟಿಗೆ ಕುಳಿತಿದ್ದಳು.

"ಯಾನ ತಾಯಿ ಹದಿನೈದ ದಿನಕಾ ಮೂರೆಂಟ ದಿನಕಾ ಹೊಟ್ಟಿ ಕಡತ ಅಂತ ಹೊರಳಾಡತಿ. ಡಾಕ್ಟರಿಗೆ ತೋರಸ ಅಂದರ ತೋರಸುದುಲ್ಲ, ಯಾನ ಹೇಳಬೇಕ ನಿನಗ? ಎಲ್ಲ್ಯರ ತೋರಿಸಿ ನೆಟ್ಟಗ ಮಾಡಕೊಂಡರ ನಾಲ್ಕ ಒಪ್ಪತ್ತಿನ್ಯಾಗ ಮಕ್ಕಳಾ ಮರೀ ಆದಾವು. ಎಲ್ಲಾ ಬಿಟ್ಟ ಹೀಂಗ ಉರುಳಾಡಿ ದರ ಯಾನ ಆಯ್ತು?" ಎಂದಳು ಅಮ್ಮಣ್ಣ.

"ಇರಲಿ ಬಿಡ ತಾಯಿ! ಸುಮ್ಮನ ಕಿಟಿಕಿಟಿ ಹಚ್ಚಬ್ಯಾಡಾ, ಹೊಟ್ಟಿ ಕಡಿತದಿಂದ ಭೂಮ್ಮೇ ಥಾರೇ ಕೊಡವಲ್ತು ನನಗ, ನಿಂದೆಲ್ಲಿ ಮತ್ತ ಉಪದ್ರ ಸೋಸಲಿ? ಮಕ್ಕಳನಾ ಹಡದವರ ಈಗೆಷ್ಟ ಸುಖಾ ಸುರಕೋಕ ಹತ್ತಿದಾರ?

ಇನ್ನ ನಾವ ಸುಖಾ ಪಡೀನು ?" ತಾರಕ್ಕ ಹೊಟ್ಟೆನೋವಿನಲ್ಲಿ ಸಿಡುಕಿನಿಂದ ಆಡಿದಳು.

"ಬಾಯಿ ಮುಚ್ಚನ್ವ ! ನಿನ್ನ ಮುಂದ ನನ್ನ ಮಾತಾಡು ಮಾತ್ಯ ಉಳೀಲಿಲ್ಲ. ಮಕ್ಕಳಾ ಹಡದವರ ಯಾನ ಸುಖಾ ಪಡೀತಾರ ಅಂತೀ. ಹಾಂಗಾದರ ಮಕ್ಕಳಿಲ್ಲದ ಕೂಡವ್ವ ನೀ. ನಿನಗ್ಯಾನ ? ಹ್ಯಾಂಗಾರ ಮನೀ ಹಾಳಮಾಡಿ ಹೋದ್ಯಾನ ಅಂತೀ ಖರೇ. ನಮಗ ಮನೀ ಓಸ ಮುಂದ ಬೆಳೀಪಲ್ತ ಅಂತಾ ಅವ್ವಾ ಮಗಗಾ ಹಗಲೀ ರಾತ್ರಿ ಚಿಂತಿ ಹತ್ತೇತಿ ತಾಯೀ !"

"ನಾ ಯಾದಕ ಮಾಡಕ ಹೋಗಲೇ ನಿಮ್ಮ ಮನೀ ಹಾಳ? ಮಕ್ಕಳ ಆಗದಿದ್ದರ ನಾ ಯಾನ ಮಾಡಾಕಿ ? ಅದ್ಯಾನ ನನ್ನ ಕೈಯಾಗ ಏತಿ, ಮಕ್ಕಳ ಆಗೋದಾ ಬಿಡೋದಾ ?"

"ಅದ ಇಲ್ಲವ್ವಾ, ನಿನ್ನ ಕೈಯಾಗ ಇದ್ದದರ ನೀ ಮಾಡಕೋ ಅಲ್ಲಾ ? ಅವ್ಯಾಲ ಮುಂದ ದೈವದಾಗ ಇದ್ದರ ಮಕ್ಕಳ ಆಗಲಿ ಇಲ್ಲಾದರ ಬಿಡಲಿ. ಯಾರಿಗಿರೆ ತಿಳದಾವರಿಗಿ ತೋರಸೋದ ಬಿಟ್ಟ ದೇವರ ದೇವರ ಅಂತ ಬರೀ ಗುಡ್ಯಾಗ ಹೋಗಿ ಕೂತರ ಯಾನಾಯ್ತು ? ಧ್ಯಾನ ಮಾಡಲಾಕ ಈಗ್ಯಾನ ಮುದಿಕ್ಯೋ ತದಿಕ್ಯೋ ! ಇನ್ನs ಮುವತ್ತ ವರ್ಷದಾಗಿನ ಹೆಂಗಸ ! ಮುಂದ ಏತ್ಯಲ್ಲ ಬೇಕಾದಷ್ಟು ಮುದಿಕಿ ಆಗಾನಾ ದೇವರ ದೇವರ ಅನ್ನೋದ."

"ಮುಂದ ಯಾನ ಇರತೇತಿ ? ಮುಂದ ದೇವರಾ ಮಾಡಕಾ ಬಂದೋತ ಅಂದರs ಅದ ನನ್ನ ಕೈಯಾಗಿಂದ ಏತಿ ? ಕೈಯಾಗ ಕಾಲಾಗ ಶಕ್ತಿ ಇರೂ ತನಕಾ ಗುಡೀಗಿ ಹೋಗತ್ಯಾನು. ನಾಳಿ ಪಟಾನ ಬಿದ್ದಹೋದೆನೆಂದರ ಯಾನ ದೇವರಾ ಮಾಡಕ ಬರತ್ಯಾನು ?"

ಹೊಟ್ಟೆ ಕಡಿತದಿಂದ ನೊಂದು ಸೊಸೆ ಹೀಗನ್ನುವಳೆಂದುಕೊಂಡು ಅಮ್ಮವ್ವ "ಹಾಂಗ ಬಿದ್ದ ಹೋಗಲಾಕ ಯಾನ ಗಿಡದ ತೊಪ್ಪಲ ಯಾನ ತಾಯಿ, ಜೀವ ಅಂದರ ? ಹತ್ತೆಂಟ ವರ್ಷ ಆಯ್ತು ಕಣ್ಣ ನೆಟ್ಟಗ ಕಾಣಿಸು ದುಲ್ಲ ಅಂದರ ಆ ಕಲ್ಲಿಗಿ ಬಡೀ ಈ ಕಲ್ಲಿಗಿ ಬಡಿ ಅಂತ ಇನ್ನs ಬದಿಕಿದ್ಯಾನ. ದ್ಯಾವರ ಎಲ್ಲಿ ತೊಡಕಿದಾನೋ ಯಾರಿಗಿ ಗೊತ್ತ ? ನನ್ನ ಸನೇ ಹಾಯವಲ್ಲ.

ನಿಮಗ ಎಲ್ಲೇದ ಬಂದೋತು ? ಮೊನ್ನಿನ ಪೋರಿಗೋಳ ನೀವೆಲ್ಲಾ, ಮಾಡ ಕೊಂಡ ವರ್ಷದಾಗ ಮಕ್ಕಳ ಆಗೀರ ನಿಮ್ಮ ಮಕ್ಕಳ ನಿಮ್ಮ ಹಾಂಗ ಆಗಬೇಕ ಅಂದಮ್ಯಾಲ ನೀವ ಇಂಥಾ ಮಾತ ಮಾತಾಡೋದವ್ವ !"

ಅಷ್ಟರಲ್ಲಿ ಹೊರಗಿನಿಂದ ಅಪ್ಪಣ್ಣ ಬಂದ. ಬಿಸಿಲಾಗಿದ್ದಿತು. ಹೆಗಲ ಮೇಲಿನ ಗುದ್ದಲಿಯನ್ನು ಮೂಲೆಯಲ್ಲಿ ಇಡುತ್ತ "ಎಲ್ಲಿ ಕಾಣಸುದುಲ್ಲ ಆಕಿ ?" ಎಂದು ಕೇಳಿದ.

"ಕಾಣಸುದುಲ್ಲ ಅನಕ ಆಕೆಲ್ಲಿ ಹೋಗಿದಾಳು ? ಅಲ್ಲೇ ಹೊರಳಾಡಕ ಹತ್ತಿದಾಳ ನೋಡ. ನೀ ಯಾನ ಆಕೀನಾ ಎಲ್ಲಿ ಓದ ತೋರಸುದುಲ್ಲಾ ಬಿಡೂ ದುಲ್ಲಾ. ನೀ ನಿನ್ನ ಹೊಲಾ ಮನೀ ಅಂತs ಬಡಕೋತಿ. ಯಾರಿಗಿ ಮಾಡಿ ಇಡತೀನೋ ಯಾರಿಗಿ ಗೊತ್ತ ? ನಾ ಕಣ್ಣ ಇಲ್ಲದ ಮಬದುಕಿ ಆಗಿ, ತವರ ಮನೀಗಿರs ನಾಲ್ಕ ದಿನಾ ಹೋಗಿ ನೆಟ್ಟಗ ಮಾಡಕೊಂಡ ಬಾ ಅಂದರ ನೀ ಅನ್ನೂದುಲ್ಲ; ನಂದ ಯಾರ ಕೇಳುತಾರು ?"

"ಯಾಕ ? ಆಕೀಗಿ ನೆಟ್ಟಗ ಮಾಡಸಕೋಲಾಕ ನಾ ಯಾನ ಬ್ಯಾಡ ಅಂತ್ಯಾನ ಯಾನ ? ನಾಲ್ಕ ರೂಪಾಯ ಬೇಕಾದ್ರ ತಗೋಬೇಕ. ಹೋಗ ಬೇಕ. ಹದಿನೈದ ದಿನಾ ಹತ್ತಿರ ನಿಂತ ಯಾರಿಗಾದರ ತೋರಸಬೇಕ. ಈಗ್ಯಾನ ಇಕ್ಕಿ ಹೋದರೂ ನಮ್ಮದ ಅಡಗಣಿಸಿ ನಿಲ್ಲತೇತಿ ಹಿಂಗ್ಯಾನ ಇಲ್ಲ. ಹ್ಯಾಂಗಾರ ಅಚಿಕಡ್ಯಾವರ ಬರತಾರ, ಅಡಗೀ ಮಾಡತಾರ. ನಮ್ಮದ್ಯಾನ ನಿಂದಿರತೇತಿ ?"

ತಾರಕ್ಕ ಮನದಲ್ಲಿಯೇ ಅಂದು ಕೊಂಡಳು. "ನಾ ಇಲ್ಲ ಆದರ ಯಾರದ ಸಾಗೂದುಲ್ಲಾ ? ಎಲ್ಲಾರದೂ ಸಾಗತೇತಿ. ನನ್ನಯಾತಕ ಇಟ್ಟಾನೋ ದೇವರ ?"

ಅಪ್ಪಣ್ಣ ಒಳಗೆ ಬಂದು ಕೇಳಿದ. "ಹೋಂದ ? ನಿಮ್ಮಪ್ಪಗ ಹೇಳಿ ಕಳಸತ್ಯಾನು, ಗಾಡಿ ತಗೊಂಡ ಬರಲಾಕ. ಹೋಗಿ ನಾಲ್ಕ ದಿನಾ ನಿಂತ ತೋರಿಸಿ ಬರೋಗ ಅಲ್ಲಾ, ನೆಟ್ಟಗರ ಆಗಲಿ. ಹೀಂಗ ಹಾಸಿಗಿ ಹಿಡದರ ಯಾನ ಆಗೋದಾ ? ಇಲ್ಲೇದ ಗಾಡಿ ತಗೊಂಡ ಹೋದೀರಿ ಅಂದರ ಕಬ್ಬ ನೀರಿಗಿ ಬಂದೇತಿ. ಅದಕ ಅತ್ತಿಂದ ಗಾಡಿ ಬರಲಿ."

ತಾರಕ್ಕ ಏನೂ ಹೇಳಲಿಲ್ಲ ಸುಮ್ಮನೆ ಇದ್ದಳು. ಮತ್ತೆ ಅಪ್ಪಣ್ಣನೇ ಕೇಳಿದ. "ಯಾಕ, ಸುಮ್ಮ ಆದಿ? ಯಾನ ಅಂತಿ, ಹೋಗತಿಯಾನ?"

"ಯಾತಕ ಹೋಗಲಿ? ಎಲ್ಲಿ ಹೋದರ ಯಾನ ಐತಿ?"

"ಆಕಿ ಎಂದ ನೆಟ್ಟಗ ಉತ್ತರ ಕೊಟ್ಟೇಳು? ಯಾನರ ಒಂದ ಟೊಂಗ ಅಂತ ಮಾತಾಡತಾಳು. ಗಂಡ ಬಾಯಿ ತೆರದ ಇಷ್ಟ ಕೇಳತಾನು, ಒಂದ ದಿನಾರ ಬಾಯಿಬಿಚ್ಚಿ ಹೇಳಬೇಕು? ಇಲ್ಲs. ನೀ ಕೇಳಾಂವ ಹುಳೀ ಆಗಿ ಕೇಳತಿ. ಹಾಂಗs, ಆಕಿ ಒಂದ ಮಾತರ ಹೇಳತಾಳು ನಿನಗ?" ಎಂದು ಅಮ್ಮವ್ವ ಮಗನಿಗೆ ಪುಟಕೊಟ್ಟಳು.

"ಹೇಳದಿದ್ದರ ತನ್ನ ಸುಖಾ ತಾ ಭೋಗಸತಾಳಲ್ಲ! ಯಾರದ ಯಾನ ಹೋಗತೇತಿ? ತನ್ನ ಕಾಲಮ್ಯಾಲ ತಾ ಕಲ್ಲ ಛಲ್ಲಕೋತಾಳ ಆಯ್ತು."

"ತನ್ನ ಕಾಲಮ್ಯಾಲ ತಾ ಛಲ್ಲಕೋವಾಳ ಯಾಕ ಮತ್ತ ಹತ್ತಕಲ್ಲ. ಆದರ ಆ ಕಲ್ಲ ನಮ್ಮ ಎದಿಮ್ಯಾಲೂ ಬೀಳತಾವಲ್ಲ!" ಕೊಂಕುನುಡಿ ಆಡಿದಳು ಅಮ್ಮವ್ವ.

"ಅದನ್ನ ನಾವ್ಯಾಕ ಬಡಕೋಬೇಕು? ನಮ್ಮದ ನಾವ ಮುಂದಿನ ಹಾದಿ ನೋಡಿರ ಆಯ್ತು" ಎನ್ನುತ್ತ ಅಪ್ಪಣ್ಣ ಹೊರಗೆ ಬಂದ.

ಈ ಮಾತು ಗಂಡನ ಬಾಯಿಂದ ಹೊರಬೀಳುವದೇ ತಡ. ತಾರಕ್ಕ ಹೇಳಿದಳು "ಹೇಳಿ ಕಳಸರಿ ಊರಿಗಿ, ಅಪ್ಪಾ ಬರಲಿ, ನಾ ಹೋಗತ್ಯಾನು. ಇಲ್ಲಿ ಇದ್ದ ನಿಮಗರ ಯಾಕ ಸಂಕಟ. ನಿಮ್ಮ ಮುಂದಿನ ಹಾದಿ ನೀವ ನೋಡ ಕೋರಿ; ನಾ ಯಾನ ಬ್ಯಾಡ ಅನ್ನೂದುಲ್ಲ. ನನ್ನ ಸಲುವಾಗಿ ನಿಮ್ಮ ಸಂಸಾರ ಯಾಕ ಹಾಳಮಾಡಕೋತೇರಿ." ತಾರಕ್ಕನ ಕಂಠ ಒಣಗಿ ಬಂದಿದ್ದಿತು. ಮಾತು ತಡೆತಡೆದು ಅವಳ ಬಾಯಿಂದ ಹೊರಬೀಳುತ್ತಲಿತ್ತು.

ಈ ಎಲ್ಲ ಮಾತುಗಳನ್ನು ಲಕ್ಷ್ಯಗೊಟ್ಟು ಕೇಳಿಕೊಂಡು ಅಮ್ಮವ್ವ ಅಂದಳು. "ನೀ ಎಲ್ಲಾದಕು ತೆಲಿ ತೆರದs ನಿಂತೀದಿ. ಆದರ ಪರಾಣಿ ಆ ಮುದಕಾ ಮುದುಕಿ ಮಾರಿ ಕಡೇರೆ ನಾವ ನೋಡಕ ಬ್ಯಾಡ್ಯಾನ?"

"ಅವರ ಗಂಟ ತಿಂದಿದೀರಿ ಅವರ ಕಡೆ ನೋಡರಿ. ನಂದ್ಯಾನ ತಿಂದಿದೀರಿ ಯಾನ ಬಿಟ್ಟದೀರಿ, ನನ್ನ ನೋಡಲಾಕ ನೀವು?"

"ಯಾವದರ ಓದ ಯಾವದಕ್ಕರ ಹಚ್ಚಬ್ಯಾಡ. ಸುಮ್ಮನ ಹಲ್ಲಾಗ ನಾಲಿಗಿ ಹಾಕೊಂಡ ಬೀಳು !" ಎಂದ ಅಪ್ಪಣ್ಣ, ತಾರಕ್ಕನ ಮಾತನ್ನು ನಡು ವೆಯೇ ತಡೆದು.

ಅದೇ ದಿನ ಸಂಜೆ ತಾರಕ್ಕ ಕಡೆಗಾದಳು. ಹೊಟ್ಟೆ ಕಡಿತ ನಿಂತಿತು. ಈಗ ಕೆಲದಿನಗಳಲ್ಲಿ ಕಡೆಗಾಗುವ ಮೊದಲು ಅವಳ ಹೊಟ್ಟೆ ಹೀಗೆ ವಿಪರೀತವಾಗಿ ಕಡಿಯುತ್ತಿದ್ದಿತು. ಮುಂದೆ ಒಂದೆರಡು ದಿನಗಳಲ್ಲಿ ಚಂಪಿ ತನ್ನ ಗಂಡನ ಮನೆ ಯಿಂದ ಬಂದಳು. ಅವಳು ಒಂದು ದಿನ ತೋಟದ ಕಡೆಗೂ ಬಂದಳು. ಅವಳು ಬಂದಾಗೆಲ್ಲ ತಾರಕ್ಕನ ಹತ್ತರ ಹಟಮಾಡಿ, ಬೇಡಿ ಸೀರೆ ಕುಪ್ಪಸ ಒಯ್ಯು ತ್ತಿದ್ದಳು. ಈ ಸಲ ಅವಳಿಗೆ ಕಿವಿಯೊಳಗಿನ ಹೂವು ಬೇಕಾಗಿದ್ದುವು. ತಾರಕ್ಕನ ಹತ್ತರ ಹೂವು ಬೇಡಿ ಹಟ ಹಿಡಿದಳು. ತಾರಕ್ಕ ಅವಳ ಕಿವಿಯನ್ನು ನೋಡಿ "ಕಿವ್ಯಾಗ ಇದಾವಲ್ಲ ಹೂ, ಮತ್ಯಾನ ಮಾಡತಿ ?" ಎಂದು ಕೇಳಿದಳು.

"ಇವ ನನ್ನೂ ಅಲ್ಲ; ನಮ್ಮ ಅಬಚೀವ ಇದಾವ. ಈಗ ಕಿವ್ಯಾಗ ಯಾನ ಇಲ್ಲಂತ ನಾಲ್ಕದಿನಾ ಕೊಟ್ಟಿದಾಳು. ಆಕೇವ ಆಕಿಗಿ ಕೊಡಕವಲ್ಲಿ ?" ಎಂದು ಕೇಳಿದಳು ಚಂಪಾ.

"ಅವರಿಗೆ ಹೇಳಿರ ಅವರ‍್ಯಾನ ಮಾಡಿಸಿ ಕೊಡತಾರು ? ಹಿಂಗೆಲ್ಲಾ ಖರ್ಚ ಮಾಡತಿ ಅಂತ ನನಗ; ಅಂತಾರ ತಿರಗಿ. ಬೇಕಾದರ ನನ್ನ ಮುತ್ತಿನ ಹೂವ ಇದಾವ ; ತಗೊಂಡ ಹೋಗ ಬೇಕಾದರ." ಸ್ವಲ್ಪ ತಡೆದು "ಬರಗಿವಿಲೆ ಇರ ಬೇಕ ಖರೇ, ಮುಂದೇವ ತಂದ ಹಾಕೋಬಾರದ ತಾಯಿ !" ಎಂದು ನಿಟ್ಟು ಸುರುಗರೆದಳು

ಚಂಪಿ ಹಿಂಜರಿದು "ನಿನ್ನ ಹೂವ ಬ್ಯಾಡವ್ವ !" ಎಂದು ಹೇಳಿದಳು. ಆಮೇಲೆ ಸ್ವಲ್ಪಹೊತ್ತು ಕುಳಿತು ತನ್ನ ಗಂಡನ ಮನೆಯ ಸುಖದುಃಖಗಳ ನಾಲ್ಕು ಮಾತುಗಳನ್ನು ಹೇಳಿದಳು. ತಾರಕ್ಕ ಎಲ್ಲವನ್ನೂ ಕೇಳಿಕೊಂಡು "ಸುಖವಾಗಿರು !" ಎಂದು ಹರಸಿ ಕಳಸಿಕೊಟ್ಟಳು. "ಅವ್ವನ ಮನ್ಯಾಗ ಇರೂತನಕಾ ತೋಟದ ಕಡೆ ಬಂದ ಹೋಗತ ಬಾ ಅವ್ವಾ !" ಎಂದು ಹೇಳಿ ದಳು ತಾರಕ್ಕ.

ಆ ದಿನ ಮಧ್ಯಾಹ್ನ ಗಂಡನ ಮುಂದೆ ಮಾತಾಡುವಾಗ ಆ ಮಾತು ಈ ಮಾತು ಆಡುತ್ತ "ಚಂಪಿಗಿ ಒಂದ ಸೀರಿ ತರಸಿರಿ" ಎಂದು ಹೇಳಿದಳು.

"ಹೂಂ! ಹೀಂಗ ಎಷ್ಟ ದಿನಾ ನಾವ ಕೊಟ್ಟ ಪುರೋಸಾವರ? ಆಯ್ತಲ್ಲ, ಮದಿವಿ ಮಾಡಿಕೊಟ್ಟೇವ. ಇನ್ನ ತನ್ನ ಗಂಡನ ಮನ್ಯಾಗ ತಾ ಇರಬೇಕು. ದಿನಾ ಬಂದರ ದಿನಾ ಎಲ್ಲೇದ ಮಾಡತ ಕೂಡೂನು?" ಎಂದ.

"ಆಕೇ ನನ್ನ ಹೊಟ್ಟೆಲೆ ಹುಟ್ಟೇರ ಮಾಡದುಲ್ಲ ಆಗತಿದ್ದಿರಿ? ಆಕಿ ಹೊಟ್ಟೇಲಿ ಹುಟ್ಟಿದರ ಯಾನ ಆಯ್ತು? ನಿಮ್ಮ ಮಗಳ ಅಲ್ಲಾ?"

"ಅಲ್ಲ ಯಾರ ಅಂತಾರು? ನನ್ನ ಮಗಳ ಅಂತ ಎಷ್ಟ ಕೊಡೋದ? ಕೊಡೂ ಅಷ್ಟ ಕೊಟ್ಟೇವ, ಮಾಡೂ ಅಷ್ಟ ಮಾಡಿದೇವ ಅಲ್ಲ!"

ತಾರಕ್ಕ ಹೆಚ್ಚಿಗೆ ಮಾತಾಡಲಿಲ್ಲ. ಹೂವಿನ ಪ್ರಸ್ತಾಪವೆತ್ತಬೇಕೆಂದಿದ್ದ ಅವಳ ವಿಚಾರವು ಅಲ್ಲಿಯೇ ಅಳಿದುಹೋಯಿತು. ನಾಲ್ಕು ದಿನಗಳಲ್ಲಿ ಚಂಪಿ ಗಂಡನ ಮನೆಗೆ ಹೋಗುವೆನೆಂದು ಹೇಳಿ ಹೋಗಲಿಕ್ಕೆ ಬರಲು, ತಾರಕ್ಕ ಕಣ್ಣೀರು ತಂದು ಅವಳನ್ನು ಕಳಿಸಲಿಕ್ಕೆಂದು ಸ್ವಲ್ಪ ತೋಟ ಬಿಟ್ಟು ಮುಂದಕ್ಕೆ ಬಂದು ಮಗಳ ಕೈಹಿಡಿದು, "ನಾ ತರಲಾಕ ಹೇಳಿದರ ಸೀರಿ ತರಲಿಲ್ಲ ತಾಯಿ, ಅವರಾ!" ಎಂದು ನಿಟ್ಟುಸಿರು ಬಿಟ್ಟಳು.

"ಇರಲಿ, ಅವ್ವಾ ತಗೊಂಡಿದಾಳ ಸೀರಿ, ಈ ಸಾರೆ."

ತಾರಕ್ಕ ಸ್ವಲ್ಪ ಹೊತ್ತು ಮಗಳ ಮುಖವನ್ನು ನಿಟ್ಟಿಸಿ "ತಗೊಂಡರ ಯಾನಾಯ್ತು? ನಿನ್ನ ಗಂಡನ ಮನ್ಯಾವರ ಯಾನ ಅಂದಾರ ತಾಯಿ!" ಎಂದು ತನ್ನ ಸೀರೆಯೊಳಗೆ ಸಿಕ್ಕಿಸಿಕೊಂಡ ತನ್ನ ಮುತ್ತಿನ ಹೂವುಗಳನ್ನೂ ಹತ್ತು ರೂಪಾಯಿಗಳನ್ನೂ ತೆಗೆದು "ತಗೋ; ಈ ಹೂವ್ವ ಈ ರೂಪಾಯಿ. ನಿಮ್ಮ ಅಬಚಿ ಬೇಡಕ ಬರೂಕಿಂತಾ ಮೊದಲ ಆಕೀ ಹೂವ್ವ ಹಚಕೊಡ. ಹೋಗತಾ ಸೀರಿ ತಗೊಂಡ ಹೋಗ ಆಂ?" ಎಂದು ಹೇಳಿದಳು.

ಚಂಪಾ ತೆಗೆದುಕೊಳ್ಳಲು ಅನುಮಾನಿಸಿದಳು. ಬೆರಗುಪಟ್ಟು ತಾರಕ್ಕ ನನ್ನು ನೋಡುತ್ತ ನಿಂತಳು, ಕೊಂಚಕಾಲ. ಕೊನೆಗೆ "ಅಪ್ಪಾ ಬಯ್ಯಿಲಾಕಿಲ್ಲ ನಿನಗಾ?" ಎಂದು ಕೇಳಿದಳು.

"ಅವರ ಯಾನ ಬಯ್ಯತಾರ ತಗೋ! ಪಂಚಮಿಗಿ ನಾ ತವರಮನೀಗಿ ಹೋದಾಗ ಅವ್ವಾ ಕುಬಸಾ ಮಾಡಕೋ ಅಂತ ಕೊಟ್ಟ ರೂಪಾಯಿ ಇದಾವ ಇವ; ಅವರವು ಯಾನ ಇದಾವು? ಹೂವು ಆಕೀನ ಮಾಡಿಸಿಕೊಟ್ಟಿದಾಳು."

ಹೂವುಗಳನ್ನಷ್ಟೇ ತಕ್ಕೊಳ್ಳುತ್ತ ಚಂಪಾ "ಕುಬಸಾ ನೀ ಮಾಡಕೋ ಅಲ್ಲಾ ?" ಎಂದು ಹೇಳಿದಳು.

"ನನಗ ಯಾನ, ಇದಾವ ಇನ್ನ ಮೂರ ನಾಲ್ಕ ? ಯಾನ ಮಾಡೋವಾ. ಎಂಥಾವರ ಹಳೇವ ಬಿಳೇವ ನಾಲ್ಕ ದಿನಾ ಹಾಕೋಳೋದ. ಇನ್ನs ನೀವ ಹೋಗಾವರ ಬರಾವರ ; ಗಂಡನ ಮನ್ಯಾಗ ಸುಖದಾಗ ಇರವ್ವ !"

ಈಗ ತಾರಕ್ಕನ ಮುಖ ನೋಡಿ ಕಣ್ಣೀರು ತಂದಳು ಚಂಪಾ. ನಡುಗುವ ಕೈಗಳಿಂದ ರೂಪಾಯಿಗಳನ್ನು ತಕ್ಕೊಂಡಳು. ಅಳುವ ದನಿಯಿಂದ "ನೀ ಇರೂ ತನಕಾನ ತವರಮನೀ ನನಗಾ ! ಇಲ್ಲಾದರ ಈ ತೋಟದಾಗ ನನ್ನಾ ಯಾರ ಕೇಳತಾರು ?" ಎಂದಳು.

"ನಾ ಇರೂತನಕಾರs ಬರತ ಬಾ ತಾಯಿ, ಹಿಂದಿಂದ ಬರದಿರ ಇರವಲ್ಲಿ ಯಾಕ ? ನಿಮ್ಮವ್ವ ಭಾಳಭಾಳ ಕೊಟ್ಟರ, ನಾ ನನ್ನ ಕೈಯಾಗ ಇದ್ದಷ್ಟ ಮಾಡತ್ಯಾನು. ಹೂವ ಇಲ್ಲ, ಹೂವಿನ ಪಕಳಿ, ಅಷ್ಟ ಮಾನ ಮಾಡಿಕೊಂಡ ಹೋಗತ ಬಾ."

"ಯಾನ ಹುಚ್ಚವ್ವ ! ಹಡದ ಅವ್ವದೇರ ಯಾನ ಮಾಡತಾರ ನಿನ್ನಷ್ಟ ! ಮಸ್ತ ಕೊಟ್ಟೆಯಲ್ಲ ; ಯಾವ ಜನ್ಮದ ಅವ್ವ ಇದ್ದಿ ಅಂತ" ಎಂದು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಚಂಪಾ, ತಾಯಿಯನ್ನು ಅಗಲಬೇಕಾಯಿತೆಂದು.

ತಾರಕ್ಕ ಅವಳನ್ನು ಅಪ್ಪಿಕೊಂಡು ರಮಿಸುತ "ಯಾಕ ಅಳತಿ ಹೋಗು, ಸುಖದಾಗ ಇರೋಗ ಗಂಡನ ಮನ್ಯಾಗ."

"ನೀ ದಿನದಿನಕ ಸಣ್ಣ ಆಗತ ನಡದಿ, ಯಾರಿಗರ ತೋರಸಲ್ಲ, ಹೀಂಗ ಆದರ ಹ್ಯಾಂಗ ?"

"ಈ ಜನ್ಮದಾಗ ಬದಕಿರೆ ಯಾನ ಮಾಡೋದ ಏತಿ ? ಎಲ್ಲಾರಿಗೂ ಭಾರs ಆಗಿದ್ಯಾನು" ಎಂದು ಮನದಲ್ಲಿಯೇ ಅಂದುಕೊಂಡು "ಇನ್ನ್ಯಾನ ನೆಟ್ಟಗ ಆಗತೇತಿ ?" ಎಂದಿಷ್ಟೇ ಅಂದಳು.

ಭಾರವಾದ ಹೆಜ್ಜೆಗಳನ್ನು ಎತ್ತಿ ಚಂಪಾ ಊರ ಹಾದೀ ಹಿಡಿದಳು. ನಾಲ್ಕು ಹೆಜ್ಜೆ ಮುಂದೆ ಹೋಗಲು ಏನೋ ನೆನೆದುಕೊಂಡು, ತಿರುಗಿ ಬಂದು ತಾರಕ್ಕನನ್ನು ಕರೆದು ನಮಸ್ಕಾರ ಮಾಡಿ ಹೊರಳಿ ನಡೆದಳು. ಆಗ ತಾರಕ್ಕ "ನಮ್ಮವ್ವ ಹೂವ ಮಾಡಿಸಿ ಕೊಟ್ಟಳಂತ ಹೇಳಿ, ನಿಮ್ಮ ಅಬಚೇವ ಹೂವ

ಹೋದ ಕೈಲೆ ಹಚಕುಡ; ಇಟಕೋಬ್ಯಾಡ" ಮತ್ತೆ ಸ್ವಲ್ಪ ವಿಚಾರಿಸಿ "ಇಲ್ಲಾದರ ಇಲ್ಲೇ ನಿಮ್ಮಪ್ಪನ ಹತ್ತರಾ ಇಟ್ಟುಹೋಗಬೇಕಾದರ ಆ ಹೂವ" ಎಂದು ಮತ್ತೆ ಸೂಚಿಸಿ ಮನೆಯ ಕಡೆಗೆ ಹೊರಳಿದಳು.

ಸ್ವಲ್ಪ ದಿನಗಳು ಕಳೆದನಂತರ ತಾರಕ್ಕನು ಅತ್ತೆಯ ಆಗ್ರಹದ ಮೇರೆಗೆ ಚಂದೂರಿಗೆ ತವರುಮನೆಗೆಂದು ಹೋದಳು. ಅಲ್ಲಿ ಸಮೀಪದ ಎಡೂರ ವೈದ್ಯನ ಹತ್ತರ ಮಲ್ಲ ಮಗಳನ್ನು ಒಯ್ದು ಔಷಧ ಕೊಡಿಸಿದ. ಮೂರು ನಾಲ್ಕು ಸಪ್ತಾಹ ಔಷಧ ತೆಗೆದುಕೊಳ್ಳುವಷ್ಟರಲ್ಲಿ, ತಾರಕ್ಕನ ಮೈಯಲ್ಲಿ ಸ್ವಲ್ಪ ಗುಣ ಕಂಡಿತು. ಅಷ್ಟರಿಂದಲೇ ಔಷಧ ಬಿಟ್ಟಳು. ಇನ್ನೂ ಒಂದೆರಡುವಾರ ಅವಳು ತವರುಮನೆಯಲ್ಲಿ ಇರುವವಳಿದ್ದಳು. ಆಗ ಅವಳಿಗೆ ಈಗ ಅನಂತ ತೇರದಾಳ ದಲ್ಲಿರುವನೆಂದು ಸುದ್ದಿ ತಿಳಿಯಿತು. ಅವಳ ಮನಸ್ಸು ಒಮ್ಮೆ ಹೋಗಿ ಅನಂತ ನನ್ನು ಕಂಡು ಮಾತಾಡಿ ಬರಬೇಕೆಂದು ತವಕಗೊಳ್ಳುತ್ತಿತ್ತು. ತಂದೆತಾಯಿಗಳ ಮುಂದೆ ಮಾತು ತೆಗೆದರೆ ಏನನ್ನುವರೋ ಏನೋ, ಎಂದು ಮನದಲ್ಲಿಯೇ ಹೆದರಿಕೆ ಅವಳಿಗೆ. ಹಿಂದೆ ಅವರ ಮನೆಗೆ ಹೋದುದಕ್ಕೆ ಆದ ಜಗಳ, ಅದನ್ನು ಮುಗಿಸಲು ತಂದೆತಾಯಿಗಳು ಮಾಡಬೇಕಾದ ತ್ಯಾಗ, ಮೊದಲಾದವುಗಳು ಅವಳ ಕಣ್ಣೆದುರಿಗೇ ಇನ್ನೂ ಕಟ್ಟಿದಂತಿದ್ದುವು. ಆದರೂ ಅವಳ ಮನಸ್ಸು ಅನಂತನ ಕಡೆಗೆ ಹರಿಯದೆ ಇರುತ್ತಿರಲಿಲ್ಲ. ಒಂದು ದಿವಸ ಮೂವರೂ ಕುಳಿತಾಗ ಹೆದರುತ್ತ ಹೆದರುತ್ತ ತಾರಕ್ಕ ಮಾತು ತೆಗೆದಳು.

"ಅಪ್ಪಾ, ಭಾಳ ದಿನಾ ಆಯ್ತು, ಅನಂತನಾ ನೋಡಿ. ಒಮ್ಮೆ ಹೋಗಿ ಬರೂನು ಯಾನಾ ? ಈಗ ತೇರದಾಳಕ್ಕ ಇದಾ ಅಂತ್ಯ" ಎಂದಳು. ಧ್ವನಿ ಯಲ್ಲಿ ವಿನಯ ಸಂಕೋಚ ತುಂಬ ಇತ್ತು.

"ಯಾನ ನೋಡೋದ ಏತಿ ಅವನಾ ? ಅಂವ ಯಾನ ಛಲೂ ಮನಸ್ಯಾ ? ಛಲೂ ನಾಲ್ಕೊಪ್ಪತ್ತ ಜನ್ಮಾ ಮಾಡ್ಯಾನಂದರ ಮಾಡಲಿಲ್ಲ. ಎಲ್ಲಾ ಹಾಳಮಾಡಿ ಇಟ್ಟ. ಈಗ ಹೋಗಿ ಒಬ್ಬರ ಬಾಗಲಾಗ ಬಿದ್ದಾನ" ಎಂದು ಮಲ್ಲ ಮಗಳಿಗೆ ಉತ್ತರ ಕೊಟ್ಟ.

ಈ ಮಾತು ತಾರಕ್ಕನ ಹೃದಯದಲ್ಲಿ ನೇರವಾಗಿ ಹೋಗಿ ನಟ್ಟಿತು. ಅವನು ಈ ಸ್ಥಿತಿಗೆ ಬರಲು ಕಾರಣವೇನೆಂಬುದನ್ನು ಅನಂತನನ್ನುಳಿದು ಅವಳೊ

ಬ್ಬಳೇ ಅರಿತಿದ್ದಳು. ಕೆಲಹೊತ್ತು ಸುಮ್ಮನಿದ್ದು, ನಿಟ್ಟುಸಿರೊಂದನ್ನು ಬಿಟ್ಟು ಅಂದಳು.

“ಅಂವ ಯಾನ ಯಾಕ ಮಾಡವಲ್ಲ ? ಎಷ್ಟ ಆದರ ಸೋದರಮಾವನ ಮಗಾ ಇದಾ, ಹಿಂಗೆಲ್ಲಾ ಆದರೂ ನೋಡಕ ಬರಲಿಲ್ಲ ಅನಲಾಕಿಲ್ಲಾ ?”

“ಅವನಾ ನೋಡಕ ಹೋಗಿ ಇಲ್ಲಿ ನಿನ್ನ ಜನ್ಮಾ ಎಲ್ಲಾ ಹಾಳಿಗಿ ಹಚ್ಚ ಕೋಬೇಕ ಅಂತೀ ? ನಿನ್ನ ಗಂಡಗ ಅಂದರ ಇದರಾಗ ಅಡ್ಡ ಬೆಂಕಿ ಹಾಯೂ ದುಲ್ಲ. ಹಿಂದ ಹೆಂಗೆಂಗ ಆಗೀತಿ ನೋಡಿಲ್ಲಾ ?” ಎಂದ ಮಲ್ಲ ನಿಶ್ಚಯದ ಸ್ವರದಲ್ಲಿ.

“ಅವರಿಗಿ ಯಾರ ಹೇಳತಾರು ? ಪರಭಾರs ಮೋಟಾರದಾಗ ಹೋಗಿ ಬರೂನು ಅಲ್ಲಾ ?”

“ಯಾನ ನೇಮ ಹೇಳ್ಕ ಬರೂದುಲ್ಲ ಪೋರಿ. ಮೊದಲ ನಿನ್ನ ಗಂಡ ತುದಿ ಪಾವಟಿಗಿಗೆ ಬಂದ ನಿಂತಿದಾ, ಈಗ ಎಲ್ಲೇರೆ ಇಂಥಾ ನೆವನ ಸಿಕ್ಕರ ಸಾಕ ಅಂವಗ. ಅದs ಹುಡಕಕ ಹತ್ತೀದಾರ ನಿಮ್ಮ ಅತ್ತಿ ಗಂಡಾ ಕೂಡಿ. ಅವರ ಎಂಥಾವರ ಇದಾರ ನಿನಗ ಗೊತ್ತಿಲ್ಲ! ಮೊದಲಿನಕ್ಕೀನಾ ಕಡೀತ್ಯಾನಂತ ಕುಡ ಗೋಲ ತಗೊಂಡ ಹೋಗಿದ್ದಂತ! ಇನ್ನs ಕೂಸಾ ಕುನ್ನೀ ಆಗಿಲ್ಲ. ಕೈಯಾಗಿನ ಬಾಣ ಈಗs ಕಳಕೊಂಡ ಕೂತಿದೇವ, ನಾಲ್ಕದಿನಾ ಸಂಬಾಳಸಕೊಂಡ ಇದ್ದರ ಎರಡೂ ಕಡೆ ಛಲೂ. ಈಗs ಮತ್ತೊಂದ ಮಾಡಕೋತ್ಯಾನಂತ ಮಂದಿ ಮುಂದ ಹೇಳಕ ಹತ್ತೀದಾ ಅಂವ. ಹಾಂಗ ಮಾಡಿದರ ಅವರದ್ಯಾನ ಹಿಡ್ಯೋದಾ ? ಮೊದಲಿಂದ ಒಂದ ಹಾಂಗ ಆಯ್ತು. ಇದರs ಒಂದ ಸಂಬಾಳಿಸ ಕೊಂಡ ಹೋಗ. ಗಂಡನ ಕೂದಲ ಎಳೀ ನೂಸುಗುಡಬ್ಯಾಡ” ಎಂದು ತಂದೆ ತಾರಕ್ಕನಿಗೆ ತಿಳಿವಳಿಕೆಯನ್ನು ಹೇಳಿದ.

“ಮಾಡಕೊಳೋದ ಮನಸ್ಸಿನ್ಯಾಗ ಇದ್ದರ, ಅವರ ಯಾನ ಬಿಡತಾರ ಯಾನ ತಗೋ, ನಾವ ಇಷ್ಟ ಅಂಜಿರ” ಎಂದಳು ತಾರಾ.

ಇಲ್ಲಿಯವರೆಗೆ ಸುಮ್ಮನೆ ಇದ್ದ ರತ್ನವ್ವ “ಯಾವಾಗ ಆದರು ನಿಂದ ಕಡ್ಡಿ ಮುರದಂಗs ಮಾತ. ಒಂದ ತಿಳಿದುಲ್ಲಾ ಬಿಡುದುಲ್ಲಾ. ಹಿಂದಕ ಹಿಂಗೆ ಹೇಳದ ಕೇಳದ ಊರಾಗ ಹೋಗಿದ್ಯಾನಂತ ಅವರ ಮನೀ ತನಕಾ ಹೋದಿ,

ಜಗಳಾ ಮಾಡಿ ಎರಡ ದಿನಾ ಹೊರಗ ನಿಲ್ಲಿಸಿದ, ನಿನ್ನ ಗಂಡ. ಅವರಾ ಇವರಾ ಬಂದ ಹೇಳಿ ಮನ್ಯಾಗ ಹಾಕೂತನಕಾ ಹೆಚ್ಚಾಗಿ ಹೋಯ್ತು; ನಾವs ಮನ್ಯಾಗ ಗಂಡಾ ಹ್ಯಾಂತಿ ಮಾತಾಡಕೊಂಡೇವು 'ಅಂವ ಹೀಗ್ಯಾಕ ಮಾಡತಾ ಅಂತ. ಯಾವಾಗ ಆದರೂ ನಮ್ಮ ಹೊಲಾ ಮನಿ ಮಗಳಿಗೆ ಆಗೋದ, ಇನ್ಯಾನ ನಮಗ ಹುಡುಗೂರ ಆಗುದುಲ್ಲ, ಅದರ ಸಲುವಾಗಿ ಸುಮ್ಮ ಯಾಕ ಮಗಳಿಗಿ ಕಡಚನಿ ? ಮಾಡಿಬಿಡೂದು ಅಳ್ಯಾಗs ; ಹೆಸರರs ಆದೋತ ಮಾಡಿರಂತ. ಮುಂದವರ ನಮ್ಮನಾ ನೋಡಲಿ ಬೇಕಾದರ ಬಿಡಲಿ' ಅಂತ ನಾಲ್ಕ ದಿನದಾಗ ಮಾಡಿಕೊಡಾನ ಸುಮ್ಮ ತಗೊಂಡ ! ಅಂವಗ ಯಾನ ಇಲ್ಲಾ ; ನಾ ಎಲ್ಲೀರ ತವರಮನ್ಯಾವರಿಗಿ ಮಾಡ್ಯಾನಂತ ಹೊಟ್ಯಾಗ ಕುದಿ. ಅದಕs ಹೋಗೋದ ಬರೋದ ಬಂದ ಮಾಡಿ ಇಟ್ಟಿದ್ದ. ಈಗರ ಹ್ಯಾಂಗ ಏತಿ ಯಾನ ಗೊತ್ತವ್ವ, ಅವನ ಮನಸಾ ? ಗನಸ ಮನಸ್ಯಾಂದ ಯಾನ ಹೇಳಕ ಬರತೇತಿ ? ನಾಲ್ಕ ದಿನಾ ಥಣ್ಣಗ ಇರಲ್ಲ ; ಮಕ್ಕಳಾ ಮರೀ ಆಗಲಿ. ಮತ್ತ ಮುಂದ ಹೋಗೋದಾ ಬರೋದಾ ಏತ್ಯಲ್ಲ. ನಮಗ ಹುಟ್ಟಿ ಯಾನ ಸುಖಾ ಮಾಡಲಿಲ್ಲ ನೀ ! ನಿನ್ನ ಸುಖದ ಸಲುವಾಗಿ ನಮ್ಮ ಮನೀ ಎಲ್ಲಾ ಹಾಳಮಾಡಕೊಂಡೇವು. ಸರಿ ಊಡ್ಡಾಕಿ ಮಗಳ ಆದೀ, ನಿನಗ ಎಲ್ಲಾ ಹೇಳಬೇಕ್ಯಾನ ನಾವ ? ನೀನs ತಿಳಕೊಂಡ ನಡೀಬೇಕು !" ಎಂದು ಸಿಟ್ಟುಮಾಡಿದಳು. ತಾರಕ್ಕ ಮುಂದೆ ಮಾತನಾಡದೆ ಸುಮ್ಮನಾದಳು. ಅವಳ ಮನಸ್ಸಿನಲ್ಲಿಯೂ ಬಂದಿರಬೇಕು, "ಅವ್ವಾ ಅಪ್ಪ ನನ್ನ ಸುಖದ ಸಲುವಾಗಿ ಇಷ್ಟ ಎಲ್ಲಾ ಬಿಟ್ಟರು. ನಾ ಅವರ ಸಮಾಧಾನದ ಸಲುವಾಗಿ ಅನಂತನ ನೋಡೋದರ ಬಿಡಬೇಕಲ್ಲ" ಎಂದು.

ಚಂದೂರಿನಲ್ಲಿ ಸ್ವಲ್ಪ ದಿನ ನಿಂತು ತಾರಕ್ಕ ತನ್ನ ಮನೆಗೆ ಬಂದಳು. ಈಗ ಔಷಧ ತಕ್ಕೊಂಡಾಗಿನಿಂದಲೂ ತಿಂಗಳು ತಿಂಗಳಿಗೆ ಕಡೆಗಾಗುತ್ತಿದ್ದಳು. ಮೊದಲಿನಂತೆ ಹೊಟ್ಟೆಕಡಿಯುವದಾಗಲಿ, ಮತ್ತಾವ ನೋವಾಗಲಿ ಇರಲಿಲ್ಲ. ಸುಖದಲ್ಲಿ ಕೆಲದಿನ ಕಳೆಯುವದರಲ್ಲಿ ಒಂದು ತಿಂಗಳು ತಾರಕ್ಕ ಕಡೆಗಾಗಲಿಲ್ಲ. ಮೊದಲಿನಂತೆ ಮತ್ತೆ ತಡೆಯಲು ಪ್ರಾರಂಭವಾಯಿತೇನೋ ಎಂದು ಅಮ್ಮವ್ವ ಮೊದಲು ಸ್ವಲ್ಪ ಮೋರೆ ಸಪ್ಪಗೆ ಮಾಡಿದಳು. ಆದರೆ ಅವಳ ಮುಖ ಈ ಸಲ ಸಪ್ಪಗಾಗುವಂತಿರಲಿಲ್ಲ. ಸ್ವಲ್ಪ ದಿನಗಳಲ್ಲಿ ತಾರಕ್ಕ ಬಸಿರಿರುವ ಲಕ್ಷಣ ತೋರ

ಹತ್ತಿದವು. ಮೈಯು ಸ್ವಲ್ಪ ಬಿಳುಪೊಡೆಯಿತು. ಹುಳಿ ತಿನ್ನುವ ಬಯಕೆ ಯಾಗಹತ್ತಿತು. ನಡವೂ ದೊಡ್ಡದಾಯಿತು. ಇವೆಲ್ಲ ಸೊಸೆಯ ಲಕ್ಷಣಗಳನ್ನು ನೋಡಿ ಅಮ್ಮಾವ್ವ ಆನಂದಪಟ್ಟು ಚಂದೂರಿಗೆ ಹೇಳಿಕಳಿಸಿದಳು. ಮನೆಯೆಲ್ಲ ಆನಂದದಲ್ಲಿ ಮುಳುಗಿತು. ತೋಟದೊಳಗಿನ ಹೆಂಗಸರೆಲ್ಲ "ಗಂಡಕೂಸ ಒಂದ ಆಗಲಿ ತಾಯಿ, ಮುದುಕಿ ಕಣ್ಣಿ ಹುಜರೆ!" ಎಂದು ಅನ್ನತೊಡಗಿದರು. ಅವರಿಗೆಲ್ಲ ಅಮ್ಮಾವ್ವ "ಯಾವದರೆ ಆಗಲಿ ತಾಯಿ, ಮನ್ಯಾಗ ಕೂಸಗೋಳರೆ ಆಗಲಿ" ಎನ್ನುವಳು. ಮನೆಯಲ್ಲಿ ಈಗ ತಾರಕ್ಕನಿಗೆ ಕೆಲಸ ಕಡಿಮೆ. ಬಂಧು ಗಳು ಯಾರಾದರೂ ಬಂದು ಮಾಡುವರು. ತಾರಕ್ಕ ತಿಂದು ಮಲಗಿಯೇ ಇರು ವಳು. ಅತ್ತೆ ತಿರುತಿರುಗಿ ಬಂದು "ತಿರಗ ಬರತೇತಿ ಯಾನಬೇ ?" ಎಂದು ಅಕ್ಕರೆಯಿಂದ ಕೇಳುವಳು. ಅದಕ್ಕೆ ತಾರಕ್ಕ "ಇಲ್ಲ; ಮೈಯೇ ಜಡಾ ಆಗೇತಿ, ತಲಿ ಜುಣುಜುಣು ನೂಸತೇತಿ, ರೊಟ್ಟಿಮ್ಯಾಲ ಇಚ್ಛಾ ಇಲ್ಲ. ಹರಿವತ್ತ ಏಳಾನಾ ಬಾಯಿ ಹೊಲಸ ಆಗತೇತಿ. ಉರೂಚಿ ಹತ್ತತಾವು" ಎಂದು ಏನೇನೋ ಹೇಳುವಳು. ಅಮ್ಮಾವ್ವ "ಚೊಚ್ಚಲ ಬಸರ ಏತಿ, ಇಕಿಗಿ ಯಾನ ಗೊತ್ತ ?" ಎಂದುಕೊಂಡು ಸುಮ್ಮನಾಗುವಳು. ಮತ್ತೆ ಜೀವ ಕೇಳದ್ದಕ್ಕೆ "ಯಾಕಬೆ ಕಾವ ಆಗೇತಿ ಯಾನೋ, ದಿನಾ ಮಜ್ಜಿಗಿ ಮಾಡುತ್ತ ಕೈಲೆ ಬೆಣ್ಣೀರೆ ಒಂದ ನಿಂಬಿಕಾಯಷ್ಟು ನುಂಗತ ಬಾ. ನಾಳಿ ಹುಟ್ಟದ ಹುಡಗೂರಿಗೂ ಛಲೂ, ನಿನಗೂ ಹಿತಾ" ಎಂದು ಸೊಸೆಗೆ ಹೇಳುವಳು.

ಮಗಳು ಬಸಿರಾದ ಸುದ್ದಿಯನ್ನು ಕೇಳಿ ರತ್ನವ್ವ ಹಿರಿಹಿರಿ ಹಿಗ್ಗಿದಳು. ಮಲ್ಲನಿಗಂತೂ ಮುಗಿಲು ಮೂರೇ ಮೊಳವಾಯಿತು. ಹೆಂಡತಿಯ ಕೈಯಿಂದ ಹನ್ನೆರಡು ತರದ ಪಕ್ವಾನ್ನಗಳನ್ನೆಲ್ಲಾ ಮಾಡಿಸಿ, ಹಾರೋಗೇರಿಗೆ ಬಯಕೆ ಯೂಟ ಕಳಿಸಿದ. ರತ್ನವ್ವನಿಗೆ ಹಾರೋಗೇರಿಯೆಂದರೆ ಮನೆಯಂಗಳವೇ ಆದಂತಾಯಿತು. ಮೂರರಲ್ಲಿ ಬಿದ್ದ ಕೂಡಲೆ ಒಳಗಿಂದ ಒಳಗೇ ಹಸರು ಕುಬಸ ಮಾಡಿದಳು, ಮಗಳಿಗೆ. "ಮಂದಿ ಮುಂದ ಈಗs ಹೇಳಬ್ಯಾಡರಿ ತಾಯಿ!" ಎಂದು ಅಮ್ಮಾವ್ವನಿಗೆ ಸೂಚಿಸಿದಳು.

ಅಮ್ಮಾವ್ವನಿಗೆ ಆನಂದ. "ಇಲ್ಲ ತಾಯಿ! ನಾವ್ಯಾಕ ಈಗ ಹೇಳೂನು ? ಬುತ್ತಿರೊಟ್ಟಿ ಮಾಡೂತನಕಾ. ಇದs ಚೊಚ್ಚಿಲ ಬಸರ ಏತಿ! ಮಕ್ಕಳ ಆಗ

ಲಿಲ್ಲ ; ಮತ್ತೊಂದ ಮಾಡಕೊತ್ಯಾನ ಅಂತಿದ್ದ ತಾಯಿ ಅಪ್ಪಣ್ಣ ! " ಎಂದು ಈಗ ಮನಬಿಚ್ಚಿ ಹೇಳಿದಳು, ಬೀಗತಿಯ ಮುಂದೆ.

"ಅಂವ ಮಾಡಕೋತ್ಯಾನಂದರ ಆಗೂದುಲ್ಲ; ಬಿಡತ್ಯಾನ ಅಂದರ ನಿಲ್ಲೂದುಲ್ಲ. ಆಕಿ ನಸೀಬದಾಗ ಬೇಡಿ ಬಂದದ ಆಗತೇತಿ ನೋಡು" ಎಂದು ಸ್ವಲ್ಪ ಆಧ್ಯತೆಯಿಂದಲೇ ಅಂದಳು, ರತ್ನಾ.

"ಯಾನರ ಆಗಲಿ ! ತಾರಾನ ಕಾಯಿ ಒಮ್ಮಿ ಕಟ್ಟಿಗಿ ಕೂತಿತ ತಾಯಿ ?"

"ಗಂಡ ಒಂದು ಹುಟ್ಟಿತಂದರ ಸಾರ್ಥಕ ಆಯ್ತು ತಾಯಿ, ಇಷ್ಟ ಖಟಾಟೋಪ ಸೋಸಿದಕಾ ! "

"ಗಂಡರs ಹಡೀಲಿ, ಹೆಂಣರs ಹಡೀಲಿ, ಮನ್ಯಾಗ ಕೂಸಗೋಳ ಆಗಲಿ. ಈಗ ಹಡೀಕರ ಹತ್ತಿರ! ಮುಂದ ಮತ್ತ ಹಡದಾರಲ್ಲ ? ಯಾನs ಇಲ್ಲದ ಇರಾನಾನs ಬ್ಯಾಸರ ಬಂದಿತ್ತ."

"ನಮುಗೂ ಹಂಗs ಆಗಿತ್ತ ತಾಯಿ ! ತಾರಾ ನೆರದ ಹತ್ತಹದಿನಾರ ವರ್ಷರs ಆಗಿರಬೇಕ. ಇನ್ನs ನಿಂದರಲಿಲ್ಲ. ಭಾಳ ದೂರ ತೊಟ್ಟಿಲ ಇದ್ದರ ಹನ್ಯಾಡ ವರ್ಷ ಅಂದರ ಹೆಚ್ಚ ಆಯ್ತು. ಇಕಿಗಿ ತಿರಗಿ ಹದಿನಾರ ಹದಿನ್ಯೋಳ ವರ್ಷರ ಆದು ಅಂತ ಮನದಾಗ ಸಣ್ಣ ಆಗತಿದ್ದ್ಯಿ ; ಯಾರ ಮುಂದ ಹೇಳೋದಾ ? " ಇಂದು ತನ್ನ ಮನಸ್ಸಿನೊಳಗಿದ್ದ ನಿರಾಶೆಯನ್ನು ಹೊರಗೆಡವಿದಳು ರತ್ನಾ.

"ಅದs ; ನಮುಗೂ ಯಾನ ಮಾಡಬೇಕು, ತಿಳೀದಾಂಗ ಆಗಿತ್ತು. ಅತ್ತ ಕೆರೀ ಇತ್ತ ಭಾವಿ ಆಗಿತ್ತ ! ಅವ್ವಾ ಮಗಾ ಒಳಗಿಂದ ಒಳಗs ಚೂರ ಆಗತಿದ್ದ್ಯಿ, ತಾಯಿ ! "

"ಆಗದ ಯಾನ ? ಮನ್ಯಾಗ ಕೂಸಗೋಳ ಇದ್ದರ ಛಂದ, ಅದರಾಗ ಒಬ್ಬs ಮಗಾ ಅವ್ವ ! ಕಯ್ಯಾಗ ಕಾಲಾಗ ಕೂಸಗೋಳ ಆಗಲಿ ತಾಯೀ ನಾವೊಂದು ಎರಡ ಓದ ಇಟಗೊಂಡೇವ."

ರತ್ನವ್ವನ ಮಾತು ಮುಗಿಯುವುದಕ್ಕೆ ಸರಿಯಾಗಿ, ಹಲ್ಲಿಯೊಂದು ನುಡಿಯಿತು "ಲೋಟ್ ಲೋಟ್" ಎಂದು. ಅಮ್ಮವ್ವ ಮುದುಕಿ ಒಮ್ಮೆಲೇ "ಅರಹಂತ ಅರಹಂತ" ಎಂದು ಉಚ್ಚರಿಸಿ, ಸ್ವಲ್ಪ ನಿಧಾನಿಸಿ "ಯಾಕೋ ಹಲ್ಲಿ

ಮಾತಾಡತೇತಿ ತಾಯೀ, ಹುಟ್ಟಲೇರಿ ಹುಡಗೂರು. ಎಲ್ಲ್ಯರ ಇದ್ದಾವ ಅಂತ. ನಮ್ಮ ಮನ್ಯಾಗರ ಈಗೆಲ್ಲಿ ಹತ್ತೆಂಟು ಕೂಸಗೋಳ ಇದಾವು ?" ಎಂದು ಸ್ವಲ್ಪ ಚಿಂತಾಮುದ್ರೆಯಿಂದ ನುಡಿದಳು.

"ಹಲ್ಲಿ ಎಂಥಾದ ಏತೇ ?" ರತ್ನವ್ವ ಕೇಳಿದಳು.

"ಹಲ್ಲಿಗೋಳ ಯಾನ ಅವ್ವ ಇರತಾವು ? ಈ ಒರಳದ ಮೂಲಿ ಮ್ಯಾಲಿನ ಹಲ್ಲಿ ಛಲೂ ಇಲ್ಲ ತಾಯೀ. ನನ್ನ ಗಂಡ ಸಾಯೂ ಮುಂದನೂ ಅಲ್ಲೇದ್ವ ಮಾತಾಡತಿತ್ತ. ಆದರ ಆ ಹಲ್ಲಿ ಯಾನ ಅಲ್ಲೇ ಇರತೇತಿ ?"

ರತ್ನವ್ವ ಸ್ವಲ್ಪ ಹೆದರಿದಳಾದರೂ "ಹಲ್ಲಿಗೋಳ ಮನೀ ತುಂಬ ತಿರಗತಾವ ಏಳ ತಾಯೀ, ಯಾನ ಆವತರದ" ಎಂದು ಸುಮ್ಮನಾದಳು. ಆದರೂ ಮನದಲ್ಲಿ 'ಆ ಒರಳದ ಮ್ಯಾಲಿನ ಹಲ್ಲಿ ಯಾಕ ಮಾತಾಡಿತು ?' ಎಂದು ಚಿಂತಿಸದೆ ಇರಲಿಲ್ಲ.

ಎರಡು ಮೂರು ದಿನ ಮಗಳ ಮನೆಯಲ್ಲಿ ಸಂತಸದಿಂದ ಕಳೆದಳು. ತಿರತಿರುಗಿ ಮಗಳನ್ನೇ ನಿರೀಕ್ಷಿಸುವಳು, ರತ್ನಾ. ಅವಳಿಗೆ 'ಇನ್ನೂ ಮೂರ ತಿಂಗಳ ಸುದ್ದಾ ತುಂಬಿಲ್ಲ; ಈಗ ಎಲ್ಲಿ ಎರಡ ಎರಡುವರಿ ತಿಂಗಳ ಆಗ್ತ ಬಂದಿರಬೇಕು. ಮೊದಲಿನ ಹದನದಿನಾ ಸುಳ್ಳ ಅಂತ ಹಿಡದರ ಇನ್ನ ಅಷ್ಟೂ ಆಗಿಲ್ಲ. ಈಗ್ಲ ಇಷ್ಟ ಹೊಟ್ಟಿ ಹ್ಯಾಂಗ ಕಾಣಸತೇತಿ, ಎಂಬ ದಿಗಿಲು ; ಕೌತುಕ. ಅದರಂತೆ ಊರಿಗೆ ಹೊರಡುವ ದಿನ ಮುಂಜಾನೆ ಅಮ್ಮವ್ವನ ಮುಂದೆ ಆಡಿತೋರಿಸಿದಳು ಕೂಡ. "ತಾರಾನ ಹೊಟ್ಟಿ ಇಷ್ಟೆಂಗ ಕಾಣಸತೇತೇ, ಈಗ ?"

"ಪೋರೀ ಮೈಯಾಗ ಯಾನ ಏತಿ ? ತಿಂಗಳಾಯ್ತು, ಯಾನ ತಿನ್ನೂದುಲ್ಲಾ ಬಿಡೂದುಲ್ಲಾ ಸೊರಗಿದಾಳು. ಹೊಟ್ಟಿ ಒಡೆದ ಕಾಣಸತೇತಿ ಏಳ. ನಿಂದೂ ಭಾಳ ಚವಕಶಿ ಅವ್ವ !"

"ಇಲ್ಲವ್ವ, ಎರಡ ಹಡೀತಾಳ ಯಾನ ಅಂತ್ಯಾನ ನಾ !" ಎಂದಳು ನಕ್ಕು. "ಹಡೀಲಿ ಅಲ್ಲಾ ; ನಮ್ಮಲ್ಲೆ ಒಂದ, ನಿಮ್ಮಲ್ಲೇ ಒಂದ ತಿಂದ ದೊಡ್ಡದ ಆದೋತ ; ಮಾಡಾವರ ಯಾನ ಕಡಿಮಿ ಇದೇವು ?" ಅಮ್ಮವ್ವ ಹರುಷದಿಂದ ಹೇಳಿದಳು.

ಮಧ್ಯಾಹ್ನ ಅಳಿಯನಿಗೂ ಬೀಗತಿಗೂ ಹೇಳಿದಳು ರತ್ನವ್ವ "ಐದನೇ ತಿಂಗಳಾದಾಗ ಬುತ್ತಿ ರೊಟ್ಟಿ ಮಾಡಿ ಊರೆಲ್ಲಾ ಬೀರಿ ಹೋಗತ್ತ್ಯಾನು, ಮುಂದ ಯೋಳರಾಗ ಸಜ್ಜಕಿನ ಹೋಳಿಗಿ ಮಾಡಿ, ಅಷ್ಟs ಅಣ್ಣ ತಮ್ಮರ್‍ರಾ, ಬಂದ ಹೋಗಾವರ್‍ರಾ, ಬೇಕಾದ ನಾಲ್ಕ ಮಂದಿಗಿ ಬೀರೂನು. ಅಷ್ಟ, ಮಾಡಿ, ತಾರಾನ ಹಡೀಕ ಕರಕೊಂಡ ಹೋಗತ್ತ್ಯಾನಂತ" ಎಂದು. ಇಬ್ಬರೂ ಒಪ್ಪಿದರು. ಮಗಳಿಗೆ ಗರ್ಭಿಣಿಯಿದ್ದಾಗ್ಗೆ ಹೇಗೆ ಇರಬೇಕೆಂಬುದರ ಬಗ್ಗೆ ನಾಲ್ಕು ಮಾತು ಗಳನ್ನು ಹೇಳಿದಳು. "ದೊಡ್ಡ ಕಲ್ಲಲೆ ಬೀಸಬ್ಯಾಡ, ನೀರ ಜಗ್ಗಬ್ಯಾಡ" ಎಂದು ಹತ್ತು ಹತ್ತು ಸಲ ಹೇಳಿದಳು. ಕೊನೆಗೆ ತಾರಕ್ಕನೇ "ಅತ್ತಿ ಯಾನ ಅಂದಾಳ ಮನದಾಗ, ನೀ ಹೀಂಗ ಹೇಳತಿ ?" ಎಂದು ಕೇಳಲು ಸುಮ್ಮನಾದಳು. ಆದರೂ ಗಾಡಿಯಲ್ಲಿ ಕುಳಿತು ಊರಿಗೆ ಹೋಗುವಾಗೊಮ್ಮೆ ಹೇಳದೆ ಇರಲಿಲ್ಲ. ಆಗ ಮಾತ್ರ ಅಮ್ಮಪ್ಪನಿಗೆ ಸುಮ್ಮನಿರಲಿಕ್ಕಾಗಲಿಲ್ಲ. "ಹೋಗs ಹುಚ್ಚವ್ವ, ನಾವ್ಯಾಕ ಬೀಸಕ ಹಚ್ಚೂನು ? ಯಾರಿಗರೆ ಒಂದ ತಂಬಿಗಿ ಮಜ್ಜಿಗಿ ಕೊಟ್ಟ ಬೀಸಕೋತೇವ. ಅಪ್ಪೂ ಇದಾ ನೀರ ಜಗ್ಗಿ ಕುಡತಾ; ನಮಗ್ಯಾನ ಬ್ಯಾಡ ಆಗೇತಿ ಯಾನ ? ಹೂವಿನಂಗ ಇಡತೇವ ಹೋಗ" ಎಂದಳು.

ಹೀಗೆ ಬೀಗತಿ ಅಂದರೂ ರತ್ನವ್ವ ಮನಸ್ಸಿಗೆ ಕೆಡಕೆನಿಸಿಕೊಳ್ಳದೆ ಸಂತೋಷದಿಂದಲೇ ಊರಿಗೆ ನಡೆದಳು. ಆದರೆ ಹಾದಿಯಲ್ಲಿ ಸಮನೆಲಕ್ಕೇಯೇ ಬಂಡಿಯ ನೊಗ ಮುರಿಯಬೇಕೆ ? ಏನೂ ಅರ್ಥವಿಲ್ಲದ ಸ್ವಾಭಾವಿಕ ಘಟನೆ ಗಳಾದರೂ ಒಮ್ಮೊಮ್ಮೆ ಬಹಳ ಚಿಂತೆಗೀಡುಮಾಡುವವು. ಮೊನ್ನೆ ಹಲ್ಲಿ ನುಡಿದದ್ದೂ, ಇಂದು ನೊಗ ಮುರಿದದ್ದೂ ಒಮ್ಮೆಲೇ ಮನದಲ್ಲಿ ಮೂಡಿ, ರತ್ನವ್ವ ಬಹಳ ಚಿಂತೆಗೀಡಾದಳು. ಆ ಚಿಂತೆಯ ಭರದಲ್ಲಿ "ಈಗ ಮಗಳ ಜನ್ಮದ ಬಂಡಿ ಸುಸೂತ್ರ ಹಾದಿಗಿ ಹತ್ತೀತಿ ಅಪ್ಪ ! ಮತ್ತ ಯಾಕ ಸಮನೆಲಕ ನೊಗಾ ಮುರೀತು ?" ಎಂದು ಆಳುಮಗ ಸಿದ್ದನಿಗೆ ಕೇಳದೆ ಇರುವುದಕ್ಕಾಗ ಲಿಲ್ಲ.

"ಯಾನ ಗೌಡತಿ, ಭಾಳ ದಿನದ ನೊಗಾ ಏತಿ ಏಳ, ಬಿಸಲಾಗ ಗಾಡೀ ಬಿಡತೇವು. ತಡೀ ಹೋಗೇತಿ" ಎಂದ ಸಿದ್ದ. ಆಗ ಅವನ ಮನದಲ್ಲಿಯೆ ತಿರುಗಿ ಮನೆಗೆ ಹೋದಮೇಲೆ ಅಪ್ಪಣ್ಣ ನೊಗ ಮುರಿದದ್ದಕ್ಕೆ ಬಯ್ಯಬಹು

ದೆಂಬ ಭೀತಿ ಮುಖದ ಮೇಲೆ ಒಡಮೂಡಿತು. ಅದರ ಅರ್ಥ ರತ್ನವ್ವನಿಗೆ ಏನಾಯಿತೋ ಏನೋ ! ಮನದಲ್ಲಿಯೇ "ಲಗಮವ್ವ ತಾಯೀ, ನನ್ನ ಮಗಳ ತಣ್ಣಗ ಹಡೀಲಿ, ನಿನಗೊಂದ ಸೀರಿ ಏರಸತ್ಯಾನು. ಆಕಿ ಹಡದ ಗಂಡನ ಮನೀಗಿ ಹೋಗೋಗ ಉಡಸೂ ಸೀರಿಕಿಂತ ಒಂದ ರೂಪಾಯ ಹೆಚ್ಚ ಕಿಮ್ಮತ್ತಿಂದ" ಎಂದು ತಮ್ಮೂರ ದೇವಿಗೆ ಮುಡಿಪು ಕಟ್ಟಿದಳು. ಆಮೇಲೆ "ದೇವೀ ಮ್ಯಾಲ ಭಾರಾ ಹಾಕೋದ. ಆಕೇ ದಂಡಿಗಿ ಹಚ್ಚಾಕಿ. ಹುಲ್ಲು ಮನಸ್ಯಾನ ಕೈಯಾಗ ಯಾನ ಏತಿ ? " ಎಂದು ಸಿದ್ದನಿಗೂ ಹೇಳಿ ಸಮಾಧಾನ ಹೊಂದಿದಳು.

ಒಂದು ಮಧ್ಯಾಹ್ನ ಒಬ್ಬ ಮನುಷ್ಯ ತೋಟವನ್ನು ಹುಡುಕುತ್ತ ಬಂದು, ಬಾವಿಯ ಮೇಲೆ ನಿಂತು ಕೇಳಿದ. "ಇಲ್ಲಿ ಚಂದೂರಿನ ಹೆಣ್ಣ ಮಗಳನಾ ಕೊಟ್ಟ ದಾರು, ಅವರ ಮನಿ ಯಾವದು ? "

ತಾರಕ್ಕ ಒಳಗೆ ಇದ್ದಳು ; ಕೇಳಿ ಸ್ವಲ್ಪ ಗಾಬರಿಯಿಂದಲೇ ಹೊರಗೆ ಬಂದಳು. ಬಂದವನನ್ನು ಕಂಡರೆ, ಗುರುತಿಲ್ಲದ ಮುಖ ! "ಯಾರಪ್ಪ ನೀ, ಯಾವೂರವನು ? " ಎಂದು ಆತುರದಿಂದ ಕೇಳಿದಳು.

"ತೇರದಾಳದವನರೀ ನಾ. ತಾರಾ ಅನ್ನಾವರ ಯಾರರೀ ? "

"ನಾನs ; ಯಾಕ ಬಂದೀದಿ ? ಯಾನ ಕೆಲಸ ಇತ್ತು ? " ಧ್ವನಿಯಲ್ಲಿ ಹೆದರಿಕೆ ಇತ್ತು.

"ಯಾನ ಇಲ್ಲರಿ ತಾಯಿ ! ಗಾಬರಿಯಾಗಬೇಡರಿ ! ಗೌಡತಿ ಹೋಗಿ ಹ್ಯಾಂಗ ಇದಾ ನೋಡಕೊಂಡ ಬಾ ಅಂದಳು."

"ಯಾವ ಗೌಡತಿ ? ಯಾರನಾ ನೋಡ ಅಂದಿದಾಳು ? ನೆಟ್ಟಗ ಕೂತರ ಹೇಳಲ್ಲ ! " ಎಂದು ನಡುವೆಯೇ ತಾರಕ್ಕ ಮಾತಾಡಿದಳು. ಮತ್ತ ತನಗೆ ನಿಲ್ಲಲಾಗದ್ದಕ್ಕೆ ಮುಂದೆ ಬಂದು ಕಟ್ಟೆಯ ತುದಿಗೆ ಕುಳಿತಳು.

ಆ ಬಂದ ಮನುಷ್ಯನಿಗೆ ಸ್ವಲ್ಪ ಆಶ್ಚರ್ಯವಾಗಿರಬೇಕು. ತಾರಕ್ಕನನ್ನು ದಿಟ್ಟಿಸಿ ನೋಡಿ ಹೇಳತೊಡಗಿದ. "ಮತ್ತ್ಯಾವ ಗೌಡತಿ ? ಇಂದರವ್ವ ಅಕ್ಕಾನs ಅಲ್ಲಾ ! ಅಂತಪ್ಪಗ ಹ್ಯಾಂಗ ಏತಿ ನೋಡಕೊಂಡ ಬಾ ಅಂದಾರು, ಬರತ್ಯಾನ ಅಂದರ ಮೋಟಾರದಾಗ ಕರಕೊಂಡ ಬರಕ ಹೇಳಿದಾರು."

ತಾರಕ್ಕನನ್ನು ಒಮ್ಮೆಲೇ ಹೊಡೆದೆಬ್ಬಿಸಿದಂತಾಯಿತು. ದೃಷ್ಟಿ ತೀಕ್ಷ್ಣ

ವಾಯಿತು. “ ಯಾರನಾ ? ಅನಂತನಾ ? ಇಲ್ಲಿ ಎಲ್ಲೇದ ಬಂದಾ ಅಂವ ? ” ಎಂದು ಉದ್ವೇಗದಿಂದ ಕೇಳಿದಳು. ಮತ್ತು ಮನದಲ್ಲಿಯೇ “ ಅಂವ ಇಲ್ಲೀ ತನಕಾ ಬರೂ ಅಷ್ಟ ನಾ ಎಲ್ಲಿ ಪುಣ್ಣೇ ಮಾಡಿ ಬಂದಿದ್ದ್ಯಾನು ! ” ಎಂದು ತನ್ನ ಷ್ಟಕ್ಕೆ ಅಂದುಕೊಂಡಳು. ಒಂದೆರಡು ನಿಮಿಷ ಮೂಗಿನ ಮೇಲೆ ಬೆರಳಿಟ್ಟು ಕುಳಿತು “ ಅಂವ ಇಲ್ಲಿ ಬಂದೀದಾ ಅಂತ ಯಾರ ಹೇಳಿದರು ? ” ಎಂದಳು.

ಬಂದವನೂ ಸ್ವಲ್ಪ ಹೊತ್ತು ಗಾಬರಿಯಾಗಿ ಕುಳಿತ. ಮುಖದ ಮೇಲೆ ಆಶ್ಚರ್ಯದ ಚಿನ್ಹೆಯು ಮೂಡಿತ್ತು. “ ಇಲ್ಲಿ ಬಂದಿಲ್ಲ !” ಎಂದು ಉದ್ಗಾರ ತೆಗೆದ.

“ ಇಲ್ಲ ! ” ಪ್ರತಿಯಾಗಿ ತಾರಕ್ಕನ ಉದ್ಗಾರವಿದು.

“ ಆಮ್ಯಾಲಿ ಎಲ್ಲಿ ಹೋದೋ ?” ಎಂದು ನಿಂತಲ್ಲಿಯೇ ಕುಳಿತನಾತ. ಏನೋ ಧೇನಿಸುವಂತೆ ಒಂದು ಕಡೆಗೆ ದೃಷ್ಟಿ ನೆಲೆನಿಂತಿದ್ದಿತು. ಸರಿದು ಕಂಬಕ್ಕೆ ಆನಿಸಿ ಕುಳಿತ. ಅವನ ಗಂಟಲು ಒಣಗಿಬಂದಿತ್ತು. ಕಣ್ಣಿನಲ್ಲಿ ನೀರಿರಲಿಲ್ಲ. ಆದರೆ ಅವು ಮಾತ್ರ ಹೇಳುತ್ತಿದ್ದವು :

“ ಹೋದ ಅಂತಪ್ಪ ; ನನ್ನ ಇಂದರಾನ ಐಸಿರಿ ಹೋಯ್ತು ! ಇಲ್ಲೆಲ್ಲಿ ಅಂವ ಬಂದಾನು ? ತ್ರಾಸಿಗಿ ಬಂದ ಎತ್ತ ಹೋದ್ರೋ ಏನೋ ! ಇಂದರವ್ವನ ನಾಸಃ ಮುಂಗೈಮ್ಯಾಲ ಕೂಡಸಕೊಂಡ ಆಡಿಸಿನ್ನ ಅಲ್ಲ ! ಆಳುಮನಸ್ಯಾ ಆದರೂ ಮುದಕಾ, ಹಿರ್ಯಾ ಅಂತ, ‘ ಅಜ್ಜಾ ’ ಅಂತ ಕರೀತಿತ್ತ ಪೋರಿ ಮೊಮ್ಮಗಳ ಹಂಗ ಹಂತ್ಯಾಕs ಬರತೀಳು. ಆಕೇದ ನನ್ನ ಕಣ್ಣ ಹುಜರೆ ಹೀಂಗ ಆಗಬಾರದಿತ್ತು !” ಸ್ವಲ್ಪ ಹೊತ್ತಿನ ಮೇಲೆ ಗಂಟಲನ್ನು ಸಂಪಡಿಸಿ ಕೊಂಡು “ ನೀರ ಜರಾ ತಾ ಅವ್ವಾ, ಗಂಟಲ ಒಣಗಿತು ” ಎಂದ.

ತಾರಕ್ಕ ಏಳಲಾರದೆ ಎದ್ದು ಹೋಗಿ ಒಳಗಿನಿಂದ ಸ್ವಲ್ಪ ಬೆಲ್ಲ ನೀರು ತಂದು ಕೊಟ್ಟಳು. ಆತ ಬೆಲ್ಲ ತಿನ್ನದೆ ನೀರು ಕುಡಿದ. ಆಮೇಲೆ ಒಂದು ನಿಡಿದಾದ ಉಸಿರನ್ನು ಹೊರಚೆಲ್ಲಿದ. ಅದರ ಬಿಸಿ ತಾರಕ್ಕನ ಹೃದಯಕ್ಕೆ ತಾಕಿತೇನೊ! ಇಲ್ಲಿಯವರೆಗೆ ಏನೋ ಗುಂಗಿನಲ್ಲಿದ್ದ ಅವಳು ಈಗ ಕೇಳಿದಳು “ಅನಂತ ಎಲ್ಲಿ ಹೋಗಿದಾ ? ತೇರದಾಳದಾಗ ಇಲ್ಲಾ ?”

“ಇಲ್ಲವ್ವ ! ಹೋದ ಸೋಮಾರs ತೇರದಾಳದಿಂದ ಹೋದ ! ”

"ಸಂಗಾಟ ಯಾರ ಇದ್ದರು ?"

"ಯಾರಿಲ್ಲ; ಒಬ್ಬs ಹೋದ. ಜರಾ ವಾಸ್ಯಾಡಿ ಹೋದಂಗs ಹೋಗಿದಾ. ಯಾರ ಹೇಳಿದರು ಕೇಳಲಿಲ್ಲ. ಎಲ್ಲಿ ಹೋದ ಯಾರಿಗಿ ಗೊತ್ತ?"

"ಐನಾಪುರದಾಗ ಇಲ್ಲಾ ? ಅಲ್ಲಿ ಹೋಗಿ ಬಂದಿರ್‍ಯಾನ?"

"ಅಲ್ಲೆಲ್ಲಿ ಇರತಾನು ? ಇಂದs ಹರಿವತ್ತ ನಾಭಿರಾಯ, ಅಣ್ಣಾನ ನೋಡಕ ಅಂತ ತೇರದಾಳಕ ಬಂದ! ಆಗ ನಾವ ಹುಚ್ಚರಂಗ ಆದೇವು. ಇಲ್ಲೀ ತನಕಾ ಅಲ್ಲೇ ಹೋಗಿದಾ ಅಂತs ಕೂತಿದೇವ ನಾವೂ."

"ಐನಾಪುರಕ ಹೋಗಿಲ್ಲಾ ? ಹೋಗತಾ ಎಲ್ಲಿ ಹೋಗತ್ಯಾನಂತ ಹೇಳಿದಾ ?"

"ಎರಡ ದಿನಾ ಪುನ್ಯಾಗ ಜಗಳಾಡೇ ಇದ್ದ. ರುಕ್ಕವ್ವ ಹಳೀ ಮುದುಕೀ ತಟ್ವಿನ ಯಾನರ ಒಂದ ಅನಬೇಕು, ಅದ ಅಂವಗ ಸರಿಬರೋದ ಇಲ್ಲ. ಎಂಟ ದಿನಾ ಆಯ್ತು. ಆಕೀ ಗೂಡಾ ಮಾತs ಬಿಟ್ಟಿದ್ದ. ಹೋಗೂ ದಿನಾ ಹರಿವತ್ತ ಚಹ ಕುಡದ ಹೋಗ ಅಂದರೂ ಕುಡದ ಹೋಗಲಿಲ್ಲ. ಹೋಗು ಮುಂದ ಇಂದರವ್ವ ಅಕ್ಕ್ಯಾನ ಮುಂದ ತಾರಕ್ಕನ ಕಡೆ ಹೋಗತ್ಯಾನು ಅಂತ ಒಮ್ಮಿ ಅಂದಿದ್ದ ಅಂತ. ಅದಕ ಈಗ ಇಕಡೆ ಹಚ್ಚಕೊಟ್ಟೀರ ನನ್ನಾ. ಇಂದರಾ ಹರಿವತ್ತಿಂದೂ ಹಲ್ಲಿಗಿ ಅರಿವಿ ಹಚ್ಚಕೊಂಡs ಕೂತಿದಾಳು"

ಈ ಮಾತು ಮುಗಿಯುವಷ್ಟರಲ್ಲಿ ತಾರಕ್ಕ ಕಟ್ಟೆಯ ಮೇಲಿಂದ ಒಮ್ಮೆಲೇ ಕೆಳಗುರುಳಿ ಬಿದ್ದಳು, ದನಗಳನ್ನು ಕಟ್ಟುವ ದವನಿಯಲ್ಲಿ. ಆಕೆಯ ಮುಖ ದಿಂದ "ಅಂ! ನನ್ನ, ಕಡೆ ಬರತ್ಯಾನ ಅಂದಿದ್ದಾ! ಖರೇನ ಯಾನ? ಇಲ್ಲಿ ಬರತ್ಯಾನ ಅಂದಾ!" ಎಂಬ ಅಸ್ಪಷ್ಟ ಮಾತು ಹೊರಟಿತು.

ಆತ ಮುಂದೆ ಎದ್ದು ಬರುವಷ್ಟರಲ್ಲಿ ಆಚೆಯ ಮನೆಯ ಹೆಂಗಸರೂ ಸಪ್ಪಳ ಕೇಳಿ ಓಡಿ ಬಂದರು. ಅವರು "ಹ್ಯಾಂಗ್ಯಾಕಬೇ ತಾರಾ, ಯಾನಾಯ್ತು?" ಎಂದು ಕೇಳುತ್ತ ತಾರಕ್ಕನನ್ನು ಎಬ್ಬಿಸಿ ಕುಳ್ಳಿರಿಸಿದರು. ಯಾತಕ್ಕೋ ಎಲೆ ದೋಟದ ಕಡೆದ ಹೋಗಿದ್ದ ಅಮ್ಮವ್ವ ಮುದುಕಿ ಇದನ್ನು ದೂರದಿಂದ ಕಂಡು ಧಾವಿಸಿ ಬಂದು "ಹೊಟ್ಟಿಗಿ ಗೂಟ ಬಡಿತ್ಯಾನ ನೋಡರಿ ಬೇ" ಎಂದಳು, ಗಾಬರಿಯಿಂದ.

## ೨೩

ಮುಂದೆ ಎರಡು ದಿನಗಳಲ್ಲಿ ತಾರಕ್ಕನ ಗರ್ಭಗಳಿತವಾಯಿತು. ಆಗ ಮನೆಯವರೆಲ್ಲ ದುಃಖಪಟ್ಟರು. ಸಿಟ್ಟಿಗೆ ಬಂದು ಅಮ್ಮಪ್ಪ ಮುದುಕಿ "ಆಕಿಗಿ ಜನ್ಮಾ ಮಾಡೋದ್ವ ಮನಸಿನ್ಯಾಗ ಇಲ್ಲ ; ಇಲ್ಲಾದರ ಹೀಂಗ ನಿತ್ತರಾಟಿಗೆ ಬೀಳತೀಳ ಯಾನ ? ಎಲ್ಲಿ ಸೋದರ ಮಾವನಮಗಾ, ಯಾನ ಸುದ್ದಿ, ಎಲ್ಲೀದ ಆ ಖೋಡಿ ಮುದಕ ಹೇಳಕ ಬಂತು, ಈಕಿ ಸುದ್ದಿ ಹಾರಿ ಬಿದ್ದಳು. ಇಂಥಾ ಹೊಯ್ಕಾದ ಮಾತ ನಾ ಎಲ್ಲಿ ಕೇಳಿಲ್ಲಪ್ಪ, ಜಗದಾಗ. ಅಂವ ಎಲ್ಲೊ್ಯೀ, ಈಕಿ ಎಲ್ಲೊ್ಯೀ ಮಾಡಿ ಕುಡಕ ಬಂದಾವ ತಿರಗಿ ಹಣಿಕಿ ಹಾಕಿ ಇಕಡೆ ನೋಡಿಲ್ಲ ಸುದ್ದಾ ; ಇಕ್ಕೀ ಮ್ಯಾಲಿಂದ ಮ್ಯಾಲ ನೆನಿತಾಳ ಅಂವನಾ " ಎಂದಳು.

ಇದಕ್ಕೆ ತಾರಕ್ಕ ಮನಸ್ಸಿನಲ್ಲಿ ಏನೆಂದುಕೊಂಡಳೆಂಬುದನ್ನು ಇಲ್ಲಿ ಬರೆಯುವುದು ಅನಾವಶ್ಯಕ. ಆದರೆ ಇಷ್ಟು ಮಾತ್ರ ಹೇಳಬೇಕು. ಅವಳ ಮನಸ್ಸಿನಲ್ಲಿ ಅನಂತನನ್ನು ಎಲ್ಲಿಯಾದರೂ ಹುಡಿಕಿಸಬೇಕು ಎಂದು ಮೇಲಿಂದ ಮೇಲೆ ಅನ್ನಿಸುತ್ತಿತ್ತು. ಆದರೆ ಇದನ್ನು ಅವಳು ಯಾರ ಮುಂದೆಯೂ ಮಾತಾಡುವಂತೆ ಇರಲಿಲ್ಲ. ಅದರಿಂದ ಮನದಲ್ಲಿಯೇ ಕೊರಗುತ್ತಿದ್ದಳು. ಅವಳ ಹೃದಯಪಟದ ಮೇಲೆ ಅನಂತನ ಮೂರ್ತಿ ಅಚ್ಚಳಿಯದೆ ಮೂಡಿ ನಿಲ್ಲುತ್ತಿತ್ತು. ಅದೇ ಕಾಲಕ್ಕೆ ಅವಳ ಬಗೆಗಣ್ಣಿನೆದುರಿ ಅಪ್ಪಣ್ಣನ ಮೂರ್ತಿಯೂ ಮೂಡುವದು. ಜನತೆಯ ದೃಷ್ಟಿಯಿಂದ ಅಪ್ಪಣ್ಣ ಪತಿ. ಅವನ ಪ್ರೇಮದ ಮಾತುಗಳನ್ನು ಕೇಳಲೇಬೇಕು. ಅವನು ಆನಂದ ಪಟ್ಟಾಗ ತಾನೂ ಆನಂದವನ್ನು ವ್ಯಕ್ತಮಾಡಲು ಯತ್ನಿಸಬೇಕು. ಅಲ್ಲೀ ಅನಂತ ಮರೆಯಲಾಗದ ವ್ಯಕ್ತಿ. ಆದರೂ ಒಮ್ಮೊಮ್ಮೆ "ಇನ್ನ ಅಂವ ಯಾರ ? ಎಲ್ಲಾರಿಗು ಇರೂ ಹಂಗ ಒಬ್ಬ ಮಾವನ ಮಗಾ ; ಅವನ ನೆನಪ ಯಾಕ ?" ಎಂದು ಒಂದು ಕ್ಷಣ ವಿಚಾರ ಸುಳಿಯುವದು. "ನನ್ನ ಗಂಡ ಮನ್ಯಾಗ ಇದಾ ; ಅಂವ ನನಗ ಬೇಕಾದ್ದ ಕೊಡತಾ ; ಮಾಯೆ ಮಾಡತಾ" ಎಂದು ಅನ್ನಿಸುವದು. ಇದೇ ಭಾವ ದೃಢವಾಗಿ ಇಟ್ಟುಕೊಳ್ಳಬೇಕೆಂದು ಪ್ರಯತ್ನಿಸುವಳು. ಆದರೆ ಅನಂತನನ್ನು

ಮರೆಯಲಿಕ್ಕಾಗದು. ಯಾವಾಗಲೂ ಒಂದು ಮಂದವಾದ ಅತೃಪ್ತಿ ಅವಳ ಹೃದಯತಂತಿಯನ್ನು ಸಂತತ ಸುಮ್ಮನೆ ಮೀಟುತ್ತಲಿರುವುದು.

ಎರಡು ದಿನಗಳಲ್ಲಿ, ಮಗಳ ಬಸಿರು ಬರಿದಾದ ಸುದ್ದಿಯನ್ನು ಕೇಳಿ ಮಲ್ಲ ರತ್ನವ್ವ ಇಬ್ಬರೂ ಓಡಿ ಬಂದರು. ಆದ ಸಂಗತಿಯನ್ನು ಕೇಳಿ ರತ್ನವ್ವ ಮೊದಲು ಮಗಳ ಮೇಲೆ ಸಿಟ್ಟು ಬೆಂಕಿಯಾದಳು. ಅನಂತರ ಕಣ್ಣೀರುಗರೆದು, ವಿವೇಕ ವನ್ನು ತಾಳಿದಳು. ತಾಯಿಯ ಕಣ್ಣಲ್ಲಿಯ ನೀರು ಕಂಡು, ತಾರಕ್ಕನೂ ನಾಲ್ಕು ಹನಿ ಕಣ್ಣೀರು ಸುರಿಸಿದಳು. ಅವುಗಳನ್ನು ಕಂಡು ರತ್ನವ್ವನೇ "ಅಳಬ್ಯಾಡ; ಆದದ ಆಯ್ತು; ಒಮ್ಮಿ ಹಡೀಕ ಹತ್ತೀದಿರಿ ಅಂದಮ್ಯಾಲಿ, ಇಂದ ಇಲ್ಲ ನಾಳಿ ಮತ್ತ ನಿಂತೋತ. ನೀ ಲಗೂನ ಛಲೂ ಆಗಿ ಏಳ. ಎಲ್ಲೀರ ನಂಜ ಗಿಂಜ ಏರ್‍ಯೋತ!" ಎಂದು ಹೇಳಿದಳು.

ತಾರಕ್ಕ ಶೂನ್ಯದೃಷ್ಟಿಯಿಂದ ತಾಯಿಯ ಮುಖದ ಕಡೆಗೆ ನೋಡುತ್ತ ಕೇಳುತ್ತಿದ್ದಳು. ಅವಳ ಮನದಾಳದ ಒಳದನಿಯೊಂದು "ನಾ ಇನ್ನ ಹೋದರೂ ನೆಟ್ಟಗ. ಇನ್ನ ಯಾನ ಮಾಡಾಕಿ ಇದ್ಯಾನ ನಾ ಬದಕಿ?" ಎಂದು ಹೇಳುತ್ತಿತ್ತು. ಮರುಕ್ಷಣದಲ್ಲಿ "ಇನ್ನೊಮ್ಮಿ ಅನಂತನ ಮಾರಿ ನೋಡುಲ್ಲದ ಸಾಯಲಿ?" ಎಂಬ ಪ್ರಶ್ನೆಯೂ ಏಳುತ್ತಿದ್ದಿತು ಅದೇ ಮನದಲ್ಲಿ. ಆಗ ತಂದೆಯ ಕೆಂಪೇರಿದ ಮುಖವು ಅವಳ ಕಣ್ಣೆದುರಿಗೆ ನಿಲ್ಲುವದು. ತಂದೆ ಅವನ ಹೆಸರು ತೆಗೆಯ ಬೇಡೆಂದು ಹೇಳಿದ್ದ. ಅವ್ವ, ಅವನ ಮಾತ ತಗದರ ನೀ ಅನಂತ ಅಂತ ಅಂದದ ಕೇಳಿದರ ನಾ ನಿನ್ನ ಮುಂದ ನಾಲಿಗಿ ಕಿತ್ತಕೊಂಡ ಜೀವಾ ಕೊಡತೇನು ಎಂದು ಹೇಳಿದ್ದಳು. ಇದೆಲ್ಲ ಅವಳಿಗೆ ನೆನಪಾಗುವದೀಗ. ಒಮ್ಮೊಮ್ಮೆ ಅನ್ನಿಸುವದು, "ಅವ್ವಾ ಅಪ್ಪಾ ಎಂಥಾ ಛಲೂ! ನನ್ನ ಜನ್ಮ ದಂಡಿಗಿ ಹತ್ತಲಿ ಅಂತ ಎಷ್ಟಂತ ಚಿಂತಿ ಮಾಡತಾರು? ಹೊಲಾ ಮನೀ ಸಹಿತ ನನ್ನ ಗಂಡನ ಹೆಸರಲೆ ಮಾಡಿ ಕೊಟ್ಟರು! ತಮ್ಮದ ಮುಪ್ಪಿನ ಕಾಲಕ ಯಾನ ಗತಿ ಆದೋತ ಅನೋದ ಎಲ್ಲಾ ಮರತರ ನನಗಾಗಿ. ನಾ ಅವರಿಗಿ ಯಾನ ಸುಖಾ ಹಚ್ಚಿದಂಗ ಆಯ್ತು? ನಾ ಇಂದ ಸತ್ತ ಹೋದರ ಅವರಿಗಿ ಯಾರ ಇದಾರು? ಅವರದ ಹ್ಯಾಂಗ ಆಗೋದಾ! ಅವರನಾ ಜೋಕೆ ಮಾಡಕ ಆದರೂ ನಾ ಬದಕಕ ಬ್ಯಾಡಾ?" ಹೀಗೆ ಬದುಕುವ ಆಶೆಯೂ ತೀವ್ರವಾಗಿ ಬರುವದು. ಆಗ ಎಣ್ಣೆ ತೀರಿ ಆರುವ ದೀಪದಂತೆ ಅವಳ ಆಶೆ ಒಮ್ಮೆಲೇ ಬಹಳ ದೊಡ್ಡದಾಗುವದು.

ಒಂದು ತಿಂಗಳವರೆಗೆ ತಾರಕ್ಕ ಕತ್ತಲೆಯ ಮನೆಯಲ್ಲಿ ಕಳೆದಳು. ಹಳ್ಳಿಯ ವೈದ್ಯರ ಉಪಚಾರ, ತಾಯಿಯ ಆರೈಕೆಯಿಂದ ಅವಳ ಪ್ರಕೃತಿ ದಿನ ದಿನಕ್ಕೆ ಸುಧಾರಿಸತೊಡಗಿತು. ಈಗ ಸ್ವಲ್ಪ ಹೊರಗೆ ಬಂದು ಕೂಡಹತ್ತಿದಳು. ಆದರೂ ಅವಳ ಅಶಕ್ತತೆ ಇನ್ನೂ ಹೋಗಿರಲಿಲ್ಲ. ದಿನಾಲು ಮೈಮೇಲೆ ಹೋಗುವುದೂ ಇನ್ನೂ ನಿಂತಿರಲಿಲ್ಲ. ಹಳ್ಳಿಯಲ್ಲಿ ಬಲ್ಲವರು ಹೇಳಿದಂತೆ ದಾಶಾಳದ ಹೂವು ತಂದು ಅವಳಿಗೆ ಔಷಧ ಮಾಡಿಕೊಡುತ್ತಿದ್ದರು. ಮನೆ ಬಿಟ್ಟು ಒಂದು ತಿಂಗಳಾಗಿ ಹೋಯಿತು. ಊರಿಗೆ ಹೋಗಬೇಕೆಂದು ರತ್ನವ್ವನ ಮನಸ್ಸು ಹರಿಯುತ್ತಿದ್ದಿತು ಈ ಸ್ಥಿತಿಯಲ್ಲಿ ಮಗಳನ್ನು ಬಿಟ್ಟು ಹೋಗುವುದೂ ಅವಳಿಗೆ ಜೀವದ ಮೇಲೆ ಬಂದಂತಾಗುವುದೊಮ್ಮೆ. ಹೀಗೆ ಮನದ ತೂಗುವಿಕೆ ಯಲ್ಲಿಯೇ ಮಗಳ ಅಭಿಪ್ರಾಯವನ್ನು ಅರಿಯಬೇಕೆಂದು "ತಾರಾ, ನಾ ಇನ್ನ ನಾಲ್ಕ ದಿನಾ ಊರಿಗಿ ಹೋಗಿ ಬರಬೇಕ ಅನ್ನತ್ಯಾನ ಬೇ" ಎಂದು ಒಂದು ದಿನ ಕೇಳಿದಳು.

"ನಾನೂ ಬರತ್ಯಾನ ನಾಲ್ಕ ದಿನಾ; ನಿನ್ನ ಗೂಡಾ ಕರಕೊಂಡ ಹೋಗು."

"ಛೇ ! ಇಂಥ ಹೊತ್ತಿನ್ಯಾಗ ನಿನ್ನಾ ಕರಕೊಂಡ ಹೋಗಲಾಕ ನಾ ಯಾನ ಹುಚ್ಚ ಇದ್ಯಾನ ಯಾನ ? ಸುಮ್ನ ಇಲ್ಲೇ ಬಿದ್ದ ಯಾಕ ಆಗವಲ್ತು ಇರು."

ತಾರಕ್ಕ ಸುಮ್ಮನಾದಳು. ತಾಯಿ ಕರೆದೊಯ್ಯದ ಕಾರಣ ಅವಳಿಗೂ ಗೊತ್ತು. ಇನ್ನು ಮತ್ತೆ ತನ್ನ ಗಂಡ ಮತ್ತೊಬ್ಬಳನ್ನು ಮಾಡಿಕೊಳ್ಳಲು ಹವಣಿಸಬಹುದು. ತಾನಿಲ್ಲಿರುವುದರಿಂದ ಅದಕ್ಕೆ ಅಡ್ಡಿಯಾಗುವದು. ಇದು ನಿಜ. ತನ್ನಿಂದ ಅವನಿಗೂ ಸುಖವಿಲ್ಲ; ತನ್ನ ಸುಖವಂತೂ ಎಂದೋ ಹೋಗಿ ಬಿಟ್ಟದೆ. ಇದೆಲ್ಲ ಸಂಗತಿಯನ್ನು ಅವಳು ಚನ್ನಾಗಿ ಬಲ್ಲಳು. ಅದಕ್ಕಂತೇ ಕಣ್ಣೀರು ಒರೆಸಿಕೊಳ್ಳುತ್ತ "ಇನ್ನ ಎಂದ ಬರತಿ ಮತ್ತ ?" ಎಂದು ತಾಯಿಯನ್ನು ಕೇಳಿದಳು. "ನಾ ಅಲ್ಲಿ ಹೋದರೂ ನನ್ನ ಮನಸ್ಸೆಲ್ಲ ಇಲ್ಲೇ. ಅವನಾ ಒಮ್ಮೆ ನಡವ ಹಚಕುಡತ್ಯಾನು. ಆಮ್ಯಾಲಿ ನಾವೊಮ್ಮೆ ಬಂದ್ಯಾನಲ್ಲ ?"

ತಾರಕ್ಕ ಸುಮ್ಮನಾದಳು. "ಅವರ್‍ಯ ಎಷ್ಟದಿನಾ ಇದ್ದ ಸಾಕಾಗವರ

ನನಗಾ ? ಯಾವಾಗ ಆದರ ನನ್ನ ಜೀವಕ ನಾನs ಆಧಾರ ಅಲ್ಲ!" ಎಂದು ಮನದಲ್ಲಿಯೇ ಅಂದುಕೊಂಡಳು. ತಾಯಿ ಊರಿಗೆ ಹೊರಡುವಾಗ, ತಾರಕ್ಕ ಅವಳನ್ನು ಕರೆದು ಕೇಳಿದಳು "ಅಪ್ಪಾ ಬರೋಗ, ಅನಂತನ ತಪಾಸ ಆಯ್ತ್ಯಾನ ಎಲ್ಲ್ಯಾದರ, ಅಂಬೋದ ಕೇಳಿ, ಹೇಳಿ ಹಚಕೊಡು. ಹಚಕೊಡತೀ ?"

ಈಗ ರತ್ನವ್ವನಿಗೆ ತಾರಕ್ಕನ ಬಾಲ್ಯಜೀವನವೆಲ್ಲ ನೆನಪಾಯಿತು. 'ಸಣ್ಣಾಗಿಂದೂ ಕೂಡಿ ಆಡಿದ ಜೀವ ಹ್ಯಾಂಗ ಮರೆತಾಳು ನಾವ ಮರೀ ಅಂದರ?' ಎಂದುಕೊಂಡು "ಹೂಂ!" ಎಂದಳು. ಆಗ ಅವಳ ಮನಸ್ಸಿನಲ್ಲಿ 'ಈಗ ಮಗಳ ಹೊಟ್ಟೀಲೆ ಬಿದ್ದೀತಿ; ಆಕಿಗಿ ಯಾನರ ಅಂದ ಮನಸ ನೂಸಬಾರದು' ಎಂಬ ಯೋಚನೆಯೂ ಬಾರದಿರಲಿಲ್ಲ. ಆದರೂ ಸ್ವಲ್ಪ ತಡೆದು "ನಿನಗ ಇನ್ನೊಂದ ಮಾತ ಹೇಳಿ ಹೋಗತ್ಯಾನು !" ಎಂದಳು.

ತಾರಕ್ಕ ತಾಯಿಯ ಮುಖದ ಕಡೆಗೆ ನೋಡುತ್ತ "ಯಾನಾ ?" ಎಂದಳು. "ನಿನ್ನ ಗಂಡನ ಮುಂದ ಈ ಮಾತ ತಗೀಬ್ಯಾಡ; ಇಲ್ಲಾದರ ಎಲ್ಲಾ........" ಈ ಮಾತು ಕೇಳಿ ತಾರಕ್ಕನಿಗೆ ಅತ್ಯಂತ ದುಃಖವೆನಿಸಿತು. "ಯಾಕ ? ಯಾರರ ಕೊಟ್ಟ ದಾಗೀನಿ ಅವರವರ ಇಸಕೊಂಡ ಹೋಗೂದುಲ್ಲಾ? ಇವರಿಗೇ ಅವ್ವ್ಯಾನ ದಕ್ಕತ ಕೊಟ್ಟಂಗ ಆಯ್ತು, ನಾಲ್ಕದಿನಾ ಹಾಕೋಕ ಕೊಟ್ಟರ? ಇಷ್ಟದಿನಾ ಹೊಲಾ ಮನೀ ಒಂದ ಅವರಿಗೇ ಮಾಡ್ಯಾರಂತ ಒಂದ ಕಾರಣರs ಇತ್ತ. ಈಗ ಅದೂ ಇಲ್ಲ. ' ಎಲ್ಲಾ ತನ್ನ ಹೆಸರಲೆ ಮಾಡ ಕೊಂಡಬಿಟ್ಟ ! ಇಷ್ಟದಿನಾ ಅವರ ಮನಿಗಿ ಹೋಗುಗುಡುದುಲ್ಲ ಅಂದ. ಸುಮ್ಮ ಕೂತೀವ. ನಮಗ ಯಾರ ಬ್ಯಾಡ್ಯಾನ ಮಂದೀ ಮಕ್ಕಳಾ? ಇಂವ ಒಬ್ಬ ಆದರ ಆಯ್ತು ?"

ತಾರಕ್ಕನ ಮಾತಿನ ಓಘವನ್ನು ಅಷ್ಟಕ್ಕೇ ತಡೆದು "ಬೇಕು ; ಆದರ ಎಲ್ಲಾರನೂ ನಾಲ್ಕೊಪ್ಪತ್ತ ಸಂಬಾಳಸಕೊಂಡ ಹೋಗಬೇಕಲ್ಲ? ಒಬ್ಬ ಪುಂಡ ಗಂಡ ಗಂಟ ಬಿದ್ದನ್ಮ್ಯಾಲ ತಾಳಕೋಕ ಬ್ಯಾಡಾ? ನೀ ಬರಲಿಲ್ಲ ಅಂತ ಅವರ‍್ಯಾನ ಸಿಟ್ಟಮಾಡುದುಲ್ಲ. ಅವರಿಗೂ ಗೊತ್ತ ಏತಿ, ನೀ ಅತ್ತೀ ಮನೀ ಸೊಸಿ ಅಂತ."

"ಸಿಟ್ಟ ಮಾಡಲಿಕಿಲ್ಲಾ ಅವ್ವಾ? ನಿನಗ ಗೊತ್ತ ಏತಿ?" ಅವ್ವನ ಕೈಹಿಡಿದು ಕೇಳಿದಳು, ತಾರಾ. ಈಗಿನ ಅವಳ ಧ್ವನಿ, ಮುಖಚರ್ಯೆಗಳನ್ನು

ನೋಡಿ ರತ್ನವ್ವ ಗಾಬರಿಯಾದಳು. ಮಗಳ ಮನಸ್ಥಿತಿಯನ್ನು ರತ್ನವ್ವ ಅರಿಯಳು. ತಾನೇ ಹೆತ್ತ ಮಗಳಾದರೂ ಅವಳ ಮನಸ್ಸನ್ನು ರತ್ನವ್ವ ಹೆರಲಿಲ್ಲ ವಲ್ಲ! ಮಗಳ ಮೈಮುಟ್ಟಿ, ನೋಡಿ "ಒಳಗ ಜರಾ ಮಲಕೋ ನಡಿ ತಾಯೀ, ಗಾಳಿ ಆದಂಗ ಹೀಂಗ ಯಾಕ ಮಾಡಕ ಹತ್ತೀದಿ ?" ಎಂದಳು ರತ್ನವ್ವ.

"ಅಪ್ಪಾ ನನಗ ಗಾಳಿ ಆಗೀತಿ ಅಂತ ತಿಳದೀರಿ ? ಇಲ್ಲ. ನನಗ ಯಾನ ಆಗಿಲ್ಲ! ಹುಚ್ಚ ಹತ್ತಿಲ್ಲ, ಗಾಳಿ ಆಗಿಲ್ಲ, ಎಲ್ಲಾ ಕಲ್ಲಿನಂಗ ಇದ್ಯಾನವ್ವ!" ಎಂದು ಎದೆಯನ್ನು ದೊಪ್ಪದೊಪ್ಪ ಎಂದು ಬಡೆದುಕೊಂಡು ತೋರಿಸಿದಳು, ತಾರಾ.

ತಾರಕ್ಕನ ಈ ನಡತೆಯನ್ನು ಕಂಡು, ಊರಿಗೆ ಹೊರಟು ನಿಂತ ರತ್ನವ್ವ ಗಂಟು ಬಿಚ್ಚಿಟ್ಟು ಆದೊಂದು ದಿನ ನಿಲ್ಲಬೇಕಾಯಿತು. ಮರುದಿನ ಮಗಳ ಸ್ಥಿತಿಗತಿ ಚೆನ್ನಾಗಿರುವದೆಂದು ಅರಿತುಕೊಂಡು, ಚಂದೂರಿಗೆ ಹೋದಳು.

ಇನ್ನೊಂದು ತಿಂಗಳು ಕಳೆಯಿತು. ತಾರಕ್ಕನಿಗೆ ಎಷ್ಟೋ ಗುಣ ವಾಯಿತೀಗ. ಆದರೂ ಅವಳ ಮುಖದ ಮೇಲಿನ ಮ್ಲಾನತೆ ಮರೆಯಾಗಲಿಲ್ಲ ಒಮ್ಮೆ ಮಲ್ಲ ಮಗಳನ್ನು ನೋಡಲು ಬಂದು ಸಹಜ ಅಂದ: "ನಾಲ್ಕ ದಿನಾ ನಮ್ಮಲ್ಲಿ ನಿಂತ ಬರಲಿ, ಹವಾ ನೀರಾ ಬದಲ ಆದಂಗ ಆಗತೇತಿ" ಅಷ್ಟಕ್ಕೆ ಮರುದಿನವೇ ಅಪ್ಪಣ್ಣ ತಮ್ಮಲ್ಲಿಂದಲೇ ಬಂಡಿ ಹೂಡಿಸಿ ತಂದೆ ಮಗಳನ್ನು ಚಂದೂರಿಗೆ ಕಳಿಸಿಕೊಟ್ಟ. ಮಲ್ಲನು ತಾರಕ್ಕನನ್ನು ತವರುಮನೆಗೆ ಕರಕೊಂಡು ಬಂದ. ಆದರೂ ಅವನ ಲಕ್ಷ್ಯವೆಲ್ಲ ಅವಳ ಗಂಡನ ಮನೆಯ ಕಡೆಗೆಯೇ ಇತ್ತು. "ನಾಲ್ಕು ದಿನಾ ನಿಂತ ಹೋಗು, ಹೆಂಗಸು ಎಲ್ಲಿ ಇರಬೇಕ ಅಲ್ಲೇ ಇದ್ದರ ಛಲೂ" ಎಂದು ಹಾದಿಯಲ್ಲಿಯೇ ಮಗಳಿಗೆ ಮಲ್ಲ ಹೇಳಿದ. ಮನೆ ಯಲ್ಲಿ ಬಂದೊಡನೆಯೇ ರತ್ನವ್ವ "ಹಸಿ ಮೈಯಾಗ ಮತ್ತ ನಿಂತೋತ ಮಾಡ್ಯೋತ; ಅಲ್ಲೇ ಇರೋದು ಹಿತಾ. ಬಂದೀದಿ ಎರಡಾ ದಿನಾ ನಿಲ್ಲೂ, ಗಾಡಿ ಕೊಟ್ಟ ಹಚಕೊಟ್ಟ ಬಂದಾ ಅಂತ" ಅಂದಳು.

ತವರು ಮನೆಯಲ್ಲಿರುವಾಗಲೇ ಅನಂತನನ್ನೊಮ್ಮೆ ಕರಿಸಿಕೊಳ್ಳಬೇಕೆಂದು ತಾರಕ್ಕನ ಹಂಬಲ. ಆದರೆ ಅದನ್ನು ತಂದೆತಾಯಿಗಳ ಮುಂದೆ ಹೇಳಲ ಆವಳಿಂದ ಆಗುತ್ತಿರಲಿಲ್ಲ. ಅವಳ ಮನಸ್ಸಿನಲ್ಲಿ "ಸಹಜ ಅವನು ಯಾಕ

ಬರಬಾರದು ? ಬಂದರ ನಮ್ಮ ಅವ್ವ ಅಪ್ಪಾ ಯಾನ, ಬರಬ್ಯಾಡ ಹೋಗ ಅಂತಾರು ?" ಎಂದೂ ವಿಚಾರಿಸುವಳು. ಇದೇ ವಿಚಾರಸರಣಿಯಲ್ಲಿ ಕೊನೆಗೆ ಅವಳು ಮನೆಯಲ್ಲಿ ಯಾರೂ ಇಲ್ಲದಾಗ, ಒಬ್ಬ ಕೂಲಿಯವನಿಗೆ ಒಂದು ರೂಪಾಯಿ ಕೊಟ್ಟು, ಐನಾಪುರಕ್ಕೆ ಕಳಿಸಿದಳು. ಅವನಿಗೆ 'ಅನಂತ ಎಲ್ಲಿದ್ದಾನೆ, ಊರೊಳಗೆ ಬಂದಿರುವನೊ ? ಬಂದಿದ್ದರೆ ಒಂದೆರಡು ದಿನಗಳಲ್ಲಿ ಬಂದು ಹೋಗು' ಎಂಬೆಲ್ಲ ಸಂಗತಿಗಳನ್ನು ವಿಚಾರಿಸಿಕೊಂಡು ಬರಲಿಕ್ಕೆ ಹೇಳಿದಳು. "ನಾಲ್ಕ ದಿನಾ ನಾ ತವರಮನ್ಯಾಗ ಇರತ್ಯಾನು, ಅಷ್ಟರಾಗs ಬಂದ ಹೋಗು. ಒಮ್ಮೆ ನೋಡುಹಾಂಗ ಆಗೀತಿ" ಎಂದೂ ಅನಂತನಿಗೆ ಹೇಳಲು, ಆ ಮನುಷ್ಯನಿಗೆ ಮೇಲಿಂದ ಮೇಲೆ ಒತ್ತಿಹೇಳಿದಳು.

ಆಳು ಮರುದಿನವೇ ಐನಾಪುರಕ್ಕೆ ಹೋಗಿ ಬಂದು ಹೇಳಿದ "ಅವರು ಊರಾಗ ಇಲ್ಲಂತ" ಎಂದು.

"ಯಾರೋ ?" ಎಂದು ಕೇಳಿದಳು ರತ್ನವ್ವ.

ತಾರಕ್ಕ ಅವನ ಧ್ವನಿ ಕೇಳಿ ಹೊರಗೆ ಧಾವಿಸಿ ಬಂದು, "ಯಾರು ಶಿವ್ಯಾ ಹೋಂದ ; ಎಲ್ಲಿ, ಊರಿಗಿ ಹೋಗಿದಾರಂತ ? ಇರಲಿ ಹೋಗ" ಎಂದು ಹೇಳಿ ಸನ್ನೆಮಾಡಿ ಕಳಿಸಿಕೊಟ್ಟಳು. ಅವನೂ ಏನೂ ತಿಳಿಯದೆ ಹೋಗಿ ಬಿಟ್ಟ.

"ಯಾರ ?" ಎಂದು ಮಗಳನ್ನು ಕೇಳಿದಳು ರತ್ನಾ.

"ಶಿವ್ಯಾ ಮೊನ್ನಿ ಎಡೂರಿಗಿ ಹೋಗತ್ಯಾನ ಅಂದ. ವೈದ್ಯರು ಇದ್ದರ ಎರಡ ದಿನದಾಗ ಬಂದ ಹೋಗರಿ ಅಂತ ಹೇಳಿನ್ನು" ಎಂದು ಹೇಳಿದಳು.

"ಹಿಂದಕ ಅವನ ಅಗಸುದ್ದಿ ತಗೊಂಡ ಯಾನ ದಂಡಿಗಿ ಹಚ್ಚೀದಿ ? ಈಗ ಮತ್ತ ಬಂದಾ ಅಂವ ? ಎಲ್ಲಾರು ಆದರು ಇನ್ನ ಆ ವೈದ್ಯ ಅಷ್ಟ ಬಂದ ನೆಟ್ಟಗ ಮಾಡೋದ ಉಳೀತ ಯಾನ ?" ಎಂದಳು ರತ್ನಾ.

ತಾರಕ್ಕ ಮಾತಾಡಲಿಲ್ಲ. ಅವಳ ಹೃದಯ ನುಡಿಯಿತು. "ನನ್ನ ವೈದ್ಯ ಬಂದರ ಸಾಕ. ನಾ ನೆಟ್ಟಗ ಆಗು ಆಶಾ ಹಿಡದಿಲ್ಲ ಇನ್ನ" ಎಂದು.

ಮತ್ತೊಂದು ಸ್ವಲ್ಪ ನಿಂತು ತಾರಕ್ಕ ಬಸದಿಗೆ ಹೋಗುವಾಗ ಶಿವಪ್ಪನನ್ನು ಕಂಡು ಅನಂತನ ಎಲ್ಲ ಸುದ್ದಿಯನ್ನು ಕೇಳಿದಳು. ಆತ ಹೇಳಿದ :

"ಅವರು ಊರಾಗ ಇಲ್ಲ ; ಮಿರಜಿ ದವಾಖಾನೇದಾಗs ಇದಾರಂತ" ತಾರಕ್ಕ ಮತ್ತಿಷ್ಟು ಮುಂದೆ ಬಂದು, ಆಶ್ಚರ್ಯ ತುಂಬಿದ ನೋಟವೊಂದನ್ನು ಬೀರಿ "ಮಿರಜಿ ದವಾಖಾನೇದಾಗ ? ನಿನಗ ಯಾರ ಹೇಳಿರು ?" ಎಂದು ಕೇಳಿದಳು.

"ಅವರ ತಮ್ಮನ ಮನ್ಯಾಗ ಒಬ್ಬಾಕಿ ರಂಡಮುಂಡಿ ಹೆಂಗಸ ಇದ್ದಳು, ಆಕಿ ಹೇಳಿದಳು."

ತಾರಕ್ಕ ನಡುವೆಯೇ ಬಾಯಿಹಾಕಿ "ಹೋಂದ ; ಆಕಿ ಅವರ ಅವ್ವ !" ಎಂದಳು. ಸ್ವಲ್ಪ ತಡೆದು "ಕೆಂಪ, ಉದ್ದ ಹೆಂಗಸ ಇದಾಳಲ್ಲ ?" ಎಂದು ಕೇಳಿದಳು.

"ಖೂತಿಳು ; ಕೆಂಪ ಇದಾಳು ; ಹಣಿಮ್ಯಾಲ ಕಚ್ಚ ಏತಿ ಅಲ್ಲ."

"ಹೋಂದ ; ಆಕೇ !"

"ಆಕೇ ಹೇಳಿದಳು."

"ಯಾನಂತ ?"

"ತೇರದಾಳದಿಂದ ಹೋದಾಂವ ಹದನದಿನಾ ಯಾರಿಗಿ ಪತ್ತೇನs ಹತ್ತಲಿಲ್ಲ ಅಂತ. ಎಲ್ಲಿದಾ ಅನ್ನೋದ ಮುಂದ ತಿಳೀತ ಅಂತ."

"ಹೋಂದ. ಉಸಾಬರಿಗಿ ಯಾರ ಹೋಗಿದಾರಂತ ?"

"ಯಾರ ಇಲ್ಲ !"

"ಒಬ್ಬರ ಹ್ಯಾಂಗ ಇದಾರು ? ತಿರಗಾಡತಾರ ಮಾಡತಾರ ಅಂತ ?"

"ಅವರ ತಿರಗಾಡುಹಂಗ ಇದಾರ, ಆದರ ಡಾಕ್ತರ ತಿರಗಾಡು ಗುಡುಲ್ಲಂತ."

"ಯಾಕೋ ?"

"ಯಾನೋರಿ ತಾಯೀ. ದವಾಖಾನೆ ಬಿಟ್ಟ ಹೊರಗ ಹೋಗೂ ಹಂಗಿಲ್ಲಂತ."

ಶೂನ್ಯದೃಷ್ಟಿಯಿಂದ "ಹೀಂಗಾ ?" ಎಂದಳು ತಾರಾ.

ತಾರಕ್ಕನಿಗೆ ಈ ಸಲವೂ ಅನಂತನ ದರ್ಶನವಾಗಲಿಲ್ಲ. ಮೂರು ನಾಲ್ಕು ದಿನಗಳಲ್ಲಿ ಅವಳ ತಂದೆಯು "ನಾಳೆ ಸೋಮವಾರ ಎತಗೋಳಿಗಿ ಸವಡ ಇರತೇತಿ, ನಿನ್ನಾ ಹಚಕೊಟ್ಟ ಬರತ್ಯಾನ ನಡೀ" ಎಂದ.

"ನಡೀ, ಎಲ್ಲಾ್ಯದರ ದಿನಾ ಕಳೀದ ಅಲ್ಲ ?" ಎಂದು ಮನದಲ್ಲಿಯೇ ಅಂದುಕೊಂಡು, ಊರಿಗೆ ಹೊರಡುವ ಸಿದ್ಧತೆಯನ್ನು ನಡೆಯಿಸಿದಳು ತಾರಕ್ಕ.

ಮರುದಿನವೇ ತಾರಕ್ಕನನ್ನು ಮಲ್ಲ ಗಂಡನ ಮನೆಗೆ ಒಯ್ದು ಮುಟ್ಟಿಸಿದ. ತಿರುಗಿ ಬರುವಾಗ ಮಗಳಿಗೆ "ಒಗೀಲಾಕ ಮಾಡಲಾಕ ಈಗs ಬಾವ್ಯಾಗ ಇಳೀ ಬ್ಯಾಡ ; ಇನ್ನs ಅಷ್ಟು ಮೈಯಾಗ ಜೋರ ಬಂದಿಲ್ಲ" ಎಂದು ಮಲ್ಲಪ್ಪ ಹೇಳಿದ. ಇದಕ್ಕೆ ಪ್ರತಿಯಾಗಿ ತಾರಕ್ಕ ಏನೂ ಹೇಳಲಿಲ್ಲ. ಅಪ್ಪಣ್ಣನೂ ಸುಮ್ಮನಿದ್ದ. ಅಲ್ಲೇ ಕುಳಿತ ಅಮ್ಮಮ್ಮ ಮಾತ್ರ "ಎಂದೂ ನಾವ ಬಾವ್ಯಾಗ ಇಳ್ಯೂದs ಇಲ್ಲ. ಯಾವಾಗ ಆದರೂ ಕಾವಲ್ಯಾಗs ಒಗೀತೇವ ಹೋಗು" ಎಂದು ಸ್ವಲ್ಪ ಬಿಗುವಿನಿಂದಲೇ ಹೇಳಿದಳು. ಮಲ್ಲ ಮುಂದೆ ಮಾತಾಡದೆ ಚಂದೂರಿಗೆ ಬಂದ.

ತಾರಕ್ಕ ಈಗ ಮೊದಲಿನಂತೆ ಮನೆಗೆಲಸವನ್ನೆಲ್ಲ ಮಾಡುತ್ತಿದ್ದಳು. ಒಂದು ದಿನ ಅಪ್ಪಣ್ಣ ಊರಿಗೆ ಹೋಗಿ ಒಂದು ಕರಡಿಗೆ ಮಾವಿನಹಣ್ಣುಗಳನ್ನು ತಂದ. ತಾರಕ್ಕನೂ ಆಗಾಗ ಗಂಡನ ಮುಂದೆ 'ಹೊಟ್ಟೆಯಲ್ಲಿ ಕಾವು, ಉರಿ ಮೂತ್ರ ಆಗುವವು' ಎಂದು ಈಗಾಗಲೇ ಹೇಳಿದ್ದಳು. ಬೇಸಿಗೆಯ ದಿನಗಳಿವೆ, ಹೆಂಡತಿ ತಣ್ಣಗೆ ತಿನ್ನಲೆಂದು ಅಪ್ಪಣ್ಣನ ವಿಚಾರ. ಅದರಂತೆ ತಾರಕ್ಕನೂ ಎಲ್ಲರಿಗಿಂತಲೂ ಸ್ವಲ್ಪ ಹೆಚ್ಚಾಗಿಯೇ ಹಣ್ಣುಗಳನ್ನು ತಿಂದಳು. ಆದರೆ ಆ ಹಣ್ಣುಗಳು ಅಷ್ಟು ಒಳ್ಳೆಯವಿರಲಿಲ್ಲ. ಗಾಳಿಗೆ ಬಿದ್ದ ಹಣ್ಣುಗಳು. ಅಗ್ಗದ ಹಣ್ಣುಗಳು. ಮನೆಯಲ್ಲಿ ಉಳಿದವರೂ ತಿಂದರಾದರೂ ಅವರಿಗೇನೂ ಆಗಲಿಲ್ಲ. ಆದರೆ ತಾರಕ್ಕನ ಪ್ರಕೃತಿ ಇನ್ನೂ ಪೂರ್ಣ ಗುಣಹೊಂದಿರಲಿಲ್ಲ. ಇನ್ನೂ ಸಣ್ಣಾಗಿ ಜ್ವರ ಬರುತ್ತಿದ್ದವು. ಅದರಿಂದ ಆ ಹಣ್ಣುಗಳು ಅವಳಿಗೆ ತಾಳಲಿಲ್ಲ. ನಾಲ್ಕು ದಿನಗಳಲ್ಲಿ ಕೈಕಾಲು ಹರಿಯುವದು, ತಲೆನೋಯುವದು ಮೆಲ್ಲಗೆ ಪ್ರಾರಂಭವಾಯಿತು.

ಒಂದು ದಿನ ಇರುಳು ಹಾಸಿಗೆಯಲ್ಲಿ ಅಪ್ಪಣ್ಣ ತಾರಕ್ಕನ ಮೈಮೇಲೆ ಕೈಯಿಟ್ಟ.

"ಯಾಕೋ ಇಂದ ಮತ್ತ ಮೈಯಾಗ ನೆಟ್ಟಗಿಲ್ಲದಂಗ ಆಗೀತಿ !" ಎಂದಳು ತಾರಾ.

"ಹಾಂಗ ಅನಸತೇತಿ ನಿನಗ, ಎರಡ ಮೂರ ತಿಂಗಳಾಗಿ ಹೋದರೂ...." ಎಂದು ಇನ್ನೂ ಸಮೀಪಕ್ಕೆ ಸರಿದ ಅಪ್ಪಣ್ಣ.

ತಾರಕ್ಕ ಹಿಂಜರಿಯುತ್ತ "ಇಲ್ಲ; ನಡುವ ನಾಲ್ಕ ದಿನಾ ಛಲೂ ಇತ್ತು. ಮಾವಿನಕಾಯಿ ತಿನ್ನನಾ ಹೀಂಗ ಆಯ್ತು ಯಾನೊ?" ಅಂದಳು.

"ಹೂಂ! ಮಾವಿನಕಾಯಿ ತಿನ್ನನಾ ಆಗತೇತಿ? ಮಂದಿ ಹೆಂಗಸರಿಗಿ ತಿನ್ನಕ ಸಿಗುವಲ್ಲು, ನಿನಗ ಮಾವಿನಕಾಯಿ ತಿನ್ನನಾ ಬ್ಯಾನಿ ಬರತೇತಿ ಇಲ್ಲದ ಒಂದ!" ಸ್ವಲ್ಪ ಸಿಟ್ಟಿನಿಂದಲೇ ನುಡಿದ.

ತಾರಕ್ಕ ಮುಂದೆ ಮಾತನಾಡಲಿಲ್ಲ. ಅವಳ ದೇಹ ಅವನ ಉಪಭೋಗದ ವಸ್ತುವಾಯಿತಾಕ್ಷಣ.

ಇರುಳು ಕಳೆಯಿತು. ಆದರೆ ತಾರಕ್ಕ ಹಾಸಿಗೆಯಿಂದ ಏಳಲಿಲ್ಲ. ಅಪ್ಪಣ್ಣ ಇನ್ನೂ ನಸುಕಿರುವಾಗಲೇ ಎದ್ದು ಕೆಲಸಕ್ಕೆ ಹೋಗಿದ್ದ. ಅಮ್ಮವ್ವ ತಾರಕ್ಕನನ್ನು ತಟ್ಟಿ ಎಬ್ಬಿಸಲು ಬಂದಳು. ತಾರಕ್ಕನ ಮೈಯು ಕೆಂಡದಂತಾಗಿತ್ತು. "ಅವ್ವಾ! ಉರೀ ಬೆಂಕಿ ಬಾಳಚಿದಾವಽ; ಹೋಂದಬೇ ತಾರಾ? ಇಷ್ಟೆಂಗ ಉರೀ ಬಂದೂಬೇ ನಿನಗಾ? ಅಯ್ಯೋ! ದೇವರ ಆಕೀ ಪಾಲದ ನನಗರ ಉರೀ ಬಂದರ ನೆಟ್ಟಗ ಆಗತಿತ್ತಲ್ಲ! ನನ್ನ ಕಣ್ಣ ಯಾಕ ದ್ಯಾವರ ಮುಚ್ಚಬಾರದಿದ್ದಾನಽ!"

ತಾರಕ್ಕ ಒಂದೂ ಇಲ್ಲ, ಎರಡೂ ಇಲ್ಲ. ಅವಳಿಗೆ ಜ್ವರದಲ್ಲಿ ಮೈಮೇಲೆ ಎಚ್ಚರವಿರಲಿಲ್ಲ. ಸ್ವಲ್ಪ ಹೊತ್ತು ನಿಂತು ಗಂಡ ಬಂದು ನೋಡಿದ. ನಸು ಬೆದರಿದ. ಆದರೂ ತೋರಗೊಡದೆ "ಯಾನ ಆಗತೇತಿ ತಗೋ! ಎರಡ ದಿನಾ ಆಗಾನ ನೆಟ್ಟಗ ಆದೋತ, ಮಾವಿನಕಾಯಿ ತಿಂದಿದಾಳ ಸಿಕ್ಕಾಂಗ; ಪಿತ್ತಗಿತ್ತ ಆಗಿರಬೇಕ" ಎಂದ.

"ಎಲ್ಲೇದ ಬೆಂಕಿ ಹಚ್ಚಕ ತಂದೆಪ್ಪ, ಮಾವಿನಕಾಯೀ!"

"ಮಾವಿನಕಾಯಿ ಯಾನ ಮಾಡ್ಯಾವ ಪಾಪ! ನೀವ ಇಂಥಾ ರೋಗಿ ಇದ್ದರ?" ಎಂದು ತಾಯಿಗೆ ಹೇಳಿದ ಅಪ್ಪಣ್ಣ.

ಎರಡು ಮೂರು ದಿನಗಳು ಕಳೆದವು. ಇಂದು ಜ್ವರ ಕಡಿಮೆ ಬಿದ್ದಾವು. ನಾಳೆ ಜ್ವರ ಕಡಿಮೆ ಬಿದ್ದಾವು, ಎಂದು ನಿರೀಕ್ಷಿಸುತ್ತಿದ್ದ ಅಪ್ಪಣ್ಣ. ಆದರೆ

ದಿನದಿನಕ್ಕೆ ಜ್ವರ ಹೆಚ್ಚಾಗುತ್ತಲೇ ಇದ್ದುವು. ನರಳುವದೂ ಹೆಚ್ಚಾಯಿತು. ನೆರೆಮನೆಗಳಿಗೂ ಕೇಳಸಹತ್ತಿತದು. ಒಮ್ಮೊಮ್ಮೆ ಸ್ಮೃತಿಯೂ ತಪ್ಪುವದು. ಈ ಸಲ ತಾರಕ್ಕನ ಗಂಡ ಬಹಳ ನೊಂದುಕೊಂಡ. ಯಾವಾಗಲೂ ಹೆಂಡತಿಯ ಹತ್ತಿರವೇ ಕುಳಿತು ಆರೈಕೆಯಲ್ಲಿ ತೊಡಗಿದ. ಒಮ್ಮೆ ತಾರಕ್ಕನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು, ಅವಳ ಹಣೆಯ ಮೇಲೆ ಕೈಯಾಡಿಸುತ್ತಿದ್ದ. ಆಗ ತಾರಕ್ಕ ಒಮ್ಮೆಲೆ ಕಣ್ತೆರೆದಳು; ಅಪ್ಪಣ್ಣನ ಮುಖದ ಕಡೆಗೆ ನೆಟ್ಟ ದಿಟ್ಟಿಯಿಂದ ನೋಡಹತ್ತಿದಳು. ಆ ದೃಷ್ಟಿಯನ್ನು ಅಪ್ಪಣ್ಣನಿಗೆ ಸಹಿಸುವದಾಗಲಿಲ್ಲ. ಕಣ್ಣುಗಳು ತನ್ನಿಂದ ತಾನೇ ಎರಡು ಹನಿಗಳನ್ನು ಉಗುಳಿದವು. ಅವುಗಳನ್ನು ಒರಸಿಕೊಂಡು, ಬೇರೆ ಕಡೆಗೆ ನೋಡುತ್ತ ಹೇಗೋ ಕೇಳಿದ: "ಈಗ ಮೈಯಾಗ ಹ್ಯಾಂಗ ಅನಸತೇತಿ?" ಸ್ವರದಲ್ಲಿ ಸಂಪೂರ್ಣ ಸಂಕೋಚವು ಸೇರಿತ್ತು.

ತಾರಕ್ಕ ಏನೋ ಹೇಳಬಯಸಿದಳು. ತುಟಿಗಳೂ ನಡುಗಿದುವು. ಆದರೂ ಹೇಳಲಿಕ್ಕಾಗಲಿಲ್ಲವೇನೋ! ಸ್ವಲ್ಪ ತಡೆದು, ತುಟಿಯ ಮೇಲೆ ನಾಲಿಗೆಯಾಡಿಸಿ, ಕಂಠ ಸರಿಪಡಿಸಿಕೊಂಡು, ಮೆಲ್ಲಗೆ ಹೇಳಿದಳು. "ಯಾನಛಲೂ ಇಲ್ಲ; ಅಪ್ಪಾ ಅವುಗಾ ಬರಲಾಕ ಹೇಳಕಳಸು" ತುಂಡು ತುಂಡಾಗಿ, ಹೊರಟಿತೀ ಮಾತು. ಈ ಮಾತುಗಳನ್ನು ಕೇಳಿ ಅಪ್ಪಣ್ಣನ ಹೃದಯದಲ್ಲಿ ಸಾವಿರ ಚೇಳು ಕುಟುಕಿದಷ್ಟು ನೋವಾಯಿತು. ಮೆಲ್ಲಗೆ ಅವಳ ತಲೆಯನ್ನು ಕೆಳಗಿಳಿಸಿ ಇಟ್ಟು, ಹೊರಗೆ ಬಂದು, ಆಳಿಗೆ ಹೇಳಿದ, ಕೂಡಲೇ ಚಂದೂರಿಗೆ ಹೋಗಿ ಅತ್ತೆ ಮಾವಂದಿರನ್ನು ಕರೆದು ತರಲಿಕ್ಕೆ. ಮತ್ತೆ ಒಳಗೆ ಬಂದ; ಮನಸ್ಸಿಗೆ ಸಮಾಧಾನವಿಲ್ಲ. ಮನದಲ್ಲಿ "ದೇವಾ ಇದೊಂದ ಸಾರೆ ಉಳಸಪ್ಪ!" ಎಂದು ತನ್ನ ಮನೆದೇವರಿಗೆ ಬೇಡಿಕೊಂಡು, ಹೆಂಡತಿಗೆ ದೇವರ ಅಂಗಾರ ಹಚ್ಚಲು ಹೋದ. ಆಗ ತಾರಕ್ಕನ ಮುಖದ ಮೇಲೊಂದು ವಿಕಟಹಾಸ್ಯ ಮೂಡಿತು. ಅದರಲ್ಲಿ "ಮೂರ್ಖ, ಮೊದಲು ತಪ್ಪುಮಾಡಿ, ಹಿಂದಿನಿಂದ ದೇವರಿಗೆ ಮುಡುಪು ಕಟ್ಟಿದರೆ ಯಾನ?" ಎಂಬ ಅರ್ಥ ಅಪ್ಪಣ್ಣನಿಗೆ ಹೊಳೆಯಿತು. ಅದೇಕೊ ಅವನಿಗೆ ಅಲ್ಲಿ ನಿಲ್ಲುವದಾಗಲಿಲ್ಲ. ದೂರ ಸರಿದು ಕುಳಿತ. ತಾರಕ್ಕ ಜ್ವರದಲ್ಲಿ ಮೈಮೇಲೆ ಮತ್ತೆ ಎಚ್ಚರವಿಲ್ಲದೆ ಬಡಬಡಿಸಹತ್ತಿದಳು. "ನನ್ನ ಮೈಯಾಗ ನೆಟ್ಟಗ ಇಲ್ಲs; ಬ್ಯಾಡ ಸರೀರಿ ದೂರ, ಹತ್ಯಾಕ ಬರ

ಬ್ಯಾಡಿರೀ !" ಅಪ್ಪಣ್ಣನಿಗೆ ಹುಣ್ಣಿನ ಮೇಲೆ ಬರೆ ಕೊಟ್ಟಂತಾಯಿತು. ಎದ್ದು ಹೊರಗೆ ಬಂದ. ತಾಯಿಯೊಡನೆ ಸ್ವಲ್ಪ ಹೊತ್ತು ಯೋಚಿಸಿದ. ಆ ಮನೆಯ ಅಣ್ಣನನ್ನೂ ಕಕ್ಕಿಯನ್ನೂ ಕರೆಯಿಸಿದ. ಮತ್ತೊಬ್ಬ ಆಳನ್ನು ಕರೆಯಿಸಿ ಗಾಡಿಗೆ ಸವಾರಿ ಕಟ್ಟಿ ಸಿದ್ಧಪಡಿಸಲು ಹೇಳಿದ. ಸಂಜೆಗೆ ತೇರದಾಳದಲ್ಲಿಯ ಸರಕಾರಿ ಡಾಕ್ಟರರ ಕಡೆಗೆ ತಾರಕ್ಕನನ್ನು ಒಯ್ದರು.

ಡಾಕ್ಟರರು ಎಲ್ಲವನ್ನೂ ಪರೀಕ್ಷಿಸತೊಡಗಿದರು. ಏನೇನಾಗಿದೆಯೆಂಬು ದನ್ನು ಸಂಗಡ ಬಂದವರಿಂದ ಕೇಳಿಕೊಂಡರು. ಈಗ ಕೆಲ ದಿನಗಳ ಹಿಂದೆ ತಾರಕ್ಕನ ಗರ್ಭಪಾತವಾದಾಗಿನಿಂದಲೂ ನಡೆದ ಸಂಗತಿಯನ್ನೆಲ್ಲ ವಿವರಿಸಿದರು. ತಾರಕ್ಕ ಕಣ್ಣು ತೆರೆದೊಮ್ಮೆ ಡಾಕ್ಟರರ ಕಡೆಗೆ ನೋಡಿದಳು. ಕಣ್ಣು ಮುಚ್ಚಿ ದಳು. ಡಾಕ್ಟರರು ನರ್ಸಳೊಬ್ಬಳನ್ನು ಕರೆದು ತಾರಕ್ಕನನ್ನು ಒಪ್ಪಿಸಿ ಏನೋ ಹೇಳಿದರು. ತಾರಕ್ಕನನ್ನು ಪರೀಕ್ಷಿಸುವುದಕ್ಕೆ ಒಳ ಕೋಣೆಯಲ್ಲಿ ಒಯ್ಯಲಾ ಯಿತು. ಒಳಗೆ ನರ್ಸಳು ಪರೀಕ್ಷಿಸುವಾಗ ಒಮ್ಮೆಲೇ ಕೆಟ್ಟ ಸ್ವರದಿಂದ ತಾರಕ್ಕ ಕಿರುಚಿದಳು. ಅವಳ ಕಣ್ಣಿಂದ ಆಗ ದಳದಳ ನೀರು ಸುರಿಯುತ್ತಿದ್ದುವು. ನರ್ಸಳು ಹೊರಗೆ ಬಂದು ಡಾಕ್ಟರಿಗೆ ಹೇಳಿದಳು :

"ಗರ್ಭಪಾತವಲ್ಲ ; ಪ್ರಮೇಹ ದೋಷವಿರಬೇಕು. ಕೇಸು ಕೈಯೊಳಗೆ ಬರುವುದು ಕಷ್ಟ !" ಎಂದು.

ಡಾಕ್ಟರರು ಮುಂಜಾನೆ ಅಪ್ಪಣ್ಣನನ್ನು ಕರೆದು, ನಾಲ್ಕು ದಿನದ ಔಷಧ ಕೊಟ್ಟು "ಇಲ್ಲಿ ನಿಲ್ಲುವದವಶ್ಯಕತೆಯಿಲ್ಲ. ಊರಿಗೆ ಒಯ್ಯಿರಿ !" ಎಂದು ಹೇಳಿದರು.

ಅಪ್ಪಣ್ಣ ಹೊರಗೆ ಹೋದ. ತಾರಕ್ಕನ ಜೊತೆಯಲ್ಲಿ ಬಂದ ಇನ್ನೊ ಬ್ಬಾತನನ್ನು ಕರೆದು ಡಾಕ್ಟರರು "ಇನ್ನೇನ ಬಹಳ ದಿನಾ ತಾಳೂ ಲಕ್ಷಣ ಇಲ್ಲ. ಅವಳ ತಂದೆ ತಾಯಿಗಳಿದ್ದರ ಕರೆಯಿಸಿರಿ" ಎಂದೂ ಹೇಳಿದರು.

ತಾರಕ್ಕನನ್ನು ತಿರುಗಿ ಗಾಡಿಯಲ್ಲಿ ಹಾಕಿದರು. ಆಗ ತಾರಕ್ಕ ಸುದ್ದಿಯ ಮೇಲಿದ್ದಳು. "ಅವ್ವಾ ನೋಯತೇತೆ" ಎಂದು ನರಳಿದಳು. ಸುತ್ತಲೂ ನೋಡಿದಳು. ಆಮೇಲೆ ಗಂಡನನ್ನು ಸಮೀಪಕ್ಕೆ ಕರೆದು "ಮತ್ಯಾಕ ಗಾಡ್ಯಾಗ ಹಾಕಿದಿರಿ ?" ಎಂದು ಕೇಳಿದಳು.

"ಊರಿಗಿ ಹೋಗೋದ ಬ್ಯಾಡ್ಯಾನ ?"

ನಿಟ್ಟುಸಿರೊಂದನ್ನು ಬಿಟ್ಟು "ಊರಿಗಿ ?" ಮತ್ತೊಂದು ಉಸಿರು ತೋಡಿ "ಮತ್ತ ಊರಿಗಿ ?" ಸ್ವಲ್ಪಕಾಲ ಸುಮ್ಮನಿದ್ದು ಅವ್ವನ ಊರಿಗಿ ಒಯ್ಯಿರಿ ನನ್ನಾ !" ಎಂದು ಅಂಗಲಾಚಿದಳು ತಾರಾ.

"ಅವರಿಗಿ ಹೇಳಿಕಳಿಸಿದೇವು, ಅವರ್‍ಯ ಬರತಾರಲ್ಲ ಅಲ್ಲೇ."

"ಬರತಾರು ?" ಎಂದು ಕಣ್ಣು ಮುಚ್ಚಿದಳು. ಸ್ವಲ್ಪ ಹೊತ್ತು ಸುಮ್ಮನಾದಳು. ಮತ್ತೆ ಗಂಡನ ಕಡೆಗೆ ಕರುಣಾದೃಷ್ಟಿಯಿಂದ ನೋಡಿ "ಆದರ ನನ್ನಾ ಅಲ್ಲೇ ಒಯ್ಯಿರಿ ತೋಟದಾಗ ಬ್ಯಾಡ. ನಿಮಗ ಕೈಜೋಡಸತ್ತ್ಯಾನು, ಈ ಮಾತೊಂದ ಕೇಳರಿ ನಂದಾ !" ಕಣ್ಣೀರು ತಂದು ಹೇಳಿದಳು.

ಅಪ್ಪಣ್ಣನ ಕಣ್ಣುಗಳಲ್ಲಿಯೂ ನೀರುಗಳು ಬಂದವು. "ಆಕಿ ಮನಸಿನ ಪ್ರಕಾರ ಆಗಲಿ ; ಲೈನಿನಗುಂಟ ಬಂಡಿ ಚಂದೂರಿಗಿ ಹೊಡೀರಿ " ಎಂದು ಅಪ್ಪಣ್ಣ ಆಜ್ಞಾಪಿಸಿದ. ಒಬ್ಬನನ್ನು ಮಾತ್ರ ತನ್ನ ತೋಟಕ್ಕೆ ಹೇಳಲು ಕಳಿಸಿದ. ಬಂಡಿ ಚಂದೂರಿನ ಹಾದಿಗೆ ಹತ್ತಿತು. ಬಿಸಿಲು ಬಲಿಯತೊಡಗಿತು. ಧೂಳು ಎಬ್ಬಿಸುತ್ತ ಸಾಗಿದ ಬಂಡಿಯು ಬಾಲಚಿಕ್ಕೆಯಂತೆ ದೂರಿಂದ ಕಾಣುತ್ತಿದ್ದಿತು. ಆಗೆಲ್ಲ ತಾರಕ್ಕ ಸುದ್ದಿಯ ಮೇಲಿರಲಿಲ್ಲ.

ಎರಡು ತಾಸು ರಾತ್ರಿಯಾದಾಗ ಬಂಡಿಯು ಮಗದುಮರ ಅಂಗಳದಲ್ಲಿ ಬಂದು ನಿಂತಿತು. ಮನೆಯಲ್ಲಿ ಮಲ್ಲಪ್ಪ ರತ್ನವ್ವರಿಬ್ಬರೂ ಇರಲಿಲ್ಲ ಅದೇ ದಿನ ಮುಂಜಾನೆ ಹಾರೋಗೇರಿಗೆ ಹೋಗಿದ್ದರು. ತಾರಕ್ಕನನ್ನು ಬೀಗ ಮುರಿದು ಪಡಸಾಲೆಯಲ್ಲಿ ಒಯ್ದರು. ಈಗ ತಾರಕ್ಕ ಸ್ವಲ್ಪ ಸ್ಮೃತಿಯ ಮೇಲಿದ್ದಳು. ತನ್ನೂರಿಗೆ ಬಂದುದಕ್ಕೆ ಮನದಲ್ಲಿಯೇ ಸಂತಸಗೊಂಡಳು. ಮುಖದ ಮೇಲೆಯೂ ಕೊಂಚ ಶಾಂತಿಯ ಪರೆಯು ಪಸರಿಸಿತು. ಮನದಲ್ಲಿಯೇ ಅಂದುಕೊಂಡಳು. "ನನಗೆ ಎಲ್ಲಾರು ಇರುವರು. ಅವ್ವ, ಅತ್ತಿ, ಅಪ್ಪ, ಗಂಡ, ಆದರೆ ಅವರಾರೂ ನನ್ನವರಲ್ಲ " ಈ ಭಾವನೆಯ ಮುಡಿಯಲ್ಲಿಯೇ ಅವಳ ಹೃತ್ಪಟಲದ ಮೇಲೆ ಅನಂತನ ಮೂರ್ತಿ ಮೂಡುವದು. ಆ ಮೂರ್ತಿಯನ್ನು ಅಲ್ಲಿಂದ ಕಿತ್ತಲು ಯತ್ನಿಸುತ್ತಿರುವ ಭರಮ....ಅಪ್ಪಣ್ಣರ ಆಕೃತಿಗಳೂ ಅವಳ ಬಗೆಗಣ್ಣೆದುರಿಗೆ ಬಂದು ನಿಲ್ಲುವವು. ಕೊನೆಗೊಮ್ಮೆ ಅನಂತನನ್ನು ಕಂಡು ಪ್ರಾಣಬಿಡಬೇಕೆಂಬುದು ಅವಳ ಹಂಬಲಿಕೆ. ಅನಂತ ತನ್ನ ತೋಟಕ್ಕೆ ಬರ

ಲಾರನು, ಒಂದು ವೇಳೆ ಚಂದೂರಿಗೆ ಬಂದಾನು ಎಂದು ಯೋಚಿಸಿ ಇಲ್ಲಿಗೆ ಬಂದಿದ್ದಳು. ಆದರ ಇಲ್ಲಿ ಬರುವವರೆಗೆ ತಾಯಿತಂದೆಗಳೇ ಊರಲ್ಲಿ ಇರಲಿಲ್ಲ. ಅವರನ್ನು ಕರೆದು ತರಲು ಮತ್ತೊಬ್ಬ ಮನುಷ್ಯನನ್ನು ಕಳಿಸಿದರು. ಮಲ್ಲ ರತ್ನವ್ವರಿಬ್ಬರೂ ಹಾರೋಗೇರಿಯ ತೋಟಕ್ಕೆ ಹೋಗಿ ಅಲ್ಲಿಂದ ತೇರದಾಳಕ್ಕೆ ತೆರಳಿ, ಮರುದಿನ ಮಧ್ಯಾಹ್ನ ಮರಳಿ ಮೋರೆ ಒಣಗಿಸಿಕೊಂಡು ಚಂದೂರಿಗೆ ಬಂದರು. ಮಗಳ ಈ ಸ್ಥಿತಿಯನ್ನು ಕಂಡು ಹೌಹಾರಿದರು.

ತಾರಕ್ಕನಿಗೆ ಬೇನೆ ಹೆಚ್ಚಾಗುತ್ತ ನಡೆಯಿತು. ಈಗೆರಡು ದಿನಗಳಿಂದ ಕೆಮ್ಮೂ ಹತ್ತಿತ್ತು. ಕೆಮ್ಮಿನೊಡನೆ ಬೀಳುವ ಕಫದಲ್ಲಿ ರಕ್ತ ಬೀಳಹತ್ತಿತು. ತಾರಕ್ಕ ನನ್ನು ಕೋಣೆಯಲ್ಲಿ ಹಾಸಿಗೆ ಮಾಡಿ ಮಲಗಿಸಿದ್ದರು. ಹತ್ತರ ಅವಳ ಗಂಡ, ತಂದೆ, ತಾಯಿ ಮೊದಲಾದವರೆಲ್ಲರೂ ಇದ್ದರು. ತಾರಕ್ಕ "ಅವ್ವಾ, ಅನಂತನಾ ಕರಸು ; ನೋಡುಹಾಂಗ ಆಗೀತಿ" ಎಂದು ದೀನವಾಣಿಯಿಂದ ಹೇಳಿದಳು.

"ಹೂಂನವ್ವ !" ಎಂದು ರತ್ನವ್ವ ಅಳಿಯನ ಮುಖದ ಕಡೆಗೆ ನೋಡಿ ದಳು.

"ಯಾರರ ಐನಾಪುರಕ್ಕೆ ಹೋಗಾವರ ಇದ್ದರ ಹೇಳಿಕಳಸಲ್ಲ !" ಎಂದ ಅಪ್ಪಣ್ಣ.

ಅದೇ ದಿನ ಐನಾಪುರಕ್ಕೆ ಒಬ್ಬನಿಂದ ಹೇಳಿ ಕಳಿಸಲಾಯಿತು. ಒಂದು ದಿನ ಕಳೆಯಿತು. ತಾರಕ್ಕನ ಮೈಮೇಲೆ ಅಲ್ಲೊಂದಿಲ್ಲೊಂದು ಬೊಕ್ಕೆಗಳೆದ್ದುವು. ರತ್ನವ್ವ ಮೈಲಿಗಳೆದ್ದುವೇನೋ ಎಂದು ಭಾವಿಸಿ, ಬಲ್ಲವರನ್ನು ಕರೆದು ತಂದು ತೋರಿಸಿದಳು. ಅವರು ಅವು ಮೈಲಿಯ ಗುರುಳೆಗಳಲ್ಲವೆಂದು ಅಭಿಪ್ರಾಯ ಪಟ್ಟರು. ತಾರಕ್ಕ ಸುಮ್ಮನೆ ಹಾಸಿಗೆಯಲ್ಲಿ ಬಿದ್ದು ಇದ್ದಳು. ಅಪ್ಪಣ್ಣ "ತೋಟ ಬಿಟ್ಟು ಐದಾರು ದಿನ ಆದು ; ಹೋಗಿ ಬರತ್ಯಾನು" ಎಂದು ಹೇಳಿ ಹೋದ.

ಹೇಗೋ ಎರಡು ದಿನ ಕಳೆದವು. ಅಪ್ಪಣ್ಣ ತಿರುಗಿ ಬಂದ. ಒಂದ ದಿನ ರಾತ್ರಿ ತಾರಕ್ಕ ಅವ್ವನನ್ನು ಹತ್ತರ ಕರೆದು "ನಿನಗ ಮುಪ್ಪಿನ ಕಾಲಕ ಆಧಾರ ಯಾರ ? ನಾ ಅನಕ ಹೊರಟೆನು" ಎಂದು ಹೇಳಿದಳು.

ಕಣ್ಣೀರು ಒರಿಸಿಕೊಂಡು ರತ್ನವ್ವ "ಹಾಂಗ್ಯಾಕ ಅನತಿ ಬಾಳಾ, ನಿನ ಗ್ಯಾನ ಆಗತೇತಿ ?" ಎಂದಳು. ಧ್ವನಿಯಲ್ಲಿ ಅಳುವು ತುಂಬಿತ್ತು.

"ಇಲ್ಲ; ನನಗ ಒಳೇದ ಅನಸೂದುಲ್ಲ. ಎತ್ತರ ಎತ್ತರ ಆಗತೇತಿ; ಹೊಟ್ಟ್ಯಾಗ ಉರೀತೇತಿ."

"ಕಾವ ಆಗೀತಿ ಯಾನೋ, ಬಾಳಾ!"

"ನೀರ ಒಂದಿಷ್ಟ ಕೊಡತಿ, ಅವ್ವಾ?" ನಡುವೆಯೇ ಕೇಳಿದಳು ತಾರಾ. ರತ್ನವ್ವ ನೀರು ತಂದು ಕೊಡುತ್ತ "ಭಾಳ ಕುಡಿಬ್ಯಾಡ ಅಂ!" ಎಂದಳು ಅಳುತ್ತ.

"ಇನ್ನ ಯಾನ ಆಗತೇತಿ? ತಾ!" ಎಂದು ತಾರಕ್ಕ ಚೆನ್ನಾಗಿಯೇ ನೀರು ಕುಡಿದಳು. ಆಮೇಲೆ "ಅವರ ಬಂದರು?" ಎಂದಳು. ರತ್ನವ್ವ ಸುಮ್ಮನೆ ಇರಲು "ಅನಂತ ಬರಲಿಲ್ಲಾ?" ಎಂದು ಕೇಳಿದಳು.

"ಇಲ್ಲ; ಹೇಳಿಕಳಿಸಿದ್ಯಾನು, ಯಾಕ ಬರಲಿಲ್ಲೋ?"

"ಬರಲಿಲ್ಲಾ!" ಎಂದು ಕಣ್ಣುಮುಚ್ಚಿದಳು ತಾರಾ. ಅವಳ ಕಣ್ಣೆವೆಗಳಿಂದ ನೀರು ಹೊರಚಿಮ್ಮಿದುವು. ಮೂಗಿನ ಹೊರಳೆಗಳಿಂದ ಬಿಸಿಯುಸಿರು ಹೊರಬಿದ್ದಿತು. ಅಪ್ಪಣ್ಣ ನಿದ್ದೆಯಿಂದ ಎಚ್ಚೆತ್ತು, ಅವಳ ಹಾಸಿಗೆಯ ಹತ್ತರ ಬಂದ.

ತಾರಕ್ಕ ಶೂನ್ಯದೃಷ್ಟಿಯಿಂದ ಸುತ್ತಲೂ ನೋಡಿದಳು. ಆಮೇಲೆ ಮೆಲ್ಲಗೆ "ಅನಂತನ ಕರೀಕ ಆಳ ಕಳಸತಿ?" ಎಂದಳು.

"ಕಳಸತ್ಯಾನs" ಎಂದಳು ರತ್ನಾ.

"ಅನಂತ ಊರಾಗ ಇಲ್ಲಂತ ಮನಸ್ಯಾ ಬಂದ ಹೇಳಿದ ಯಾನೋ!" ಎಂದು ಅಪ್ಪಣ್ಣ ಎದ್ದು ಹೊರಗೆ ಹೋದ. ಮಲಗಿದ ತಮ್ಮೂರ ಆಳುಮಗ ಸಿದ್ದನನ್ನು ಎಚ್ಚರಿಸಿ "ಮಿರಜಿ ದಾವಾಖಾನೇದಾಗ ಐನಾಪುರದಾವ ಅನಂತ ಅಂತ ಇದಾನು; ಅವನಾ ಲಗೂನ ಕರಕೊಂಡ ಬಾ, ತಾರಾಗ ಬ್ಯಾನಿ ಹೆಚ್ಚs ಏತಿ ಅಂತ ಹೇಳು. ನಸುಕಿನ ಮೋಟಾರಿಗಿ ಹೋಗು. ಹುಡುಕಾಡಿ ಹೇಳಿ ಕರಕೊಂಡs ಬಾ" ಎಂದು ಹೇಳಿ ಐದು ರೂಪಾಯಿಗಳನ್ನು ಕೊಟ್ಟು ಕಳಿಸಿದ. ಅನಂತರ ಒಳಗೆ ಬಂದು, ಹೆಂಡತಿಗೆ ಹೇಳಿದ. "ಸಿದ್ದನಾ ಕಳಿಸಿದ್ಯಾನು, ಅನಂತನ ಕರಕೊಂಡ ಬರಲಾಕ."

ತಾರಕ್ಕ ಅದಕ್ಕೆ ಏನೂ ಹೇಳಲಿಲ್ಲ. ಕೃತಜ್ಞತೆಯಿಂದ ಗಂಡನನ್ನು ನೋಡಿದಳು ಮಾತ್ರ. ಸ್ವಲ್ಪ ತಡೆದು ರತ್ನವ್ವ ಕಡೆಗೆ ನೋಡಿ "ಅವ್ವಾ!

ನಿಮ್ಮ ಗತಿ ಯಾನ ? ನಡು ಹೊಳ್ಯಾಗ ನಿಮ್ಮನ ನುಗಿಸಿ ಹೊಂಟೆನಲ್ಲ !" ಎಂದು ಬಿಕ್ಕಿ ಬಿಕ್ಕಿ ಅಳಹತ್ತಿದಳು.

"ನೀ ಹೋದ ಮ್ಯಾಲ ನಾವ್ಯಾದಕಾ ಇರೂನು ?" ಎಂದು ರತ್ನವ್ವ ಮಗಳ ಆಳುವನ್ನು ತಡೆಯಲು ತಾನಳುತ್ತ ನುಡಿದಳು.

ತಾಯಿಯ ಮಾತಿನ ಭಾವವನ್ನು ತಾರಕ್ಕ ಅರಿಯುವ ಸ್ಥಿತಿಯಲ್ಲಿರಲಿಲ್ಲ. ಬೆಳಗಾಯಿತು. ಬಿಸಿಲು ಬಲಿಯತೊಡಗಿತು. ನಿಸರ್ಗಚಕ್ರ ತನ್ನ ನಿಯಮದ ಪ್ರಕಾರ ಮುಂದೆ ಸಾಗತೊಡಗಿತು. ತಾರಕ್ಕನ ಹಾಸಿಗೆ ರಕ್ತದಿಂದ ತೊಯ್ದಿತು. ರತ್ನವ್ವ ಚಿಂತೆಗೀಡಾದಳು. "ಮಗಳಿಗೆ ಸಾವು ಈ ಪರೀ ಬರುವದೇ !" ಎಂದು ಬಹಳ ಶೋಕಿಸಿದಳು. "ಸತ್ತರೂ ಒಣ ವ್ಯೆಯಿಂದ ಸಾಯಬೇಕಿತ್ತವ್ವ !" ಎಂದು ಹಂಬಲಿಸಿದಳು. ತಿರುಗಿ ಸಂಜೆಯಾಯಿತು. ಇನ್ನು ಮಗಳು ಬದುಕ ಲಾರಳೆಂದು ರತ್ನವ್ವ ನಿಶ್ಚಯಿಸಿದಳು. ಮಲ್ಲನಿಗೆ ಮೂರು ದಿನ ನಿದ್ದೆಯಿಲ್ಲ. ಪಡಸಾಲೆಯಲ್ಲಿ ಕುಳಿತುಬಿಟ್ಟಿದ್ದ. ಜನರು ಬಂದು ಬಂದು ಅವನನ್ನು ಸಮಾಧಾನಪಡಿಸಲು ಯತ್ನಿಸುತ್ತಿದ್ದರು. ರತ್ನವ್ವ ಮಗಳ ಹಾಸಿಗೆಯನ್ನು ಬಿಟ್ಟು, ಎದ್ದಿರಲಿಲ್ಲ. ಕಲ್ಲೆಣ್ಣೆಯ ದೀಪ ಉರಿದು ಕೋಣೆಯಲ್ಲಿ ಕಾಡಿಗೆ ಯನ್ನು ಕಾರುತ್ತಿದೆ. ಸರಿರಾತ್ರಿಯಾಗಿರಬೇಕು. ತಾರಕ್ಕ ಕ್ಷೀಣ ಸ್ವರದಲ್ಲಿ "ಆವ್ವಾ !" ಎಂದಳು.

"ಯಾಕ ಬಾಳಾ !" ಸಮೀಪಕ್ಕೆ ಸರಿದು ರತ್ನವ್ವ ಕೇಳಿದಳು.

"ನನ್ನ ಹೊರಗ ಓದ ಹಾಕತಿ ?"

"ಅದ್ಯಾಕ ?"

"ಗಾಳಿಗಿ ಒಯ್ಯಲ್ಲ ! ಇಲ್ಲಿ ಒಳಗ ಬ್ಯಾಡ."

ಈಗ ಮಗಳ ಕೊನೆಯ ಕಾಲವೆಂದು, ರತ್ನವ್ವ ಅವಳ ಬೇಕಾದ ಮಾತನ್ನು ನಡೆಯಿಸಿಕೊಡುತ್ತಿದ್ದಳು. ಕೂಡಲೆ ಹೊರಗೆ ಹೋಗಿ, ಹಾಸಿಗೆ ಸಿದ್ಧಪಡಿಸಿ, ಮಲ್ಲನನ್ನು ಕರೆದುಕೊಂಡು ಬಂದು, ಎತ್ತಿ ಒಯ್ದು ಅಲ್ಲಿ ಹಾಕಿ ದರು. ಸ್ವಲ್ಪ ಹೊತ್ತಾದ ಬಳಿಕ "ಚಾ ಕುಡೀತೀ, ಬಾಳಾ ? ಮಾಡಲೀ ?" ಎಂದು ರತ್ನವ್ವ ಕೇಳಿದಳು.

ತಾರಕ್ಕ ಸ್ವಲ್ಪ ತಡೆದು "ಮಾಡತಿ ? ಹಾಂಗಾರ ಮಾಡು" ಎಂದು ಸಾವಕಾಶವಾಗಿ ಹೇಳಿದಳು.

ಸ್ವಲ್ಪ ಹೊತ್ತಿನಲ್ಲಿ ರತ್ನವ್ವ ಚಹ ಸಿದ್ಧಪಡಿಸಿಕೊಂಡು ಬಂದಳು. ಮಗಳಿಗೆ ಕುಡಿಯಲು ಹೇಳಿದಳು. ಚಮುಚೆಯಿಂದ ಬಾಯಲ್ಲಿ ಹಾಕಿದಳು. ತಾರಕ್ಕ ಶಾಂತರೀತಿಯಿಂದ ಆ ಒಂದು ಕಪ್ಪು ಚಹವನ್ನೆಲ್ಲ ಗುಟುಕಿಸಿದಳು. ರತ್ನವ್ವನಿಗೆ ಸ್ವಲ್ಪ ಸಮಾಧಾನವಾಯಿತು. ಅದನ್ನು ಕಂಡು ತಾರಕ್ಕನಿಗೂ ಕೊಂಚ ಸಮಾಧಾನವಾಗಿರಬೇಕು. ಸ್ವಲ್ಪ ತಡೆದು ನಾಲಿಗೆ ಸರಿಪಡಿಸಿಕೊಂಡು "ಸಿದ್ದಣ್ಣ ಊರಿಂದ ಬಂದಾ ?" ಎಂದಳು.

"ಇಲ್ಲಾ ! ಯಾಕ ?"

"ನೋಡುಹಂಗ ಆಗೀತೇ ?" ಎಂದಳು ನಿರಾಶೆಯಿಂದ ತಾರಾ.

ಸ್ವಲ್ಪಕಾಲ ಸಂದಿತು. ತಾರಕ್ಕನ ಹಾಸಿಗೆಯ ಸುತ್ತಲೂ ನಾಲ್ಕೆಂಟು ಜನರು ಕುಳಿತಿದ್ದಾರೆ. ಸಮೀಪದಲ್ಲಿ ಮಂದಮಂದವಾಗಿ ದೀಪ ಉರಿಯುತ್ತಿದೆ. ಸದ್ದಿಲ್ಲ; ಸಪ್ಪಳಿಲ್ಲ. ಎಲ್ಲ ಕಡೆಗೂ ನೀರವವಾಗಿದೆ. ಕೇವಲ ತಾರಕ್ಕನ ಉಸಿರೊಂದು 'ಸೊಡರ್, ಸೊಡರ್, ಸೊಡರ್' ಸೊಲ್ಲುಗೈಯುತ್ತಿದೆ.

"ಇನ್ನs ರಾತ್ರಿ ಎಷ್ಟು ಐತಿ ?" ಕೇಳಿದಳು ತಾರಾ; ಧ್ವನಿ ವಿಕೃತ ವಾಗಿತ್ತು. ಮಾತಿನಲ್ಲಿ ಅವಳ ಅಶಕ್ತತೆ ಒಡಮೂಡುತ್ತಲಿತ್ತು.

"ಈಗ ಮೂಡಲ ಆಗತ ಬಂದೀತಿ" ಎಂದು ಮಲ್ಲ ಹೇಳಿದ.

ಬೆಳಕು ಹರಿಯುವಷ್ಟರಲ್ಲಿ ತಾರಕ್ಕ ಮತ್ತೊಮ್ಮೆ ಕೇಳಿದಳು, ಕ್ಷೀಣ ಸ್ವರದಲ್ಲಿ "ಅನಂತ ಬಂ....ದಾ ?"

"ಇಲ್ಲ !" ಎಂದಳು ರತ್ನಾ.

ತಾರಕ್ಕ ಸ್ವಲ್ಪ ತಡೆದು ''ಅವ್ವಾssss ಕಾಲ ಹರೀತಾವssss ಜರಾ ಕೈ....ಆಡಿಸು—'' ಎಂದಳು.

ಅನಂತರ ತಾರಕ್ಕ ಮಾತನಾಡಲಿಲ್ಲ. ರತ್ನವ್ವ ಮಗಳ ಕಾಲ ಬದಿಗೆ ಸರಿದು ಕೈಯಾಡಿಸಹತ್ತಿದಳು. ಸುತ್ತಲಿನವರು ''ಕಾಲಾಗಿನ ನಾಡಿ ಸಾಯಿಕ ಹತ್ತಿದು ಯಾನೊ !'' ಎಂದರು.

''ಇನ್ನ್ಯಾಕ್ಶಿನ ಇಲ್ಲ, ಎಲ್ಲಾ ಜಗ್ಗಿ ಬಂತು'' ಎಂದಳು ರತ್ನಾ ಅಳುತ್ತ.

ಜನರು ''ಅಳಬ್ಯಾಡ, ಸಮಾಧಾನಲೆ ಆಕಿ ಜೀವ ಹೋಗಲಿ !'' ಎಂದು ಉಪದೇಶಿಸಿದರು.

ಬೆಳಗಾಯಿತು. ಸುತ್ತಲಿನ ಜನ ಹಾಗೆ ಕುಳಿತಿದ್ದರು. ಗಂಡನ ತೊಡೆಯ ಮೇಲೆ ತಾರಕ್ಕನ ತಲೆಯಿದ್ದಿತು. ಬರಬರುತ್ತ ಉಸಿರು ಜೋರಾಗಿ ನಡೆಯ ತೊಡಗಿತು. ಪಟ ಪಟ ಬಾಯಿ ಬಿಡತೊಡಗಿದಳು. ಬಾಯಿಯಲ್ಲಿ ಚಮಚಿ ಯಿಂದ ಎಲ್ಲರೂ ನೀರು ಹಾಕತೊಡಗಿದರು. ಕಿವಿಯಲ್ಲಿ ಯಾರೋ 'ನವೋ ಕಾರ ಮಂತ್ರ' ಹೇಳಿದರು. ಎದೆಯಷ್ಟೇ ಹಾರುತ್ತಿತ್ತು. ಒಮ್ಮೆಲೇ ತಾರಕ್ಕ ಕಣ್ಣೆರೆದು ಸುತ್ತಲೂ ನಿರೀಕ್ಷಿಸತೊಡಗಿದಳು. ಕೊನೆಗೆ ನಿರಾಶೆಯ ನಿಟ್ಟುಸು ರೊಂದನ್ನು ಬಿಟ್ಟಳು. ಕಣ್ಣು ಮುಚ್ಚಿದಳು. ಎವೆಗಳಿಂದ ಚಿಮ್ಮಿ ಎರಡು ಹನಿಗಳು ಮಾತ್ರ ಹೊರಬಿದ್ದುವು. ಹೃದಯ ಹಾರುವುದೂ ನಿಂತಿತು. ಶಾಂತ ವಾಯಿತು. ಕೊನೆಯ ಉಸಿರೊಂದು ಮೂಗಿನಿಂದ ಹೋಯಿತು. ಅದರೊಡನೆ ತಾರೆಯ ಆತ್ಮವಿಹಂಗನು ಅನಂತಾಕಾಶದಲ್ಲಿ ಹಾರಿ ಹೋಯಿತು.

ಈ ಸುದ್ದಿಯನ್ನು ಕೇಳಿ ಚಂದೂರಿನ ಜನವೆಲ್ಲ ಮರುಗಿತು. ನೋಡು ನೋಡುವಷ್ಟರಲ್ಲಿ ಜನ ಕೂಡಿ ತಾರಕ್ಕನ ದೇಹವನ್ನು ಅಂತ್ಯಕ್ರಿಯೆಗಾಗಿ ನದೀ ತೀರಕ್ಕೆ ಒಯ್ದರು.

x x x x

ಅನಂತನನ್ನು ಚಿಕ್ಕ ಕಾರಿನಲ್ಲಿ ಕೂಡಿಸುತ್ತ ಭಂಗಾರಿ ಕೇಳಿದಳು :

"ಮೈಯೊಳಗ ಅಶಕ್ತತೆ ಬಹಳವಿದೆ. ಸಂಗಡ ನಾನೂ ಬರಲಾ ?"

"ಛಿ ! ನಿನ್ನಾ ತಗೊಂಡ ಹೋಗಲಿ, ತಾರಾನ ಮುಂದ ?" ಎಂದ ಅನಂತ ತುಚ್ಛತೆಯಿಂದ.

ಭಂಗಾರಿ ಮುಂದೇನೂ ಮಾತನಾಡಲಿಲ್ಲ. ಮುಖದಿರುವಿ ಅನಂತನಿಗೆ ಕಾಣದಂತೆ ಸೀರೆಯ ಸೆರಗಿನಿಂದ ಕಣ್ಣೀರು ಒರಸಿಕೊಂಡು ದೂರ ಸರಿದಳು. ಕಾರು ಮುಂದೆ ಸಾಗಿತು.

"ಒಂದs ಸವನ ಮೂರು ದಿನಾ ಆಯ್ತು, ನಿಮ್ಮ ಹೆಸರs ತಗೋಕ ಹತ್ತೀ ದಾಳು" ಸಿದ್ದ ಹೇಳಿದ, ಅನಂತನ ಕಡೆಗೆ ಹೊರಳಿ.

"ನೀ ಬಂದಾಗ ಹ್ಯಾಂಗ ಇತ್ತು, ಆಕೀಗ ?"

"ನೆಟ್ಟಗಿತ್ತು" ಸ್ವಲ್ಪ ತಡೆದು, "ಯಾನ ಚಿನ್ಹ ಬರೋಬರಿ ಕಾಣಿಸು ದುಲ್ಲಂತ ಮಾತಾಡುತ್ತಿದ್ದರು" ಎಂದ ಸಿದ್ದ.

"ಎಂದ ತಂದರು, ಚಂದೂರಿಗೆ ?"

"ಐದಾರು ದಿನಾ, ಆಯ್ತಲ್ಲ !"

"ಈ ಮೊದಲ ನನಗ್ಯಾಕ ಹೇಳಿ ಕಳಿಸಿಲ್ಲ ?"

"ಐನಾಪುರಕ ಹೇಳಿ ಹಚಕೊಟ್ಟೇರು, ಮೂರು ದಿನದ ಹಿಂದs. ನಿನ್ನೆ ಮತ್ತ ನನ್ನಾ ಹಚಕೊಟ್ಟರು. ಸಂಜೀತನಕಾ ನೀವs ಸಿಗಲಿಲ್ಲ ನನಗ"

"ನಿಮ್ಮಿದ ಮ್ಯಾಲ ರಾತ್ರಿ ಒಂದ ಕಳೆದೇವಲ್ಲ ಇಲ್ಲೇ" ಖೇದದಿಂದ ನುಡಿದ.

"ಡಾಕ್ಟರ ಬಿಡವಾರು ಯಾನ ಮಾಡೋದಾ ?"

ಕಾರು ವೇಗದಿಂದ ಸಾಗಿದ್ದಿತು. ಆದರೆ ಅನಂತನಿಗೆ ಅದು ಮೆಲ್ಲಗೆ ನಡೆದಂತೆ ಭಾಸವಾಗುವದು. ಚಂದೂರು ಎರಡು ತಾಸಿನ ದಾರಿಯಾದರೂ ಅದು ಎರಡು ದಿನದ ದಾರಿಯಂತೆ ಅನ್ನಿಸಿತಾಗ. ಎರಡು ಮೂರು ಸಲ ಡ್ರ್ಯಾಯ್ವರನಿಗೆ ಕಾರು ಜೋರಿನಿಂದ ಬಿಡಲು ಸೂಚಿಸಿದ ಅನಂತ. ದಾರಿಯಲ್ಲಿ ಹತ್ತುವ ಊರುಗಳ ಪರಿವೆಯೂ ಅವನಿಗಿರಲಿಲ್ಲ. "ಇಲ್ಲಿಯೇ ತಿರುವು" ಎಂದು ಒಂದೆರಡು ಸಲ ಚಂದೂರು ಬಾರದಿದ್ದರೂ ಅನಂತ ಹೇಳಿದ. ಹುಚ್ಚನಂತೆ ಅತ್ತಿತ್ತ ಹೊರಗೆ ನೋಡುವ. ಎದ್ದು ನಿಲ್ಲುವ. ಅಶಕ್ತತೆಯಿಂದ ಮತ್ತೆ ಕುಕ್ಕರಿಸಿ ಬೀಳುವ. ಆಗ "ಸಿದ್ದಾ, ಇನ್ನೂ ಎಷ್ಟು ದೂರ ?" ಎಂದು ನಿಟ್ಟುಸಿರಿನೊಡನೆ ಅವನ ಬಾಯಿಂದ ಮಾತು ಹೊರಡುವದು.

"ಇನ್ಯಾನ ಬಂತೇ ಅಲ್ಲ ಊರ !" ಎಂದು ಸಮಾಧಾನ ಹೇಳುವ ಸಿದ್ದ. "ನಾ ಹೋಗುತನಕಾ ಇದ್ದಾಳು ?" ಅನಂತ ಬಿಗಿದು ಬಂದ ಕಂಠದಿಂದ ಬಾಯಿ ಬೆಳ್ಳಗೆ ಮಾಡಿ ಕೇಳುವ, ಕೂಸಿನಂತೆ.

ಅವನ ಸ್ಥಿತಿಯನ್ನು ಕಂಡು ಸಿದ್ದ ಅನ್ನುವ, ಆಕಿಗಿ ಯಾನ ಆಗತೇತರಿ !" ಎಂದು ಧೈರ್ಯ ಕೊಡುತ್ತ.

"ಹಾಂಗಾದರ ಛಲೂ ಆಯ್ತುಪ್ಪ ! ದೇವರ ನೋಡಕೊಂಡ !" ಮೇಲೆ ಮುಖಮಾಡಿ ಕೈಮುಗಿಯುವ ಅನಂತ, ಅಸಹಾಯನಾಗಿ.

ಸುಮಾರು ಮೂರು ತಾಸು ಹೊತ್ತೇರಲು ಕಾರು ಚಂದೂರನ್ನು ಸಮೀಪಿಸಿತು. ಇನ್ನೂ ಊರು ಎರಡು ಫರ್ಲಾಂಗಿನಷ್ಟಿರುವಾಗ ಎದುರಿಗೆ ಒಬ್ಬ ಮನುಷ್ಯ ಬಂದ. ಕಾರಿನವ ಹಾರ್ನ ಹೊಡೆದ ಸಪ್ಪಳಕ್ಕೆ ಅನಂತ

ಅವನನ್ನು ನೋಡಿದ. ಕೂಡಲೆ ಕಾರು ನಿಲ್ಲಿಸ ಹೇಳಿದ. ಕಾರು ನಿಂತೊಡನೆಯೇ ಹೊರಗೆ ಗೋಣುಹಾಕಿ ಅನಂತ "ತಾರಾಗ ಹ್ಯಾಂಗ ಏತಿ ?" ಎಂದು ಕೇಳಿದ ಆ ಹಾದಿಕಾರನಿಗೇ.

"ಯಾವ ತಾರಾ ?" ಬೆರಗಿನಿಂದ ಕೇಳಿದ ಆತ.

"ಮುಗದುಮುರ ರತ್ನಾನ ಮಗಳಾ, ತಾರಾ !"

ಅನಂತನ ಅನಸ್ಥೆಯನ್ನು ಕಂಡು ಆತ ಒಂದೆರಡು ಕ್ಷಣ ಸುಮ್ಮನೆ ನಿಂತ. ಆಮೇಲೆ "ಆಕಿ ಇಂದ ನಸಿಕಿನಾಗ ತೀರಿಕೊಂಡಳಲ್ಲರೀ, ಭಂಗಾರದಂಥಾ ಪೋರೀ!" ಎಂದ ಮುರುಕದಿಂದ.

ಅನಂತ ಹಿಂದುರುಳಿದ. ಅವನ ಬಾಯಿಂದ ನಿಟ್ಟುಸುರೊಂದು ಹೋಯಿತು. ಅವನ ಆತ್ಮವನ್ನೇ ಯಾರೋ ಎಳೆದು ಒಯ್ದಂತೆ ಅನಿಸಿತವನಿಗೆ. ನಿಃಸತ್ವನಾಗಿ ಹೊರಳಿದ. ಕಣ್ಣು ಗುಡ್ಡೆಗಳು ಬೆಳ್ಳಗಾದುವು. ಸಿದ್ದ ಗಾಬರಿ ಯಿಂದ ಅನಂತನನ್ನು ಹಿಡಿದ, ಎದುರಿನವನಿಗೆ ಕೇಳಿದ, ಕಣ್ಣೀರು ಒರಸಿ ಕೊಳ್ಳುತ್ತ "ಎಷ್ಟೊತ್ತ ಆಯ್ತು ?" ಎಂದು.

"ಭಾಳೊತ್ತ್ಯಾನ ಆಗಿಲ್ಲ; ಈಗ ಒಂದ ಅರ್ಧಾ ತಾಸ ಆಯ್ತು; ಹೊಳೀ ಮ್ಯಾಲ ಒಂದ" ಎಂದ.

ಅನಂತ ಎದ್ದ. ಅತನ ಮೈಯಲ್ಲೊಂದು ಶಕ್ತಿಸಂಚಾರವಾಗಿತ್ತಾಗ. ಸಿದ್ದನನ್ನು ಬದಿಗೆ ಸರಿಸಿ, ಕಾರಿನೊಳಗಿಂದ ಕೆಳಗೆ ಹಾರಿದ. ಕರಿಯಡವಿ ಯೊಳಗಿಂದ ಓಡಹತ್ತಿದ, ಹೊಳೆಯ ಕಡೆಗೆ. ಸಿದ್ದ ಬೆನ್ನಟ್ಟಿದ. "ಅಣ್ಣಾ, ಮೈಯಾಗ ನೆಟ್ಟಗಿಲ್ಲ, ಮೋಟಾರದಾಗ ಬರ್ರಿ ! ಅಲ್ಲೇ ಒಯ್ಯೂನು !" ಎಂದೂ ಹೇಳಿದ. ಅವನು ಹೋಗುವ ಸ್ಥಳ, ಭಾವವನ್ನರಿತು.

ಅನಂತ ಹಿಂದಿರುಗಿ ನೋಡದೆ ಮುನ್ನಡೆದ; ಬೀಳುತ್ತ ಏಳುತ್ತ ಏದುತ್ತ ನಡೆದ. ಸಿದ್ದ ಬೆನ್ನುಹತ್ತಿದ. ಕೈಹಿಡಿದ. ಅನಂತನ ಮೂಗಿನಲ್ಲಿ ರಕ್ತ ಬಂದಿತು. ಸೋರಹತ್ತಿತು. ಅತ್ತ ಅವನ ಲಕ್ಷ್ಯವಿಲ್ಲ. ಹಾಗೇ ಧಾವಿಸು ತ್ತಿದ್ದಾನೆ. ಸ್ವಲ್ಪ ಹೊತ್ತಿನಲ್ಲಿ ಸ್ಮಶಾನವನ್ನು ಸಮೀಪಿಸಿದನಾತ.

ಈಗಾಗಲೇ ತಾರೆಯು ಧಗಧಗಿಸುವ ಅಗ್ನಿಯಲ್ಲಿ ಸುಡುತ್ತಿದ್ದಳು! ದೂರಿಂದ ಅನಂತ—ಅದನ್ನು ಕಂಡ. ಅವನಿಗೆ ಅವಳ ಹಿಂದಿನ ಬಾಳಿನ ನೆನಪಾ ಯಿತು. ತಾರೆ ಈಗ ಸುಡುತ್ತಿಲ್ಲ. ಅವಳ ಅಖಂಡ ಬಾಳೆ ಈ ರೀತಿ—

ಚಿತೆಯ ಮೇಲೆ ಸುಡುತ್ತಿದ್ದುದರ ಚಿತ್ರ ಕಣ್ಣಿಗೆ ಕಟ್ಟಿದಂತಾಯಿತು. ಕಣ್ಣಿಗೆ ಕತ್ತಲೆಗವಿದು ನೆಲಕ್ಕುರುಳಿದ ಅನಂತ.

ಸಿದ್ದ ರಟ್ಟೆಯಲ್ಲಿ ಕೈಯಿಕ್ಕಿ ಎಬ್ಬಿಸಿದ. ಕೂಡಿಸಿದ. ಅನಂತ ಸ್ವಲ್ಪ ಹೊತ್ತು ಸುಮ್ಮನೆ ಕುಳಿತ. ಏನೋ ಧೇನಿಸುವಂತಿತ್ತು, ಅವನ ಮುಖ. ಅವನ ಮನೋನಯನದ ಎದುರಿಗೆ ಚಿಕ್ಕಂದಿನಲ್ಲಿ ತಾರೆಯೂ ತಾನು ಕೂಡಿ ಆಡಿದ ಸುಖಸನ್ನಿವೇಶಗಳೆಲ್ಲ ಸುಳಿದುವು. ಹಾಗೆಯೇ ಆ ಜಾತ್ರೆಯ ರಸಕೂಟ, ಆ ಮುಂಜಾನೆಯ ವಿಷಮಯ ಬೆಳಗು, ಹೊರಡಲು ಸಿದ್ಧಳಾಗಿ ಬಂದು ನಿಂತ ಆ ಗಂಭೀರ ಸಂದರ್ಭಗಳೆಲ್ಲ ಒಂದೊಂದೇ ಅವನ ಕಣ್ಣೆದುರಿಗೆ ಕಟ್ಟಿದಂತಾದುವು. ಎದೆಯಲ್ಲಿ ನಟ್ಟಂತಾದುವು. ಒಮ್ಮೆಲೇ ಹೆಣದ ಚಿಹ್ನದಾಮುಖದಲ್ಲಿ ಆವೇಶ ಮೂಡಿತು. ಅನಂತ ಒಮ್ಮೆಲೇ ಎದ್ದ. ಕೆಟ್ಟ ಸ್ವರದಿಂದ ಕೂಗಿದ. ಸಿದ್ದನ ಕೈಯೊಳಗಿಂದ ಕೈ ಕೊಸರಿಕೊಂಡು ಧಾವಿಸಿದ, ತಾರೆಯ ಚಿತೆಯ ಕಡೆಗೆ.

"ಹಿಡಿಯಿರಿ! ಹಿಡಿಯಿರವನ!" ಎಂದು ಒದರುತ್ತ ಸಿದ್ದ ಬೆನ್ನಟ್ಟಿದ.

ಜನ ಹೊರಳಿ ನೋಡಿತು. "ಯಾನಾಯ್ತು? ಯಾನಾಯ್ತು?" ಎಂದು ಅಳುತ್ತ ಮಲ್ಲ ಎದ್ದು ನಿಂತ. ಅಷ್ಟರಲ್ಲಿ ಅನಂತ ಅತ್ತ ಲಕ್ಷ್ಯವಿಲ್ಲದೆ ಚಿತೆಯಲ್ಲಿ ಹೊಕ್ಕ. "ಹಂಗ್ಯಾಕ? ಹಂಗ್ಯಾಕ?" ಎಂದು ನಾಲ್ಕಾರು ಜನರು ಅವನನ್ನು ಹಿಂದೆಳೆದರು.

ಅನಂತ ನಿಶ್ಚೇಷ್ಟಿತನಾಗಿ ನೆಲಕ್ಕುರುಳಿದ. ತಿರುಗಿ ಏಳಲಿಲ್ಲ.

—o—

# ನಾಡ ನುಡಿಗಳು

ದೇಸಿಯು ಭಾಷೆಯ ಜೀವಾಳ. ಅದರ ಲಕ್ಷಣ ಹೇಳುವುದು ಕಷ್ಟ. ಅದನ್ನು ಅನ್ಯಭಾಷೆಗೆ ಭಾಷಾಂತರಿಸಲು ಸಾಧ್ಯವಿಲ್ಲ. ಈ ದೇಸಿಗಳಲ್ಲಿ ನುಡಿ ನುಡಿಗೂ ಹೊಸತನ ತುಂಬಿಕೊಂಡಿರುವದು. ಒಂದೊಂದು ನುಡಿಯಲ್ಲಿಯೂ ವಿಶಾಲವಾದ ಅರ್ಥ, ಸ್ಪಷ್ಟವಾದ ಚಿತ್ರ, ನಿಯತವಾದ ತತ್ವ ತುಂಬಿಕೊಂಡಿರುತ್ತದೆ. ಅದು ಮಾತಿನ ಸಾಮರ್ಥ್ಯವನ್ನು ಹೆಚ್ಚಿಸುವದು; ಸವಿಯನ್ನು ಸೂರೆ ಮಾಡುವದು. ಇಂಥ ದೇಸಿನುಡಿಗಳು ಆ ಭಾಷೆಯನ್ನಾಡುವವರಲ್ಲಿ ಎಂದೋ ಬೆಳೆದು ಬಂದಿವೆಯಾದುದರಿಂದ ಅವುಗಳಿಗೆ ನಾಡ-ನುಡಿಗಳೆಂದೂ ಹೆಸರು. ಈ ಕಾದಂಬರಿಯಲ್ಲಿ ಬರುವ ಇಂಥ ನುಡಿಕಟ್ಟುಗಳ ಅರ್ಥವನ್ನು ಗಮನಿಸಿ ಓದಿದರೆ ಹೆಚ್ಚು ಅರ್ಥಪೂರ್ಣವಾಗುವದೆಂದು ಕೆಲವುಗಳಿಗೆ ಇಲ್ಲಿ ಅರ್ಥ ಸೂಚಿಸಲೆತ್ನಿಸಿದೆ.

ಕಳ್ಳಬಳ್ಳಿ : ಕರುಳಿನ ಬಳ್ಳಿ. ಮೊದಲಿಂದ ಶರೀರಸಂಬಂಧವಿದ್ದ ಮನೆತನಗಳೆಲ್ಲ ಕರುಳಬಳ್ಳಿಯೊಳಗಿನವು.

ಸಾಗರಬಿದ್ದು : ಪ್ರೀತಿಯಲ್ಲಿ ಉಳಿದ ಅಪಾಯ ಅನಪಾಯಗಳನ್ನೆಲ್ಲ ವಿಚಾರಿಸದೆ ಧುಮುಕಿ ಕಾರ್ಯ ಮಾಡುವದು.

ಹರಕ ಹೆಂಗಸು : ತಾಳ್ಮೆಯಿಲ್ಲದ ಹೆಂಗಸು.

ಮುಂದ ಮಾರಿ ಮಾಡಿಕೊಡು : ವಿಚಾರಕ್ಕೆ ಹೆಚ್ಚು ಅವಕಾಶ ಕೊಡದೆ ಕೆಲಸಕ್ಕೆ ಒಮ್ಮೆಲೇ ಕೈ ಹಾಕುವುದು.

ಅವರ ಕಡೆ ಹೊರಳು : ಆ ಪಕ್ಷ ಹಿಡಿಯುವದು.

ಮನೀ ತೊಳೆದ ಮುತ್ತುಮಾಡು : ಮನೆಯೊಳಗಿನ ಬೆಲೆಯುಳ್ಳ ವಸ್ತು, ಒಡವೆಗಳನ್ನೆಲ್ಲ ಒಯ್ದು ಬಿಡುವದು.

ಆರಿ ಅಂಗಾರ ಆಗು : ಬಹಳ ತಣ್ಣಗಾಗು. ದೇವರ ಮುಂದೆ ಧೂಪಾರತಿಯಲ್ಲಿ ಜನರಿಗೆ ಹಣೆಗೆ ಹಚ್ಚಿಕೊಳ್ಳಲು ಇಟ್ಟ ಬೂದಿಯಷ್ಟು ತಣ್ಣಗಾಗು.

ಅರಿಷಿಣ ನೀರು : ಮದುಮಕ್ಕಳಿಗೆ ಮದುವೆಯಲ್ಲಿ ಮೈಗೆ ಬಳಿದ ಅರಿಷಿಣ ತೊಳೆಯಲೆಂದು ೫ ವಾರ ನೀರು ಎರೆಯುವರು. ಅಲ್ಲಿಯವರೆಗೆ ಅವರು ಊರ ಹೊರಗೆ ಹೋಗಕೂಡದು.

ಬೆನ್ನ ಮೇಲೆ ಹುಟ್ಟು : ಹಿಂದಿನಿಂದ ಹುಟ್ಟು.

ಕಣ್ಣು ಮೂಗಿನ ಅಂಜಿಕೆ : ಸೂಚನೆಯನ್ನರಿತು ಅಂಜಿ ವರ್ತಿಸುವುದು.

ಕುಡಿ ಮೇಲೆ : ಒಲೆಯೊಳಗಿನ ಉರಿಯ ಕುಡಿ ಹೋಗುವಲ್ಲಿ ಏನಾದರೂ ಇಟ್ಟು ಕಾಯಿಸುವದು.

ಗೂಡು ಮುರಿ : ಜೋಳದ ನಿಲವು ಕೊಯ್ದು ಸೂಡುಕಟ್ಟಿ ಗೂಡು ನಿಲ್ಲಿಸುವರು. ಅದನ್ನು ಮುರಿದು ತೆನೆ ಕೊಯ್ಯುವುದಕ್ಕೆ ಗೂಡು ಮುರಿ ಅನ್ನುವರು.

ಮೋರಿಗೆ ಮಸೀ ಹಚ್ಚು, ಮೋರಿ ಒಡಿಸಿ ಇಡು : ಅನ್ಯರಿಗೆ ಮುಖ ತೋರಿಸದಂತೆ ಮಾಡು.

ಕಣ್ಣ ಕಿತ್ತು : ದೊಡ್ಡವನಾಗು

ನೆಲ ಹಿಡಿ : ಮುಪ್ಪಾಗಿ ಮಲಗು.

ಟೊಂಕಾ ಕಟ್ಟಿಕೊಂಡ ದುಡಿ : ದುಡಿದು ದುಡಿದು ನಡ ನೋಯುತ್ತಿದ್ದರೂ ಅದನ್ನು ಕಟ್ಟಿಕೊಂಡು ಹಾಗೇ ಕೆಲಸ ಮಾಡುವದು.

ಕಾಲಿಗೆ ಅರಿವೆ ಕಟ್ಟಿ ತಿರುಗು : ತಿರುಗಿ ತಿರುಗಿ ಕಾಲಿಗೆ ನೋವಾಗಲು ಅರಿವೆ ಕಟ್ಟಿಕೊಂಡು ತಿರುಗುವದು. ಅಂದರೆ ಬಹಳ ತಿರುಗುವದು.

ಸುಲಿದ ಬಡಿಗೆ ಮಾಡು : ಬಡಿಗೆ ಎಂಬುವದು ಮೊದಲೇ ತೊಗಟಿ ಸುಲಿದದ್ದು. ಮತ್ತೂ ಸುಲಿಯುವದೆಂದರೆ ಅತಿಶಯೋಕ್ತಿ. ಹತ್ತರ ಏನೂ ಉಳಿಯದಂತೆ.

ಒಂದೇ ಕೈಯಿಂದ ಚಪ್ಪಾಳೆ ಬಾರಿಸು : ಒಂದೇ ಪಕ್ಷ ಹಿಡಿದು ಮಾತಾಡು.

ಕಳಸ ನೀರು ಬೀಳು : ಮದುವೆಯಲ್ಲಿ ಮದುಮಕ್ಕಳಿಗೆ ನೀರೆರೆಯುವದಾದ ಮೇಲೆ ಮುತ್ತೈದೆಯರೂ ಬಹಳ ಮಕ್ಕಳಿದ್ದವರೂ ಆರತಿಯಲ್ಲಿಟ್ಟ ಕಳಸದಿಂದ ಐದು ಧಾರೆ ನೀರು ತಲೆಯ ಮೇಲೆ ಹಾಕುವರು. ಆ ಕಳಸ ಶಿಖರದ ಕಳಸದಂತಿರುವದು. ಶಿಖರದ ಕಳಸ ಎತ್ತರದಲ್ಲಿರುವದು. ಅಲ್ಲಿಂದ ನೀರೆರೆಯುವಷ್ಟು ಮದುಮಕ್ಕಳು ಬೆಳೆಯಲೆಂದು ಭಾವ.

ಕಾಲಧೂಳಿ : ಏನಾದರೂ ತಿನ್ನುವಾಗ ಹೊರಗಿನವರು ಯಾರಾದರೂ

ಕಂಡರೆ ಹಾಗೂ ಬಂದರೆ ಕಣ್ಣಧೂಳಿ, ಕಾಲಧೂಳಿ ಆಗಿ ಆ ತಿಂದ ಜೀನಸು ಪಚನವಾಗುವುದಿಲ್ಲವಂತೆ. ಅನ್ಯರು ನೋಡುವದಕ್ಕೆ ಹೀಗೆನ್ನುವ ಪರಿಪಾಠ.

ಮೂಗು ಮೇಲೆ ಆಗು : ಗೆಲ್ಲು.

ಜಡ್ಯಾಗ ಇಟ್ಟ ಕೊ : ಪೂಜ್ಯವೆಂದು ಭಾವಿಸು. ಪ್ರೀತಿಸು. ಶಿವನು ಗಂಗೆಯನ್ನು ಜಡೆಯಲ್ಲಿ ಇಟ್ಟುಕೊಂಡುದರಿಂದ ಈ ಮಾತು ಬಳಕೆಗೆ ಬಂದಿರ ಬೇಕು.

ನೆತ್ತಿ ಮೇಲೆ ಮೆಣಸ ಅರಿ : ಕಾಡಿಸು, ಆಳು, ಮೆಣಸು ಉರಿಯುವ ಜೀನಸು ; ಅಂಥದ್ದನ್ನು ನೆತ್ತಿಯ ಮೇಲೆ ಅರಿಸಿಕೊಳ್ಳಬೇಕಾದರೆ ಎಷ್ಟು ಆಳಾಗಿರಬೇಕು ನೋಡಿ !

ಉಡಿಯೊಳಗ ಹಾಕು : ಸಂರಕ್ಷಿಸಲಿಕ್ಕೆ ಕೊಡು.

ಕತ್ತ್ರ್ಯಾಗ ಹಿಡಿ : ಕತ್ತರಿಯಲ್ಲಿ ಹಿಡಿದ ಜೀನಸು ಈ ಕ್ಷಣದಲ್ಲಿ ಕತ್ತರಿಸಲ್ಪಡುವಂಥದು. ಹಾಗೆ ಗಂಡಹೆಂಡರನ್ನು ಅಗಲಿಸುವಂತೆ ತ್ರಾಸಕೊಡುವದು.

ರೇಶಿಮೆ ಗಂಟು : ರೇಶಿಮೆಯ ಎಳೆಗಳಿಗೆ ಹಾಕಿದ ಗಂಟು ಬೇಗನೆ ಉಚ್ಚಲಾರದು. ಆದುದರಿಂದ ಮದುಮಕ್ಕಳಿಬ್ಬರಿಗೂ ಹಾಕುವ ಗಂಟು ರೇಶಿಮೆಯ ಗಂಟು. ಈ ಜನ್ಮದಲ್ಲಿ ಬಿಚ್ಚಲಾರದ ಗಂಟು.

ಹೊಟ್ಟೆಯಲ್ಲಿಯ ನೀರು ತುಳುಕದಂತೆ : ಸ್ವಲ್ಪವೂ ಮನಸ್ಸು ನೋಯದಂತೆ ಬುದ್ಧಿಯ ಮಾತು ಹೇಳುವದು.

ನೆತ್ತಿಗೆ ಒರಿಸು : ಮರಳು ಮಾಡು.

ಕಣ್ಣಿಗೆ ಕಣ್ಣ ಹತ್ತವಲ್ಲು : ಚಿಂತೆಯಿಂದ ನಿದ್ರೆ ಹತ್ತದಿರು.

ಬೊಳೇಲೆ ಹಾಲ ಕುಡಿ : ತಿಳಿವಳಿಕೆ ಇಲ್ಲದ. ಕೂಸಿನಷ್ಟು ಅಜ್ಞಾನ.

ಮನೆ ಬಾಗಿಲ ಇಕ್ಕು : ಮನೆಯ ಜನವೆಲ್ಲ ಸಾಯು.

ದೇವರು ಉಗುಳುವುದು : ಬೇನೆಯುವರು ದೇವನ ಬಾಯಲ್ಲಿಯೆ ಬದುಕುವವರು. ಆತ ಉಗುಳಿದರೆ ಬದುಕುವಿಕೆ. ನುಂಗಿದರೆ ಸಾವು.

ಬೆಚ್ಚದಂತೆ ಇರು : ಹೊಲದಲ್ಲಿ ಪೈರನ್ನು ನಾಶಮಾಡಲು ಬರುವ ಮೃಗಗಳಿಗೆ ಬೆದರಿಕೆಗಾಗಿ, ಒಂದು ಕಟ್ಟಿಗೆಗೆ ಅಂಗಿ ರುಮಾಲುಗಳನ್ನು ಹಾಕಿ ಮನುಷ್ಯನಂತೆ ಮಾಡಿ ಇಡುವರು. ಅದಕ್ಕೆ ಬೆಚ್ಚ ಅನ್ನುವರು. ಅದರಷ್ಟೆ ಉಪಯೋಗವುಳ್ಳ ಮಾನವನಿರುವಿಕೆ.

ಒಂದ ಮಾರಿಗೆ : ಒತ್ತಟ್ಟಿಗೆ.

ಒಂದ ಅಡಕಿ ಮಾನ : ದೊಡ್ಡಮಾನ.

ಹೊತ್ತವರ ಹೆಗಲಿಳಿಸು : ಹೆಣವನ್ನು ಹೊತ್ತು ಒಯ್ದವರಿಗೆ ಉತ್ತರ ಕ್ರಿಯೆಯ ದಿವಸ ಎಲ್ಲರಕ್ಕಿಂತ ಮೊದಲು ಊಟಕ್ಕೆ ಹಾಕುವರು. ಸತ್ತ ಮನುಷ್ಯನ ಪೂಜೆಯ ಎಡೆಯ ಜೊತೆಯಲ್ಲಿಯೇ ಅವರಿಗೂ ಊಟಕ್ಕೆ ಹಾಕುವದಕ್ಕೆ ಹೆಗಲಿಳಿಸು ಅನ್ನುವರು.

ಒಂಟಿ ಕಾಲ ಮೇಲೆ ನಿಲ್ಲು : ಕೆಲಸ ಮಾಡಿಸಿಕೊಳ್ಳುವುದಕ್ಕೆ ಒಂದೇ ಕಾಲ ಮೇಲೆ ಹಟ ಹಿಡಿದು ನಿಲ್ಲುವಿಕೆ.

ಕರೀ ಕಟ್ಟು : ದೇವರ ನೈವೇದ್ಯ ಮಾಡದ ವಿನಹ ಮಂಗಳವಾರ ಶುಕ್ರವಾರಗಳಲ್ಲಿ ಬೀಸು ಕುಟ್ಟುವದನ್ನು ನಿಲ್ಲಿಸುವದು.

ಹಲ್ಲ ನುಚ್ಚ ಮಾಡಕೊ : ಬಹಳಷ್ಟು ಹೇಳುವದು.

ಮೂರ ಕಾಲ ಮೇಲೆ ನಿಲ್ಲು : ಹಾಲು ಹಿಂಡಿಕೊಳ್ಳುವಾಗ ಆಕಳು ಮೇಲಿಂದ ಮೇಲೆ ಒದೆಯುವುದು.

ಕುಳ್ಳು ಹೋಗಿ ಊರ ಹೊರಗೆ ಬೀಳು : ಸಾವು ಸಮೀಪಿಸು, ಹೆಣ ಸುಡಲಿಕ್ಕೆ ಕುಳ್ಳು ಊರ ಹೊರಗೆ ಒಯ್ದಿಡುವಷ್ಟು.

ಅಡ್ಡ ಬೆಂಕಿ ಹಾಯದೆ ಇರು : ಒಬ್ಬೊಬ್ಬರಲ್ಲಿ ಮನಸ್ಸು ನೆಟ್ಟಗಿಲ್ಲದಿರುವಿಕೆ.

ಕಾಲ ಕಾ ವೇಳೆ ಕಾ ಗಂಟೆಬೀಳು : ಅಪಘಾತದ ವೇಳೆಗೆ ಯಮನೂ ಬರುವಿಕೆ.

ಖರೇ ಉತ್ತರ : ನಿಜವಂಶ.

ಚುಚ್ಚಿ ಕೊಡು : ಕಲಿಸು.

ಮೂಗು ಮುರಿ : ಒಪ್ಪಿಗೆ ಕೊಡದಿರು. ಸೇರದಿರು.

ಕರಳು ಕಳಕಳಮಾಡು : ಮರುಗು.

ಬೆನ್ನಹುರಿ ನೇಟ ಇರು : ಜನತೆಯ ಬೆಂಬಲವಿರು.

ಹರಳ ಹೋದ ಗೆಜ್ಜಿ : ನಿರುಪಯೋಗ ಜೀನಸು. ಗೆಜ್ಜಿಯ ಒಳಗೆ ಹರಳು ಇದ್ದರೆ ಬಾರಿಸುವದು. ಅದಿಲ್ಲದಾಗ ನಿರುಪಯೋಗ.

ಎದ್ದು ಹೋಗು : ಹೆಂಗಸು ಪರಪುರುಷನೊಡನೆ ಮನೆ ಬಿಟ್ಟು ಹೋಗುವದು.

ಈ ಕೈಲೆ ಮಾಡಿದ್ದು ಇದ ಕೈಲೆ ಕಳಿಕಬೇಕು : ಈಗ ಮಾಡಿದ ಕೆಟ್ಟ ಕರ್ಮದ ಫಲವನ್ನು ಇಹಜನ್ಮದಲ್ಲಿಯೇ ಭೋಗಿಸಿ ಕಳೆಯಲಿಕ್ಕೆ ಬೇಕು.

ಕೊಯ್ದು ಬೊಟ್ಟಿನ ಮೇಲೆ ಉಚ್ಚೀ ಹೊಯಲಿಕ್ಕಿಲ್ಲ : ಸ್ವಲ್ಪವೂ ನೆರವಾಗಲಿಕ್ಕಿಲ್ಲ.

ಇದರ ಗುಬಸ : ಒಂದು ಮನೆಯಿಂದ ಹೆಣ್ಣು ಮಾಡಿಕೊಳ್ಳುವಾಗ ಅದೇ ಮನೆಯಲ್ಲಿ ತಮ್ಮ ಹೆಣ್ಣುಮಗಳನ್ನು ಕೊಡುವದು.

ಬಾಯಿ ಬೆಳ್ಳಗೆ ಆಗು : ಕಷ್ಟ ಆಗು. ಬೆರಗಾಗು.

ಡಬ್ಬ ಬೀಳು : (ಎದೆ ಒಡೆದುಕೊಳ್ಳು) ಹೆದರಿ ದುಃಖಿಸು.

ಕಣ್ಣು ಹೊಡಿ : ಸೂಚಿಸು.

ಮನಸು ಒಡಿ : ಮನಸು ಕೆಡು.

ಕಟೀಕ ಹತ್ತು : ಮನದಲ್ಲಿ ಚಿಂತಿಸು.

ಕಿವಿಗೆ ಹರಳ ಹಚ್ಚಿಕೊಳ್ಳು : ತಪ್ಪು ಒಪ್ಪಿಕೊಳ್ಳು. ಕಿವಿಗೆ ಸಣ್ಣ ಹರಳು ಹಚ್ಚಿ ಒತ್ತಿದರೆ ಕಳೆಹತ್ತಿ ಮಾಡಿದ ತಪ್ಪನ್ನು ಕೂಡಲೆ ಒಪ್ಪಿ ಕೊಳ್ಳುವರು.

ದೈವದೂಟ : ಸಮಾಜದ ಊಟ.

ಮಣ್ಣ ಕಚ್ಚಿ ಜನ್ಮ ಮಾಡು : ಮೈಮುರಿದು ದುಡಿದು ತಿನ್ನದೆ ಕೂಡಹಾಕುವದು.

ಕಣ್ಣೀರು ಕಪ್ಪಾಳಿಗೆ ಬರು : ಸಂಕಟ ಆಗು, ಕಷ್ಟಪಡು.

ಎದೀ ಮೇಲಿನ ಕೈಯು : ಪ್ರಸಂಗಕ್ಕೆ ಉಪಯೋಗ ಬೀಳುವ ವಿಶ್ವಾಸಿಕ ವ್ಯಕ್ತಿ.

ಕರಳು ಬೇಲಿ ಮೇಲೆ ಹಾಕು : ಬೇಲಿಯನ್ನು ದಾಟುವಾಗ ಕಲ್ಲು ಇಟ್ಟು ಅದರ ಮೇಲೆ ಕಾಲು ಕೊಟ್ಟು ಆಚೆಗೆ ಹೋಗುವದುಂಟು. ಅದರಂತೆ ಕರುಳನ್ನು ಹಾಕಿ ತುಳಿದು ಹೋಗುವದೆಂದರೆ ಎಷ್ಟು ಕಠೋರತನ !

ಪಂಕ್ತಿಯೊಳಗ ಪರಪಂಕ್ತಿ : ಪಂಕ್ತಿಭೇದ. ಒಂದೇ ಕಾಲಕ್ಕೆ ಒಂದೇ ಸ್ಥಳದಲ್ಲಿ ಊಟಕ್ಕೆ ಕುಳಿತವರಿಗೆ ಒಬ್ಬರಿಗೊಂದು ಒಬ್ಬರಿಗೊಂದು ಬಡಿಸುವದು.

ಕೈಗೆ ಹತ್ತು : ಸಿಗು.

ಪದರಾಗ ಬಿದ್ದದ ಪವಿತ್ರ : ಸಿಕ್ಕದ್ದು ಒಳ್ಳೆಯದು.

ಮಾರಿಗೆ ಸೆರಗ ಹಾಕು : ಅಳು.

ಪಾಸಂಗಕ್ಕೆ ಹತ್ತುವದಿಲ್ಲ : ತಕ್ಕಡಿಯಲ್ಲಿ ಸ್ವಲ್ಪ ದೋಷವಿದ್ದರೆ ಅದನ್ನು ಕಳೆಯಲಿಕ್ಕೆ ಕಾಣಿ ಕಟ್ಟುವರು. ಅದರಷ್ಟೂ ಯೋಗ್ಯತೆ ಇಲ್ಲ.

ಹುಟ್ಟಿಸಿದವ ಹುಲ್ಲು ಮೇಯಿಸಲಾರ : ದೇವರು ಮನುಷ್ಯನಿಗೆ ಹೊಟ್ಟೆಗೆ ಹಾಕಿ ರಕ್ಷಿಸುವ ಹೊಣೆಗಾರನಿರುವನು.

ಹೊರ ಛಂದ : ಹೊರಗಿನ ಹೆಣ್ಣಿನ ಕಡೆಗೆ ಲಕ್ಷ್ಯವಿಡುವಿಕೆ.

ಕೊಳ್ಳ ಕಟ್ಟು : ಬಂಡಿಗೆ ಎತ್ತುಗಳನ್ನು ಹೂಡು.

ಮಾರಿಗಿರದಾನ ಆಗು : ಪರಸ್ಪರರಲ್ಲಿ ಜಗಳವಾಗು.

ಕರೀದವರ ಮನೀಗಿ ಕಳಸಗಿತ್ತಿ ಆಗಿ ಹೋಗು : ಮದುವೆಯಲ್ಲಿ ಕಳಸ ಆರತಿ ಹಿಡಿಯುವ ಸ್ಥಾನ ಹಿರಿಯದು. ಅದು ಮದುಮಗನ ತಂಗಿಗೆ ಮೀಸಲು. ಅವಳಿಗೆ ಸೀಮಂತ ಪೂಜೆಯಲ್ಲಿ ಅಣ್ಣನ ಜೊತೆಗೆ ಅವಳದೂ ಪೂಜೆ. ಆ ಸ್ಥಳಕ್ಕೆ ಕರೆಯದೆ ಹೋಗುವದು ಉಚಿತವೇ ? ಅವರು ಬರಲು ಆಸ್ಪದ ಕೊಡುವರೇ ? ಇಲ್ಲ. ಹಾಗೇ ಹೋಗುವದೆಂದರೆ ಮಾನ ಕಳಕೊಳ್ಳುವಿಕೆ.

ಒಡ್ಲಾ ಮುರಕೊ : ಅಂತರಾತ್ಮದಲ್ಲಿ ಮರಗು, ಕೊರಗು.

ಹುರಿದ ಬಿತ್ತಿದರೆ ತರದ ನಾಟು : ಬೀಜಗಳನ್ನು ಹುರಿದು ಬಿತ್ತಿದರೆ ನಾಟುವದೇ ಇಲ್ಲ. ಅಂಥದೂ ನಾಟಬೇಕಾದರೆ ಆ ಬೀಜ ಎಂಥ ಕಸವುಳ್ಳದಿರ ಬೇಕು ?

ಹಡ್ಡಾ ಬಡಿದು ಬೇಡು : ಹರಡು ಕಳೆ ಹತ್ತುವ ಸ್ಥಳ. ಅಲ್ಲಿ ಹೊಡೆದು ಬೇಡಿದರೆ ಕೂಡಲೇ ಕೊಡುವರು.

ಮುಗಿಲ ನೀರಿಗೆ ಬಾಯಿ ತೆರೆ : ತನ್ನ ಸ್ವಾಧೀನವಲ್ಲದ ವಸ್ತುವಿಗೆ ಆಶಿಸು.

ಅನೀ ಕಾಲಿನಂಥೆ ಹೊಲ : ದೊಡ್ಡ ಹೊಲ.

ಸತ್ತ ಎಮ್ಮೆಗೆ ಸೇರು ತುಪ್ಪ : ನಿರುಪಯುಕ್ತ ಮಾತು.

ಭೂಮಿ ಥಾರೆ ಕೊಡದಿರು : ರಕ್ಷಕರಿಲ್ಲದಿರು. ಬಹಳ ಕೆಡಕೆಣಿಸು.

ಹುಳಿಯಾಗಿ ಕೇಳು : ಬೆಲೆಯನ್ನು ಕಳೆದುಕೊಂಡು ಕೇಳು.

ತಲೆ ತೆರೆದು : ನಾಚಿಕೆಗೇಡಿಯಾಗಿ. ಎಲ್ಲದಕ್ಕೂ ಸಿದ್ಧವಾಗಿ.

ಕೊದಲ ಎಳೆ ನೂಸದಿರು : ಸ್ವಲ್ಪವೂ ನೋಯಿಸದಿರುವುದು.

ಕಡ್ಡಿ ಮುರದಂತೆ ಮಾತಾಡು : ಒಂದು ಮಾತಿಗೆ ಎರಡು ತುಂಡು ಆಗುವಂತೆ ಮಾತಾಡು. ಸ್ಪಷ್ಟ ನುಡಿ.

ಒಡೆದುಕಾಣಿಸು : ಬೇರೆಯಾಗಿ ಕಾಣಿಸು.

ತಡೀ ಹೋಗು : ಸೀಳು.

ಹಲ್ಲಿಗೆ ಅರಿವೀ ಹಚ್ಚಿಕೊಂಡು ಕೂಡು : ಬೆರಗಿನಿಂದ ಅಳುತ್ತ ಕೂಡು.

ಗಾಳಿ ಆಗು : ದೆವ್ವ ಹಿಡಿಯುವದು.

ಮುರುವು ಇಡು : ಆಕಳ ಹಾಲು ಹಿಂಡಿಕೊಳ್ಳುವ ಕಾಲಕ್ಕೆ ತಿನ್ನಲು ಕಾಳು ಇಡುವಿಕೆ.

ಮೂರಾಬಟ್ಟೆಯಾಗು : ಹಾಳಾಗು.

ಮೂಗಿನ ಮೇಲೆ ಕಟಿ : ಮಾತು ಸಟಿಯಾಗುವಂತೆ ನಡೆದು ತೋರಿಸು. ಕಟಿಯುವದೆಂದರೆ ಮೇಲಿಂದ ಮೇಲೆ ಪೆಟ್ಟು ಕೊಡು. ಅಂದರೆ ಸತತ ನಡೆದು ತೋರಿಸುವದು.

ತುಪ್ಪ ಬಿದ್ದರೂ ಕಿಚಡ್ಯಾಗ ಬೀಳು : ಸದ್ವಿನಿಯೋಗವಾಗು.

ಮಂದಿ ಸೂರಿಗೆ ಬೀಳು : ಅನ್ಯರ ಆಶ್ರಯಕ್ಕೆ ಬದುಕು. ಅದೂ ಕೀಳು ಆಶ್ರಯ. ಮನೆಯ ಹಂಚಿನ ನೀರು ಬೀಳುವಂತಹ ಸ್ಥಳದಲ್ಲಿ ಹೊರ ಮಗ್ಗಲು ಸ್ಥಳ ಬೇಡಿ ಸಂಪಾದಿಸಿ ಅಲ್ಲಿ ಬಾಳುವುದು.

ಹಲ್ಲಿನ ಮೇಲೆ ಮಾಂಸ ಇಲ್ಲದವರು : ಬಡವರು. ಹಲ್ಲಿನ ಮೇಲೆ ಮಾಂಸ ಯಾರಿಗೂ ಇರದು. ಆದರೂ ಸಿರಿವಂತರು ನಿಸರ್ಗದ ವಿರುದ್ಧ ಬೇಕಾದಂತೆ ನಡೆದರೂ ಸಾಗುವದು. ಅದರಿಂದ ಅವರು ಹಲ್ಲಿನ ಮೇಲೆ ಮಾಂಸ ಇದ್ದವರು.

ಅಂಬೊತ್ತು : ಮಾತು ಅಂಬಿನಂತೆ ಮನಸ್ಸಿಗೆ ತಾಗಿದಾಗ ಮುಖ ಮುದುರುವಿಕೆ, ಬಾಡುವಿಕೆ.

ಹೊರ ಕೈಲೆ ಹೊಡಿ : ನೆರವಾಗದಿರು.

ಮುಸರಿ ಕೈಲೆ ಕಾಗೆ ಹೊಡೆಯದಿರು : ಮುಸುರಿಯ ಕೈಯಿಂದ ಕಾಗೆ ಹೊಡೆದರೆ ಕೈಗೆ ಹತ್ತಿದ ಅನ್ನದ ಅಗಳಾದರೂ ಹೋದೀತಲ್ಲ ಎಂದು ಯೋಚನೆ. (ಜಿಪುಣತನ)

ಉಪ್ಪು ಖಾರ ಹಚ್ಚಿ ಹೇಳು : ಒಂದಕ್ಕೆರಡು ಬೆಳಸಿ ಹೇಳು.

ಹಸೀ ತೊಪ್ಪಲ ಮೇಲೆ ಕಾಲ ಕೊಡದವರು : ಯಾರಿಗೂ ಉಪದ್ರವ ಕೊಡದವರು. ಹಸುರಿನ ಗಿಡದ ಮೇಲೆ ಕಾಲು ಕೊಟ್ಟರೆ ಬೆಳೆಯು ನಷ್ಟವಾಗುವದು. ಅದು ಬಹಳ ಹಾನಿಕರ. ಅದನ್ನು ಮಾಡದವರು.

———

# ಕೆಲವು ಶಬ್ದಗಳ ಅರ್ಥಸೂಚಿ

ಮಾಯಿ–ಪ್ರೀತಿ
ಅವ್ವರೆ–ಉದ್ಗಾರವಾಚಕ, 'ಅವ್ವ'
ಸೆಟಕೊ–ಸಿಟ್ಟಿಗೆ ಬರು
ಐಸಿರಿ–ಸ್ಥಿತಿ, ಶೃಂಗಾರ
ದುರುಣಿ–ದೊಣ್ಣೆ
ಜರಾ–ಸ್ವಲ್ಪ
ಹುಶಾರ–ಜಾಣ, ಚುರುಕು
ಮರ್ಜಿ–ಮನಸ್ಸು
ಹುಜುರು–ಕಿವಿಯೊಳಗಿನ ಚಿಕ್ಕ ಆಭರಣ
ಖಬರಿ–ಶುದ್ಧಿ, ಎಚ್ಚರ
ಖೋಡಿ–ಕೆಟ್ಟ
ಆಚಿಬರೆ–ಆಚೆಯ ವರ್ಷ
ಹುರಗಳಿಸು–ಹುರುಪುಗೊಳ್ಳು
ಚೂರು–ಉಗುರಿನಿಂದ ಗಾಯಗೊಳಿಸು
ಚಾಳಿ–ನಡತೆ
ಹುಡದಿ–ಗದ್ದಲ, ಗೊಂದಲ
ಅಡಚಣಿ–ತೊಂದರೆ
ಖರೆ–ನಿಜ
ಕಾಲಮಡಿ–ಮೂತ್ರ ವಿಸರ್ಜನೆಮಾಡು
ಪಹಿಲೆ–ಮೊದಲು
ಸವಾಲ–ಚಲೋ
ಹರಿವತ್ತು–ಮುಂಜಾನೆ
ಹೊರಗಾಗು–ಕಡೆಗಾಗು
ಥಾಬೆ–ಕೊಟ್ಟಿಗೆ

ಮೂರ್ತ–ಮುಹೂರ್ತ
ಮಕರ–ನವದಂಪತಿಗಳನ್ನು ಕೂಡಿಸಲು ಕಾರ್ಯೋತ್ತೇಜನಗೊಳಿಸುವಂತೆ ಕಟ್ಟಿದ ಮಂಟಪ
ಪರವಿ–ಸುದ್ದಿ, ಬೆಲೆ
ನೆಲುವಗಣಿ–ನೇತಾಡುವ ಬಿದುರು
ಜಗಲಿ–ಮನೆಯಲ್ಲಿಯ ದೇವರ ಕಟ್ಟೆ
ನಿವಾಳಿ–ಇಳಿಸಿ ಒಗೆಯುವದು
ವೈನಿ–ಅಣ್ಣನ ಹೆಂಡತಿ
ಹ್ವಾಸ–ಆಹೋಸ ವ್ರತ, ಹೊತ್ತಿರುವಾಗ ಉಣ್ಣುವುದು
ಅಲ್ಲಡ–ತಿಳಿವಳಿಕೆ ಇಲ್ಲದ
ಆಬಚಿ–ಅವ್ವನ ಅಕ್ಕ ಅಥವಾ ತಂಗಿ
ತಲಿಹಗರು–ಚುರುಕು
ಪರಾದ-ಪ್ರಾಯದ
ಅಗಾವು–ಮುಂಚಿತ
ನಿಚ್ಚನ-ನಿಶ್ಚಯ
ಕೊಡ್ಡ–ಕೊರಡು
ಜಾಚ–ತ್ರಾಸ
ಪುರೋಸು-ಸಾಕಾಗು
ಮೂರು ಸಂಜೆ–ದೀಪ ಹಚ್ಚುವಹೊತ್ತು
ಥಡಥಡೀತ–ಗಟ್ಟಿ
ಗುಳಿದಾಳಿ–ಮಂಗಳಸೂತ್ರ
ಪಾವಣೇರು–ಅಪ್ತರು

ಕೊಂಗ್ಯಾ–ಕಪಟಿ
ದಗದ–ಕೆಲಸ
ಹರತಾಟ-ತಾಪತ್ರಯ
ಕಾರಣ–ಮದುವೆ ಮುಂಜಿ ಮೊದಲಾದ ಕೆಲಸಗಳು
ಸಮಜೂತಿ–ತಿಳಿವಳಿಕೆ
ಹಳ್ಳೀ ಹೊಡಿ–ಕೂಗಿಕರೆ
ಇಗಡ–ಇಜ್ಜೋಡ
ವಾಸ್ಯಾಡು–ಓರೆ ಮಾತಾಡು, ಜಗಳಾಡು
ವಗತನ–ಜನ್ಮ, ಬಾಳುವೆ
ಥಣ್ಣಗ–ಶಾಂತ
ಆರಾಕು–ಹರವು
ವಾಲಗ–ಓಲಗ
ಗರ್ದಿ–ಸಡಗರ, ಆರ್ಭಟ
ಬಗೆಹರಿ–ತೀರು
ಕುರುಕಲ–ಸೊಟ್ಟ, ಚಿಕ್ಕ
ಉಡುಗೋಲ-ಕಸಬರಗಿ
ಮುಗದ್ಯಾ–ಮುಗ್ಧ
ನೇಟ–ಶಕ್ತಿಯುತ
ತಳ, ದೊಡ್ಡಿ } ಅಡವಿಯಲ್ಲಿ ದನ ಕಟ್ಟುವ ಸ್ಥಳ
ಜ್ವರ–ಪ್ರತಿಯೊಂದು
ಚರು–ನೈವೇದ್ಯ
ಕಾಸಡಿ–ಪೈಯಷ್ಟು
ಖೌಸಲೇರ–ಕುಶಲೆಯರು
ಹರಕತ್ತು–ಅಡ್ಡಿ
ಬಡ್ಯಾನ್ನ–ಬಡಿಸಿದ ಅನ್ನ
ಅಮಾತ–ಅನಾಯಾಸ
ಹಚಕುಡು–ಕಳಿಸಿಕೊಡು
ಮಸ್ತ–ಬಹಳ
ಹುರೂಟ–ಹುಡುಗಾಟಿಕೆಯವ
ಜಿಕಿ ಜಿಕಿ–ರೊಕ್ಕ ಖರ್ಚು ಮಾಡದವ
ಆಯಾರ–ಉಡುಗೊರೆ
ಉದೋಳಿಸು–ತೂರು, ಹಾಳುಮಾಡು
ಕುಸಲತ–ಕುಶಲತನ
ಮಾನುಳ್ಳ–ಮರ್ಯಾದೆಯುಳ್ಳ
ರೂಳಕ- ಹಾದಿಗೆ
ಎಬ್ಬಿಸು–ಕದಿ
ಮೊಟ್ಟ–ಯಾತ
ಸನೇ–ಸಮೀಪ
ಝಕಾಸ–ಸುಂದರ
ಖಡತರ–ನಿಷ್ಠುರ, ಕೆಟ್ಟ
ನಿಕಾಲ–ಏನೂ ಉಳಿಯದಂತಾಗು
ಅಗಲ–ಉಣ್ಣುವ ತಾಟು
ಕಾರುಣ್ಣಿ–ಕಾರ ಹುಣ್ಣಿಮೆ
ಸರಣ–ಸ್ಮಶಾನದಲ್ಲಿ ಹೆಣ ಸುಡಲು ಒಟ್ಟಿದ ಕಟ್ಟಿಗೆ
ದುರುಡಿ–ಬಿದರ ಬುಟ್ಟಿ
ಮುಕ್ಕು–ಸ್ವಲ್ಪ ಕಾಳು, ಒಮ್ಮೆ ಬೀಸುವ ಕಲ್ಲಿನಲ್ಲಿ ಹಿಡಿಯುವಷ್ಟು ಧಾನ್ಯ
ಅಸ್ಕರಿ–ಪ್ರಸಿದ್ಧ
ದಮ್ಮು–ತಾಳ್ಮೆ
ಹಾಡು–ಗತಿ
ರಗಡ ಬಹಳ

ಹುರಬೆಂಡ್ಲ–ಬೆರಕಿ
ಫುರಮಾನಿಸು–ಮುದ್ದಾಮ
ತಾಬಡತೋಬ–ಕೂಡಲೆ
ಅಡಹೊತ್ತು–ಇಳಿಹೊತ್ತು
ಕಣ್ಣ ಹೊಡಿ–ಸೂಚಿಸು
ಬಡೇ ಜಾಂವ–ಡೌಲು
ಸಡಸಡೀತ–ಸ್ಪಷ್ಟ
ನವಬ್ಯಾನಿ–ನವೆಯುವ ಜೇನೆ
ಝಪ್ಪರಿ–ತಲೆಗೂದಲು
ಅಸರಿದ್ದಿ–ಅಸಡ್ಡಾಳ
ಟೊಂಗ–ಅಸಂಬದ್ಧ
ಡೋಣಿ–ನೀರು ನಿಲ್ಲುವ ಹೊಲ
ಓಸ–ವಂಶ
ಹುಲ್ಡು–ಹುಚ್ಚ

—o—

